# ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳು

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿ.ಎಚ್.ಡಿ. ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)




ಸಂಶೋಧಕರು

ದತ್ತಾತ್ರೇಯ ಜಿ. ಕುಲಕರ್ಣಿ

ಮಾರ್ಗದರ್ಶಕರು

ಡಾ. ಸಿ.ಎಸ್.ವಾಸುದೇವನ್






ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ



ಆಗಸ್ಟ್ ೨೦೦೬

# ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳು

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು

ದತ್ತಾತ್ರೇಯ ಜಿ. ಕುಲಕರ್ಣಿ



ಮಾರ್ಗದರ್ಶಕರು

ಡಾ.ಸಿ.ಎಸ್.ವಾಸುದೇವನ್



ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ

ಆಗಸ್ಟ್ ೨೦೦೬

# ಪ್ರಮಾಣ ಪತ್ರ

**'ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳು'** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಡಾ. ಸಿ. ಎಸ್. ವಾಸುದೇವನ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಮಹಾಪ್ರಬಂಧದ ವಿಷಯವನ್ನು ಈ ಮೊದಲು ಯಾವುದೇ ಪದವಿಗಾಗಿ ಬಳಸಿ ಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : 14-೦೮-೨೦೦೬

(ದತ್ತಾತ್ರೇಯ ಜಿ. ಕುಲಕರ್ಣಿ)
ಸಂಶೋಧಕ

# ದೃಢೀಕರಣ ಪತ್ರ

ಶ್ರೀ ದತ್ತಾತ್ರೇಯ ಜಿ. ಕುಲಕರ್ಣಿ ಇವರು **'ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳು'** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಪ್ರಸ್ತುತ ಮಹಾಪ್ರಬಂಧವನ್ನು ಸಲ್ಲಿಸಲಾಗಿದೆ. ಈ ಮಹಾಪ್ರಬಂಧದ ವಿಷಯವನ್ನು ಈ ಮೊದಲು ಯಾವುದೇ ಪದವಿಗಾಗಿ ಇವರು ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

C. S. Vasudevan

(ಡಾ.ಸಿ.ಎಸ್.ವಾಸುದೇವನ್)
ಮಾರ್ಗದರ್ಶಕರು
ಪ್ರವಾಚಕರು ಮತ್ತು ಮುಖ್ಯಸ್ಥರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : 14-೦೮-೨೦೦೬

# ಕೃತಜ್ಞತೆ

ಈ ಅಧ್ಯಯನಕ್ಕೆ ಸರ್ವವಿಧದಿಂದ ಸಹಕರಿಸಿದ,

ಕನ್ನಡ ವಿಶ್ವವಿದ್ಯಾಲಯದ

ಕುಲಪತಿಗಳಿಗೆ,

ಕುಲಸಚಿವರಿಗೆ,

ಅಧ್ಯಯನಾಂಗದ ನಿರ್ದೇಶಕರಿಗೆ,

ಪ್ರಾಚೀನ ಇತಿಹಾಸ ಹಾಗೂ ಪುರಾತತ್ವ ಅಧ್ಯಯನ ವಿಭಾಗದ ಮುಖ್ಯಸ್ಥರು

ಹಾಗೂ ಮಾರ್ಗದರ್ಶಕರಾದ ಡಾ.ಸಿ.ಎಸ್.ವಾಸುದೇವನ್ ಅವರಿಗೆ,

ಹಾಗೂ ವಿಭಾಗದ ಅಧ್ಯಾಪಕರು, ಸಿಬ್ಬಂದಿ ವರ್ಗಕ್ಕೆ,

ನನ್ನ ಮಾತೃ ಸಂಸ್ಥೆಯಾದ ಬಾಗಲಕೋಟೆಯ ವಿದ್ಯಾ ಪ್ರಸಾರಕ ಮಂಡಳದ

ಆಡಳಿತ ಮಂಡಳಿಯ ಕಾರ್ಯಕಾರಿ ಸಮಿತಿಗೆ,

ಪ್ರಾಂಶುಪಾಲರಿಗೆ, ಶಿಕ್ಷಕ ಹಾಗೂ ಶಿಕ್ಷಕೇತರ ಸಿಬ್ಬಂದಿಗೆ,

ಎಫ್.ಆಯ್.ಪಿ. ನಿಯಮದಡಿ ಎರಡು ವರ್ಷಗಳ ಕಾಲ ಸಂಶೋಧನೆಗೆ

ಅವಕಾಶ ಕಲ್ಪಿಸಿಕೊಟ್ಟ ವಿಶ್ವವಿದ್ಯಾಲಯ ಧನ ಸಹಾಯ ಆಯೋಗಕ್ಕೆ,

ಕರ್ನಾಟಕ ಸರ್ಕಾರದ ಕಾಲೇಜು ಶಿಕ್ಷಣ ಇಲಾಖೆಗೆ,

ಧಾರವಾಡ, ಮೈಸೂರು, ಹಂಪಿ ವಿಶ್ವವಿದ್ಯಾಲಯಗಳ ಗ್ರಂಥಾಲಯಗಳಿಗೆ,

ಕೇಂದ್ರ, ರಾಜ್ಯ ಪುರಾತತ್ವ ಇಲಾಖೆಯ ಮೈಸೂರು ಗ್ರಂಥಾಲಯಗಳ ಸಿಬ್ಬಂದಿ

ವರ್ಗಕ್ಕೆ,

ಕರ್ನಾಟಕ ಸರ್ಕಾರದ ಪುರಾತತ್ವ ಇಲಾಖೆಗೆ,

ಹಾವೇರಿ ಜಿಲ್ಲಾ ಆಡಳಿತಕ್ಕೆ, ಗ್ರಾಮಸ್ಥರಿಗೆ,

ಈ ಪ್ರಬಂಧದ ಸಿದ್ಧತೆಯಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಸಹಕರಿಸಿದ

ಎಲ್ಲರಿಗೂ ಹೃತ್ಪೂರ್ವಕ ಕೃತಜ್ಞತೆಗಳು.

ದತ್ತಾತ್ರೇಯ ಜಿ. ಕುಲಕರ್ಣಿ

## ಪರಿವಿಡಿ

## ಸಂಕ್ಷೇಪಗಳು

| | | |
|---|---|---|
| ೦೧. ಇ.ದ. | : | ಇತಿಹಾಸ ದರ್ಶನ |
| ೦೨. ಇಂ.ಆ.ರಿ. | : | ಇಂಡಿಯನ್ ಆರ್ಕಿಯಾಲಜಿ ಎ ರಿವ್ಯೂ |
| ೦೩. ಇಂ.ಆಂ. | : | ಇಂಡಿಯನ್ ಆಂಟಿಕ್ವೆರಿ |
| ೦೪. ಎ.ಇಂ. | : | ಎಪಿಗ್ರಾಫಿಯಾ ಇಂಡಿಕಾ |
| ೦೫. ಎ.ಕ. | : | ಎಪಿಗ್ರಾಫಿಯ ಕರ್ನಾಟಕ |
| ೦೬. ಎ.ರಿ.ಸೌ.ಇಂ.ಎ. | : | ಎನ್ಯುವಲ್ ರಿಪೋರ್ಟ್ ಆನ್ ಸೌತ್ ಇಂಡಿಯನ್ ಎಪಿಗ್ರಾಫಿ |
| ೦೭. ಕ.ಇನ್ಸ್. | : | ಕರ್ನಾಟಕ ಇನ್ಸ್‌ಕ್ರಿಪ್ಶನ್ಸ್ |
| ೦೮. ಕ.ಚ. | : | ಕರ್ನಾಟಕ ಚರಿತ್ರೆ |
| ೦೯. ಕ.ರಿ.ಇನ್ಸ್.ಕ. | : | ಕನ್ನಡ ರಿಸರ್ಚ್ ಇನ್ಸ್‌ಸ್ಟಿಟ್ಯೂಟ್ ಕಲೆಕ್ಷನ್ |
| ೧೦. ಕ.ಸ್ಟೇ.ಗೆ. | : | ಕರ್ನಾಟಕ ಸ್ಟೇಟ್ ಗ್ಯಾಸೆಟಿಯರ್ |
| ೧೧. ಕಾ.ಕ.ಇನ್ಸ್. (ಸಿಕೆಐ) | : | ಕಾರ್ಪಸ್ ಆಫ್ ಕದಂಬ ಇನ್ಸ್‌ಕ್ರಿಪ್ಶನ್ಸ್ |
| ೧೨. ಕ್ಯೂ.ಜೆ.ಎಂ.ಎಸ್. | : | ಕ್ವಾರ್ಟರ್ಲಿ ಜರ್ನಲ್ ಆಫ್ ದ ಮಿಥಿಕ್ ಸೊಸೈಟಿ |
| ೧೩. ಜೆ.ಒ.ಇ.ಎಸ್.ಆಯ್. | : | ಜರ್ನಲ್ ಆಫ್ ದ ಎಪಿಗ್ರಾಫಿಕಲ್ ಸೊಸೈಟಿ ಆಫ್ ಇಂಡಿಯಾ |
| ೧೪. ಧಾ.ಜಿ.ಗೆ. | : | ಧಾರವಾಡ ಜಿಲ್ಲೆ ಗ್ಯಾಸೆಟಿಯರ್ |
| ೧೫. ಧಾ.ಜಿ.ಶಾ.ಸೂ. | : | ಧಾರವಾಡ ಜಿಲ್ಲೆ ಶಾಸನ ಸೂಚಿ |
| ೧೬. ಮೈ.ಆ.ರಿ. | : | ಮೈಸೂರು ಆರ್ಕಿಯಲಾಜಿಕಲ್ ರಿಪೋರ್ಟ್ಸ್ |
| ೧೭. ಸೌ.ಇಂ.ಇನ್ಸ್. | : | ಸೌತ್ ಇಂಡಿಯನ್ ಇನ್ಸ್‌ಕ್ರಿಪ್ಶನ್ಸ್ |

# ಅಧ್ಯಾಯ ೧

# ಪ್ರಸ್ತಾವನೆ

'ದೇವಾಲಯ ಇಲ್ಲದ ಗ್ರಾಮದಲ್ಲಿ ವಾಸಿಸಬಾರದು' ಎಂಬ ನಾಣ್ಣುಡಿಯಂತೆ ದೇವಾಲಯವಿಲ್ಲದ ಊರನ್ನು ಕಾಣುವುದೇ ಇಲ್ಲ ಎಂದರೂ ತಪ್ಪಾಗದು. ಚಿಕ್ಕದೇ ಇರಲಿ ದೊಡ್ಡದೇ ಇರಲಿ ಊರಿಗೊಂದು ದೇವಾಲಯ ಇದ್ದೇ ಇರುತ್ತದೆ. ಇವು ಸಾರ್ವಜನಿಕ ಪೂಜಾಸ್ಥಳಗಳು. ವಿವಿಧ ಧಾರ್ಮಿಕ ಚಟುವಟಿಕೆಗಳ ಕೇಂದ್ರಗಳು. ದೇವಾಲಯಗಳ ಪಾತ್ರ ಈಗಿನಕ್ಕಿಂತಲೂ ಮಧ್ಯಕಾಲೀನ ಸಮಾಜದಲ್ಲಿ ಹೆಚ್ಚು ಮಹತ್ವ ಪೂರ್ಣವಾಗಿತ್ತು. ಆ ಕಾಲದಲ್ಲಿ ನಿರ್ಮಾಣಗೊಂಡ ದೇವಾಲಯಗಳ ಅಧಿಕ ಸಂಖ್ಯೆ ಹಾಗೂ ಅವುಗಳ ಶಾಸನ ವಿವರಗಳೇ ಇದಕ್ಕೆ ಸಾಕ್ಷಿ. ಕಲ್ಯಾಣ ಚಾಲುಕ್ಯ ಹಾಗೂ ಹೊಯ್ಸಳರ ಕಾಲದಲ್ಲಂತೂ ಇವುಗಳ ವೈಭವ ಉತ್ತುಂಗಕ್ಕೇರಿತ್ತು. ಆ ಸಮಾಜದ ಪ್ರತಿಯೊಂದು ಚಟುವಟಿಕೆಗೂ ದೇವಾಲಯವೇ ಮೂಲವಾಗಿ ಸುವ್ಯವಸ್ಥಿತವಾದ ಸಂಸ್ಥೆಗಳಾಗಿದ್ದವು. ಧಾರ್ಮಿಕ ಚಟುವಟಿಕೆಗಳ ಮುಖ್ಯ ಕೇಂದ್ರಗಳಾಗಿ, ವಿದ್ಯೆ, ವಾಣಿಜ್ಯ ಸಂಸ್ಥೆಗಳಾಗಿ, ಸಾಹಿತ್ಯ, ನೃತ್ಯ, ಸಂಗೀತ, ನಾಟಕ, ಶಿಲ್ಪಕಲೆ ಮುಂತಾದ ಸಾಂಸ್ಕೃತಿಕ ಚಟುವಟಿಕೆಗಳಿಗೆ ಆಶ್ರಯತಾಣವಾಗಿ, ಅನ್ನಛತ್ರ, ವೈದ್ಯಕೀಯ ಸೌಲಭ್ಯಗಳನ್ನು ಹೊಂದಿದ್ದು ಸಮಾಜದ ಪ್ರತಿಯೊಂದು ಆಗುಹೋಗುಗಳಿಗೆ ಇವು ನೇರವಾಗಿ ಸ್ಪಂದಿಸುತ್ತಿದ್ದವು ಎಂಬುದು ಗಮನೀಯ ಅಂಶ. ಸಮಾಜದ ಎಲ್ಲಾ ವರ್ಗದ ಜನರನ್ನು ಒಂದೆಡೆ ಸೇರಿಸುವ ಕಾರ್ಯದಲ್ಲಿ ಮತ್ತು ಶ್ರೀಮಂತ ವರ್ಗಗಳಿಂದ ದಾನರೂಪದಲ್ಲಿ ಹರಿದುಬಂದ ಹಣ ಸಮಾಜದ ಏಳಿಗೆಗಾಗಿ ಸದ್ವಿನಿಯೋಗಗೊಳ್ಳುವಲ್ಲಿ ದೇವಾಲಯಗಳು ಮಹತ್ವದ ಪಾತ್ರ ನಿರ್ವಹಿಸಿವೆ. ಅದಕ್ಕೆಂದೇ ಒಂದು ಗರ್ಭಗೃಹ ಇದಕ್ಕೆ ಹೊಂದಿಕೊಂಡಂತೆ ಸಣ್ಣ ಮುಖಮಂಟಪ ಹೀಗೆ ಕನಿಷ್ಠ ಅವಶ್ಯಕತೆಯೊಡನೆ ರೂಪಗೊಂಡ ದೇವಾಲಯಗಳು ಅವಶ್ಯಕತೆಗೆ ತಕ್ಕಂತೆ ಹೆಚ್ಚು ಹೆಚ್ಚಿನ ವಾಸ್ತು ರಚನೆಗಳನ್ನು ಮೈಗೂಡಿಸಿಕೊಂಡು ಹಂತಹಂತವಾಗಿ ಬೆಳೆಯುತ್ತ ಬೃಹತ್ ಗಾತ್ರದಲ್ಲಿ ಮೈತಳೆದು ನಿಂತುದು ವಾಸ್ತವ. ಈ ಪ್ರಗತಿ ಪಥದಲ್ಲಿ ಏಕಗರ್ಭಗೃಹ ದೇವಾಲಯಗಳು ಒಂದೇ ದಿಕ್ಕಿನಲ್ಲಿ ಏಕಮುಖವಾಗಿ ಬೆಳೆಯುವುದರ ಜೊತೆಗೆ ಅಕ್ಕಪಕ್ಕದಲ್ಲೂ ವ್ಯಾಪಿಸಿ ದ್ವಿಕೂಟ, ತ್ರಿಕೂಟ, ಚತುಷ್ಕೂಟ, ಪಂಚಕೂಟ ಮತ್ತು ನವಕೂಟ ದೇವಾಲಯಗಳು ನಿರ್ಮಾಣವಾಗಿರುವುದು ವಿಶೇಷ.

ಹೀಗೆ ಸಮಾಜದ ಕೇಂದ್ರಬಿಂದುವಾಗಿ ತನ್ನ ಸುತ್ತ ನೂರಾರು ವಿಷಯಗಳನ್ನು ಹೆಣೆದುಕೊಂಡು ಮತ್ತು ಪ್ರಾಚೀನ ವಾಸ್ತುಶಿಲ್ಪ ಗ್ರಂಥಗಳನ್ನು ಆಧರಿಸಿ ನಿರ್ಮಾಣಗೊಂಡ ದೇವಾಲಯಗಳು ವಿದ್ವಾಂಸರ ಗಮನ

ಸೆಳೆದಿವೆ ಹಾಗೂ ಈ ನಿಟ್ಟಿನಲ್ಲಿ ಸಾಕಷ್ಟು ಅಧ್ಯಯನಗಳೂ ನಡೆದಿವೆ. ಆದರೆ ಹಲವಾರು ವಿಷಯಗಳನ್ನು ಗರ್ಭೀಕರಿಸಿಕೊಂಡ ದೇವಾಲಯಗಳನ್ನು ಕುರಿತ ಅಧ್ಯಯನಗಳು ಇನ್ನೂ ಪೂರ್ಣ ಪ್ರಮಾಣದಲ್ಲಿ ನಡೆಯಬೇಕಿದೆ.

೧.೧. **ಈವರೆಗಿನ ಅಧ್ಯಯನ** : ದೇವಾಲಯಗಳನ್ನು ಕುರಿತಂತೆ ಈವರೆಗೆ ನಡೆದ ಅಧ್ಯಯನವನ್ನು ಗಮನಿಸಿದರೆ, ಅಧ್ಯಯನವು ಎರಡು ರೀತಿಯಲ್ಲಿ ನಡೆದಿದೆ. ಮೊದಲನೆಯದಾಗಿ ವಾಸ್ತುಶಿಲ್ಪವನ್ನು ಪ್ರಧಾನವಾಗಿ ಗಮನಿಸಿ ನಡೆಸಿದ ಅಧ್ಯಯನ, ಎರಡನೆಯದಾಗಿ ದೇವಾಲಯಗಳಿಗೆ ಸಂಬಂಧಿಸಿದ ಶಾಸನಗಳನ್ನು ಆಧರಿಸಿ ದೇವಾಲಯದ ವಿವಿಧ ಚಟುವಟಿಕೆಗಳತ್ತ ಬೆಳಕು ಚೆಲ್ಲುವ ಅಧ್ಯಯನಗಳು ನಡೆದಿವೆ.

**ಶಿಲ್ಪಸೂತ್ರಗಳು, ಆಗಮಗಳು, ಮಯಮತ, ಮಾನಸಾರ** ಇತ್ಯಾದಿಗಳು ದೇವಾಲಯ ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಗಳು ಬಗ್ಗೆ ವಿವರಿಸುವ ಪ್ರಾಚೀನ ಗ್ರಂಥಗಳು. ಅದರಂತೆ ವಾಸ್ತುಶಿಲ್ಪ ಕುರಿತು ಜೇಮ್ಸ್ ಫರ್ಗ್ಯೂಸನ್, ಅಲೆಗ್ಸ್ಯಾಂಡರ್ ರೀ, ಹೆನ್ರಿಕಸೆನ್ಸ್, ಪರ್ಸಿಬ್ರೌನ್, ಸ್ಟೆಲ್ಲಾಕ್ರಾಂರಿಚ್ ಮುಂತಾದ ಪಾಶ್ಚಾತ್ಯ ವಿದ್ವಾಂಸರು ಮತ್ತು ಭಾರತೀಯ ವಿದ್ವಾಂಸರಾದ ಆನಂದ ಕೆ.ಕುಮಾರಸ್ವಾಮಿ, ಪಿ.ಕೆ.ಆಚಾರ್ಯ, ಡಿ.ಎನ್.ಶುಕ್ಲಾ, ವಿ.ಎಸ್.ಅಗ್ರವಾಲ, ಟಿ.ವಿ.ಮಹಾಲಿಂಗಂ, ಕೆ.ವಿ.ಸೌಂದರರಾಜನ್, ಕೆ.ಆರ್.ಶ್ರೀನಿವಾಸನ್, ಸಿ.ಶಿವರಾಮ ಮೂರ್ತಿ, ಎಂ.ಎ.ಢಾಕೆ, ಟಿ.ಎ.ಗೋಪಿನಾಥರಾವ್, ಎನ್.ವೆಂಕಟರಮಣಯ್ಯ, ಪಿ.ಆರ್.ಶ್ರೀನಿವಾಸನ್ ಮುಂತಾದವರು ಅಭ್ಯಸಿಸಿದ್ದಾರೆ. ಶಾಸ್ತ್ರಗ್ರಂಥಗಳ ಆಧಾರದೊಂದಿಗೆ ಶಿಲ್ಪ ಹಾಗೂ ಸ್ಥಪತಿಗಳನ್ನು ಕುರಿತಂತೆಯೂ ಅಪರೂಪದ ಅಧ್ಯಯನಗಳು ನಡೆದಿವೆ.

ಇಂಡಿಯನ್ ಟೆಂಪಲ್ ಫಾರ್ಮ್ಸ್ (೧೯೭೭) ಗ್ರಂಥದಲ್ಲಿ ಎಂ.ಎ.ಢಾಕೆ ಅವರು ವಾಸ್ತುಶಿಲ್ಪ ಗ್ರಂಥಗಳು ಸೂಚಿಸುವ ನಾಗರ, ದ್ರಾವಿಡ, ವೇಸರ, ಭೂಮಿಜ ಹಾಗೂ ಕಳಿಂಗ ಶೈಲಿಯ ದೇವಾಲಯ ಮಾದರಿಗಳನ್ನು ಕನ್ನಡ ಶಾಸನಗಳಲ್ಲಿ ಗುರುತಿಸಿ ವಿವರಿಸಿದ್ದಾರೆ.

ಮೈಕೆಲ್ ಡಬ್ಲು ಮೇಸ್ಟರ್ ಮತ್ತು ಎಂ.ಎ.ಢಾಕೆ ಅವರು ಸಂಪಾದಿಸಿದ **ಎನ್‌ಸೈಕ್ಲೋಪೀಡಿಯಾ ಆಫ್ ಇಂಡಿಯನ್ ಟೆಂಪಲ್ ಆರ್ಕಿಟೆಕ್ಚರ್ : ಸೌತ್ ಇಂಡಿಯ ಲೋಯರ್ ದ್ರಾವಿಡದೇಶ** (೧೯೮೩) ಮತ್ತು **ಅಪ್ಪರ್ ದ್ರಾವಿಡ ದೇಶ** (೧೯೮೬), ಸಂಪುಟಗಳು ವಾಸ್ತುಶಿಲ್ಪದ ಬಗ್ಗೆ ಉತ್ತಮ ಉಪಯುಕ್ತ ರೇಖಾ ಚಿತ್ರ ಮತ್ತು ಶ್ರೇಷ್ಠ ಮಟ್ಟದ ಛಾಯಾಚಿತ್ರಗಳನ್ನು ಒಳಗೊಂಡ ಮಾಹಿತಿಯೊಂದಿಗೆ ಸಂಶೋಧಕರಿಗೆ ಬಹು ಮಹತ್ವಪೂರ್ಣ ಗ್ರಂಥಗಳಾಗಿವೆ.

ಆ್ಯಡಮ್ ಹ್ಯಾನ್ರಿ ಅವರ **ಇಂಡಿಯನ್ ಟೆಂಪಲ್ ಆರ್ಕಿಟೆಕ್ಚರ್ : ದ ಕರ್ನಾಟಕ ದ್ರಾವಿಡ ಟ್ರೆಡಿಶನ್** (೧೯೯೫) ಗ್ರಂಥವು ಬಾದಾಮಿ ಚಾಲುಕ್ಯರ ಕಾಲದಿಂದ ಹೊಯ್ಸಳರ ಕಾಲದವರೆಗೆ ದೇವಾಲಯಗಳ ಊರ್ಧ್ವಮುಖ ರಚನೆಗಳಾದ ಅಧಿಷ್ಠಾನ, ಭಿತ್ತಿ, ಪ್ರಸ್ತರ, ಹಾರಗಳು, ಶಿಖರ ಹಾಗೂ ಸ್ತೂಪಿಗಳಲ್ಲಿ ಹಂತಹಂತವಾಗಿ ಆದ ಮಾರ್ಪಾಟುಗಳನ್ನು ವಿವರಿಸುವಲ್ಲಿ ಸಫಲವಾಗಿದೆ. 'ಕೂಟ ಎಡಿಕ್ಯೂಲ್ಸ್' ಮತ್ತು 'ಶಾಲಾ ಎಡಿಕ್ಯೂಲ್ಸ್' ಎಂದು ಹಾರಗಳ ಒಂದೊಂದು ಭಾಗಗಳೊಂದಿಗೆ ಭಿತ್ತಿಯ ಭಾಗವನ್ನೂ ಸೇರಿಸಿ ವಿವರಿಸುವ ರೀತಿಯು ಹೆಚ್ಚು ಸ್ಪಷ್ಟತೆಯನ್ನು ಒದಗಿಸುತ್ತದೆ. ಈ ಗ್ರಂಥವು ಕೇವಲ ಊರ್ಧ್ವಮುಖ ರಚನೆಗಳಿಗೆ ಸೀಮಿತವಾಗಿದ್ದು ದೇವಾಲಯಗಳ ತಿರ್ಯಙ್ಮುಖ ರಚನೆಗಳನ್ನು ಅಭ್ಯಸಿಸಿಲ್ಲ.

ದೇವಾಲಯ ವಾಸ್ತುಶಿಲ್ಪ ಕುರಿತಂತೆ ಆಂಗ್ಲ ಭಾಷೆಯಲ್ಲಿ ಇರುವಷ್ಟು ಗ್ರಂಥಗಳು ಹಾಗೂ ನಿಬಂಧಗಳು ಕನ್ನಡ ಭಾಷೆಯಲ್ಲಿ ಇಲ್ಲದಿರುವುದು ಬಹುದೊಡ್ಡ ಕೊರತೆ. ಕನ್ನಡದಲ್ಲಿ ಪ್ರಕಟಗೊಂಡ ಗ್ರಂಥಗಳು ಕಡಿಮೆ ಸಂಖ್ಯೆಯಲ್ಲಿದ್ದರೂ ಅಧ್ಯಯನದ ದೃಷ್ಟಿಯಿಂದ ಬಹು ಗಮನಾರ್ಹವಾಗಿವೆ. ಬಿ.ವೆಂಕೋಬರಾಯರು **ಮೈಸೂರು ದೇಶದ ವಾಸ್ತುಶಿಲ್ಪ** (೧೯೫೯) ಎಂಬ ಗ್ರಂಥದಲ್ಲಿ ಆಗಿನ ಮೈಸೂರು ರಾಜ್ಯದ ದೇವಾಲಯಗಳನ್ನು ಪರಿಚಯಾತ್ಮಕವಾಗಿ ತಿಳಿಸಿದ್ದಾರೆ. ಆ ಕಾಲಕ್ಕೆ ಲಭ್ಯವಿದ್ದ ಮಾಹಿತಿಗಳ ಆಧಾರದ ಮೇರೆಗೆ, ಆಗಿನ ಮೈಸೂರು ದೇಶದ ಭೌಗೋಳಿಕ ವ್ಯಾಪ್ತಿಗೆ ಅನ್ವಯಿಸಿ ನೋಡಿದಾಗ ಗ್ರಂಥದ ಮಹತ್ವವನ್ನು ಅಲ್ಲಗಳೆಯುವಂತಿಲ್ಲ. ಇದು ಒಂದು ವ್ಯಾಪ್ತಿಗೆ ಸೀಮಿತವಾಗಿದ್ದರೂ ಮಹತ್ವಪೂರ್ಣವಾಗಿದೆ.

ಎಸ್.ಕೆ.ರಾಮಚಂದ್ರರಾವ್ ಅವರ **ಭಾರತೀಯ ದೇವಾಲಯ ನೆಲೆ ಹಿನ್ನೆಲೆ** (೧೯೯೩) ಹಾಗೂ **ಮೂರ್ತಿಶಿಲ್ಪ ನೆಲೆ-ಹಿನ್ನೆಲೆ** (೧೯೭೫) ಹಾಗೂ ಆಂಗ್ಲ ಭಾಷೆಯಲ್ಲಿ ಮೂರು ಸಂಪುಟಗಳಲ್ಲಿ ಪ್ರಕಟಗೊಂಡ **ಎನ್‌ಸೈಕ್ಲೋಪೀಡಿಯಾ ಆಫ್ ಇಂಡಿಯನ್ ಐಕನೊಗ್ರಫಿ** ಗ್ರಂಥಗಳು ಸಂಶೋಧಕರಿಗೆ ಉಪಯುಕ್ತವಾಗಿವೆ. **ಭಾರತೀಯ ದೇವಾಲಯ ನೆಲೆ-ಹಿನ್ನೆಲೆ** ಯಲ್ಲಿ ಪ್ರಾಚೀನ ಸಮಾಧಿಗಳೇ ದೇವಾಲಯಗಳ ಮೂಲವಾಗಿರಬಹುದು ಎಂದು ಸೂಚಿಸುವುದರ ಜೊತೆಗೆ ವೃಕ್ಷಪೂಜೆ ಮತ್ತು ಪ್ರಾಣಿಪೂಜೆಗಳ ಬಗ್ಗೆ, ದೇವಾಲಯಗಳ ಹಿನ್ನೆಲೆಯಲ್ಲಿ ಇರುವ ಧಾರ್ಮಿಕ ಮನೋಭಾವನೆಯನ್ನೂ ವಿವರಿಸಲಾಗಿದೆ. **ಮೂರ್ತಿಶಿಲ್ಪ ನೆಲೆ-ಹಿನ್ನೆಲೆ** ಯಲ್ಲಿ ಪ್ರಾಚೀನ ಪದ್ಧತಿಗಳು, ಪೂಜೆ ಪುನಸ್ಕಾರಗಳು, ಪ್ರತಿಮಾ ಲಕ್ಷಣಗಳು ಹಾಗೂ ಆಗಮಗಳ ಕುರಿತು ಅಭಿಪ್ರಾಯ ವ್ಯಕ್ತಪಡಿಸಿರುವರು. ಗಣಪತಿ, ಶಿವ, ವಿಷ್ಣು ಮತ್ತು ಗ್ರಾಮದೇವತೆಗಳ ಬಗ್ಗೆಯೂ ಹಲವಾರು ಉಪಯುಕ್ತ ಮಾಹಿತಿಗಳು ಇವೆ. ಎನ್‌ಸೈಕ್ಲೋಪೀಡಿಯಾ ಸಂಪುಟಗಳಲ್ಲಿ ಆಕರ್ಷಕವಾದ ರೇಖಾಚಿತ್ರಗಳೊಂದಿಗೆ ಪೌರಾಣಿಕ ಮಾಹಿತಿಗಳನ್ನು ಪ್ರಾಸಂಗಿಕವಾಗಿ ನೀಡಿದ್ದಾರೆ.

ಶಿವರಾಮ ಕಾರಂತರ **ಚಾಲುಕ್ಯ ವಾಸ್ತು ಮತ್ತು ಶಿಲ್ಪ** , **ಭಾರತೀಯ ಶಿಲ್ಪ** (೧೯೭೫) ಗ್ರಂಥಗಳು ಹಾಗೂ ಇವರ ಮೂರು ಉಪನ್ಯಾಸಗಳನ್ನು ಒಳಗೊಂಡ **ಚಿತ್ರಶಿಲ್ಪ, ವಾಸ್ತುಕಲೆಗಳು** ಎಂಬ ಪುಸ್ತಕವು ದೇವಾಲಯಗಳನ್ನು ಕುರಿತು ಸಾಕಷ್ಟು ಮಾಹಿತಿಗಳನ್ನು ಒದಗಿಸುತ್ತವೆ. ಸಿಂದಗಿ ರಾಜಶೇಖರ ಅವರ **ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ** (೧೯೮೮) ಪುಸ್ತಕವು ಬಾದಾಮಿ ಚಾಲುಕ್ಯರಿಂದ ಹೊಯ್ಸಳರವರೆಗೂ ಕರ್ನಾಟಕದಲ್ಲಿರುವ ದೇವಾಲಯ ವಾಸ್ತುಶಿಲ್ಪದ ಬಗ್ಗೆ ಮಾಹಿತಿಯನ್ನು ಕೊಡುತ್ತದೆ. ಇದು ಸಂಕ್ಷಿಪ್ತ ಎನಿಸಿದರೂ ರಾಜಮನೆತನಗಳ ಹೆಸರಿನಿಂದ ವಾಸ್ತುಶಿಲ್ಪಶೈಲಿಯನ್ನು ಗುರುತಿಸುವಲ್ಲಿ ಸಹಾಯಕವಾಗಿದೆ. ಜೊತೆಗೆ ದ್ವಿಕೂಟ, ತ್ರಿಕೂಟ, ಚತುಷ್ಕೂಟ ಹಾಗೂ ಪಂಚಕೂಟ ದೇವಾಲಯಗಳ ಬಗ್ಗೆಯೂ ಉಪಯುಕ್ತ ಅಂಶಗಳನ್ನು ತಿಳಿಸಿಕೊಡುತ್ತದೆ.

ಜಿ.ಜ್ಞಾನಾನಂದ ಅವರ **ವಾಸ್ತುಪುರುಷ ನೆಲೆ-ಹಿನ್ನೆಲೆ** (೧೯೯೭) **ಶಿಲ್ಪಾದರ್ಶ ಸಂಪುಟ ೧** (೨೦೦೧) ಹಾಗೂ **ಸಂಪುಟ ೨**(೨೦೦೨)ರಲ್ಲಿ ದೇವಾಲಯ ವಾಸ್ತುಶಿಲ್ಪ ಕುರಿತು ಮತ್ತು ಪ್ರತಿಮಾ ಲಕ್ಷಣಗಳ ವಿವರಣೆ ಇದೆ. ಇದೇ ನಿಟ್ಟಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿದ **ಕರ್ನಾಟಕದ ಕಲೆಗಳು** ಎಂಬ ಮಾಲಿಕೆಯಲ್ಲಿ ನಾಲ್ಕನೆಯ ಸಂಪುಟವಾದ **ವಾಸ್ತು** (೧೯೯೩) ಗ್ರಂಥದಲ್ಲಿ ಬಾ.ರಾ.ಗೋಪಾಲ ಅವರು ದೇವಾಲಯ

ವಾಸ್ತುಶಿಲ್ಪದ 'ಆರಂಭಕಾಲ', 'ಉಚ್ಛ್ರಾಯ ಕಾಲ' ಹಾಗೂ 'ಅವನತಿಯ ಕಾಲ' ಎಂದು ವಿಭಾಗಿಸಿ ಚರ್ಚಿಸಿದ್ದಾರೆ. ಜೊತೆಗೆ ವಾಸ್ತುಶಾಸ್ತ್ರದ ಪ್ರಾಚೀನ ಗ್ರಂಥಗಳ ಬಗ್ಗೆ ಪ್ರತ್ಯೇಕ ಅಧ್ಯಾಯವನ್ನು ಮಾಡಿ ವಿವರಿಸಿದ್ದಾರೆ. ಇದು ಸಂಶೋಧಕರಿಗೆ ಮಾರ್ಗದರ್ಶಿಯಾಗಿ ನಿಲ್ಲುತ್ತದೆ. ವಾಸ್ತು ಶಾಸ್ತ್ರದ ಪ್ರಾಚೀನ ಗ್ರಂಥಗಳನ್ನು ಆಧರಿಸಿ ದೇವಾಲಯಗಳ ಹೊರ ರಚನೆಗಳನ್ನು ಮತ್ತು ಒಳರಚನೆಗಳನ್ನು ಅಭ್ಯಸಿಸುವಲ್ಲಿ ಕು.ಸ.ಅಪರ್ಣ ಅವರ **ದೇವಾಲಯ ವಾಸ್ತುಶಿಲ್ಪ ಪರಿಚಯ** (೧೯೯೯), ಹಾಗೂ ಎಂ.ಎನ್.ಪ್ರಭಾಕರ ಅವರ **ದೇವಾಲಯ ವಾಸ್ತು ಚಂದ್ರಿಕೆ** (೨೦೦೦) ಪುಸ್ತಕಗಳು ಉಪಯುಕ್ತವಾಗಿವೆ.

ದೇವಾಲಯಗಳ ಕುರಿತು ನಡೆದ ಅಧ್ಯಯನದಲ್ಲಿ ಶಾಸನಗಳನ್ನು ಪ್ರಧಾನವಾಗಿ ಗಮನಿಸಿ ದೇವಾಲಯಗಳು ಸಮಾಜಕ್ಕೆ ಕೊಟ್ಟ ಸಾಂಸ್ಕೃತಿಕ ಕೊಡುಗೆಗಳತ್ತ ಹಾಗೂ ಅದರ ವಿವಿಧ ಮುಖಗಳತ್ತ ಬೆಳಕು ಚೆಲ್ಲುವಂತೆಯೂ ಅಧ್ಯಯನಗಳು ನಡೆದಿವೆ. ಈ ನಿಟ್ಟಿನಲ್ಲಿ ಎಂ.ಚಿದಾನಂದಮೂರ್ತಿ ಅವರ **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ** (೧೯೬೬) ಗ್ರಂಥವನ್ನು ಹೆಸರಿಸಬೇಕು. ಇದರಲ್ಲಿ ದೇವಾಲಯವನ್ನು ಕುರಿತು 'ದೇವಾಲಯ ಒಂದು ಸಮಾಜಿಕ ಸಂಸ್ಥೆ' ಎಂದು ಪ್ರತ್ಯೇಕ ಅಧ್ಯಾಯವನ್ನು ಮಾಡಿ ದೇವಾಲಯಗಳ ಸಾಂಸ್ಕೃತಿಕ ಕೊಡುಗೆಯತ್ತ ವಿವರವಾಗಿ ಅಭ್ಯಸಿಸಿದ್ದಾರೆ. ಇದೇ ಹಾದಿಯಲ್ಲಿ ಎಚ್.ಎಸ್.ಗೋಪಾಲರಾವ್ ಅವರು ಕಲ್ಯಾಣ ಚಾಲುಕ್ಯ ದೇವಾಲಯಗಳಿಗೆ ಅಧ್ಯಯನವನ್ನು ಸೀಮಿತಗೊಳಿಸಿಕೊಂಡು **ಕಲ್ಯಾಣ ಚಾಲುಕ್ಯ ದೇವಾಲಯಗಳು ಒಂದು ಸಾಂಸ್ಕೃತಿಕ ಅಧ್ಯಯನ** (೧೯೯೩) ಎಂಬ ಶೀರ್ಷಿಕೆ ಅಡಿಯಲ್ಲಿ ಅಭ್ಯಸಿಸಿದ್ದಾರೆ.

ಈವರೆಗೂ ಗಮನಿಸಿದ ಗ್ರಂಥಗಳು ವಿಶಾಲವ್ಯಾಪ್ತಿಯಲ್ಲಿ ಮತ್ತು ವಿವಿಧ ರಾಜಮನೆತನಗಳನ್ನು ಲಕ್ಷ್ಯದಲ್ಲಿ ಇಟ್ಟುಕೊಂಡು ನಡೆಸಿದ ಅಧ್ಯಯನಗಳಾಗಿವೆ. ಇತ್ತೀಚಿನ ದಿನಗಳಲ್ಲಿ ಸಂಶೋಧನಾ ಅಧ್ಯಯನವು ಹೊಸ ತಿರುವನ್ನು ಪಡೆದುಕೊಂಡಿದೆ. ಪ್ರಾದೇಶಿಕ ಅಧ್ಯಯನದತ್ತ ವಾಲುತ್ತಿದೆ ಎಂಬುದು ಗಮನಾರ್ಹ ಅಂಶ.

**೧.೨. ಬದಲಾಗುತ್ತಿರುವ ಅಧ್ಯಯನ ಸ್ವರೂಪ :** ಕೆಲವು ದಶಕಗಳಿಂದ ಪ್ರಾದೇಶಿಕ ಅಧ್ಯಯನ ಅಥವಾ ಸೂಕ್ಷ್ಮ ಅಧ್ಯಯನಗಳನ್ನು ಒಳಗೊಂಡ ಸಂಶೋಧನ ಗ್ರಂಥಗಳು ಹೆಚ್ಚು ಹೊರಬರುತ್ತಿವೆ. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ನಡೆದ ೧೯೭೧ರ ವಿಚಾರಗೋಷ್ಠಿಯಲ್ಲಿ ಪ್ರಾದೇಶಿಕ ಇತಿಹಾಸ ರಚನೆಗೆ ಹೆಚ್ಚು ಒತ್ತುಕೊಡಬೇಕೆಂದು ಅಭಿಪ್ರಾಯಪಟ್ಟಿರುವುದು ಸ್ಮರಣಾರ್ಹ. ಇಂತಹ ಪ್ರಾದೇಶಿಕ ಇತಿಹಾಸ ರಚನೆಯಿಂದ ರಾಜ್ಯ ಅಥವಾ ರಾಷ್ಟ್ರದ ಇತಿಹಾಸಕ್ಕೂ ಹೆಚ್ಚು ಸ್ಪಷ್ಟತೆ ದೊರೆಯುತ್ತದೆ ಎನ್ನುವಲ್ಲಿ ಯಾವುದೇ ಸಂಶಯವಿಲ್ಲ. ಈ ನಿಟ್ಟಿನಲ್ಲಿ ಕರ್ನಾಟಕದಲ್ಲಿ ಜಿಲ್ಲೆ, ತಾಲೂಕು ಹಾಗೂ ಗ್ರಾಮವಾರು ಮಟ್ಟದಲ್ಲಿ ಸಂಶೋಧನೆಗಳು ನಡೆಯುತ್ತಲಿವೆ. ಸೂಕ್ಷ್ಮ ಅಧ್ಯಯನದಲ್ಲಿ ದೊರೆಯುವ ಹೊಸ ಆಕರಗಳು, ವಿನೂತ ವಿಧಾನಗಳು, ಸಂಶೋಧಕರ ಬದಲಾದ ದೃಷ್ಟಿಕೋನದಿಂದ ಅಧ್ಯಯನವು ಹೊಸದಿಕ್ಕಿನಲ್ಲಿ ಸಾಗಲು ಅನುಕೂಲವಾಗಿದೆ. ಇದು ಅಧ್ಯಯನದ ಆಳವನ್ನೂ ಹೆಚ್ಚಿಸಬಲ್ಲದು. ಹಿರಿಯ ವಿದ್ವಾಂಸರು, ಹೊಸ ಸಂಶೋಧಕರು ಹಲವಾರು ಗ್ರಂಥ ಮತ್ತು ಲೇಖನಗಳನ್ನು ಬರೆದು ಸೂಕ್ಷ್ಮ ಅಧ್ಯಯನಗಳಿಗೆ ಹೊಸ ಮೆರುಗನ್ನು ಕೊಟ್ಟಿದ್ದಾರೆ. ಈ ತಲಸ್ಪರ್ಶಿ ಅಧ್ಯಯನ ಇನ್ನೂ ನಡೆಯಬೇಕಿದೆ. ಸಿ.ಎಸ್.ಪಾಟೀಲ ಅವರ **ಆರ್ಟ್ ಆ್ಯಂಡ್ ಆರ್ಕಿಟೆಕ್ಚರ್ ಆಫ್ ರಾಯಚೂರ ಆ್ಯಂಡ್ ಬಳ್ಳಾರಿ ಡಿಸ್ಟ್ರಿಕ್ಟ್** (೧೯೯೪), ಎಚ್.ತಿಪ್ಪೇಸ್ವಾಮಿ ಅವರ **ದಾವಣಗೇರಿ ಜಿಲ್ಲೆಯ ದೇವಾಲಯಗಳು** (೨೦೦೦) ಎಂಬ ಅಪ್ರಕಟಿತ ಸಂಶೋಧನ ನಿಬಂಧಗಳನ್ನು ಈ ಸಂದರ್ಭದಲ್ಲಿ ಉದಾಹರಿಸ ಬಹುದು.

ಹೀಗೆ ಸೂಕ್ಷ್ಮ ಅಧ್ಯಯನದೊಂದಿಗೆ ಸಾಗುತ್ತಿರುವ ಅಧ್ಯಯನವು ಹಾವೇರಿ ಜಿಲ್ಲೆಯ ಭೂ ಪ್ರದೇಶವನ್ನು ಒಳಗೊಂಡಂತೆ ತಕ್ಕಮಟ್ಟಿಗೆ ನಡೆದಿದೆ. ಸಿ.ಮಹದೇವ, ಸಿ.ಎಸ್.ವಾಸುದೇವನ್, ರಮೇಶನಾಯ್ಕ ಅವರ **ಕರ್ನಾಟಕ ದೇವಾಲಯ ಕೋಶ, ಹಾವೇರಿ ಜಿಲ್ಲೆ** (೧೯೯೯) ಗ್ರಂಥವು ಜಿಲ್ಲೆಯ ಪ್ರಾಚೀನ ದೇವಾಲಯಗಳನ್ನು ಗುರುತಿಸುವಲ್ಲಿ ಉಪಯುಕ್ತವಾಗಿದೆ. ಆರ್.ಕರಿಬಸಯ್ಯ ಅವರ **ಹಿರೇಕೆರೂರು ಪ್ರದೇಶದ ಮೂರ್ತಿಶಿಲ್ಪ** (೧೯೯೮) ಎಂ.ಫಿಲ್. ಪ್ರಬಂಧವು ಹಿರೇಕೆರೂರು ಪ್ರದೇಶದ ಮೂರ್ತಿಶಿಲ್ಪವನ್ನು ಪರಿಚಯಿಸುತ್ತದೆ. ಇದೇ ರೀತಿ ವ್ಹಿ.ಜಿ.ಸೊಟ್ಟಮ್ಮನವರ **ರಾಣೆಬೆನ್ನೂರು ಪ್ರದೇಶದ ದೇವಾಲಯಗಳು ಒಂದು ಅಧ್ಯಯನ** (೧೯೯೮) ಎಂಬ ಎಂ.ಫಿಲ್. ಪ್ರಬಂಧವು ರಾಣೆಬೆನ್ನೂರು ಪ್ರದೇಶದ ದೇವಾಲಯಗಳನ್ನು ಪರಿಚಯಿಸುತ್ತದೆ. ಅರಿಷಿಣಗುಪ್ಪಿ ಬಸವರಾಜ್ ಅವರ **ತಿಳುವಳ್ಳಿ ಪ್ರದೇಶದ ದೇವಾಲಯಗಳು ಒಂದು ಅಧ್ಯಯನ** (೨೦೦೦) ಎಂಬ ಎಂ.ಫಿಲ್. ಪ್ರಬಂಧವು ತಿಳುವಳ್ಳಿ ಪ್ರದೇಶದ ದೇವಾಲಯಗಳು ಮತ್ತು ಮೂರ್ತಿಶಿಲ್ಪಗಳ ಮೇಲೆ ಉಪಯುಕ್ತ ಮಾಹಿತಿಯನ್ನು ಒದಗಿಸುತ್ತವೆ. ಅಳಿವಿನ ಅಂಚಿನಲ್ಲಿರುವ ಪ್ರಾದೇಶಿಕ ದೇವಾಲಯಗಳತ್ತ ಗಮನಹರಿಸುವ ಇಂತಹ ಅಧ್ಯಯನಗಳು ನಿಜಕ್ಕೂ ಸ್ತುತ್ಯಾರ್ಹ. ಇದರಂತೆ ರಾಜಕೀಯ ಮತ್ತು ಸಾಂಸ್ಕೃತಿಕ ಕ್ಷೇತ್ರದಲ್ಲಿ ಶಾಸನಗಳನ್ನು ಆಧರಿಸಿ ಚೆನ್ನಕ್ಕ ಪಾವಟೆ ಅವರ **ಬಂಕಾಪುರ ಶೋಧ** (೧೯೯೦), **ಹಾನಗಲ್ಲ ಕದಂಬರು** (೧೯೯೮), **ರಾಷ್ಟ್ರಕೂಟ ಸಾಮಂತ ಚಲ್ಲಕೇತನರು** (೧೯೯೯) ಕೃತಿಗಳು ಇಲ್ಲಿಯ ರಾಜಕೀಯ ಏರುಪೇರುಗಳನ್ನು ಗುರುತಿಸುವಲ್ಲಿ ಸಮರ್ಥವಾಗಿವೆ. ಭೋಜರಾಜ ಬ. ಪಾಟೀಲ ಅವರ **ನಾಗರಖಂಡ-೭೦ ಒಂದು ಅಧ್ಯಯನ** (೧೯೯೫)ವು ಹಾವೇರಿ ಜಿಲ್ಲೆಯ ರಾಣೆಬೆನ್ನೂರು ಭಾಗಗಳನ್ನು ಮತ್ತು ಶಿವಮೊಗ್ಗ ಜಿಲ್ಲೆಯ ಕೆಲವು ಭಾಗಗಳನ್ನು ಒಳಗೊಂಡು ನಡೆಸಿದ ಅಧ್ಯಯನವಾಗಿದೆ. ವಿನೋದ ಪಾಟೀಲ ಅವರ **ಪಾನುಂಗಲ್ಲಯ್ಯೂರು ಒಂದು ಸಾಂಸ್ಕೃತಿಕ ಅಧ್ಯಯನ** (೧೯೯೬), ಸಾಲಿಮಠ ಸುರೇಶ ಅವರ **ಹಿರೇಕೆರೂರು ಮತ್ತು ಸುತ್ತಮುತ್ತಲಿನ ಶಾಸನಗಳು ಒಂದು ಅಧ್ಯಯನ** (೧೯೯೬), ರಮೇಶ ನಾಯಕ ಅವರ **ಹಾವೇರಿ ಒಂದು ಸಾಂಸ್ಕೃತಿಕ ಅಧ್ಯಯನ** (೧೯೯೭) ಮಂಜುನಾಥ ಎಚ್.ಪಾಟೀಲ ಅವರ **ರಾಣೆಬೆನ್ನೂರು ತಾಲೂಕು ಶಾಸನಗಳ ಸಾಂಸ್ಕೃತಿಕ ಅಧ್ಯಯನ** (೧೯೯೮), ಸಣ್ಣಮನಿ ಪ್ರಕಾಶ ವ್ಹಿ. ಅವರ **ಹಾವೇರಿ ತಾಲೂಕಿನ ಶಾಸನಗಳು ಒಂದು ಅಧ್ಯಯನ** (೧೯೯೯), ಅರವಟಗಿ ಅವರ **ಎ ಕಲ್ಚರಲ್ ಸ್ಟಡಿ ಆಫ್ ಶಿಗ್ಗಾವ್ ರೀಜನ್** (೧೯೯೯), ಕೆಂಗೋಡು ಸುಭಾಸ ಬಿ. ಅವರ **ಬ್ಯಾಡಗಿ ಮತ್ತು ಸುತ್ತಮುತ್ತಲಿನ ಪ್ರದೇಶಗಳ ಶಾಸನಗಳು** (೨೦೦೦), ಎಂಬ ಎಂ.ಫಿಲ್ ಪ್ರಬಂಧಗಳಲ್ಲಿ ಹಾವೇರಿ ಜಿಲ್ಲೆಯ ಸಾಂಸ್ಕೃತಿಕ ಅಧ್ಯಯನವು ನಡೆದಿದೆ. ಈ ಪ್ರಬಂಧಗಳಲ್ಲಿ ಒಟ್ಟಾರೆ ಹಾವೇರಿ ಜಿಲ್ಲೆಯ ರಾಜಕೀಯ ಇತಿಹಾಸವು ಹರಿದು ಹಂಚಿದಂತೆ ಕಂಡುಬರುತ್ತದೆ. 'ಹಾವೇರಿ ಜಿಲ್ಲೆಯ ರಾಜಕೀಯ ಇತಿಹಾಸ' ಎಂಬ ಚೌಕಟ್ಟಿನಲ್ಲಿ ಈ ಕೆಲಸ ನಡೆಯಬೇಕಾಗಿದೆ.

**೧.೩. ಅಧ್ಯಯನದ ಉದ್ದೇಶ :** ಈವರೆಗೂ ನಡೆದ ಅಧ್ಯಯನವನ್ನು ಗಮನಿಸಿದರೆ ವಿಶಾಲ ಅಧ್ಯಯನದಲ್ಲಾಗಲಿ ಅಥವಾ ಸೂಕ್ಷ್ಮ ಅಧ್ಯಯನದಲ್ಲಾಗಲಿ ದೇವಾಲಯ ವಾಸ್ತುಶಿಲ್ಪದಲ್ಲಿ ಪ್ರಧಾನವಾಗಿ ಗಮನಿಸಬಹುದಾದ ದ್ವಿಕೂಟ, ತ್ರಿಕೂಟ, ಚತುಷ್ಕೂಟ ಮತ್ತು ಪಂಚಕೂಟ ದೇವಾಲಯಗಳ ಪ್ರತ್ಯೇಕ ಅಧ್ಯಯನ ಮಾಡದಿರುವ ಕೊರತೆ ಎದ್ದು ಕಾಣುತ್ತದೆ. ಅಲ್ಲದೆ ಏಕಗರ್ಭಗೃಹ ಅಥವಾ ಏಕಕೂಟ ದೇವಾಲಯಗಳನ್ನು ಬಿಟ್ಟರೆ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುವ ತ್ರಿಕೂಟ ದೇವಾಲಯಗಳ ಬಗ್ಗೆಯೂ ಪ್ರತ್ಯೇಕ ಅಧ್ಯಯನ

ನಡೆದಿಲ್ಲ. ಸಮಗ್ರ ದೇವಾಲಯಗಳ ಅಧ್ಯಯನದ ಅಡಿಯಲ್ಲಿ ಸಾಂದರ್ಭಿಕವಾಗಿ ತ್ರಿಕೂಟ ದೇವಾಲಯಗಳೂ ಉಲ್ಲೇಖಗೊಂಡಿವೆ. ಆದರೆ ಒಂದು ವಿಶಿಷ್ಟ ಅಧ್ಯಯನದಲ್ಲಿ ಪ್ರಧಾನ ಆಕರವಾಗಿ ನಿಲ್ಲಬಲ್ಲ ತ್ರಿಕೂಟ ದೇವಾಲಯಗಳ ಬಗ್ಗೆ ಪ್ರತ್ಯೇಕ ಅಭ್ಯಾಸದ ಅವಶ್ಯಕತೆ ಇದೆ. ಮಾನವನ ಬದುಕಿನಲ್ಲಿ ಅವಿಭಾಜ್ಯ ಅಂಗವಾಗಿ ಬೆಳೆದು ಬಂದ ದೇವಾಲಯಗಳು ಅವಶ್ಯಕತೆಗೆ ತಕ್ಕಂತೆ ಹೆಚ್ಚಿನ ವಾಸ್ತುರಚನೆಗಳನ್ನು ಮೈಗೂಡಿಸಿಕೊಳ್ಳುತ್ತ ಬೃಹದಾಕಾರದಲ್ಲಿ ಬೆಳೆದು ನಿಂತಿವೆ. ಜೊತೆಗೆ ಗರ್ಭಗೃಹಗಳ ಸಂಖ್ಯೆಯು ಹೆಚ್ಚುತ್ತ ದ್ವಿಕೂಟ, ತ್ರಿಕೂಟ, ಚತುಷ್ಕೂಟ, ಪಂಚಕೂಟ ಮುಂತಾಗಿ ವಿಸ್ತಾರಗೊಂಡಿರುವುದೂ ಗಮನಾರ್ಹ. ಅದು ವಾಸ್ತುಶಿಲ್ಪದ ಪ್ರಗತಿಯ ಲಕ್ಷಣಗಳಲ್ಲಿ ಒಂದು ಎಂದು ಅಂದುಕೊಂಡರೂ, ಬದಲಾದ ಧಾರ್ಮಿಕ ಮತ್ತು ಸಾಮಾಜಿಕ ಮನೋಭಾವ ಗಳಿಗೆ ತಕ್ಕಂತೆ ರೂಪಗೊಂಡ ತ್ರಿಕೂಟ ದೇವಾಲಯಗಳ ಧಾರ್ಮಿಕ ಹಿನ್ನೆಲೆ ಏನು? ಅವುಗಳನ್ನು ನಿರ್ಮಿಸುವ ಉದ್ದೇಶವೇನು? ಎಂಬ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವುದು ಪ್ರಸ್ತುತ ಸಂಶೋಧನೆಯ ಉದ್ದೇಶ. ತ್ರಿಕೂಟ ದೇವಾಲಯಗಳ ಅಧ್ಯಯನಕ್ಕಾಗಿ ಹಾವೇರಿ ಜಿಲ್ಲೆಯನ್ನು ಪ್ರಾಯೋಗಿಕವಾಗಿ ಆಯ್ದುಕೊಂಡಿದೆ.

ಸಮಾಜದ ಕೇಂದ್ರಬಿಂದುವಾಗಿ ತನ್ನ ಸುತ್ತ ನೂರಾರು ವಿಷಯಗಳನ್ನು ಹೆಣೆದುಕೊಂಡು 'ದೇವಾಲಯ ವಿಲ್ಲದೆ ಬದುಕೇ ಇಲ್ಲ' ಎನ್ನುವಷ್ಟರ ಮಟ್ಟಿಗೆ ಕಾರ್ಯನಿರ್ವಹಿಸಿದ ದೇವಾಲಯಗಳು ಇಂದು ಆ ವೈಭವದ ಬದುಕಿಗೆ ಮೂಕ ಸಾಕ್ಷಿಯಾಗಿ ನಿಂತಿವೆ. ಬದಲಾದ ರಾಜಕೀಯ ಸನ್ನಿವೇಶ, ಪ್ರಕೃತಿ ವಿಕೋಪ ಹಾಗೂ ಮನುಷ್ಯನ ಸ್ವಾರ್ಥ ಬುದ್ಧಿಯ ಹಿಡಿತಕ್ಕೆ ಸಿಕ್ಕಿ ಹೇಳ ಹೆಸರಿಲ್ಲದೆ ಕಣ್ಮರೆಯಾಗುವುದರೊಂದಿಗೆ ತಮ್ಮ ಮಹತ್ವವನ್ನು ಕಳೆದುಕೊಳ್ಳುತ್ತಿವೆ. ಜಿಲ್ಲೆಯಾದ್ಯಂತ ಹರಡಿರುವ ತ್ರಿಕೂಟ ದೇವಾಲಯಗಳಲ್ಲಿ ಸಾಕಷ್ಟು ದೇವಾಲಯಗಳು ಈಗಾಗಲೇ ವಿನಾಶದ ಅಂಚನ್ನು ತಲುಪಿವೆ. ಇವು ಸಂಪೂರ್ಣವಾಗಿ ನಾಶವಾಗುವ ಮುನ್ನ ದಾಖಲಿಸಿ ಮುಂದಿನ ಜನಾಂಗಕ್ಕೆ ಮಾದರಿಯಾಗಿಸುವ ಸಣ್ಣ ಪ್ರಯತ್ನವು ಪ್ರಸ್ತುತ ಅಧ್ಯಯನದ ಆಶಯವಾಗಿದೆ. ಜಿಲ್ಲೆಯ ಏಳು ತಾಲೂಕುಗಳಲ್ಲಿ ಕಂಡುಬರುವ ಎಲ್ಲ ತ್ರಿಕೂಟ ದೇವಾಲಯಗಳನ್ನು ಕ್ಷೇತ್ರಕಾರ್ಯದ ಮುಖಾಂತರ ಗುರುತಿಸಿಕೊಂಡು, ಕಾಲಮಾನದ ಚೌಕಟ್ಟಿನಲ್ಲಿ ತಂದು, ಪ್ರತಿಯೊಂದು ತ್ರಿಕೂಟ ದೇವಾಲಯದ ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಗಳನ್ನು ಪ್ರತ್ಯೇಕವಾಗಿ ಅಧ್ಯಯನ ಮಾಡುವುದು, ಜೊತೆಗೆ ದೇವಾಲಯಗಳಿಗೆ ಸಂಬಂಧಪಟ್ಟ ಶಾಸನಗಳನ್ನು ಕ್ರೂಢೀಕರಿಸಿ ಅಭ್ಯಸಿಸುವುದು ಮತ್ತು ಮಧ್ಯ ಯುಗೀನ ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ಸ್ಥಿತಿಗತಿಗಳತ್ತ ಗಮನ ಹರಿಸಿ, ತ್ರಿಕೂಟ ದೇವಾಲಯ ಗಳನ್ನು ವಿವಿಧ ದೃಷ್ಟಿಕೋನಗಳಿಂದ ಅಭ್ಯಸಿಸುವ ಮೂಲಕ ವಿಶಿಷ್ಟವಾದ ಅಧ್ಯಯನವನ್ನು ಕಟ್ಟಿಕೊಡುವುದು ಪ್ರಸ್ತುತ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

**೧.೪. ಅಧ್ಯಯನದ ವ್ಯಾಪ್ತಿ :** ಯಾವುದೇ ಒಂದು ನಿರ್ದಿಷ್ಟ ಹಾಗೂ ಉದ್ದೇಶಪೂರಿತವಾದ ಸಂಶೋಧನೆಯು ಯಶಸ್ಸು ಕಾಣಬೇಕೆಂದರೆ ಆ ಸಂಶೋಧನೆಗೊಂದು ವ್ಯಾಪ್ತಿ ಅಥವಾ ಮಿತಿ ಇರುವುದು ಬಹುಮುಖ್ಯ. ಇಲ್ಲದಿದ್ದರೆ ಅಧ್ಯಯನವು ಗೊಂದಲಮಯವಾಗಿ ಸಂಶೋಧಕನನ್ನು ದಾರಿ ತಪ್ಪಿಸುತ್ತದೆ. ನಿರ್ದಿಷ್ಟ ವ್ಯಾಪ್ತಿಯಲ್ಲಿ ರೂಪಗೊಂಡ ಸಂಶೋಧನೆಗೆ ಮಾತ್ರ ಕ್ರಮಬದ್ಧವಾದ ಹಾಗೂ ಸ್ಪಷ್ಟವಾದ ಅಧ್ಯಯನ ವನ್ನು ಕಟ್ಟಿಕೊಡಲು ಸಾಧ್ಯ. ಪ್ರಸ್ತುತ ಅಧ್ಯಯನದ ಶೀರ್ಷಿಕೆಯೇ ಸೂಚಿಸುವಂತೆ ಸಂಶೋಧನೆಯು ಹಾವೇರಿ ಜಿಲ್ಲೆಯ ಭೂ ಪ್ರದೇಶಕ್ಕೆ ಮಾತ್ರ ಸೀಮಿತವಾಗಿದೆ. ಪ್ರಸ್ತುತ ಜಿಲ್ಲೆಯ ಏಳು ತಾಲೂಕುಗಳಲ್ಲಿ ಕಂಡುಬರುವ

ತ್ರಿಕೂಟ ದೇವಾಲಯಗಳನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಬಾದಾಮಿ ಚಾಲುಕ್ಯರಿಂದ ಆರಂಭ ಗೊಂಡು ವಿಜಯನಗರ ಅರಸರವರೆಗಿನ ಅಂದರೆ ಕ್ರಿ.ಶ.೬ನೇ ಶತಮಾನದಿಂದ ಕ್ರಿ.ಶ.೧೬ನೇ ಶತಮಾನದ ವರೆಗಿನ ಕಾಲಘಟ್ಟದ ಮಿತಿಯನ್ನು ಹಾಕಿಕೊಳ್ಳಲಾಗಿದೆ. ಅದರಂತೆ ತ್ರಿಕೂಟ ದೇವಾಲಯಗಳಿಗೆ ಸಂಬಂಧಿಸಿದ ಶಾಸನಗಳು ಮತ್ತು ಮೂರ್ತಿಶಿಲ್ಪಗಳನ್ನು ಮಾತ್ರ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳು ಆಧುನಿಕ ಗಡಿರೇಖೆಯಾದ ಹಾವೇರಿ ಜಿಲ್ಲೆಯ ವ್ಯಾಪ್ತಿಯನ್ನು ಮೀರಿ ನಿಂತಿವೆ. ನೆರೆಯ ಜಿಲ್ಲೆಗಳಲ್ಲಿ ಕಂಡುಬರುವ ಪ್ರಮುಖ ತ್ರಿಕೂಟ ದೇವಾಲಯಗಳನ್ನು ಸಾಂದರ್ಭಿಕವಾಗಿ ಬಳಸಿ ಕೊಳ್ಳಲಾಗಿದೆ.

**ಆಕರಗಳು :** ಸಂಶೋಧನೆಗೆ ಆಕರಗಳು ಬಹುಮುಖ್ಯ. ಇವು ಅಧ್ಯಯನಕ್ಕೆ ಜೀವನಾಡಿ ಇದ್ದಂತೆ. ಪ್ರಸ್ತುತ ಅಧ್ಯಯನದಲ್ಲಿ ತ್ರಿಕೂಟ ದೇವಾಲಯಗಳೇ ಮೂಲ ಆಕರಗಳಾಗಿವೆ. ಜೊತೆಗೆ ಶಾಸನಗಳು, ಶಿಲ್ಪಗಳು ಮತ್ತು ಧರ್ಮಗ್ರಂಥಗಳೂ ಸಹ ಪ್ರಾಥಮಿಕ ಆಕರಗಳಾಗಿ ನಿಂತಿವೆ. ಮುಖ್ಯವಾಗಿ ಕ್ಷೇತ್ರಕಾರ್ಯದಿಂದ ಕಂಡುಕೊಂಡ ತ್ರಿಕೂಟ ದೇವಾಲಯಗಳ ವಾಸ್ತುವಿನ್ಯಾಸ ಮತ್ತು ದೇವಾಲಯಗಳು ಒಳಗೊಂಡ ಹೆಚ್ಚಿನ ವಾಸ್ತುರಚನೆಗಳು ಸಂಶೋಧನೆಗೆ ಅಗತ್ಯವಾದ ಮಾಹಿತಿಗಳನ್ನು ಒದಗಿಸಿವೆ. ಜೊತೆಗೆ ತ್ರಿಕೂಟ ದೇವಾಲಯ ಗಳಿಗೆ ಸಂಬಂಧಿಸಿದ ಶಾಸನಗಳನ್ನು ಬಳಸಿಕೊಳ್ಳಲಾಗಿದೆ. ತ್ರಿಕೂಟ ದೇವಾಲಯಗಳು ನಿರ್ಮಾಣಗೊಂಡ ನಿಖರವಾದ ಕಾಲಮಾನ, ನಿರ್ಮಾಣದ ಉದ್ದೇಶ, ದೇವಾಲಯಗಳಿಗೆ ಸಂದ ದಾನದತ್ತಿಗಳ ಬಗ್ಗೆ ವಿವರ ಮತ್ತು ದೇವಾಲಯ ಆಡಳಿತ ವರ್ಗಗಳ ಬಗ್ಗೆ ಸಮಗ್ರ ಮಾಹಿತಿ ಒದಗಿಸುವಲ್ಲಿ ಶಾಸನಗಳು ಬಹು ಉಪಯುಕ್ತವಾಗಿವೆ. ಹಾಗೆಯೇ ತ್ರಿಕೂಟ ದೇವಾಲಯಗಳ ಗರ್ಭಗೃಹಗಳಲ್ಲಿಯ ಮತ್ತು ನವರಂಗದ ಕೋಷ್ಠದಲ್ಲಿಯ ಶಿಲ್ಪಗಳು, ದೇವಾಲಯದ ಹೊರಭಿತ್ತಿಯಲ್ಲಿರುವ ಉಬ್ಬುಶಿಲ್ಪಗಳೂ ಸಹ ಅಧ್ಯಯನಕ್ಕೆ ಪೂರಕವಾದ ಮಾಹಿತಿಯನ್ನು ಒದಗಿಸಿವೆ. ಅದರಂತೆ ಧರ್ಮಗ್ರಂಥಗಳು ಕೂಡ ಅಧ್ಯಯನದ ಆಳವನ್ನು ಮತ್ತು ಸ್ಪಷ್ಟತೆಯನ್ನು ಹೆಚ್ಚಿಸುವಲ್ಲಿ ಗಮನಾರ್ಹವಾಗಿವೆ. ವೇದ, ಆಗಮ, ಪುರಾಣ ಮತ್ತು ದರ್ಶನ ಸಾಹಿತ್ಯಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಬಳಸಲಾಗಿದೆ. ಇವುಗಳಲ್ಲಿ ಪುರುಷಸೂಕ್ತವನ್ನು ಒಳಗೊಂಡ ಋಗ್ವೇದವನ್ನು ಮತ್ತು ಷಡ್ದರ್ಶನಗಳಲ್ಲಿ ಒಂದಾದ ನ್ಯಾಯದರ್ಶನವನ್ನು ಹೆಚ್ಚಾಗಿ ಬಳಸಿಕೊಳ್ಳಲಾಗಿದೆ. ಅಧ್ಯಯನದ ಅವಶ್ಯಕತೆಗೆ ತಕ್ಕಂತೆ ಸಮಕಾಲೀನ ಕಾವ್ಯಗಳು ಸಹ ನೆರವಿಗೆ ಬಂದಿವೆ. ಅಬ್ಬಲೂರು ಏಕಾಂತ ರಾಮಯ್ಯನ ಪವಾಡಕ್ಕೆ ಸಂಬಂಧಿಸಿದ ಹರಿಹರನ **'ಏಕಾಂತ ರಾಮಿತಂದೆರಗಳೆ'** ಮತ್ತು ಶಾಂತನಿರಂಜನರ **'ಅಬ್ಬಲೂರು ಚರಿತೆ'**ಗಳನ್ನು ಇಲ್ಲಿ ಸಾಂದರ್ಭಿಕವಾಗಿ ಬಳಸಲಾಗಿದೆ. ಹಿರಿಯ ವಿದ್ವಾಂಸರ ಪುಸ್ತಕಗಳನ್ನು ಹಾಗೂ ಲೇಖನಗಳನ್ನೂ ಸಂದರ್ಭೋಚಿತವಾಗಿ ಬಳಸಿಕೊಳ್ಳಲಾಗಿದೆ. ಹೀಗೆ ದೊರೆತ ಎಲ್ಲ ಬಗೆಯ ಆಕರಗಳಿಂದ ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳನ್ನು ಕುರಿತ ಅಧ್ಯಯನವನ್ನು ಕಟ್ಟಿಕೊಡುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

**೧.೫. ಅಧ್ಯಯನದ ಸ್ವರೂಪ :** 'ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳು' ಎಂಬ ಮಹಾಪ್ರಬಂಧ ವನ್ನು ಅಧ್ಯಯನದ ಅನುಕೂಲಕ್ಕಾಗಿ, ಉಪಶೀರ್ಷಿಕೆಗಳನ್ನು ಒಳಗೊಂಡಂತೆ ಐದು ಅಧ್ಯಾಯಗಳಾಗಿ ವಿಭಾಗಿಸಲಾಗಿದೆ. ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳನ್ನು ಕುರಿತು ಇಲ್ಲಿ ಅಧ್ಯಯನ ನಡೆದಿದೆ.

ಈ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯನ್ನು ಮೊದಲನೇ ಅಧ್ಯಾಯವಾದ ಪ್ರಸ್ತಾವನೆಯಲ್ಲಿ ಸ್ಪಷ್ಟಪಡಿಸಲಾಗಿದೆ. ಜೊತೆಗೆ ಈವರೆಗೆ ನಡೆದಿರುವ ಅಧ್ಯಯನವನ್ನು ಹಾಗೂ ಪ್ರಸ್ತುತ ಅಧ್ಯಯನದ ಅವಶ್ಯಕತೆಯನ್ನು ವಿವರಿಸಲಾಗಿದೆ. ಅಧ್ಯಯನಕ್ಕೆ ಸಹಾಯಕವಾದ ಆಕರಗಳು, ಪ್ರಸ್ತುತ ಅಧ್ಯಯನದ ವಿಧಾನ, ಸ್ವರೂಪ ಮುಂತಾದ ವಿಷಯಗಳನ್ನು ಚರ್ಚಿಸಲಾಗಿದೆ. ಈ ಅಧ್ಯಾಯವು ಪ್ರಸ್ತುತ ಪ್ರಬಂಧಕ್ಕೆ ತಾತ್ವಿಕ ಹಿನ್ನೆಲೆಯನ್ನು ಕೊಡಬಲ್ಲದು.

ಎರಡನೆಯ ಅಧ್ಯಾಯವಾದ 'ಹಾವೇರಿ ಜಿಲ್ಲೆಯ ಭೌಗೋಳಿಕ ಲಕ್ಷಣ, ಪರಿಸರ ಮತ್ತು ಐತಿಹಾಸಿಕ ಚರಿತ್ರೆ'ಯಲ್ಲಿ ಜಿಲ್ಲೆಯ ಭೌಗೋಳಿಕ ಲಕ್ಷಣ, ನದಿಗಳು ಮತ್ತು ಗುಡ್ಡಬೆಟ್ಟಗಳ ಬಗ್ಗೆ ಸಂಕ್ಷಿಪ್ತವಾಗಿ ಹೇಳಲಾಗಿದೆ. ೧೯೯೭ರಲ್ಲಿ ನೂತನವಾಗಿ ರಚನೆಗೊಂಡ ಹಾವೇರಿ ಜಿಲ್ಲೆಯು ಧಾರವಾಡ, ಗದಗ, ಬಳ್ಳಾರಿ, ದಾವಣಗೆರೆ, ಶಿವಮೊಗ್ಗ ಮತ್ತು ಉತ್ತರ ಕನ್ನಡ ಜಿಲ್ಲೆಗಳನ್ನು ಗಡಿಯ ಜಿಲ್ಲೆಗಳನ್ನಾಗಿ ಒಳಗೊಂಡಿದೆ. ಪ್ರಾಚೀನ ಕಾಲದಿಂದಲೇ ಜನವಸತಿಯ ಪ್ರದೇಶವಾಗಿದ್ದು ಆಧುನಿಕ ಕಾಲದವರೆಗೂ ತನ್ನದೇ ಆದ ಚಾರಿತ್ರಿಕ ಘಟ್ಟಗಳನ್ನು ಜಿಲ್ಲೆಯು ಒಳಗೊಂಡಿದೆ. ಹಳ್ಳೂರು, ನಲ್ವಗಲ್, ಹಾದರಗೇರಿ, ತಡಕನಹಳ್ಳಿ ಮುಂತಾದ ನೆಲೆಗಳು ಪ್ರಾಕ್ಚಾರಿತ್ರಿಕ ಇತಿಹಾಸದ ಮೇಲೆ ಹೊಸ ಬೆಳಕನ್ನು ಚೆಲ್ಲಿದೆ. ಕರ್ನಾಟಕದ ರಾಜಕೀಯ ಇತಿಹಾಸದಲ್ಲಿ ತುಂಗಭದ್ರಾ ನದಿ ದಂಡೆಯು ಅತ್ಯಂತ ಗಮನಾರ್ಹ ಪಾತ್ರವಹಿಸಿದೆ. ಕೆಲವೊಮ್ಮೆ ಇಡೀ ಕರ್ನಾಟಕದ ರಾಜಕೀಯವನ್ನೇ ಬದಲಾಯಿಸುವಂತಹ ಘಟನೆಗಳು ಹಾಗೂ ಯುದ್ಧಗಳು ಈ ನದಿತೀರದಲ್ಲಿ ನಡೆದಿವೆ. ಇದರೊಂದಿಗೆ ಎರಡು ಪ್ರಮುಖ ಸಾಮ್ರಾಜ್ಯಗಳ ಗಡಿರೇಖೆಯಾಗಿಯೂ ಪಾತ್ರವಹಿಸಿದೆ. ಈ ನದಿಯನ್ನು ತನ್ನ ಪೂರ್ವ ಮತ್ತು ಆಗ್ನೇಯ ದಿಕ್ಕಿನ ಗಡಿರೇಖೆಯನ್ನಾಗಿ ಹೊಂದಿದ ಹಾವೇರಿ ಜಿಲ್ಲೆಯು ಮಹತ್ವಪೂರ್ಣವಾದ ರಾಜಕೀಯ ಇತಿಹಾಸವನ್ನು ಹೊಂದಿದೆ. ಈ ಕಾರಣದಿಂದ ಜಿಲ್ಲೆಯಲ್ಲಿ ಆಳ್ವಿಕೆ ನಡೆಸಿದ ಪ್ರಮುಖ ರಾಜಮನೆತನಗಳಿಂದ ಸ್ವಾತಂತ್ರ್ಯ ಚಳುವಳಿಯವರೆಗೆ ಮತ್ತು ಮುಖ್ಯವಾಗಿ ಸ್ಥಳೀಯ ಮಾಂಡಳಿಕರಾದ ಚೆಲ್ಲಕೇತನರು, ಹಾನಗಲ್ಲ ಕದಂಬರು, ಗುತ್ತಲದ ಗುತ್ತರು ಮತ್ತು ನೂರುಂಬಾಡದ ಕಡಂಬರ ಬಗ್ಗೆ ವಿಶ್ಲೇಷಿಸಲಾಗಿದೆ. ಈ ಅಧ್ಯಾಯದಲ್ಲಿ ದೇವಾಲಯಗಳ ನಿರ್ಮಾಣ ಕಾರ್ಯದಲ್ಲಿ ಭೌಗೋಳಿಕ ಮತ್ತು ರಾಜಕೀಯ ಸ್ಥಿತಿಗತಿಗಳೂ ಸಹ ಗಮನಾರ್ಹ ಪಾತ್ರವನ್ನು ನಿರ್ವಹಿಸುತ್ತವೆ ಎಂಬುದನ್ನು ಗಮನಿಸಲಾಗಿದೆ.

ಮೂರನೆಯ ಅಧ್ಯಾಯವು 'ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯ'ಗಳ ಕುರಿತು ನಡೆಸಿದ ಸಮಗ್ರ ಅಧ್ಯಯನವನ್ನು ಒಳಗೊಂಡಿದೆ. ಕ್ಷೇತ್ರಕಾರ್ಯದ ಫಲವಾಗಿ ಜಿಲ್ಲೆಯಲ್ಲಿ ಮೂವತ್ತೊಂದು ತ್ರಿಕೂಟ ದೇವಾಲಯಗಳನ್ನು ಗುರುತಿಸಲಾಗಿದೆ. ಪ್ರಮುಖ ಆಕರಗಳಾದ ತ್ರಿಕೂಟ ದೇವಾಲಯಗಳು, ಶಾಸನಗಳು, ಮೂರ್ತಿಶಿಲ್ಪಗಳು ಮತ್ತು ಧರ್ಮಗ್ರಂಥಗಳನ್ನು ಬಳಸಿಕೊಂಡು ದೇವಾಲಯಗಳನ್ನು ಮೂರು ಭಾಗಗಳಲ್ಲಿ ವಿಂಗಡಿಸಿ ಚರ್ಚಿಸಲಾಗಿದೆ.

೧. ವ್ಯಕ್ತಿನಾಮ/ಪರೋಕ್ಷವಿನಯ ತ್ರಿಕೂಟ ದೇವಾಲಯಗಳು

೨. ತ್ರೈಪುರುಷ/ತ್ರಿಕೂಟ ದೇವಾಲಯಗಳು

೩. ನ್ಯಾಯದರ್ಶನ/ತ್ರಿಮೂರ್ತಿ ತ್ರಿಕೂಟ ದೇವಾಲಯಗಳು

ಮೊದಲನೇ ಭಾಗವಾದ ವ್ಯಕ್ತಿನಾಮ/ಪರೋಕ್ಷವಿನಯ ದೇವಾಲಯದಲ್ಲಿ ವ್ಯಕ್ತಿನಾಮ ಲಿಂಗಗಳು, ಪ್ರತಿರೂಪ ಲಿಂಗಗಳು ಮತ್ತು ಪರೋಕ್ಷ ವಿನಯದ ಬಗ್ಗೆ ಚರ್ಚಿಸಲಾಗಿದೆ. ಪರೋಕ್ಷವಿನಯಕ್ಕಾಗಿ ಮತ್ತು ಪ್ರತಿರೂಪ ಲಿಂಗಗಳನ್ನು ಪ್ರತಿಷ್ಠಾಪಿಸುವುದಕ್ಕಾಗಿ ನಿರ್ಮಾಣಗೊಂಡ ತ್ರಿಕೂಟ ದೇವಾಲಯಗಳ ಕುರಿತು ವಿವರಿಸಲು ಇಲ್ಲಿ ಪ್ರಯತ್ನಿಸಲಾಗಿದೆ. ಈ ಭಾಗದಲ್ಲಿ ಹರಳಹಳ್ಳಿಯ ಸೋಮೇಶ್ವರ, ಹೊನ್ನತ್ತಿಯ ರಾಮಲಿಂಗೇಶ್ವರ, ದಶರಥಕೊಪ್ಪದ ಸೋಮೇಶ್ವರ, ಅಬ್ಬಲೂರಿನ ಸೋಮೇಶ್ವರ, ರಟ್ಟಿಹಳ್ಳಿಯ ಕಡಂಬೇಶ್ವರ ಮತ್ತು ಕಾರಡಗಿಯ ಡೊಳ್ಳೇಶ್ವರ ತ್ರಿಕೂಟ ದೇವಾಲಯಗಳ ವಾಸ್ತುಶಿಲ್ಪವು ವಿವರಣೆಗೊಂಡಿದೆ.

ಎರಡನೆಯ ಭಾಗವಾದ ತ್ರೈಪುರುಷ ದೇವಾಲಯದಲ್ಲಿ ತ್ರೈಪುರುಷರಾದ ಶಿವ, ವಿಷ್ಣು ಮತ್ತು ಸೂರ್ಯರ ಬಗ್ಗೆ ವಿವರಿಸಲಾಗಿದೆ. ಮೂರು ಪುರುಷ ದೇವರುಗಳನ್ನು ಒಳಗೊಂಡ ತ್ರೈಪುರುಷ ತ್ರಿಕೂಟ ದೇವಾಲಯಗಳು ಪ್ರಮುಖ ವಿದ್ಯಾಕೇಂದ್ರಗಳಾಗಿ ಮತ್ತು ಸಮಾಜದ ಎಲ್ಲಾ ವರ್ಗದ ಮತ್ತು ಎಲ್ಲಾ ಪಂಥದ ಜನರನ್ನು ಒಂದೆಡೆ ಸೇರಿಸುವ ಮಧ್ಯವರ್ತಿಗಳಾಗಿ ಕಾರ್ಯ ನಿರ್ವಹಿಸಿದರ ಬಗ್ಗೆ ಇಲ್ಲಿ ಚರ್ಚಿಸಲಾಗಿದೆ. ಈ ಭಾಗದಲ್ಲಿ ಕುಳೇನೂರು ಕಲ್ಮೇಶ್ವರ, ಉಪ್ಪುಣಸಿ ಕಲ್ಮೇಶ್ವರ, ಮೇದೂರು ಮಾಕಾಳೇಶ್ವರ, ಕಲಕೇರಿ ಸೋಮೇಶ್ವರ, ಅಬ್ಬಲೂರು ಬ್ರಹ್ಮಲಿಂಗೇಶ್ವರ, ಪುರದಗೇರಿ ಸೋಮೇಶ್ವರ ತ್ರಿಕೂಟ ದೇವಾಲಯಗಳ ವಾಸ್ತುಶಿಲ್ಪವು ವಿವರಣೆಗೊಂಡಿವೆ.

ಮೂರನೆಯ ಭಾಗವಾದ ನ್ಯಾಯದರ್ಶನ/ತ್ರಿಮೂರ್ತಿ ದೇವಾಲಯದಲ್ಲಿ ಆಗಮ, ಪುರಾಣ ಹಾಗೂ ಷಡ್ದರ್ಶನಗಳಲ್ಲಿ ಒಂದಾದ ನ್ಯಾಯದರ್ಶನಗಳನ್ನು ವಿವರಿಸಲಾಗಿದೆ. ಶೈವಪಂಥದ ಕಾಳಾಮುಖ ಯತಿಗಳ ಬಗ್ಗೆಯೂ ಚರ್ಚಿಸಲಾಗಿದೆ. ಕಾಳಾಮುಖ ಯತಿಗಳನ್ನು 'ನೈಯಾಯಿಕಾಗ್ರೇಸರ,' 'ಪರಮನೈಯಾಯಿಕ,' 'ನೈಯಾಯಿಕಸಂರಕ್ಷಣಾದಕ್ಷ' ಎಂದು ಮುಂತಾಗಿ ಶಾಸನಗಳು ಉಲ್ಲೇಖಿಸಿವೆ. ನ್ಯಾಯದರ್ಶವನ್ನು ಒಪ್ಪಿ ನಡೆದ ಕಾಳಾಮುಖರು ದರ್ಶನದ ದಾರ್ಶನಿಕ ನೋಟವಾದ ಈಶ್ವರನ ಅನಿತ್ಯ ರೂಪಗಳನ್ನು ಪ್ರತಿಪಾದಿಸಿದರು. ಈಶ್ವರನ ಅನಿತ್ಯ ರೂಪಗಳಾದ ಸೃಷ್ಟಿ(ಬ್ರಹ್ಮ), ಸ್ಥಿತಿ(ವಿಷ್ಣು), ಲಯ(ಮಹೇಶ್ವರ)ಗಳನ್ನು ಪೂಜಿಸಲು ತ್ರಿಕೂಟ ವಿನ್ಯಾಸದ ದೇವಾಲಯಗಳನ್ನು ಬಳಸಿಕೊಂಡರು ಎಂಬುದನ್ನು ಈ ಭಾಗದಲ್ಲಿ ಸಮರ್ಥಿಸಲು ಪ್ರಯತ್ನಿಸಲಾಗಿದೆ. ಇಲ್ಲಿ ಅಂತರವಳ್ಳಿ, ಅಕ್ಕಿಆಲೂರು, ಆಲದಗೇರಿ, ಕಡೂರು, ಕಿರಗೇರಿ, ಕುಂಚೂರು, ಕುಡುಪಲಿ, ಗುಂಡೂರು, ಗುಡಗೂರು, ಗುಡ್ಡದ ಆನೇವರಿ, ಮತ್ತಿಹಳ್ಳಿ, ಮತ್ತೂರು, ಸಿಡೆನೂರು, ಹಿರೇಕೊಣತಿ, ಹಿರೇಮಾಗನೂರು ಮತ್ತು ಹೊನ್ನತ್ತಿ ಗ್ರಾಮಗಳಲ್ಲಿಯ ತ್ರಿಕೂಟ ದೇವಾಲಯಗಳ ವಾಸ್ತುಶಿಲ್ಪವು ವಿವರಣೆಗೊಂಡಿದೆ.

ಹಾವೇರಿ ಜಿಲ್ಲೆಯಲ್ಲಿ ಗುರುತಿಸಲಾದ ಮೂವತ್ತೊಂದು ತ್ರಿಕೂಟ ದೇವಾಲಯಗಳಲ್ಲಿ ಮೇಲೆ ಹೇಳಿದ ಮೂವತ್ತು ದೇವಾಲಯಗಳು ಕಲ್ಯಾಣ ಚಾಲುಕ್ಯರ ಕಾಲಘಟ್ಟಕ್ಕೆ (ಅಂದರೆ ಸು.ಕ್ರಿ.ಶ.೧೧-೧೩ನೇಶತಮಾನ) ಒಳಪಟ್ಟಿವೆ. ಈ ದೇವಾಲಯಗಳು ಶೈವಧರ್ಮವನ್ನು ಪ್ರತಿಪಾದಿಸುತ್ತವೆ. ಹಾವೇರಿ ತಾಲೂಕು ನರಸಿಂಹಪುರದ ನರಸಿಂಹ ದೇವಾಲಯವು ಮಾತ್ರ ವಿಜಯನಗರ ಅರಸರ ಕಾಲಮಾನಕ್ಕೆ ಸೇರಿದ್ದು ವೈಷ್ಣವ ಧರ್ಮವನ್ನು ಪ್ರತಿನಿಧಿಸುತ್ತದೆ. ಜಿಲ್ಲೆಯಲ್ಲಿ ಬಹು ಅಪರೂಪವಾಗಿ ಕಂಡುಬರುವ ವಿಜಯನಗರ ಅರಸರ ಕಾಲದ

ಸ್ಮಾರಕಗಳಲ್ಲಿ ನರಸಿಂಹಪುರ ದೇವಾಲಯವು ಗಮನಾರ್ಹ. ಈ ದೇವಾಲಯವು ತ್ರಿಕೂಟ ಮಾದರಿಯಲ್ಲಿ ಇರುವುದು ಬಹು ವಿಶೇಷ. ಇದನ್ನು ಪ್ರತ್ಯೇಕವಾಗಿ ಚರ್ಚಿಸಲಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಪೂರಕವಾಗಿ ಮತ್ತು ಅಧ್ಯಯನದ ಸ್ಪಷ್ಟತೆಯನ್ನು ಹೆಚ್ಚಿಸಲು ದೇವಾಲಯಗಳ ವಾಸ್ತು ವಿವರಣೆಯ ಜೊತೆಯಲ್ಲಿಯೇ ದೇವಾಲಯಗಳ ತಳವಿನ್ಯಾಸಗಳನ್ನು ದೇವಾಲಯಗಳ ಅಧಿಷ್ಠಾನ ಮತ್ತು ನವರಂಗದಲ್ಲಿಯ ಸ್ತಂಭಗಳ ರೇಖಾ ಚಿತ್ರಗಳನ್ನು ಅಳವಡಿಸಲಾಗಿದೆ. ಒಂದೊಂದು ಭಾಗದ ಕೊನೆಯಲ್ಲಿ ಛಾಯಾಚಿತ್ರಗಳನ್ನು ಹೊಂದಿಸ ಲಾಗಿದೆ. ಜೊತೆಗೆ ಜಿಲ್ಲೆಯಲ್ಲಿ ತ್ರಿಕೂಟ ದೇವಾಲಯಗಳಿರುವ ಸ್ಥಳಗಳನ್ನು ಸುಲಭವಾಗಿ ಗುರುತಿಸಲು ನಕ್ಷೆಗಳನ್ನು ಇಡಲಾಗಿದೆ.

ನಾಲ್ಕನೆಯ ಅಧ್ಯಾಯವಾದ ಮೂರ್ತಿಶಿಲ್ಪದಲ್ಲಿ ತ್ರಿಕೂಟ ದೇವಾಲಯಗಳನ್ನು ಒಳಗೊಂಡ ಮೂರ್ತಿ ಶಿಲ್ಪಗಳ ಕುರಿತು ಚರ್ಚಿಸಲಾಗಿದೆ. ಇಲ್ಲಿಯ ಎಲ್ಲಾ ಶಿಲ್ಪಗಳು ಕಲ್ಯಾಣ ಚಾಲುಕ್ಯ ಶೈಲಿಗೆ ಸೇರಿವೆ. ಅಧ್ಯಾಯ ಮೂರರಲ್ಲಿ ಮಾಡಿಕೊಂಡ ಮೂರು ಭಾಗಗಳಿಗೆ ತಕ್ಕಂತೆ ಮೂರ್ತಿಶಿಲ್ಪಗಳನ್ನು ವಿಂಗಡಿಸಿಕೊಂಡು ಅಭ್ಯಸಿಸಲಾಗಿದೆ. ಲಿಂಗಗಳ ರಚನಾವಿಧಾನ, ಗಾತ್ರ ಮತ್ತು ರುದ್ರಭಾಗಗಳನ್ನು ಗಮನದಲ್ಲಿ ಇಟ್ಟುಕೊಂಡು ವಿಶ್ಲೇಷಿಸಲಾಗಿದೆ. ಅದರಂತೆ ವಿಷ್ಣು, ಸೂರ್ಯ ಮತ್ತು ನಂದಿ ಶಿಲ್ಪಗಳಲ್ಲಿಯೂ ಗಾತ್ರ ಮತ್ತು ರಚನಾವಿಧಾನ ಗಳನ್ನು ಗಮನಿಸಲಾಗಿದೆ. ಜೊತೆಗೆ ನವರಂಗದಲ್ಲಿರುವ ಇತರ ಶಿಲ್ಪಗಳು ಮತ್ತು ಉಬ್ಬುಶಿಲ್ಪಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಐದನೆಯ ಹಾಗೂ ಕೊನೆಯ ಅಧ್ಯಾಯವು ಸಮಾರೋಪವಾಗಿದ್ದು ಇಡೀ ಅಧ್ಯಯನದ ಸಂಕ್ಷಿಪ್ತ ರೂಪ. ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಂಡ ಪ್ರಮುಖ ಸಂಗತಿಗಳ ಸಮೀಕ್ಷೆಯನ್ನು ಇದು ಒಳಗೊಂಡಿದೆ. ಗ್ರಂಥಋಣ ಮತ್ತು ಪಾರಿಭಾಷಿಕ ಪದಗಳನ್ನು ಅನುಬಂಧದಲ್ಲಿ ಕೊಡಲಾಗಿದೆ.

೧.೬. ಅಧ್ಯಯನ ವಿಧಾನ : ಸಂಶೋಧನೆಗೆ ಅಧ್ಯಯನ ಕ್ರಮವು ಬಹುಮುಖ್ಯ. ಪ್ರಸ್ತುತ ಅಧ್ಯಯನಕ್ಕೆ ತ್ರಿಕೂಟ ದೇವಾಲಯಗಳೇ ಆಕರಗಳಾಗಿವೆ. ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳ ಕುರಿತ ಪ್ರಾಥಮಿಕ ಮಾಹಿತಿ ಸಂಗ್ರಹಣೆಯನ್ನು ವ್ಯಾಪಕ ಕ್ಷೇತ್ರಕಾರ್ಯದ ಮೂಲಕ ಕೈಕೊಳ್ಳಲಾಗಿದೆ. ದೇವಾಲಯಗಳ ವಾಸ್ತು, ಧರ್ಮ ಮತ್ತು ಆಚರಣೆಗಳ ಮೇಲೆ ಆದ ಪ್ರಭಾವಗಳನ್ನು ತುಲನಾತ್ಮಕವಾಗಿ ಅಧ್ಯಯನ ನಡೆಸಲು ವ್ಯಾಪ್ತಿ ಪ್ರದೇಶದ ಆಸುಪಾಸಿನ ತ್ರಿಕೂಟ ದೇವಾಲಯಗಳನ್ನು ಕ್ಷೇತ್ರಕಾರ್ಯದ ಮೂಲಕ ಮಾಹಿತಿ ಸಂಗ್ರಹಿಸಿ ಅಧ್ಯಯನದಲ್ಲಿ ಅಳವಡಿಸಿಕೊಳ್ಳಲಾಗಿದೆ. ಅಧ್ಯಯನಕ್ಕೆ ಒಳಪಡಿಸಿದ ಪ್ರತಿ ತ್ರಿಕೂಟ ದೇವಾಲಯಗಳ ವಾಸ್ತುರಚನೆ, ಶಿಲ್ಪ, ಶಾಸನ, ಸ್ಥಳಪುರಾಣ, ಐತಿಹ್ಯ, ಆಚರಣೆ, ನಂಬಿಕೆ, ಮೌಖಿಕ ಚರಿತ್ರೆ ಇತ್ಯಾದಿ ವಿವರ ಗಳನ್ನು ಪೂರ್ಣವಾಗಿ ದಾಖಲಿಸಿಕೊಂಡು ತ್ರಿಕೂಟ ದೇವಾಲಯಗಳ ಸೂಕ್ಷ್ಮ ಅಧ್ಯಯನವನ್ನು ಮಾಡಲಾಗಿದೆ. ಪ್ರತಿ ದೇವಾಲಯದ ಸೂಕ್ತ ಅಳತೆಯ ತಳ ವಿನ್ಯಾಸ ರಚಿಸಿ ಪ್ರಮುಖ ವಾಸ್ತು ಭಾಗಗಳ ರೇಖಾಚಿತ್ರ ಮತ್ತು ಛಾಯಾಚಿತ್ರಗಳನ್ನು ಅಧ್ಯಯನದಲ್ಲಿ ಸೂಕ್ತವಾಗಿ ಅಳವಡಿಸಿ ಬಳಸಿಕೊಳ್ಳಲಾಗಿದೆ. ಕೆಲವು ದೇವಾಲಯಗಳು ನಿರ್ಲಕ್ಷ್ಯಕ್ಕೆ ಒಳಗಾಗಿದ್ದು, ಅವು ಅಳಿವಿನ ಅಂಚಿನಲ್ಲಿವೆ. ಇನ್ನೂ ಕೆಲವು ದೇವಾಲಯಗಳು ಒಳಗೆ ಹೆಜ್ಜೆ ಇಡಲಾರದಷ್ಟು ಕತ್ತಲೆ, ಹುಳುಹುಪ್ಪಡಿ ಮತ್ತು ಬಾವಲಿಗಳಿಂದ ತುಂಬಿವೆ. ಇಂಥಹ ಸಂದರ್ಭದಲ್ಲಿ ಸ್ಥಳೀಯರ ಸಹಕಾರ ಪಡೆಯಲಾಗಿದೆ.

ಅಧ್ಯಯನಕ್ಕೆ ಸಂಬಂಧಿಸಿದ ಪ್ರಕಟಿತ ಹಾಗೂ ಅಪ್ರಕಟಿತ ಶಾಸನಗಳ ಮಾಹಿತಿಗಳನ್ನು ಹಾಗೂ ಅನುಷಂಗಿಕ ಆಕರಗಳಾದ ವಾಸ್ತು ಗ್ರಂಥಗಳು, ಮಹಾಪ್ರಬಂಧ, ಸಂಶೋಧನಾ ಪ್ರಬಂಧಗಳು ಮತ್ತು ನಿಬಂಧಗಳು, ಮಾಹಿತಿಗಳನ್ನು ರಾಜ್ಯದ ವಿವಿಧ ವಿಶ್ವವಿದ್ಯಾಲಯ, ಕೇಂದ್ರ ಪುರಾತತ್ವ ಮತ್ತು ರಾಜ್ಯ ಪುರಾತತ್ವ ಇಲಾಖಾ ಗ್ರಂಥಾಲಯಗಳಿಂದ ಸಂಗ್ರಹಿಸಿ ಸೂಕ್ತವಾಗಿ ಬಳಸಿಕೊಳ್ಳಲಾಗಿದೆ. ಅಧ್ಯಯನಕ್ಕೆ ಸಂಬಂಧಿಸಿದಂತೆ ಹಲವಾರು ವಿದ್ವಾಂಸರೊಡನೆ ಚರ್ಚಿಸಿ ಅವರ ಅಭಿಪ್ರಾಯ ಮತ್ತು ನೀಡಿದ ಮಾಹಿತಿಗಳನ್ನು ಬಳಸಿಕೊಳ್ಳಲಾಗಿದೆ. ಅಧ್ಯಯನಕ್ಕೆ ಪೂರಕವಾದ ಆಗಮ, ವೇದ, ಪುರಾಣ, ದರ್ಶನ ಹಾಗೂ ಇತರೆ ಸಾಹಿತ್ಯಿಕ ಆಧಾರಗಳನ್ನು ತಾತ್ವಿಕ ಚರ್ಚೆಗೆ ಬಳಸಿಕೊಳ್ಳಲಾಗಿದೆ. ಹೀಗೆ ಕ್ಷೇತ್ರಕಾರ್ಯದಿಂದ ಸಂಗ್ರಹಿಸಿದ ತ್ರಿಕೂಟ ದೇವಾಲಯಗಳ ವಾಸ್ತುಶಿಲ್ಪ ಮಾಹಿತಿಯನ್ನು ಕ್ರಮಬದ್ಧವಾದ ಚೌಕಟ್ಟಿನಲ್ಲಿ ಅಳವಡಿಸಿ ಒಟ್ಟೂ ೩೧ ದೇವಾಲಯಗಳನ್ನು ವಿವರಣಾತ್ಮಕ ಮತ್ತು ವಿಶ್ಲೇಷಣಾತ್ಮಕವಾಗಿ ತಾತ್ವಿಕ, ತಾಂತ್ರಿಕ, ಕೋಷ್ಟಕ, ನಕ್ಷೆ, ತಳನಕ್ಷೆ, ರೇಖಾಚಿತ್ರ ಮತ್ತು ಛಾಯಾಚಿತ್ರಗಳ ಮೂಲಕ ಕ್ರಮಬದ್ಧವಾಗಿ ವಿವರಿಸಲಾಗಿದೆ.

## ಅಧ್ಯಾಯ ೨

# ಜಿಲ್ಲೆಯ ಭೌಗೋಳಿಕ ಲಕ್ಷಣ, ಪರಿಸರ ಮತ್ತು ಐತಿಹಾಸಿಕ ಹಿನ್ನೆಲೆ

### ೨.೧. ಜಿಲ್ಲೆಯ ಭೌಗೋಳಿಕ ಲಕ್ಷಣ ಮತ್ತು ಪರಿಸರ

ಹಾವೇರಿ ಜಿಲ್ಲೆಯು ಉತ್ತರ ಅಕ್ಷಾಂಶ ೧೪°-೧೬' ಮತ್ತು ಪೂರ್ವ ರೇಖಾಂಶ ೭೪°-೭೯' ವರೆಗಿನ ಪ್ರದೇಶದಲ್ಲಿ ೪೮೩೧.೩ ಚ.ಕಿ.ಮೀ ವಿಸ್ತೀರ್ಣವನ್ನು ಹೊಂದಿದೆ. ಹಳೆಯ ಧಾರವಾಡ ಜಿಲ್ಲೆಯ ದಕ್ಷಿಣ ಭಾಗದ ಏಳು ತಾಲುಕುಗಳನ್ನು ಒಳಗೊಂಡಿದೆ. ಅವುಗಳೆಂದರೆ ಬ್ಯಾಡಗಿ(೪೩೯.೪೦ ಚ.ಕಿ.ಮೀ), ರಾಣೆಬೆನ್ನೂರು(೯೦೪.೮೦ ಚ.ಕಿ.ಮೀ), ಶಿಗ್ಗಾವಿ(೫೮೫. ೩೦ ಚ.ಕಿ.ಮೀ), ಸವಣೂರು(೫೪೭.೨೦ ಚ.ಕಿ.ಮೀ), ಹಾನಗಲ್ಲ(೭೬೯.೯೦ ಚ.ಕಿ.ಮೀ), ಹಾವೇರಿ(೭೯೯.೯೦ ಚ.ಕಿ.ಮೀ) ಮತ್ತು ಹಿರೇಕೆರೂರು (೮೦೧.೬೦ ಚ.ಕಿ.ಮೀ). ೧೯೯೭ರಲ್ಲಿ ನೂತನವಾಗಿ ರಚನೆಗೊಂಡ ಹಾವೇರಿ ಜಿಲ್ಲೆಯು ಉತ್ತರಕ್ಕೆ ಧಾರವಾಡ, ಈಶಾನ್ಯಕ್ಕೆ ಗದಗ, ಪೂರ್ವಕ್ಕೆ ಬಳ್ಳಾರಿ, ಆಗ್ನೇಯಕ್ಕೆ ದಾವಣಗೆರೆ ದಕ್ಷಿಣ ಮತ್ತು ನೈರುತ್ಯಕ್ಕೆ ಶಿವಮೊಗ್ಗ, ಪಶ್ಚಿಮ ಮತ್ತು ವಾಯುವ್ಯಕ್ಕೆ ಉತ್ತರ ಕನ್ನಡ ಜಿಲ್ಲೆಗಳನ್ನು ಗಡಿಗಳನ್ನಾಗಿ ಒಳಗೊಂಡಿದೆ.

ಪ್ರಸ್ತುತ ಜಿಲ್ಲೆಯು ಮಲೆನಾಡು, ಬೆಳವಲನಾಡು, ಗಡಿನಾಡು ಪ್ರದೇಶಗಳನ್ನು ಒಳಗೊಂಡಿದೆ. ಶಿಗ್ಗಾವಿ, ಹಾನಗಲ್ಲ, ಹಿರೇಕೆರೂರ ಹಾಗೂ ರಾಣೆಬೆನ್ನೂರ ತಾಲೂಕಿನ ಕೆಲವು ಪ್ರದೇಶಗಳು ಮಲೆನಾಡು ಪ್ರದೇಶಕ್ಕೆ ಒಳಪಟ್ಟರೆ, ಹಾವೇರಿ ಮತ್ತು ಬ್ಯಾಡಗಿ ತಾಲೂಕಿನ ಕೆಲವು ಭಾಗಗಳು ಗಡಿನಾಡು ಪ್ರದೇಶಗಳಾಗಿವೆ. ಜಿಲ್ಲೆಯ ಪೂರ್ವಭಾಗವು ತಗ್ಗುದಿನ್ನೆಗಳಿಂದ ಕೂಡಿದ ಬಯಲು ಪ್ರದೇಶವನ್ನು ಒಳಗೊಂಡಿದೆ.[೧]

ಜಿಲ್ಲೆಯ ಈಶಾನ್ಯ ಭಾಗದಲ್ಲಿ ವಿರಳವಾಗಿ ಕಲಾದಗಿ ಶಿಲಾ ಶ್ರೇಣಿಗೆ (Kaladgi series) ಸೇರಿದ ಮರಳುಗಲ್ಲು ಹರಡಿದೆ. ಗ್ರಾನೈಟ್ (Granite) ಮತ್ತು ನೈಸ್ (Gneiss) ಶಿಲೆಗಳು ಸಾಮಾನ್ಯವಾಗಿ ಬಯಲು ಪ್ರದೇಶದಲ್ಲಿ ಕಂಡುಬರುತ್ತವೆ. ಧಾರವಾಡ ಶಿಲಾ ಶ್ರೇಣಿಗೆ (Dharwar series) ಸೇರಿದ ಶಿಲೆಗಳು ಜಿಲ್ಲೆಯ ಬಹುಭಾಗದಲ್ಲಿ ಹರಡಿಕೊಂಡಿವೆ.

**ಧಾರವಾಡ ಶಿಲಾವರ್ಗ :** ೧೮೮೬ರಲ್ಲಿ ರಾಬರ್ಟ್ ಬ್ರೂಸ್‌ಫುಟ್ ಧಾರವಾಡ ಬಳಿ ಇರುವ ಸ್ಪಟಿಕಾತ್ಮಕ ಪದರು ಶಿಲೆಗಳಿಗೆ ವೈಜ್ಞಾನಿಕವಾಗಿ 'ಧಾರ್ವಾರ್ ಸಿಸ್ಟಮ್' ಎಂದು ಹೆಸರಿಟ್ಟರು. ಇದು ಶಿಲಾರಸ, ಶಿಲಾಧೂಳು

ಮುಂತಾದ ಜ್ವಾಲಾಮುಖಿಜ ವಸ್ತು ವಿಶೇಷಗಳಿಂದ ಮಿಶ್ರಿತವಾದ ಪದರು ಶಿಲಾಸಮುದಾಯ ಎಂದು ಹೆಸರಿಸಲಾಗಿದೆ. ಈ ಪದರು ಶಿಲಾವರ್ಗ ಗ್ರಾನಿಟಾಯ್ಡ್ ನೈಸ್‌ಗಳು ಭೂ ಸಮುದ್ರದಿಂದ ಮಡಚಿ ಛಿದ್ರಗೊಂಡು ಬಯಲಿಗೆ ತೆರೆದ ಬಳಿಕ ಅವುಗಳ ಮೇಲೆ ಸ್ತರಭಂಗವಾಗಿ ಉತ್ಪನ್ನವಾದ ಜಲಜ ಶಿಲೆಗಳ ರೂಪಾಂತರಗಳೆಂದೂ ಭಾವಿಸಲಾಗಿತ್ತು. ಹೆಚ್ಚಿನ ಸಂಶೋಧನೆಯ ನಂತರ ಇಲ್ಲಿನ ಪೆಂಟೆಕಲ್ಲು, ಸಿಕತಶಿಲೆ, ಗೋಡುಕಲ್ಲು, ಸುಣ್ಣಕಲ್ಲು ಮತ್ತು ಕೆಲವು ವಿಧವಾದ ಪದರು ಶಿಲೆಗಳು ನಿರ್ದಿಷ್ಟವಾಗಿ ಜಲಜ ಶಿಲೆಗಳ ರೂಪಾಂತರಗಳೆಂದು ನಿರ್ಧರಿಸಲಾಗಿದೆ. ಇಂತಹ ಧಾರವಾಡ ಶಿಲೆಗಳ ಸುತ್ತಲೂ ಗ್ರಾನೈಟ್ ಮತ್ತು ನೈಸ್ ಶಿಲೆಗಳು ಹರಡಿ ಕೊಂಡಿವೆ.[೨]

ಜಿಲ್ಲೆಯಲ್ಲಿ ದುಂಡಸಿ ಮತ್ತು ಹಾನಗಲ್ಲ ಗುಡ್ಡಗಳು ಗಾತ್ರದಲ್ಲಿ ಚಿಕ್ಕದಾಗಿವೆ. ದಕ್ಷಿಣದಲ್ಲಿ ಮಾಸೂರು ಮತ್ತು ಮಾರವಳ್ಳಿ ಗುಡ್ಡಗಳು ಇವೆ. ದಕ್ಷಿಣ ಮತ್ತು ಆಗ್ನೇಯ ಪ್ರದೇಶದಲ್ಲಿ ವೃತ್ತಾಕಾರವಾಗಿ ಗುಡ್ಡಗಳ ಸಾಲು ಅಖಂಡವಾಗಿ ಹಬ್ಬಿದೆ. ಈ ಬೆಟ್ಟಗುಡ್ಡಗಳ ವೃತ್ತವು ಆಕಾರದಲ್ಲಿ ದೋಣಿಯಂತೆ ಕಾಣುವುದರಿಂದ ದೋಣಿಸಾಲು ಎಂದು ಹೆಸರು ಬಂದಿರಬಹುದು. ಈ ಗುಡ್ಡಗಳ ಒಂದು ಶಾಖೆ ಹಿರೇಕೆರೂರು ತಾಲೂಕು ಗಂಗೈಕೊಪ್ಪ, ನಾಗವಂದ, ಮಾದಾಪುರ, ಹೊಳೆಹರಳ್ಳಿ ಮುಖಾಂತರ ತುಂಗಭದ್ರೆಯವರೆಗೂ ಹಬ್ಬಿದೆ. ಇನ್ನೊಂದು ಶಾಖೆಯು ಹಿರೇಕೆರೂರು ತಾಲೂಕು ವೀರಾಪುರ, ರಾಮತೀರ್ಥ, ಕಣವಿಸಿದ್ದಗೇರಿ ಮುಖಾಂತರ ತುಂಗಭದ್ರೆಯವರೆಗೂ ಹಬ್ಬಿದೆ. ಈ ಬೆಟ್ಟಗಳು ಕೆಲಮಟ್ಟಿಗೆ ಖನಿಜಗಳಿಂದ ಕೂಡಿದ್ದರೂ ಉತ್ಪಾದನಾ ವೆಚ್ಚ ಹೆಚ್ಚಾಗುವುದರಿಂದ ಪ್ರಯೋಜನಕ್ಕೆ ಬಾರದಾಗಿವೆ. ದೋಣಿಸಾಲಿನ ಗುಡ್ಡಗಳಲ್ಲಿ ಮತ್ತು ನಾಗವಂದಗಳ ಹತ್ತಿರದ ತಾಮ್ರದ ಕೊಳ್ಳದಲ್ಲಿ ಗ್ರಾಫೈಟ್ ಮತ್ತು ಮ್ಯಾಗ್ನೆಟೈಟ್ ನಿಕ್ಷೇಪ ಇರುವುದಾಗಿ ಕಂಡುಹಿಡಿಯಲಾಗಿದೆ.

ಜಿಲ್ಲೆಯಲ್ಲಿ ಸ್ವಲ್ಪ ತೇವವಿರುವ ಹಾಗೂ ಉದುರೆಲೆ ಅರಣ್ಯಗಳಿವೆ. ಬೀಟೆ, ತೇಗ, ಹೊನ್ನೆ ಮತ್ತು ನಂದಿ ಮುಂತಾದ ಮರಗಳು ಇಲ್ಲಿ ನೈಸರ್ಗಿಕವಾಗಿಯೇ ಬೆಳೆಯುವವು. ಜಿಲ್ಲೆಯ ಮುಖ್ಯನದಿಗಳಾದ ತುಂಗಭದ್ರಾ, ವರದಾ, ಕುಮದ್ವತಿ, ಬೆಣ್ಣೆಹಳ್ಳ ಮತ್ತು ಧರ್ಮಾನದಿಗಳಿಂದ, ಕೆರೆ ಆಣೆಕಟ್ಟುಗಳಿಂದ ಇಲ್ಲಿಯ ಜಲಸಂಪತ್ತು ಸಮೃದ್ಧವಾಗಿದೆ. ತುಂಗಭದ್ರಾ ನದಿಯು ಜಿಲ್ಲೆಯಲ್ಲಿ ೧೯೪ ಕಿ.ಮೀ. ಉದ್ದ ಹರಿಯುತ್ತದೆ. ಈ ನದಿಯು ಶಂಕರನಹಳ್ಳಿಯಿಂದ ಉತ್ತರಕ್ಕೆ ಬಂದು, ಹಾವೇರಿ ತಾಲೂಕಿನ ಪೂರ್ವದಲ್ಲಿ ಸ್ವಲ್ಪ ದೂರ ಮಾತ್ರ ಕ್ರಮಿಸಿ, ಹಾವನೂರು ಮುಖಾಂತರ ಉತ್ತರಕ್ಕೆ ಹರಿದು, ಮುಂದೆ ಗದಗ ಜಿಲ್ಲೆಯನ್ನು ಪ್ರವೇಶಿಸುತ್ತದೆ. ಈ ನದಿಯು ಹಾವೇರಿ ಜಿಲ್ಲೆಯನ್ನು ಗದಗ ಮತ್ತು ದಾವಣಗೇರಿ ಜಿಲ್ಲೆಗಳಿಂದ ಬೇರ್ಪಡಿಸಿದೆ. ಕುಮದ್ವತಿ ನದಿಯು ಜಿಲ್ಲೆಯ ಹಿರೇಕೆರೂರು ಮತ್ತು ರಾಣೆಬೆನ್ನೂರು ತಾಲೂಕುಗಳಲ್ಲಿ ಸುಮಾರು ೩೮ ಕಿ.ಮೀ ಪೂರ್ವಕ್ಕೆ ಹರಿದು ತುಂಗಾಭದ್ರಾನದಿಯನ್ನು ಕೂಡಿಕೊಳ್ಳುತ್ತದೆ. ಸೊರಬ ತಾಲೂಕಿನ ಇಕ್ಕೇರಿ ಸಮೀಪದ ಮೂಲದಲ್ಲಿ ಉಗಮಿಸುವ ವರದಾನದಿ ಹಾನಗಲ್ಲ ತಾಲೂಕಿನ ದಕ್ಷಿಣದಲ್ಲಿ ಸ್ವಲ್ಪ ದೂರ ಶಿವಮೊಗ್ಗ ಮತ್ತು ಹಾವೇರಿ ಜಿಲ್ಲೆಯ ಗಡಿಯಾಗಿ ಕ್ರಮಿಸಿದೆ. ಈ ನದಿಯು ಹಾನಗಲ್ಲ ತಾಲೂಕಿನಲ್ಲಿ ಈಶಾನ್ಯ ದಿಕ್ಕಿಗೆ ಹರಿದು ಮುಂದೆ ಹಾವೇರಿ ಮತ್ತು ಸವಣೂರು ತಾಲೂಕುಗಳ ಗಡಿಯಾಗಿ ಬಂದು ಹಾವನೂರಿನ ಗಳಗನಾಥ ಗ್ರಾಮದ ಹತ್ತಿರ ತುಂಗಭದ್ರಾ ನದಿಯನ್ನು ಸೇರುತ್ತದೆ. ಜಿಲ್ಲೆಯಲ್ಲಿ ಈ ನದಿಯು ೯೪ ಕಿ.ಮೀ. ಹರಿದು ಜೀವನದಿ ಎಂದು

ಕರೆಸಿಕೊಂಡಿದೆ. (ನಕ್ಷೆ ೧) ಇದಕ್ಕೆ ಅನೇಕ ಒಡ್ಡುಗಳನ್ನು ಕಟ್ಟಿ ಸಾಕಷ್ಟು ನೀರಾವರಿ ಸೌಕರ್ಯ ಮಾಡಿಕೊಳ್ಳಲಾಗಿದೆ. ಧರ್ಮಾನದಿಯು ವರದಾನದಿಯ ಮುಖ್ಯ ಉಪನದಿಯಾಗಿದೆ. ಇದು ಹಾನಗಲ್ಲ ತಾಲೂಕಿನಲ್ಲಿ ಸುಮಾರು ೫೬ ಕಿ.ಮೀ. ಈಶಾನ್ಯಕ್ಕೆ ಕ್ರಮಿಸಿ ಕೂಡಲದ ಬಳಿ ವರದಾ ನದಿಯನ್ನು ಕೂಡಿಕೊಳ್ಳುತ್ತದೆ. ಇದು ಸಣ್ಣ ಉಪನದಿ ಆಗಿದ್ದರೂ ಅನೇಕ ಒಡ್ಡುಗಳನ್ನು ಕಟ್ಟಿ ನೀರಾವರಿಗಾಗಿ ಉಪಯೋಗಿಸಿಕೊಳ್ಳಲಾಗಿದೆ. ಹಾನಗಲ್ಲ ತಾಲೂಕಿನ ಶೃಂಗೇರಿಯಲ್ಲಿ ೧೯೧೧ರಲ್ಲಿ ಚಿಕ್ಕ ಜಲಾಶಯವನ್ನು ಈ ನದಿಗೆ ಕಟ್ಟಲಾಗಿದೆ. ಬೆಣ್ಣೆಹಳ್ಳವು ಹಾನಗಲ್ಲ ತಾಲೂಕಿನ ದುಂಡಸಿ ಗ್ರಾಮದ ಹತ್ತಿರ ಹುಟ್ಟಿ ಉತ್ತರಾಭಿಮುಖವಾಗಿ ಸಾಗಿ ಧಾರವಾಡ ಜಿಲ್ಲೆಯನ್ನು ಪ್ರವೇಶಿಸುತ್ತದೆ. ಇದರ ಉಗಮಸ್ಥಾನ ಹಾವೇರಿ ಜಿಲ್ಲೆ ಆದರೂ ಇದು ಹರಿಯುವುದು ಧಾರವಾಡ ಜಿಲ್ಲೆಯಲ್ಲಿ.

ಮಲೆನಾಡು ಭೂಪ್ರದೇಶದಲ್ಲಿ ಬರುವ ಹಾನಗಲ್ಲ, ಹಿರೇಕೆರೂರು ಮತ್ತು ಶಿಗ್ಗಾವಿ ತಾಲೂಕಿನ ಕೆಲಭಾಗಗಳು ವಿಶಾಲವಾದ ಕೆರೆಗಳನ್ನು ಹೊಂದಿವೆ. ಅದರಲ್ಲೂ ಹಿರೇಕೆರೂರು ತಾಲೂಕಿನಲ್ಲಿ ಕೆರೆಗಳ ಸಂಖ್ಯೆ ಹೆಚ್ಚಾಗಿವೆ. ಇಲ್ಲಿಯ ಗ್ರಾಮನಾಮಗಳು ಕೆರೆಯ ಹಿನ್ನೆಲೆಯಿಂದಲೇ ಬಂದಿರುವುದನ್ನು ಗಮನಿಸಬಹುದು. ಇಲ್ಲಿಯ ಭೌಗೋಳಿಕ ಸಿರಿ ಸಂಪತ್ತನ್ನು ಶಾಸನಗಳೂ ದಾಖಲಿಸಿವೆ.[೩]

ಜಿಲ್ಲೆಯ ಅನೇಕ ಸ್ಥಳಗಳಲ್ಲಿ ಪ್ರಾಗೈತಿಹಾಸಿಕ ಕುರುಹುಗಳು ಕಂಡುಬಂದಿವೆ. ಆದಿ ಹಳೆಶಿಲಾಯುಗದ ನೆಲೆಗಳೆಂದು ರಾಣೆಬೆನ್ನೂರು ತಾಲೂಕಿನ ಚನ್ನಾಪುರ[೪], ನದಿಹರಳಹಳ್ಳಿ[೫], ನಲ್ವಗಲ್[೬], ಸವಣೂರು ತಾಲೂಕಿನ ಜಲ್ಲಾಪುರ[೭], ಹಾನಗಲ್ಲ ತಾಲೂಕಿನ ವರ್ದಿ[೮], ಹಿರೇಕೆರೂರು ತಾಲೂಕಿನ ತೋಟಗಂಟಿ[೯]ಗಳನ್ನು ಗುರುತಿಸಲಾಗಿದೆ. ನೂತನ ಶಿಲಾಯುಗದ ನೆಲೆಗಳಾದ ರಾಣೆಬೆನ್ನೂರು ತಾಲೂಕು ಮುದೇನೂರು[೧೦], ಹಾದರಗೇರಿ[೧೧], ಹಾವೇರಿ ತಾಲೂಕಿನ ಗಳಗನಾಥ[೧೨], ಹಿರೇಕೆರೂರು ತಾಲೂಕು ಪುರದಕೇರಿ[೧೩], ಶಿರಗುಂಬಿ[೧೪] ಮತ್ತು ಹಳ್ಳೂರು[೧೫] ನೆಲೆಗಳಾಗಿವೆ. ಇವುಗಳಲ್ಲಿ ಹಳ್ಳೂರು ನೆಲೆಯು ಭಾರತ ಮತ್ತು ಕರ್ನಾಟಕದ ಪ್ರಾಗೈತಿಹಾಸಿಕ ಭೂಪಟದಲ್ಲಿ ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿದೆ. ಈ ನೆಲೆಯ ಕಾಲವನ್ನು ಸುಮಾರು ಕಿ.ಪೂ.೧೦೦೦ ವರ್ಷಗಳೆಂದು ಇಂಗಾಲ ಪರೀಕ್ಷೆಯಿಂದ ನಿರ್ಧರಿಸಲಾಗಿದೆ. ಎಂ.ಎಸ್. ನಾಗರಾಜರಾವ್ ಅವರು ಹಳ್ಳೂರನ್ನು ಉತ್ಖನನಕ್ಕೆ ಒಳಪಡಿಸಿದಾಗ ಅಲ್ಲಿ ನೂತನ ಶಿಲಾಯುಗದ ಮೃತ್ಪಾತ್ರೆಗಳು, ಕ್ವಾರ್ಟ್ಜ್‌ಕಲ್ಲಿನ ಚಕ್ಕೆಗಳು, ಗುಡಿಸಲುಗಳ ಅವಶೇಷಗಳು ಬೆಳಕಿಗೆ ಬಂದಿವೆ. ದಕ್ಷಿಣ ಭಾರತದಲ್ಲಿ ಮೊಟ್ಟಮೊದಲ ಬಾರಿಗೆ ರಾಗಿಯನ್ನು ಇಲ್ಲಿ ಬೆಳೆಸುತ್ತಿದ್ದರು ಎಂಬ ವಿಷಯ ಬೆಳಕಿಗೆ ಬಂದಿದೆ. ಕುದುರೆಯ ಬಳಕೆಯೂ ಇವರಿಗೆ ತಿಳಿದಿತ್ತು.[೧೬] ಶಿಲಾ ತಾಮ್ರಯುಗ ಮತ್ತು ಬೃಹತ್ ಶಿಲಾಯುಗ ಸಂಸ್ಕೃತಿಗಳನ್ನು ಬ್ಯಾಡಗಿ ತಾಲೂಕು ಕದರಮಂಡಲಗಿ[೧೭] ಬುಡಪನಹಳ್ಳಿ, ಬ್ಯಾಡಗಿ[೧೮] ಸಿಡೇನೂರು, ರಾಣೆಬೆನ್ನೂರು ತಾಲೂಕು ಆಸುಂಡಿ[೧೯] ಕಮದೋಡ, ಮೋಟೆಬೆನ್ನೂರು, ಕುಸುಗೂರು, ಕೂನಬೇವು[೨೦] ಕೋಟಿಹಾಳ, ಚೌಡದಾನಪುರ[೨೧] ಮಲಕನಹಳ್ಳಿ, ಹಾದರಗೇರಿ[೨೨] ಹಾನಗಲ್ಲ ತಾಲೂಕು ಕೆಲವಡಿ, ಹಾವೇರಿ ತಾಲೂಕು ಬಿದರಗಡ್ಡಿ ಹಾಗೂ ಹಿರೇಕೆರೂರು ತಾಲೂಕು ಕಣವಿಸಿದ್ದಗೇರಿ[೨೩] ತಡಕನಹಳ್ಳಿ[೨೪] ನಾಗವಂದ[೨೫] ಗ್ರಾಮಗಳಲ್ಲಿ ಕಾಣಬಹುದಾಗಿದೆ. ಇವುಗಳಲ್ಲಿ ಮೋಟೆಬೆನ್ನೂರು ಬಳಿ ಬಾಚಿಗುಡ್ಡದಲ್ಲಿ ಇರುವ ಬೃಹತ್

ಶಿಲಾಯುಗದ ನಿರ್ಮಿತಿಯಂತಹ ದೊಡ್ಡ ಗಾತ್ರದ ನಿರ್ಮಿತಿಗಳು ಬೇರೆ ಯಾವ ನೆಲೆಯಲ್ಲಿಯೂ ಕಂಡು ಬರುವುದಿಲ್ಲ.[೨೬] ಇದರಂತೆ ಇತಿಹಾಸ ಆರಂಭಯುಗದ ಅನೇಕ ನೆಲೆಗಳೆಂದು ಕುಮ್ಮೂರು, ಬ್ಯಾಡಗಿ, ಐರಣಿ, ಹಿರೇಬಿದರಿ, ಮಾದಾಪುರ ಮುಂತಾದವುಗಳನ್ನು ಗುರುತಿಸಲಾಗಿದೆ.[೨೭] ಹೀಗೆ ಹಾವೇರಿ ಜಿಲ್ಲೆಯು ಇತಿಹಾಸ ಪೂರ್ವ ಅಧ್ಯಯನಕ್ಕೆ ತನ್ನದೇ ಆದ ಕೊಡುಗೆಯನ್ನು ಕೊಟ್ಟಿದೆ.

ಪ್ರಕೃತಿಯು ಮಾನವನಿಗೆ ಸದಾಕಾಲವೂ ಉಪಕಾರವನ್ನು ಮಾಡುತ್ತ ಬಂದಿದೆ. ಮಾನವನು ತನ್ನ ಬುದ್ಧಿ ಮಟ್ಟಕ್ಕೆ ಅನುಗುಣವಾಗಿ ಅವುಗಳನ್ನು ಬಳಸಿಕೊಂಡು ತನ್ನ ಅವಶ್ಯಕತೆಗಳನ್ನು ಪೂರೈಸಿಕೊಂಡಿದ್ದಾನೆ. ಜೊತೆಗೆ ಅವುಗಳನ್ನು ಬಳಸಿಕೊಂಡು ಮನಸ್ಸಿಗೆ ಸುಖ-ಸಂತೋಷಗಳನ್ನು ಪಡೆಯಲು ಪ್ರಯತ್ನಿಸಿದ್ದಾನೆ. ಈ ಪ್ರಯತ್ನದಲ್ಲಿ ದೇವಾಲಯ ನಿರ್ಮಾಣವೂ ಒಂದು. ಭೌಗೋಳಿಕ ಪರಿಸರದಲ್ಲಿ ದೊರೆಯುವ ಶಿಲೆ(ಗ್ರಾನೈಟ್, ಸೋಪ್‌ಸ್ಟೋನ್ ಇತ್ಯಾದಿ), ಮರ(ಹೊನ್ನೆ, ಬೀಟೆ, ಶ್ರೀಗಂಧ ಇತ್ಯಾದಿ), ಸುಣ್ಣದಕಲ್ಲು, ಜೇಡಿಮಣ್ಣು ಇವುಗಳೆಲ್ಲ ಒಂದಿಲ್ಲ ಒಂದು ರೀತಿ ದೇವಾಲಯದ ನಿರ್ಮಾಣದಲ್ಲಿ ಸಹಕಾರಿಯಾಗಿವೆ. ದೇವಾಲಯ ನಿರ್ಮಾಣದ ವಿಷಯದಲ್ಲಿ ವರಾಹ ಸಂಹಿತೆಯು[೨೮]

ಸರಸ್ಸು ನಲಿನಾಚ್ಛನ್ನ ನಿರಸ್ತರವಿರಶ್ಮಿಷು |
ವನೋಪಾಂತ ನದೀ ಶೈಲ ನಿರ್ಝರೋಪಾಂತ ಭೂಮಿಷು |
ರಮಂತೇ ದೇವತಾ ನಿತ್ಯಂ ಪುರುಷೋಧ್ಯಾನವತ್ಸುಚ ||

ಎಂದು ದೇವಾಲಯವು ಸುಂದರ ಪ್ರಕೃತಿಯ ತಾಣವಾಗಿರಬೇಕು ಹಾಗೂ ಅದೇ ದೇವತೆಗಳ ವಾಸಸ್ಥಾನ ಎಂದು ಸೂಚಿಸುತ್ತದೆ. ಅದರಂತೆ ದೇವತೆಗಳ ವಾಸಸ್ಥಾನಕ್ಕೆ ಯೋಗ್ಯವಾದ ಸ್ಥಳಗಳನ್ನು ಭೌಗೋಳಿಕವಾಗಿ ಹಾವೇರಿ ಜಿಲ್ಲೆ ಹೊಂದಿದೆ. ಹೀಗಾಗಿ ಜಿಲ್ಲೆಯಲ್ಲಿ ದೇವಾಲಯ ವಾಸ್ತುಶಿಲ್ಪ ಶ್ರೀಮಂತವಾಗಿ ಬೆಳೆದು ಬರಲು ಅನುಕೂಲವಾಯಿತು.

### ಹಾವೇರಿ ಸ್ಥಳನಾಮ

ಇತ್ತೀಚೆಗೆ ಸ್ಥಳನಾಮಗಳ ಅಧ್ಯಯನವು ಬಹಳ ಪ್ರಾಮುಖ್ಯತೆಯನ್ನು ಪಡೆಯುತ್ತಿದೆ. ಒಂದು ಸ್ಥಳಕ್ಕೆ ಕಾಲಿಟ್ಟ ಮನುಷ್ಯ ಸ್ಥಳಕ್ಕೊಂದು ಹೆಸರು ಕೊಡುವುದು ಸ್ವಾಭಾವಿಕ.[೨೯] ಹಾಗೆ ಕೊಟ್ಟ ಹೆಸರಿಗೊಂದು ಅರ್ಥವೂ ಇದೆ. ಗ್ರಂಥದ ಒಳವಿಷಯವನ್ನು ಅದರ ಶೀರ್ಷಿಕೆ ಬಿಂಬಿಸುವಂತೆ ಆಯಾಗ್ರಾಮದ ಮಹತ್ವದ ವಿಷಯವನ್ನು ಅನುಸರಿಸಿ ಸ್ಥಳನಾಮ ಇರುವುದನ್ನು ಗಮನಿಸುತ್ತೇವೆ. ಗ್ರಾಮದ ಭೌಗೋಳಿಕ ಮಹತ್ವದಿಂದಲೂ ಗ್ರಾಮನಾಮಗಳು ಹುಟ್ಟಿಕೊಂಡಿರುವುದನ್ನು ಸಾಕಷ್ಟು ಉದಾಹರಿಸಬಹುದು. ಗುಡ್ಡ-ಬೆಟ್ಟಗಳ ಹಿನ್ನೆಲೆಯಲ್ಲಿ ಗುಡ್ಡದಾನವೇರಿ, ಗುಡಗೂರು, ದೇವರಗುಡ್ಡ, ಗುಡ್ಡದ ಮಾದಾಪುರ, ಗುಡ್ಡದ ಚನ್ನಾಪುರ, ಪರ್ವತಸಿದ್ದಗೇರಿ, ಬೆಟ್ಕೆರೂರು ಮುಂತಾದವುಗಳು. ನದಿಯ ಹಿನ್ನೆಲೆಯಲ್ಲಿ ನದಿಹರಳಹಳ್ಳಿ, ಹೊಳೆಆನವೇರಿ ಮುಂತಾದವುಗಳು. ಅದರಂತೆ ಕೆರೆಗಳ ಹಿನ್ನೆಲೆಯಿಂದಲೂ ಗ್ರಾಮನಾಮಗಳು ಹುಟ್ಟಿಕೊಂಡಿವೆ. ಚಿಕ್ಕೆರೂರು, ಹಿರೇಕೆರೂರು ಮುಂತಾದವುಗಳನ್ನು ಉದಾಹರಿಸಬಹುದು.

ಹಾವೇರಿ ಸ್ಥಳನಾಮವೂ ಅಲ್ಲಿಯ ಹೆಗ್ಗೇರಿಯಿಂದಲೇ ಬಂದಿದ್ದು. ಕ್ರಿ.ಶ.ಸು. ೯೬೦ರ ವೀರಗಲ್ಲು ಶಾಸನವು 'ಹಾವರಿಯೂರು' ಎಂದಿದೆ. ಭೋಜರಾಜ ಪಾಟೀಲ ಅವರು ಈಗಾಗಲೇ ಹಾವೇರಿ ಗ್ರಾಮನಾಮದ ಬಗ್ಗೆ ಸಾಕಷ್ಟು ಮಾಹಿತಿಯನ್ನು ಒದಗಿಸಿದ್ದಾರೆ.[೩೦]

ಈ ಗ್ರಾಮಕ್ಕೆ ಸಂಬಂಧಿಸಿದಂತೆ ಹತ್ತನೆ ಶತಮಾನದಿಂದ ಹದಿಮೂರನೆ ಶತಮಾನದವರೆಗಿನ ಶಾಸನಗಳನ್ನು ಅವಲೋಕಿಸಿದಾಗ ಶಾಸನಗಳು 'ಹಾವರಿಯೂರು'[೩೧], 'ಪಾವರಿ'[೩೨], 'ಹಾವರಿ'[೩೩], 'ಹಾಹರಿ'[೩೪], 'ಹವರಿ'[೩೫], 'ಹಾವೇರಿ'[೩೬] ಮತ್ತು 'ನಳಪುರಿ'[೩೭] ಎಂದು ಈ ಊರನ್ನು ಉಲ್ಲೇಖಿಸಿವೆ. ಹೆಗ್ಗೇರಿಯ(ಶಾಸನ ಉಲ್ಲೇಖಿತ ಹೆರ್ಗ್ಗೆಱೆ) ನಿರ್ಮಾಣದ ಬಗ್ಗೆ ಕ್ರಿ.ಶ.೧೧೩೪ ಮತ್ತು ಕ್ರಿ.ಶ.೧೧೫೭ರ ಶಾಸನಗಳು ವಿವರಣೆಯನ್ನು ಒದಗಿಸುತ್ತವೆ.[೩೮]

'ನಳಪುರಿ' ಎಂಬುದು ಈ ಗುಂಪಿಗೆ ಸೇರದ ಪದವಾಗಿದೆ. ಹೆಗ್ಗೇರಿಯನ್ನು ನಿರ್ಮಿಸಿದವನು ನಳಚಕ್ರವರ್ತಿ ಆದುದರಿಂದ 'ನಳಪುರಿ' ಎಂದು ಕರೆದಿರಬಹುದು. ಆದರೆ ಈ ಹೆಸರನ್ನು ಉಲ್ಲೇಖಿಸುವ ಶಾಸನವು ಕ್ರಿ.ಶ. ೧೨೯೦ರ ಕಾಲಮಾನದ್ದು. ಈ ಮೊದಲು ಎಲ್ಲೂ ಈ ನಾಮವಿಲ್ಲ. ಕ್ರಿ.ಶ.೯೬೦ರ ಶಾಸನವು ಗ್ರಾಮನಾಮಕ್ಕೆ ಸಂಬಂಧಪಟ್ಟಂತೆ ಮೊದಲ ಶಾಸನವಾಗಿದ್ದು 'ಹಾವರಿಯೂರು' ಎಂದು ಉಲ್ಲೇಖಿಸಿದೆ. ಅಲ್ಲದೆ ಕ್ರಿ.ಶ. ೧೨೬೦ರ ಶಾಸನದಲ್ಲಿ 'ಶ್ರೀಮನ್ನಲ್ಲ ಹಳಗೆಱೆ' ಎಂಬ ಉಲ್ಲೇಖವಿದೆ. ಇದರರ್ಥವು 'ಶ್ರೀಮನ್ ನಳನ ಹಳಗೆಱೆ' ಎಂದಾಗುತ್ತದೆ. ಇದರಿಂದ ೧೧೩೪ರ ಕಾಲಕ್ಕಾಗಲೇ ಈ ಕೆರೆಯು ಹಳೆಯಕೆರೆ ಎನಿಸಿಕೊಂಡಿತ್ತು ಎಂದು ಗಮನಕ್ಕೆ ಬರುತ್ತದೆ. ನಳಚಕ್ರವರ್ತಿ ಈ ಕೆರೆಯನ್ನು ಕಟ್ಟಿಸಿದನೆಂಬುದು ಕೇವಲ ಒಂದು ಐತಿಹ್ಯ. ಪುರಾಣ ಪ್ರಸಿದ್ಧ ವ್ಯಕ್ತಿಗಳೊಂದಿಗೆ ಹೆಸರನ್ನು ಜೋಡಿಸುವುದು ಪ್ರಾಚೀನರಿಗೆ ಹೆಮ್ಮೆಯ ವಿಷಯವಾಗಿತ್ತು. ಅದನ್ನು ಇಲ್ಲಿಯೂ ಕಾಣುತ್ತೇವೆ. ಹೆಗ್ಗೇರೆ ನಿರ್ಮಾಣದ ಬಗ್ಗೆ ಕ್ರಿ.ಶ.೧೧೫೭ರ ಶಾಸನವು ಈ ಕೆಳಗಿನಂತೆ ದಾಖಲಿಸಿದೆ.

> ಹರಿವ ಹರಿನೀರ್ಗೆಯಡ್ಡಂ
>
> ಬರಲುರಗಂ ಕಂಡು ನಳನದಂ ಕಟ್ಟಿಸೆ ನಿ
>
> ರ್ಭರದಿಂ ಹಾವೇರಿಯೆನಲು
>
> ಪರಮಾರ್ಥಂ ನಾಮಮಾದುದಾ ಕೃತಯುಗದೊಳು ॥

ಹರಿಯುವ ನೀರಿಗೆ ಹಾವು ಅಡ್ಡಬರಲು ನಳನು ಅದನ್ನು ನೋಡಿ ಅತಿಶಯವಾಗಿ ಕೆರೆ ಕಟ್ಟಿಸಿದನು ಮತ್ತು ಕಟ್ಟಿಸಿದ್ದ ಆ ಕೆರೆಯನ್ನು 'ಹಾವೇರಿ' ಎಂದು ಕರೆದನು ಎಂದು ಶಾಸನವು ಹೇಳುತ್ತದೆ. ಕ್ರಿ.ಶ. ೧೧೩೪ರ ಶಾಸನವು ಇದೇ ವಿಷಯವನ್ನು ಹೇಳಿ ಹಾವೇರಿ ಎನ್ನುವಲ್ಲಿ 'ಪಾವರಿ' ಎಂದಿದೆ.

'ಹಾವೇರಿ' ಇದರ ಮೂಲರೂಪವಾದ 'ಪಾವೇರಿ' ಎಂಬ ಸಮಸ್ತಪದವನ್ನು ಎರಡು ವಿಧದಲ್ಲಿ ವಿಗ್ರಹಿಸಬಹುದು.

೧ ಪಾವು+ಏರಿ ಎಂದು ಶಾಸನ ಹೇಳುವ ವಿಷಯ ಮೇಲಿಂದ ವಿಗ್ರಹಿಸಿದರೆ 'ಏರಿ' ಎಂದರೆ ಜಲಾಶಯ, ಕೆರೆ; 'ಪಾವು' ಎಂದರೆ ಹಾವು. ಆದ್ದರಿಂದ 'ಪಾವೇರಿ' ಎಂದರೆ 'ಹಾವಿನಕೆರೆ' ಎಂದಾಗುತ್ತದೆ. ಹಾವಿನಂತೆ ಅಂಕು ಡೊಂಕಾಗಿರುವ ಕಾರಣಗಳಿಂದಲೂ ಹೆಸರು ಬಂದಿರಬಹುದು.

೨ ಪಾ+ಏರಿ ಎಂದು ವಿಗ್ರಹಿಸಿದರೆ; ಇವೆರಡು ಪದಗಳು ಸೇರುವಾಗ ಕನ್ನಡ ಸಂಧಿ ನಿಯಮಾನುಸಾರ ಮಧ್ಯದಲ್ಲಿ 'ವ್' ಆಗಮವಾಗುತ್ತದೆ. ಆಗ ಪಾ+ವ್+ಏರಿ > ಪಾವೇರಿ ಎಂಬ ಸಮಸ್ತರೂಪ ಸೃಷ್ಟಿಯಾಗುತ್ತದೆ. ಇಲ್ಲಿ 'ಪಾ' ಸಂಸ್ಕೃತ ಪದ 'ಏರಿ' ಕನ್ನಡ ಪದ. ಆದ್ದರಿಂದ ಇದೊಂದು ಅರಿ ಸಮಾಸ. 'ಪಾ' ಎಂದರೆ 'ಪಿಬ' ಅರ್ಥದಲ್ಲಿ 'ಕುಡಿಯುವ' 'ಏರಿ' ಎಂದರೆ ಜಲಾಶಯ. 'ಕುಡಿಯುವ ನೀರಿನ ಜಲಾಶಯ' ಎಂದಾಗುತ್ತದೆ. ಭೋಜರಾಜ ಪಾಟೀಲ ಅವರು 'ಪಾ' ಶಬ್ದಕ್ಕೆ 'ಸುರಕ್ಷಿತ' (Preserve) ಎಂಬ ಅರ್ಥವನ್ನು ಹೇಳಿ 'ಪಾವರಿ' ಎಂದರೆ 'ಸುರಕ್ಷಿತ ಜಲಾಶಯ' ಎಂದಿದ್ದಾರೆ. ಜಿಲ್ಲೆಯ ದೊಡ್ಡ ಕೆರೆಗಳ ಪಟ್ಟಿಯಲ್ಲಿ ಬರುವ ಕೆಲವೇ ಕೆಲವು ದೊಡ್ಡ ಕೆರೆಗಳಲ್ಲಿ ಹಾವೇರಿಯ ಹೆಗ್ಗೇರಿಯೂ ಒಂದು ಇದು ೨೦೬ ಹೆ. ನೀರಾವರಿ ಸೌಲಭ್ಯವನ್ನು ಒದಗಿಸುತ್ತದೆ.[೩೯] ಈ ಹಿರಿದಾದ ಕೆರೆಯ ಹಿನ್ನೆಲೆಯಿಂದಲೇ ಊರು ಸಹ 'ಹಾವೇರಿ' ಎಂದು ಸ್ಥಳನಾಮವನ್ನು ಹೊಂದಿದೆ.

## ೨.೨. ಜಿಲ್ಲೆಯ ಐತಿಹಾಸಿಕ ಹಿನ್ನೆಲೆ

ಪ್ರಾಚೀನ ಕರ್ನಾಟಕದ ವಿವಿಧ ಭಾಗಗಳು ಪ್ರತ್ಯೇಕ ಹೆಸರುಗಳಿಂದ ಗುರುತಿಸಲ್ಪಡುತ್ತಿದ್ದವು.[೪೦] ತುಂಗಭದ್ರೆಯ ಉತ್ತರಕ್ಕಿದ್ದ ದಖ್ಖನ್ನಿನ ಬಹುಭಾಗವು ಕುಂತಳ ಎಂದು ರೂಢಿಯಲ್ಲಿತ್ತು. ಈ 'ಕುಂತಳ' ಎಂಬುದನ್ನೇ 'ಕರ್ನಾಟಕ' ಎಂಬ ಅರ್ಥದಲ್ಲಿ ಬಳಸುತ್ತಿದ್ದ ರೂಢಿ ಪ್ರಾಚೀನ ಕಾಲದಿಂದಲೂ ಇದ್ದಿತೆಂಬುದು ಕಂಡುಬರುತ್ತದೆ. ಪ್ರಸ್ತುತ ಹಾವೇರಿ ಜಿಲ್ಲೆಯು ತುಂಗಭದ್ರೆಯ ಉತ್ತರಕ್ಕಿರುವ ಕುಂತಳ ದೇಶದ ಒಂದು ಅಂಗವಾಗಿತ್ತು. ಹಿಂದಿನಿಂದಲೂ ಈ ತುಂಗಭದ್ರೆಯ ದಂಡೆಯು ರಾಜಕೀಯವಾಗಿ, ಆರ್ಥಿಕವಾಗಿ ಮಹತ್ವದ ಭೂಪ್ರದೇಶವಾಗಿದೆ. ಕರ್ನಾಟಕದ ರಾಜಕೀಯ ಇತಿಹಾಸದಲ್ಲಿ ತುಂಗಭದ್ರೆಯ ದಂಡೆಯು ಅತ್ಯಂತ ಗಮನಾರ್ಹ ಪಾತ್ರವಹಿಸಿದೆ. ಕೆಲವೊಮ್ಮೆ ಇಡೀ ಕರ್ನಾಟಕದ ರಾಜಕೀಯವನ್ನೇ ಬದಲಾಯಿಸುವಂಥ ಘಟನೆಗಳು, ಯುದ್ಧಗಳು ಈ ನದಿತೀರದಲ್ಲಿ ನಡೆದಿವೆ; ಮಾತ್ರವಲ್ಲ ಎರಡು ಪ್ರಮುಖ ಸಾಮ್ರಾಜ್ಯಗಳ ಗಡಿರೇಖೆ ಆಗಿಯೂ ಪಾತ್ರವಹಿಸಿದೆ. ಈ ನದಿಯನ್ನು ತನ್ನ ಪೂರ್ವ ಮತ್ತು ಆಗ್ನೇಯ ದಿಕ್ಕಿನಲ್ಲಿ ಗಡಿರೇಖೆಯನ್ನಾಗಿ ಹೊಂದಿದ ಹಾವೇರಿ ಜಿಲ್ಲೆಯು ಮಹತ್ವಪೂರ್ಣವಾದ ರಾಜಕೀಯ ಇತಿಹಾಸವನ್ನು ಹೊಂದಿದೆ. ಈ ಕಾರಣದಿಂದ ಜಿಲ್ಲೆಯ ರಾಜಕೀಯ ಘಟನೆಗಳ ಮುಖ್ಯಾಂಶಗಳನ್ನು ವಿವರಿಸುವುದು ಸೂಕ್ತ.

ಆಧುನಿಕ ಗಡಿರೇಖೆಗಳಿಂದ ಗುರುತಿಸಿದ ಹಾವೇರಿ ಜಿಲ್ಲೆಯ ಪ್ರಾಚೀನ ರಾಜಕೀಯ ಅಭ್ಯಾಸವನ್ನು ಗೆರೆಕೊರೆದಂತೆ ಅಭ್ಯಸಿಸುವುದು ಅಸಾಧ್ಯ. ಪ್ರಾಚೀನ ಇತಿಹಾಸದಲ್ಲಿ ಜಿಲ್ಲೆಯ ವ್ಯಾಪ್ತಿ ವಿಸ್ತಾರಗೊಳ್ಳುತ್ತದೆ. ಜಿಲ್ಲೆಯ ಅಕ್ಕಪಕ್ಕಗಳಲ್ಲಿ ಬರುವ ಬನವಾಸಿ, ಪುಲಿಗೆರೆ, ಬೆಳ್ವೊಲ, ಬಂದಳಿಕೆ ಮುಂತಾದ ರಾಜಕೀಯ ಪ್ರಮುಖ ವಿಭಾಗಗಳು ಜಿಲ್ಲೆಯ ರಾಜಕೀಯ ಇತಿಹಾಸದೊಂದಿಗೆ ನೇರವಾಗಿ ಸ್ಪಂದಿಸುತ್ತವೆ.

ಹಾವೇರಿ ಜಿಲ್ಲೆಯ ಪ್ರಾಚೀನತೆಯತ್ತ ಗಮನಹರಿಸಿದರೆ ಇದು ಭರತಖಂಡದ ಕುಂತಳ ದೇಶದ ಭೂಭಾಗವಾಗಿತ್ತು. ವಿಸ್ತಾರವಾದ ಭೂಪ್ರದೇಶವನ್ನು ಆಡಳಿತದ ಅನುಕೂಲಕ್ಕಾಗಿ ಅನೇಕ ವಿಭಾಗ ಮತ್ತು ಉಪವಿಭಾಗಗಳಾಗಿ ವಿಂಗಡಿಸಿಕೊಳ್ಳುವುದು ಪ್ರಾಚೀನ ಕಾಲದಿಂದಲೂ ಪ್ರಚಲಿತವಿರುವ ಪದ್ಧತಿ. ಇಂತಹ ವಿಭಾಗಗಳಿಗೆ ಹೆಸರಿನ ಮುಂದೆ ಅಂಕಿಗಳನ್ನು ಬಳಸಿರುವುದು ಪ್ರಾಚೀನ ಕರ್ನಾಟಕದ ವೈಶಿಷ್ಟ್ಯವಾಗಿತ್ತು. ಈ ಸಂಖ್ಯೆಗಳ ನಿರ್ದೇಶನ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿಗೆ ಮತ್ತು ಚರ್ಚೆಗೆ ಎಡೆಮಾಡಿಕೊಟ್ಟಿದೆ. ರೈಸ್ ಅವರ ಪ್ರಕಾರ ಸಂಖ್ಯೆಯು ಆ ವಿಭಾಗದ ಉತ್ಪತ್ತಿಯನ್ನು ಚಿನ್ನದ ಹಣದಲ್ಲಿ ಅಂದರೆ ಆದಾಯದ ಮೊತ್ತವನ್ನು ಸೂಚಿಸುತ್ತದೆ.[೪೧] ಎಸ್.ಕೃಷ್ಣಸ್ವಾಮಿ ಅಯ್ಯಂಗಾರರು 'ಸಂಖ್ಯೆಯು ಆದಾಯವನ್ನೋ ಅಥವಾ ಹಳ್ಳಿಯ ಸಂಖ್ಯೆಯನ್ನೋ ನಿರ್ದೇಶಿಸುತ್ತದೆ' ಎನ್ನುತ್ತಾರೆ.[೪೨] ಫ್ಲೀಟ್‌ರವರ ಪ್ರಕಾರ ವಿಭಾಗದ ಹೆಸರುಗಳ ಮುಂಬರುವ ಸಂಖ್ಯೆಯು ಆ ವಿಭಾಗ ಒಳಗೊಂಡಿರುವ ಹಳ್ಳಿಗಳ ಸಂಖ್ಯೆಯನ್ನು ಸೂಚಿಸುತ್ತದೆ.[೪೩] ಫ್ಲೀಟ್ ಅವರ ಅಭಿಪ್ರಾಯವನ್ನು ಅನುಮೋದಿಸಿದ ಇತಿಹಾಸಜ್ಞರು[೪೪] ವಿಭಾಗದ ಹೆಸರಿನ ಮುಂದೆ ಇರುವ ಅಂಕಿ ಅದರಲ್ಲಿಯ ಗ್ರಾಮ ಸಂಖ್ಯೆಯನ್ನು ಸೂಚಿಸುವುದೆಂದು ಈಗ ನಿರ್ಣಯಕ್ಕೆ ಬಂದಿದ್ದರೂ ಜಿ.ಎಸ್.ದಿಕ್ಷೀತ್ ಅವರ ಅಭಿಪ್ರಾಯವನ್ನು ಗಮನಿಸಬೇಕಾಗಿದ್ದು[೪೫] ಅವರ ಪ್ರಕಾರ ಸಣ್ಣ ಮೊತ್ತದ ಸಂಖ್ಯಾವಾಚಕಗಳು ಹಳ್ಳಿಯನ್ನು ಸೂಚಿಸುತ್ತವೆ. ಆದರೆ ದೊಡ್ಡ ಗಾತ್ರದ ಸಂಖ್ಯೆ (ಗಂಗವಾಡಿ -೯೬೦೦೦, ಬನವಾಸಿ-೧೨೦೦೦) ಹಳ್ಳಿಯನ್ನು ಸೂಚಿಸುವ ಸಂಭವನೀಯತೆ ಕಡಿಮೆ ಇದ್ದು ಅದು ಆ ವಿಭಾಗದ ಉತ್ಪತ್ತಿಯನ್ನು ಸೂಚಿಸುತ್ತದೆ ಎನ್ನುತ್ತಾರೆ.

ಬನವಾಸಿ-೧೨೦೦೦ವು ಕುಂತಳ ದೇಶದ ಒಂದು ಪ್ರಾಂತ್ಯವಾಗಿತ್ತು. ಈ ಪ್ರಾಂತ್ಯದಲ್ಲಿ ಒಟ್ಟು ೧೮ ಕಂಪಣಗಳು ಸಮಾವೇಶಗೊಂಡಿದ್ದವು. ಪ್ರಸ್ತುತ ಹಾವೇರಿ ಜಿಲ್ಲೆಯ ದಕ್ಷಿಣಭಾಗ ನಾಗರಖಂಡ-೭೦[೪೬], ಎಡವಟ್ಟಿ-೭೦[೪೭], ರಟ್ಟೆಹಳ್ಳಿ-೭೦[೪೮], ಇಟ್ಟಿಗೆ-೩೦[೪೯], ಮಾಗುಂದ-೧೨[೫೦] ಹಾಗೂ ಮಾಸೂರು-೧೨[೫೧] ಭಾಗಗಳನ್ನು ಒಳಗೊಂಡಿತ್ತು. ಜಿಲ್ಲೆಯ ಪೂರ್ವಮಧ್ಯಭಾಗವು ಹೊನ್ನತ್ತಿ-೧೨[೫೨], ಬೆಣ್ಣೆವೂರು-೧೨, ಬಾಸವೂರು-೧೪೦[೫೩] ಮತ್ತು ಕಾಗಿನೆಲೆ-೧೨[೫೪] ಭಾಗಗಳನ್ನು ಒಳಗೊಂಡಿತ್ತು. ಜಿಲ್ಲೆಯ ವಾಯವ್ಯ ಭಾಗವು ಏಳಂಬಿ-೨೦[೫೫], ಎಡೆವೊಳಲ್-೭೦[೫೬], ಪಲಂಬಿ-೭೦[೫೭], ನಿಡಗುಂದಿಗೆ-೧೨[೫೮], ಕುಂದೂರು-೩೦[೫೯]ಮತ್ತು ಹೊಸನಾಡು-೭೦[೬೦] ಭಾಗಗಳಲ್ಲಿ ಸಮಾವೇಶಗೊಂಡಿತ್ತು. ಮೇಲಿನ ವಾಯವ್ಯ ಭೂಭಾಗವು ಹಾನಗಲ್ಲ-೫೦೦ರ ಆಡಳಿತ ವಿಭಾಗಕ್ಕೆ ಒಳಪಟ್ಟಿತ್ತು.[೬೧]

ಉತ್ತರ ಕರ್ನಾಟಕವನ್ನು ಅಂದರೆ ಕುಂತಳವನ್ನು ಮೌರ್ಯರು, ಶಾತವಾಹನರು, ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ಸೇವುಣರು, ವಿಜಯನಗರ ಅರಸರು ಕ್ರಮವಾಗಿ ಆಳಿದರೆಂಬುದು ಇತಿಹಾಸ ಅಧ್ಯಯನದಿಂದ ತಿಳಿದುಬರುತ್ತದೆ. ಜಿಲ್ಲೆಯ ದಕ್ಷಿಣ ಭಾಗದ ಹಿರೇಕೆರೂರು ತಾಲೂಕಿನ ಭೂಭಾಗವನ್ನು ಒಳಗೊಂಡಿದ್ದ ಪ್ರಾಚೀನ ನಾಗರಖಂಡ-೭೦ರ ರಾಜಧಾನಿ ಬಂದಳಿಕೆಯಲ್ಲಿರುವ ಶಾಸನವು[೬೨] ಕುಂತಳವನ್ನು ಆಳಿದ ಅರಸರ ಬಗ್ಗೆ ಮಾಹಿತಿಯನ್ನು ನೀಡುತ್ತದೆ.

'....ವಸುಧಾಕಾಂತೆಯ ಕುಂತಳೋಪಮಮೆನಿಪ್ಪ ಕುಂತಳ ಕ್ಷೋಣಿಯಂ

ಪೆಸರ್ವೆತ್ತಾ ನವನಂದ ಗುಪ್ತಕುಲ ಮೌರ್ಯಕ್ಷ್ಮಾಪರಾಳ್ದರ್ಲನ...

ಜ್ಜಸದಾಣ್ಮರ್ಕಲಿರಟ್ಟರಾಳ್ದರವರಿಂ ಚಾಳುಕ್ಯರಾಳ್ದರ್ವಳಿ

ಕ್ಕೆಸೆದಿರ್ದಾ ಕಳಚುರ್ಯವಂಶಜರೊಳಾಳ್ದಂ ಬಿಜ್ಜಲ ಕ್ಷೋಣಿಪಂ....'

ದೂರದ ಉತ್ತರ ಭಾರತದಿಂದಲೇ ನವನಂದರು, ಮೌರ್ಯರು ಇಲ್ಲಿಯ ಭೂಪ್ರದೇಶವನ್ನು ಆಳಿದರೆಂಬುದಕ್ಕೆ ಮೇಲಿನ ಶಾಸನ ಒತ್ತು ಕೊಡುತ್ತದೆ. ನಂದರು ಭಾರತದ ಬಹುಭಾಗವನ್ನು ಆಳುತ್ತಿದ್ದರೆಂದು ಪುರಾಣಗಳು ಹೇಳುತ್ತವೆ. ಆದರೆ ಅವರ ಆಳ್ವಿಕೆಯ ಬಗ್ಗೆ ವಿವರವಾಗಿ ಹೇಳುವ ದಾಖಲೆಗಳು ಲಭ್ಯವಿಲ್ಲ. ಚಂದ್ರಗುಪ್ತನು ಸೋಲಿಸಿದ ನಂದರನ್ನು ಕುರಿತು ನಂತರದ ಮಹಾವಂಶ, ಬೃಹತ್ಕಥಾ, ಮುದ್ರಾರಾಕ್ಷಸದ ಕಥೆಗಳಲ್ಲಿಯ ಹೇಳಿಕೆಗಳನ್ನು, ಸಂಪ್ರದಾಯಿಕ ನಂಬಿಕೆಗಳನ್ನು ಮೇಳೈಸಿದರೆ ಕೆಲವು ಅಂಶಗಳು ಸ್ಪಷ್ಟವಾಗುತ್ತವೆ. ನಂದರ ಕೊನೆಯ ಅರಸು ಮಹಾಪದ್ಮನು ಪ್ರಬಲ ಹಾಗೂ ಮಹತ್ವಾಕಾಂಕ್ಷಿ ಆಗಿದ್ದನೆಂದು ವರ್ಣಿತಗೊಂಡಿದ್ದಾನೆ. ಕುಂತಳ ದೇಶವನ್ನು ಆಳಿದವರಲ್ಲಿ ನವನಂದರು ಮೊದಲಿಗರೆಂದು ಉಲ್ಲೇಖಿತಗೊಂಡಿದ್ದಾರೆ.[೬೩] ನಂದರು ಉತ್ತರ ಮೈಸೂರಿಗೆ ಒಡೆಯರಾಗಿದ್ದರೆಂದೂ ಶಿವಮೊಗ್ಗ ಜಿಲ್ಲೆಯಲ್ಲಿ ಕಂಡು ಬಂದ ಕ್ರಿ.ಶ.೧೨-೧೩ನೇ ಶತಮಾನದ ಶಾಸನಗಳು ಹೇಳಿವೆ. ಪಶ್ಚಿಮ, ದಕ್ಷಿಣಾಪಥ ಹಾಗೂ ಉತ್ತರ ಮೈಸೂರು ಪ್ರಾಂತಗಳನ್ನೊಳಗೊಂಡ 'ಕುಂತಳ' ರಾಜ್ಯಕ್ಕೆ ಪ್ರಸಿದ್ಧ ನಂದರು ಅಧಿಪತಿಗಳಾಗಿದ್ದರೆಂದು ಶಿಕಾರಿಪುರ ಶಾಸನವು ಉಲ್ಲೇಖಿಸಿದೆ. ಆದರೆ ಇದು ಎಷ್ಟರ ಮಟ್ಟಿಗೆ ನಿಜ ಎಂಬುದನ್ನು ಸ್ಪಷ್ಟವಾಗಿ ಹೇಳುವಂತಿಲ್ಲ.[೬೪]

ನಂದರನ್ನು ಮೂಲೆಗೊತ್ತಿ ಅವರ ಅಧಿಕಾರವನ್ನು ಕಸಿದುಕೊಂಡ ಮೌರ್ಯರಿಗೆ ಈ ಕುಂತಳ ಪ್ರದೇಶ ಸಹಜವಾಗಿ ಹಸ್ತಾಂತರವಾಯಿತು. ಕರ್ನಾಟಕದ ಚಿತ್ರದುರ್ಗ ಜಿಲ್ಲೆಗಳಲ್ಲಿ ಅಂದರೆ ತುಂಗಭದ್ರೆಯ ದಕ್ಷಿಣಕ್ಕೆ ಅಶೋಕನ ಶಿಲಾಶಾಸನಗಳು ದೊರೆತಿವೆ.[೬೫] ಅಶೋಕನು ತನ್ನ ಸಾಮ್ರಾಜ್ಯದ ದಕ್ಷಿಣ ಮೇರೆಯಲ್ಲಿ ಸ್ನೇಹಬಾಂಧವ್ಯ ಹೊಂದಿದ್ದ ರಾಜ್ಯಗಳಲ್ಲಿ 'ಸತಿಯಪುತವು' ಒಂದು. ಈ 'ಸತಿಯಪುತ'ವನ್ನು ಗುರುತಿಸುವಲ್ಲಿ ಭಿನ್ನಾಭಿಪ್ರಾಯಗಳಿವೆ. ಇದು ತಮಿಳುನಾಡಿನ ಪ್ರದೇಶವಾಗಿದೆ ಎಂಬುದು ಆ ಅಭಿಪ್ರಾಯಗಳಲ್ಲಿ ಒಂದು.[೬೬] ಕ್ರಿ.ಪೂ.೨೪೦ರಲ್ಲಿ ಅಶೋಕ ಚಕ್ರವರ್ತಿಯು ಬೌದ್ಧ ಧರ್ಮದ ಪ್ರಚಾರಕ್ಕಾಗಿ ಬನವಾಸಿಗೆ ರಕ್ಷಿತನೆಂಬ ಬೌದ್ಧ ಸನ್ಯಾಸಿಯನ್ನು ಕಳಿಸಿದನೆಂದೂ, ಕ್ರಿ.ಪೂ.೧ನೇ ಶತಮಾನದಲ್ಲಿ ಶ್ರೀಲಂಕೆಯ ಅರಸು ದುಟ್ಟಗಾಮಣಿಯು ಅನುರಾಧಪುರದಲ್ಲಿ ಕಟ್ಟಿಸಿದ ಮಹಾಸ್ತೂಪದ ಆರಂಭೋತ್ಸವಕ್ಕೆ ಬನವಾಸಿಯಿಂದ ಮಹಾಥೇರ ಚಂದ್ರಗುಪ್ತನು ೮೦,೦೦೦ ಬೌದ್ಧ ಭಿಕ್ಷುಗಳ ಜೊತೆ ಹೋಗಿದ್ದನೆಂದೂ ಸಿಂಹಳದ ಮಹಾವಂಶ ಮತ್ತು ದೀಪವಂಶ ಗ್ರಂಥಗಳಿಂದ ತಿಳಿದುಬರುತ್ತದೆ.[೬೭] ಮೌರ್ಯರ ಆಡಳಿತದ ಬಗ್ಗೆ ನೇರವಾದ ಸಾಕ್ಷಿಗಳು ಜಿಲ್ಲೆಯಲ್ಲಿ ದೊರೆಯದ್ದರಿಂದ ಈ ಮೇಲಿನ ಆಧಾರಗಳಿಂದ ಜಿಲ್ಲೆಯಲ್ಲಿ ಮೌರ್ಯರ ಆಡಳಿತ ಇತ್ತೆಂದು ಊಹಿಸಬಹುದು.

ಬಂದಳಿಕೆ ಶಾಸನವು ಕುಂತಳವನ್ನು ಆಳಿದವರಲ್ಲಿ ಗುಪ್ತಕುಲವನ್ನೂ ಹೆಸರಿಸುತ್ತದೆ. ನಿಖರವಾದ ಯಾವ ದಾಖಲೆಗಳು ಇರದಿದ್ದರೂ ಇದಕ್ಕೆ ಪುಷ್ಟಿಕೊಡುವಂತೆ ಗುತ್ತಿ, ಗುತ್ತವೊಳಲು ಎಂಬ ಸ್ಥಳನಾಮಗಳು ಈ ಪ್ರದೇಶದಲ್ಲಿ ಕಂಡುಬರುತ್ತವೆ. ಗುತ್ತವೊಳಲಿನ ಗುತ್ತರು ತಾವು ಮಗಧದ ಗುಪ್ತರ ಉತ್ತರಾಧಿಕಾರಿಗಳೆಂದೂ,

ಉಜ್ಜಯಿನಿಪುರಾಧೀಶ್ವರರೆಂದೂ, ಚಂದ್ರಗುಪ್ತಾನ್ವಯರೆಂದೂ ತಮ್ಮನ್ನು ಕರೆದುಕೊಂಡಿದ್ದಾರೆ.[೬೮] ತಾಳಗುಂದದ ಕದಂಬ ಶಾಂತಿವರ್ಮನ ಶಾಸನದಿಂದ ಕದಂಬರಿಗೂ ಗುಪ್ತರಿಗೂ ಸಂಬಂಧಗಳು ಇದ್ದುವೆಂದು ತಿಳಿದುಬರುತ್ತದೆ. ಕದಂಬ ಕಾಕುತ್ಸವರ್ಮ ತನ್ನ ಮಗಳನ್ನು ಸ್ಕಂದ ಗುಪ್ತನಿಗೆ ಕೊಟ್ಟು ಮದುವೆ ಮಾಡಿದ್ದನ್ನು ಕಾಣಬಹುದು.[೬೯] ೭ನೇ ಶತಮಾನದ ರಾಣೆಬೆನ್ನೂರು ತಾಲೂಕ ಹಿರೇಬಿದರಿ ಶಾಸನವು 'ಗುಪ್ತರ ವಂಶೋತ್ತಮನ್' ಎಂಬ ವ್ಯಕ್ತಿಯೊಬ್ಬನನ್ನು ಉಲ್ಲೇಖಿಸುತ್ತದೆ.[೭೦] ಬನವಾಸಿ-೧೨೦೦೦ದಲ್ಲಿನ ೧೮ ಕಂಪಣಗಳನ್ನು ಒಳಗೊಂಡ ಗುತ್ತಿಯಲ್ಲಿ ಗುಪ್ತರ ಒಂದು ಶಾಖೆಯು ಆಳುತ್ತಿದ್ದುದನ್ನು ಶಾಸನವು[೭೧] ಉಲ್ಲೇಖಿಸಿದೆ.

ಆಂಧ್ರಭೃತ್ಯರೆನಿಸಿಕೊಂಡ ಶಾತವಾಹನರು ಮೌರ್ಯರ ನಂತರ ದಕ್ಷಿಣ ಭಾರತವನ್ನು ಆಳಲಾರಂಭಿಸಿದರು.[೭೨] ಮೌರ್ಯರ ನಂತರ ಮಗಧ ಸಾಮ್ರಾಜ್ಯವನ್ನು ಶುಂಗ, ಕಣ್ವ ವಂಶದ ಅರಸರು ಆಳಿದರು. ಇವರ ಆಡಳಿತ ಕರ್ನಾಟಕದಲ್ಲಿ ಇತ್ತು ಎನ್ನಲು ಯಾವುದೇ ಆಕರಗಳು ಲಭ್ಯವಿಲ್ಲ.[೭೩] ನಂದ ಮತ್ತು ಮೌರ್ಯರಿಗಿಂತ ಶಾತವಾಹನರಿಗೇ ಕುಂತಳದ ಮೇಲೆ ಹೆಚ್ಚು ರಾಜಕೀಯ ಹಿಡಿತವಿತ್ತೆಂದು ಸ್ಪಷ್ಟವಾಗುತ್ತದೆ. ದಕ್ಷಿಣ ಭಾರತದಲ್ಲಿ ಪ್ರಪ್ರಥಮ ಸಾಮ್ರಾಜ್ಯ ನಿರ್ಮಿಸಿದವರು ಇವರು. ಕ್ರಿ.ಪೂ.೨೩೦ರಲ್ಲಿ ಪ್ರಾರಂಭವಾಗಿ ಕ್ರಿ.ಶ.೧೯೯ರಲ್ಲಿ ಯಜ್ಞಸಾತಕರ್ಣಿಯವರೆಗೆ[೭೪] ಸುಮಾರು ನಾಲ್ಕು ಶತಮಾನಗಳ ಕಾಲ ವೈಭವಯುತ ಆಳ್ವಿಕೆ ನಡೆಸಿದರು.[೭೫] ಇವನ ನಂತರ ಆ ರಾಜ್ಯವು ಒಡೆದು ಹಲವಾರು ಪರಸ್ಪರ ಸಂಬಂಧಿತ ವಂಶಗಳಿಗೆ ದಾರಿಮಾಡಿಕೊಟ್ಟಿತು.[೭೬] ಇವರ ಅನೇಕ ಉಪವಂಶಗಳು ದಕ್ಷಿಣ ಭಾರತವನ್ನು ಆಳಿದವು. 'ಕುಂತಳಸಾತಕರ್ಣಿ' ಎಂಬ ರಾಜನ ಹೆಸರಿನ ಆಧಾರದ ಮೇಲಿಂದ ಕುಂತಳವನ್ನು ಇವರ ಒಂದು ಉಪವಂಶ ಆಳುತ್ತಿರಬಹುದು ಎಂದು ವ್ಯಕ್ತವಾಗುತ್ತದೆ.[೭೭] ಶಾತವಾಹನರ ಮೂಲ ನಿವಾಸ 'ಸಾತಹ ನಿಹಾರ'ವು ಹಾವೇರಿ ಜಿಲ್ಲೆಯ ಪಕ್ಕದ ಜಿಲ್ಲೆಗಳಾದ ಧಾರವಾಡ ಮತ್ತು ಬಳ್ಳಾರಿ ಜಿಲ್ಲೆಯ ಭಾಗಗಳು ಎಂಬ ಅಭಿಪ್ರಾಯವೂ ಇದೆ.[೭೮] ಈ ವಂಶಾವಳಿಯಲ್ಲಿ ಬರುವ ೨೩ನೇ ದೊರೆ ಗೌತಮಿಪುತ್ರ ಸಾತಕರಣಿಯನ್ನು 'ತ್ರಿಸಮುದ್ರ ತೋಯಪೀತ ವಾಹನ' ಎಂದು ವರ್ಣಿಸಲಾಗಿದೆ. ೧೭ನೇ ದೊರೆ ಹಾಲನು ಪ್ರಾಕೃತ ಭಾಷೆಯಲ್ಲಿ 'ಗಾಹಸತ್ತಸಿ'ಯನ್ನು ರಚಿಸಿದ್ದಾನೆ. ಇದರಲ್ಲಿ ತನ್ನನ್ನು ಕುಂತಲರಾಜ ಎಂದು ಕರೆದುಕೊಂಡಿದ್ದಾನೆ.[೭೯] ಈ ಕಾವ್ಯದಲ್ಲಿ ಅನೇಕ ಕನ್ನಡ ಪದಗಳನ್ನು ಗುರುತಿಸಲಾಗಿದೆ.[೮೦] ಬಳ್ಳಾರಿ ಸಮೀಪದ ಮ್ಯಾಕೆಡೋಣಿ ಶಾಸನ ಮತ್ತು ಹಿರೇಹಡಗಲಿ ತಾಮ್ರಪಟಗಳು ಶಾತವಾಹನ ಪುಳುಮಾವಿಯ ಆಡಳಿತದ ಬಗ್ಗೆ, ಗೌತಮಿಪುತ್ರ ಸಾತಕರ್ಣಿಯ ನಾಸಿಕ ಶಾಸನವು ಶಾತವಾಹನರು ಬನವಾಸಿಯನ್ನು ಆಳುತ್ತಿದ್ದುದಾಗಿ ಹೇಳುತ್ತವೆ.[೮೧] ಅಲ್ಲದೆ ಇತ್ತೀಚೆಗೆ ನರಗುಂದ ತಾಲೂಕಿನ ಗಡಿಯ ಭಾಗದಲ್ಲಿನ ವಾಸನದಲ್ಲಿ ವಾಶಿಷ್ಠಪುತ್ರ ಶ್ರೀಪುಳಮಾವಿಯ ಒಂದು ಪ್ರಾಕೃತ ಶಾಸನ ದೊರೆತಿದ್ದು ಇದರಲ್ಲಿ ಮಹಾದೇವ ಚಂಡಶಿವ ದೇವಾಯತನ ಹಾಗೂ ಶಿಲ್ಪಿಯೊಬ್ಬನ ಉಲ್ಲೇಖವಿದೆ. ಕರ್ನಾಟಕದಲ್ಲಿ ಈವರೆಗೆ ತಿಳಿದಿರುವ ಅತೀ ಪ್ರಾಚೀನ ಶೈವ ದೇವಾಲಯದ ಉಲ್ಲೇಖ ಇದಾಗಿದೆ.[೮೨] ಈ ಶಾಸನದಲ್ಲಿ ಕಂಡುಬರುವ ಶಿವಸಿರಿಯು ವಾಸಿಷ್ಠಪುತ್ರ ಪುಳುಮಾವಿಯ ಮಗನೆಂದೂ ಅವನ ಆಳ್ವಿಕೆ ಬನವಾಸಿವರೆಗೂ ವಿಸ್ತರಿಸಿತ್ತೆಂಬುದು ವ್ಯಕ್ತವಾಗುತ್ತದೆ. ಅಲ್ಲದೆ ಶಾತವಾಹನರ ಮನೆತನದ ಅರಸು ಈ ಪ್ರದೇಶವನ್ನು ಆಳುತ್ತಿದ್ದರೆಂದು ಹೇಳಲು ಖಚಿತ ಆಧಾರ ದೊರೆತಂತಾಗಿದೆ.[೮೩] ಇವರ ಕಾಲದಲ್ಲಿ ರೋಮನ್ ಸಾಮ್ರಾಜ್ಯದೊಡನೆ ವಿಫುಲ ವ್ಯಾಪಾರ ವಾಣಿಜ್ಯಗಳು ನಡೆಯುತ್ತಿದ್ದವು. ಈ ವ್ಯಾಪಾರದಲ್ಲಿ ಹಾವೇರಿ ಜಿಲ್ಲೆಯೂ

ಪಾಲು ಹೊಂದಿರಬೇಕು. ಇದಕ್ಕೆ ಸಾಕ್ಷಿಯಾಗಿ ಹಾನಗಲ್ಲ ತಾಲೂಕು ಅಕ್ಕಿ ಆಲೂರಿನಲ್ಲಿ ರೋಮನ್ ನಾಣ್ಯಗಳು ದೊರೆತಿರುವುದು ಗಮನಾರ್ಹ.[೮೪] ತೀರ ಇತ್ತೀಚೆಗೆ ರಾಣೆಬೆನ್ನೂರು ತಾಲೂಕಿನ ಸುಣಕಲ್ಲು ಬಿದರಿ ಗ್ರಾಮದಿಂದ ಪಶ್ಚಿಮಕ್ಕೆ ಮೂರು ಕಿ.ಮೀ. ಹಾಗೂ ಗುಡ್ಡದ ಹೊಸಳ್ಳಿಯಿಂದ ಪೂರ್ವಕ್ಕೆ ಎರಡು ಕಿ.ಮೀ. ದೂರದಲ್ಲಿರುವ ಹೊಸಕೆರೆಯ ಅಂಗಳದಲ್ಲಿ ೨-೩ ಎಕರೆ ವಿಶಾಲ ಪ್ರದೇಶದಲ್ಲಿ ಶಾತವಾಹನರ ಬೃಹತ್ ನೆಲೆಯೊಂದು ಪತ್ತೆಯಾಗಿದೆ. ಈ ನೆಲೆಯ ಶೋಧನೆಯಿಂದಾಗಿ ಈ ಭಾಗದಲ್ಲಿ ಶಾತವಾಹನರ ಆಡಳಿತವನ್ನು ಮತ್ತಷ್ಟು ಸ್ಪಷ್ಟ ಪಡಿಸಿದಂತಾಗಿದೆ.[೮೫]

ಶಾತವಾಹನರ ಆಳ್ವಿಕೆಯ ನಂತರ ಸುಮಾರು ಮೂರನೆಯ ಶತಮಾನದ ಪ್ರಾರಂಭದಲ್ಲಿ ದಕ್ಷಿಣ ಭಾರತಕ್ಕೆ ಅಭೀರರು, ಚುಟುಗಳು ಹಾಗೂ ಇಕ್ಷ್ವಾಕುಗಳು ಅಧಿಪತಿಗಳಾದರು.[೮೬] ಕರ್ನಾಟಕದಲ್ಲಿ ಚುಟುಗಳು ತಮ್ಮ ಸ್ವತಂತ್ರ ಆಡಳಿತವನ್ನು ನಡೆಸಿದರು.[೮೭] ಇವರು ಶಾತವಾಹನರ ಸಂಬಂಧಿಗಳು. ಶಿವಮೊಗ್ಗ ಜಿಲ್ಲೆ ಮಳವಳ್ಳಿ ಶಾಸನ,[೮೮] ಬನವಾಸಿಯ ನಾಗಶಿಲಾಶಾಸನಗಳು ಚುಟುಮನೆತನದ ಆಳ್ವಿಕೆಯ ಬಗ್ಗೆ ಸಾಕ್ಷಿ ಹೇಳುತ್ತವೆ. ಈ ಎರಡೂ ಶಾಸನಗಳು ವಿಣ್ಹುಕಡ ಚುಟುಕುಲಾನಂದ ಸಾತಕರ್ಣಿಗೆ ಸೇರಿದ್ದಾಗಿದೆ. ತಾಳಗುಂದ ಶಾಸನವೂ ಸಹ ಅಲ್ಲಿಯ ಪ್ರಣವಲಿಂಗವನ್ನು ಸಾತಕರ್ಣಿ ಅರಸನು ಪೂಜಿಸಿದನೆಂದು ಉಲ್ಲೇಖಿಸಿದೆ.[೮೯] ಬನವಾಸಿ ಮತ್ತು ಮಳವಳ್ಳಿಗಳು ಹಾವೇರಿ ಜಿಲ್ಲೆಯ ನೆರೆಯ ಪ್ರದೇಶಗಳಾಗಿದ್ದರಿಂದ ಚುಟು ಅರಸರ ಆಳ್ವಿಕೆಯನ್ನು ಹಾವೇರಿ ಜಿಲ್ಲೆಯು ಹೊಂದಿತ್ತು ಎಂದು ತಿಳಿಯಲು ಅಡ್ಡಿ ಇಲ್ಲ. ಅಲ್ಲದೆ ಮೇಲೆ ಹೇಳಿದ ರಾಣೆಬೆನ್ನೂರು ತಾಲೂಕಿನ ಹೊಸಕೆರೆಯ ಅಂಗಳದಲ್ಲಿ 'ಚುಟು' ಸಂತತಿಯ ಅರಸರಿಗೆ ಸೇರಿದ ನಾಣ್ಯಗಳು ದೊರೆತದ್ದು ಚುಟುಗಳ ಆಡಳಿತವನ್ನು ಇನ್ನೂ ಸ್ಪಷ್ಟಪಡಿಸಿವೆ. ಇಲ್ಲಿ 'ಚುಟುಕುಲಾನಂದ' ಅರಸನ ೧೬ ನಾಣ್ಯಗಳು ಮತ್ತು ಇದೇ ಸಂತತಿಯ ಮುಡಾನಂದ ಅರಸನ ೧೪ ನಾಣ್ಯಗಳು ದೊರೆತದ್ದು ಗಮನಾರ್ಹವಾಗಿವೆ.[೯೦]

ಚುಟು ಅರಸರು ಪಲ್ಲವರಿಗೆ ಸೋತರು.[೯೧] ಪಲ್ಲವ ಇಮ್ಮಡಿ ಶಿವಸ್ಕಂದವರ್ಮನ ರಾಜ್ಯಭಾರದ ನಂತರ ಬನವಾಸಿ ಪ್ರಾಂತವು ಕದಂಬರಿಗೆ ಹಸ್ತಾಂತರವಾಯಿತೆಂದು ಮಳವಳ್ಳಿ ಸ್ತಂಭ ಶಾಸನದಿಂದ ವ್ಯಕ್ತವಾಗುತ್ತದೆ. ಕ್ರಿ.ಶ.೪ನೆಯ ಶತಮಾನದಿಂದ ೬ನೆಯ ಶತಮಾನದವರೆಗೆ ರಾಜ್ಯಭಾರ ಮಾಡಿದ ಇವರು ಕರ್ನಾಟಕದಲ್ಲಿ ಸ್ವತಂತ್ರ ಅರಸೊತ್ತಿಗೆ ನಡೆಸಿದ ಪ್ರಥಮ ಕನ್ನಡದ ಅರಸರು.[೯೨] ಧರ್ಮ, ಕಲೆ ಮತ್ತು ಸಾಹಿತ್ಯ ಪ್ರಕಾರಗಳಲ್ಲಿ ಕರ್ನಾಟಕ ಸಂಸ್ಕೃತಿಯ ಕೆಲವು ಪ್ರಮುಖ ಲಕ್ಷಣಗಳಿಗೆ ಕದಂಬರ ಆಶ್ರಯ ಮತ್ತು ಪ್ರೋತ್ಸಾಹಗಳು ಪ್ರೇರಕ. ಕದಂಬ ಅರಸರ ಮೂಲ ಪುರುಷ ಎನಿಸಿಕೊಂಡ ಮಯೂರವರ್ಮನ ಮನೆತನ ನೆಲೆಸಿದುದು ತಾಳಗುಂದದಲ್ಲಿ ಮತ್ತು ಕದಂಬರ ಮುಖ್ಯ ರಾಜಧಾನಿ ಬನವಾಸಿ ಇವೆರಡೂ ಹಾವೇರಿ ಜಿಲ್ಲೆಗೆ ಅತೀ ಹತ್ತಿರದವು. ಹೀಗಾಗಿ ಜಿಲ್ಲೆಯ ಬಹುತೇಕ ಭಾಗಗಳು ಇವರ ಆಡಳಿತದ ಭಾಗವಾಗಿತ್ತು. ಐತಿಹಾಸಿಕವಾಗಿ ಬಹುಮುಖ್ಯ ಪ್ರದೇಶವೆಂದು ಗುರುತಿಸಿಕೊಂಡ ಬನವಾಸಿಯು ವಿದೇಶಿ ಪ್ರವಾಸಿಗರಿಂದಲೂ ಗುರುತಿಸಿಕೊಂಡಿದೆ. ಕ್ರಿ.ಶ. ಎರಡನೇ ಶತಮಾನದಲ್ಲಿ ಟಾಲೆಮಿ ತನ್ನ 'ಜಿಯಾಗ್ರಫಿ' ಗ್ರಂಥದಲ್ಲಿ ಬೈಜಾಂಟಿಯನ್ ಎಂಬ ಹೆಸರನ್ನು ಉಲ್ಲೇಖಿಸಿದ್ದಾರೆ. ಇದು ಬನವಾಸಿಗೆ ಮತ್ತೊಂದು ಹೆಸರಾದ ವೈಜಯಂತಿಯ ಗ್ರೀಕ್ ರೂಪಾಂತರವಾಗಿದೆ.[೯೩] ಜಿನಸೇನನು ತನ್ನ ಮಹಾಪುರಾಣದಲ್ಲಿ ಬನವಾಸಿಯನ್ನು (ವೈಜಯಂತಿಯನ್ನು) ಭರತನು ಜಯಿಸಿದ ರಾಜ್ಯಗಳ

ಮಹಾದ್ವಾರವೆಂದು ವರ್ಣಿಸಿದ್ದಾನೆ.[೯೪] ಚೀನಾದೇಶದ ಬೌದ್ಧಯಾತ್ರಿಕ ಹ್ಯೂಯನ್‌ತ್ಸಾಂಗನು ತನ್ನ ದಕ್ಷಿಣ ಭಾರತದ ಪ್ರವಾಸ ಕಥನದಲ್ಲಿ ಬನವಾಸಿಯನ್ನು ಕೊನಕಿನಾಪುಲೋ ಅಥವಾ ಕೊಂಕಣಪುರವೆಂದು ಕರೆದಿದ್ದಾನೆ. ಒಂದು ಶತಮಾನಕ್ಕೆ ಮುಂಚೆಯೇ ಅಲ್ಲಿ ಕದಂಬರ ಆಳ್ವಿಕೆ ಕೊನೆಗೊಂಡಿದ್ದರೂ ಅವನು ಅಲ್ಲಿಯ ಅರಮನೆ, ಬೌದ್ಧ ದೇವಾಲಯ ಮತ್ತು ಮಠಗಳ ಬಗ್ಗೆ ಪ್ರಸ್ತಾಪಿಸಿದ್ದಾನೆ.[೯೫]

ನಾಗರಖಂಡ-೭೦ರ ಪ್ರಾಚೀನ ಅಗ್ರಹಾರವಾದ ಕುಪ್ಪಟೂರಿನಲ್ಲಿ ಕದಂಬ ಅರಸ ಮಯೂರವರ್ಮ ೩೨೦೦೦ ಬ್ರಾಹ್ಮಣರನ್ನು ಅಹಿಚ್ಛತ್ರದಿಂದ ತಂದು ಅಲ್ಲಿ ನೆಲೆಸುವಂತೆ ಮಾಡಿದನೆಂದು ಐತಿಹ್ಯವಿದೆ. ಕುಪ್ಪಟೂರಿನ ಒಂದು ಶಾಸನವು[೯೬] ಅಲ್ಲಿಯ ಬ್ರಾಹ್ಮಣರನ್ನು 'ಅಹಿಚ್ಛತ್ರ ಲಲನಾಲಲಾಟರು' ಎಂದು ವರ್ಣಿಸಿದ್ದನ್ನು ಕಾಣಬಹುದು. ಮಯೂರವರ್ಮನಿಂದ ಸ್ಥಾಪಿತಗೊಂಡ ಕದಂಬ ಸಾಮ್ರಾಜ್ಯವನ್ನು ಅವನ ಮಗ ಕಂಙ್ಗವರ್ಮ (ಕ್ರಿ.ಶ.ಸು.೩೪೫-೩೬೫) ಅವನ ಮಗ ಭಗೀರಥ (ಕ್ರಿ.ಶ.ಸು.೩೬೫-೩೮೫) ಮುಂದೆ ಈತನ ಮಗ ರಘುವರ್ಮ (ಕ್ರಿ.ಶ.ಸು.೩೮೫-೪೦೫) ಬನವಾಸಿಯನ್ನು ಕೇಂದ್ರವಾಗಿರಿಸಿಕೊಂಡು ರಾಜ್ಯಭಾರ ಮಾಡಿದರು. ರಘುವರ್ಮನು ಪಲ್ಲವರೊಡನೆ ನಡೆದ ಯುದ್ಧದಲ್ಲಿ ಸಾವನ್ನಪ್ಪಿದಾಗ ತಮ್ಮನಾದ ಕಾಕುಸ್ಥವರ್ಮನು ಪಟ್ಟಕ್ಕೆ ಬಂದನು. ಆತನ ಆಳ್ವಿಕೆಯ ಕಾಲದ ತಾಳಗುಂದ ಶಾಸನವು ಕದಂಬರ ಇತಿಹಾಸವನ್ನು ಸಮಗ್ರವಾಗಿ ಪರಿಚಯಿಸಿಕೊಡುತ್ತದೆ. ಇವನ ತರುವಾಯ ಕದಂಬ ಸಾಮ್ರಾಜ್ಯವು ಎರಡು ಸಾಮ್ರಾಜ್ಯಗಳಾಗಿ ಬೇರ್ಪಟ್ಟವು. ದಕ್ಷಿಣ ಭಾಗದ ಅಧಿಪತಿಯಾಗಿದ್ದ ಈತನ ಮಗ ಕೃಷ್ಣವರ್ಮನು ಸ್ವತಂತ್ರವಾಗಿ ರಾಜ್ಯಭಾರ ಮಾಡಿದನು.[೯೭] 'ತ್ರಿಪರ್ವತನಗರ' ಇವನ ರಾಜಧಾನಿಯಾಗಿತ್ತು. ಈ ತ್ರಿಪರ್ವತನಗರ ಯಾವುದೆಂದು ಭಿನ್ನಾಭಿಪ್ರಾಯಗಳಿವೆ. ಆದರೂ ಹಾವೇರಿ ತಾಲೂಕು ದೇವಗಿರಿ ಈ ತ್ರಿಪರ್ವತನಗರ ಇದ್ದಿರಬೇಕೆಂದು ಬಹುಮತವಿದೆ.[೯೮] ದೇವಗಿರಿಯಲ್ಲಿ ಇವರ ತಾಮ್ರಪಟಗಳು ದೊರೆತದ್ದು ಇದಕ್ಕೆ ಆಧಾರವಾಗಿದೆ. ಕೃಷ್ಣವರ್ಮನು ಪಲ್ಲವರ ಸ್ನೇಹವನ್ನು ಗಳಿಸಿಕೊಂಡು ವೈಜಯಂತಿಯ ಮೃಗೇಶವರ್ಮನನ್ನು ಅಡಗಿಸಲು ಪ್ರಯತ್ನಿಸಿದನು. ಇವನ ನಂತರ ಇವನ ಮಗ ವಿಷ್ಣುವರ್ಮನು ತ್ರಿಪರ್ವತದಿಂದಲೇ ಆಳ್ವಿಕೆ ಮುಂದುವರೆಸಿದನು. ತನ್ನ ಸಹೋದರ ದೇವವರ್ಮನಿಂದ ತನ್ನ ಸಾಮ್ರಾಜ್ಯವನ್ನು ಕಾಪಾಡಿಕೊಳ್ಳಲು ಶಾಂತಿವರ್ಮನನ್ನು ಹಾಗೂ ಪಲ್ಲವರ ನೆರವನ್ನು ಪಡೆದನು. ಇವನ ಬಿರೂರು ತಾಮ್ರಪಟ ಶಾಸನದಲ್ಲಿ, ತನ್ನ ಅಜ್ಜ ಶಾಂತಿವರ್ಮನನ್ನು 'ಸಮಗ್ರ ಕರ್ನಾಟಕ ಭೂವರ್ಗ ಭರ್ತಾರ' ಎಂದು ವರ್ಣಿಸಿದ್ದಾನೆ. ಇದರಿಂದ ಇವನು ಬನವಾಸಿಯ ಶಾಂತಿವರ್ಮನಿಗೆ ಕೆಲಕಾಲ ಅಧೀನನಾಗಿದ್ದನೆಂದು ಊಹಿಸಬಹುದು.[೯೯] ಇವನ ಮಗ ಸಿಂಹವರ್ಮನ ನಂತರ ಮೊಮ್ಮಗ ಎರಡನೇ ಕೃಷ್ಣವರ್ಮ ವೈಜಯಂತಿಯನ್ನು ಗೆದ್ದು ಶಾಂತಿವರ್ಮನ ಶಾಖೆಯ ಹರಿವರ್ಮನನ್ನು ಸೋಲಿಸಿ ದೇವಗಿರಿಯಿಂದ ಬನವಾಸಿಗೆ ತನ್ನ ರಾಜಧಾನಿಯನ್ನು ವರ್ಗಾಯಿಸಿದನು.[೧೦೦] ದೇವಗಿರಿ ತಾಮ್ರಪಟ ಶಾಸನದ ಪ್ರಕಾರ ದೇವಗಿರಿಯು ಕದಂಬರ ಕಾಲದಲ್ಲಿ ಹಲಸಿಯಂತೆ ಮಹತ್ವದ ಜೈನ ಕೇಂದ್ರವಾಗಿತ್ತು ಎಂದು ತಿಳಿದುಬರುತ್ತದೆ.[೧೦೧] ಹಾನಗಲ್ಲು, ಪುಲಿಗೆರೆ ಮುಂತಾದ ಸ್ಥಳಗಳಲ್ಲಿಯೂ ಜೈನ ದೇವಾಲಯಗಳಿಗೆ ಮತ್ತು ವಿದ್ವಾಂಸರಿಗೆ ಅನೇಕ ದಾನದತ್ತಿಗಳನ್ನು ಕೊಟ್ಟಿರುವರು.[೧೦೨] ಬೌದ್ಧಮತದ ಎರಡು ಪ್ರಮುಖ ಕೇಂದ್ರಗಳಾದ ಅಜಂತ ಮತ್ತು ಬನವಾಸಿಯನ್ನು ಒಳಗೊಂಡಿದ್ದ ಕದಂಬ ರಾಜ್ಯದಲ್ಲಿ ಬೌದ್ಧಮತವೂ ಸಹ ಉಚ್ಛ್ರಾಯ ಸ್ಥಿತಿಯಲ್ಲಿತ್ತು.[೧೦೩] ಬನವಾಸಿಯಿಂದ ಆಳಿದ ಈ ಕದಂಬ

ವಂಶವನ್ನು ಇತಿಹಾಸಕಾರರು ಮೂಲ ಕದಂಬವಂಶವೆಂದು ಗುರುತಿಸುತ್ತಾರೆ. ಮುಂದೆ ೧೦ನೇ ಶತಮಾನದಿಂದ ೧೩ನೇ ಶತಮಾನದವರೆಗೆ ಮುಖ್ಯವಾಗಿ ಹಾನಗಲ್ಲು ಹಾಗೂ ಕರ್ನಾಟಕದ ಇತರ ಪ್ರದೇಶಗಳಲ್ಲಿ ಈ ಮನೆತನದವರು ಚಿಕ್ಕಪುಟ್ಟ ನಾಡುಗಳನ್ನು ಕಟ್ಟಿಕೊಂಡು ಮಾಂಡಲಿಕರಾಗಿ ರಾಜ್ಯಭಾರ ಮಾಡಿದರು. ಈ ಜಿಲ್ಲೆಗೆ ಸಂಬಂಧಪಟ್ಟಂತೆ ಈ ವಂಶಸ್ಥರ ಆಡಳಿತವನ್ನು ಇದೇ ಅಧ್ಯಾಯದಲ್ಲಿ ಮುಂದೆ ವಿವರಿಸಲಾಗಿದೆ.

ಕ್ರಿ.ಶ.ಸು.೫೪೦ರಲ್ಲಿ ಕದಂಬರ ಮಾಂಡಳಿಕ ವಂಶದ ಚಾಲುಕ್ಯರ ಮೊಟ್ಟಮೊದಲ ಪ್ರಮುಖ ದೊರೆ ಒಂದನೇ ಪುಲಕೇಶಿ ಕದಂಬರ ಸಾಮಂತಿಕೆಯನ್ನು ಕಿತ್ತೊಗೆದು ಚಾಲುಕ್ಯ ಸಾಮ್ರಾಜ್ಯದ ಸ್ಥಾಪಕನಾದನು. ಕರ್ನಾಟಕದಲ್ಲಿ ಇವರು ಬಹುಬೇಗನೆ ಅಭಿವೃದ್ಧಿಗೆ ಬಂದರು.[೧೦೪] ಜಿಲ್ಲೆಯಲ್ಲಿ ಲಭ್ಯವಾದ ಇವರ ಶಾಸನಗಳ ಸಂಖ್ಯೆ ಕಡಿಮೆ ಇದ್ದರೂ ಅವರ ಆಡಳಿತ ಇಲ್ಲಿ ಭದ್ರವಾಗಿತ್ತೆಂದು ತಿಳಿದುಬರುತ್ತದೆ. ಪಕ್ಕದ ಗದಗ ಜಿಲ್ಲೆಯ ಲಕ್ಷ್ಮೇಶ್ವರದಲ್ಲಿ ಬಾದಾಮಿ ಚಾಲುಕ್ಯರ ಐದು ಶಾಸನಗಳು ಲಭ್ಯವಾಗಿವೆ. ಇದು ಅವರ ಆಡಳಿತದ ಪ್ರಮುಖ ಕೇಂದ್ರವಾಗಿತ್ತೆಂದು ತಿಳಿಯಲು ಅನುಕೂಲವಾಗಿದೆ. ಅಲ್ಲದೆ ಗುಡಿಗೇರಿ ಊರನ್ನು ಲಕ್ಷ್ಮೇಶ್ವರದ ಬಸದಿಗೆ ದಾನವಿತ್ತುದಾಗಿ ಶಿಗ್ಗಾವಿ ತಾಮ್ರಪಟ ಶಾಸನ ಉಲ್ಲೇಖಿಸುತ್ತದೆ.[೧೦೫]

ಒಂದನೇ ಪುಲಕೇಶಿಯ ನಂತರ ಒಂದನೇ ಕೀರ್ತಿವರ್ಮನು ಮತ್ತು ಎರಡನೇ ಪುಲಕೇಶಿಯು ಇನ್ನೂ ಸ್ವತಂತ್ರ ರಾಜ್ಯದ ಕನಸು ಕಾಣುತ್ತಿದ್ದ ಕದಂಬರ ವಿರುದ್ಧ ಹೋರಾಡಬೇಕಾಯಿತು. ಎರಡನೇ ಪುಲಕೇಶಿ ಕದಂಬರನ್ನು ಪೂರ್ತಿ ಸದೆಬಡಿದನು.[೧೦೬] ಐಹೊಳೆಯ ಮೇಗುತಿ ಶಾಸನವು ಕದಂಬರನ್ನು ಸೋಲಿಸಿ ಬನವಾಸಿಯನ್ನು ತನ್ನ ಕೈವಶ ಮಾಡಿಕೊಂಡ ಇಮ್ಮಡಿ ಪುಲಕೇಶಿಯ ಬಗೆಗೆ ಹೇಳಿದೆ. ಕರ್ನಾಟಕದ ಪಶ್ಚಿಮ ಭಾಗವೆಲ್ಲ ಬಾದಾಮಿ ಚಾಲುಕ್ಯರ ಅಧೀನವಾಯಿತು. ಶಿಕಾರಿಪುರ ತಾಲೂಕಿನ ಗ್ರಾಮದ ಒಂದು ಶಾಸನವು ಇಮ್ಮಡಿ ಪುಲಕೇಶಿಯನ್ನು ಹೆಸರಿಸುತ್ತದೆ.[೧೦೭] ಈತನ ನಂತರ ಆಳ್ವಿಕೆ ನಡೆಸಿದ ವಿನಯಾದಿತ್ಯನ ಬಗ್ಗೆ ಜಿಲ್ಲೆಯಲ್ಲಿ ಹಲವಾರು ಸಾಕ್ಷಾಧಾರಗಳು ದೊರೆತಿವೆ.[೧೦೮] ಅಲ್ಲದೆ ವೈಜಯಂತಿಯನ್ನು ಆಳುತ್ತಿದ್ದ ಚಿತ್ರವಾಹನನಿಗೆ ವಿನಯಾದಿತ್ಯನ ಮಗಳಾದ ಕುಂಕುಮಮಹಾದೇವಿಯನ್ನು ವಿವಾಹ ಮಾಡಿ ಕೊಡಲಾಗಿತ್ತು.[೧೦೯] ಮುಂದೆ ವಿಜಯಾದಿತ್ಯನು ತನ್ನ ಸಹೋದರಿ ಪುಲಿಗೆರೆಯಲ್ಲಿ ಕಟ್ಟಿದ ಆನೆಸೆಜ್ಜೆ ಬಸದಿಗೆ ಗುಡಿಗೇರಿ ಗ್ರಾಮವನ್ನು ದಾನ ನೀಡಿದನು.[೧೧೦] ಹಾನಗಲ್ಲ ತಾಲೂಕು ಗುಡಗುಡಿಯಲ್ಲಿ ವಿಜಯಾದಿತ್ಯನ ಮಗ ಇಮ್ಮಡಿ ವಿಕ್ರಮಾದಿತ್ಯನ ಕಾಲದಲ್ಲಿ ನಿರ್ಮಾಣವಾದ ಕೆರೆಯ ಉಲ್ಲೇಖವಿದೆ.[೧೧೧] ಇವನ ಕಾಲದ ದೇವಗಿರಿಯ ತ್ರುಟಿತ ಶಾಸನವು ಅರಸನ ವಂಶಾವಳಿಯನ್ನು ಹಾಗೂ ಕಲಿಸಿಂಧರನನ್ನು[೧೧೨] ಮತ್ತು ಹಾವೇರಿ ತಾಲೂಕು ಗಣಜೂರಿನಲ್ಲಿ ಅಮ್ಮಣ್ಣನು ನಾಡನ್ನಾಳುವಾಗ ಬಿಟ್ಟ ದಾನವನ್ನು ತಿಳಿಸುತ್ತದೆ.[೧೧೩] ಬಾದಾಮಿ ಚಾಲುಕ್ಯರ ಕೊನೆಯ ಅರಸನಾದ ಇಮ್ಮಡಿ ಕೀರ್ತಿವರ್ಮನ ಆಳ್ವಿಕೆಯನ್ನು ಸಮರ್ಥಿಸುವಂತೆ ಸೇಂದ್ರಕ ಮಾಧವತ್ತಿ ಅರಸನು ಗಂಗಿಪಾಂಡಿ (ಹಾವೇರಿ ಜಿಲ್ಲೆಯ ಆಡೂರು) ಊರಲ್ಲಿ ಜಿನಭವನವೊಂದಕ್ಕೆ ದಾನ ನೀಡಿದ್ದು ತಿಳಿದುಬರುತ್ತದೆ.[೧೧೪] ಇಮ್ಮಡಿ ಕೀರ್ತಿವರ್ಮನ ಆಳ್ವಿಕೆಯನ್ನು ಅವನ ಅಧೀನದಲ್ಲಿ ಬನವಾಸಿ ಪನ್ನಿರ್ಚ್ಛಾಸಿರವನ್ನು ದೋಸಿಯರನು ಆಳುತ್ತಿದ್ದನೆಂದು ಹಾವೇರಿ ತಾಲೂಕು ದಿಡಗೂರು ಶಾಸನವೂ ಸಹ ಹೇಳುತ್ತದೆ.[೧೧೫] ಬ್ಯಾಡಗಿ ತಾಲೂಕು ಸಿಡೆನೂರು ಶಾಸನವು ಸಹ ಈ ದೋಸಿಯರನನ್ನು ಉಲ್ಲೇಖಿಸುತ್ತದೆ.[೧೧೬]

ಮತ್ತು ಚಾಳುಕ್ಯ ರಾಜ್ಯ ನಾಶವಾಗುವಾಗ ಈತ ಮರಣವನ್ನಪ್ಪಿದ ಎಂಬ ಅರ್ಥವನ್ನು ಶಾಸನ ವಿವರಿಸುತ್ತದೆ. ಈ ಶಾಸನಗಳು ಹೇಳುವ ಇಬ್ಬರು ದೋಸಿಯರನು ಒಬ್ಬನೇ ಆಗಿದ್ದು ಕೀರ್ತಿವರ್ಮನ ಪರವಾಗಿ ಹೋರಾಟ ನಡೆಸಿದ ಈ ಭಾಗದ ವ್ಯಕ್ತಿಯೆಂದು ತಿಳಿಯಬಹುದು.[೧೧೭]

ಚಾಲುಕ್ಯರ ಕಾಲದಲ್ಲಿ ಅಧಿಕಾರಿಯಾಗಿ ಸೇವೆ ಸಲ್ಲಿಸುತ್ತಿದ್ದ ದಂತಿದುರ್ಗನು ಚಾಲುಕ್ಯರ ದುರ್ಬಲತೆ, ದಖ್ಖನಿನ ಅಸ್ಥಿರ ರಾಜಕೀಯ ಪರಿಸ್ಥಿತಿಯ ಪ್ರಯೋಜನ ಪಡೆದುಕೊಂಡು ಇಮ್ಮಡಿ ಕೀರ್ತಿವರ್ಮನನ್ನು ಬದಿಗೊತ್ತಿ ರಾಷ್ಟ್ರಕೂಟ ರಾಜ್ಯಸ್ಥಾಪನೆಯನ್ನು ಮಾಡಿದನು.[೧೧೮] ದಂತಿದುರ್ಗನ ನಂತರ ಪಟ್ಟಕ್ಕೆ ಬಂದ ಅವನ ಚಿಕ್ಕಪ್ಪ ಒಂದನೇ ಕೃಷ್ಣನು ಚಾಲುಕ್ಯ ಕೀರ್ತಿವರ್ಮನನ್ನು ಪೂರ್ತಿ ಸದೆಬಡಿದನು. ಅಕಾಲವರ್ಷನೆಂದು ಕರೆಯುವ ಒಂದನೇ ಕೃಷ್ಣನಿಗೆ ಸಂಬಂಧಪಟ್ಟ ವೀರಗಲ್ಲು ಶಾಸನವು ಸವಣೂರು ತಾಲೂಕು ಹತ್ತಿಮತ್ತೂರಿನಲ್ಲಿದೆ.[೧೧೯] ಶಿಕಾರಿಪುರ ತಾಲೂಕಿನ ಮುತ್ತಳ್ಳಿಯಲ್ಲಿಯೂ ಈತನಿಗೆ ಸಂಬಂಧಿಸಿದ ಶಾಸನವಿದೆ.[೧೨೦] ಒಂದನೇ ಕೃಷ್ಣನಿಗೆ ಅಧೀನನಾಗಿ ಬನವಾಸಿ ಮಂಡಲವನ್ನು ಅಕಾಲವರ್ಷ ಶ್ರೀ ಪೃಥ್ವಿವಲ್ಲಭ ಸೇನಾವರ ಮಾರಕ್ಕೆ ಅರಸನು ಆಳುತ್ತಿದ್ದುದಾಗಿ ಈ ಶಾಸನವು ಉಲ್ಲೇಖಿಸುತ್ತದೆ. ಈ ಮಾರಕ್ಕೆ ಅರಸನು ಒಂದನೇ ಕೃಷ್ಣ ಹಾಗೂ ಆತನ ಮಕ್ಕಳಾದ ಇಮ್ಮಡಿ ಗೋವಿಂದ ಮತ್ತು ನಿರುಪಮ ಧ್ರುವರ ಕಾಲಕ್ಕೂ ಅಂದರೆ ೪೦ ವರ್ಷಗಳಷ್ಟು ದೀರ್ಘಾವಧಿ ಬನವಾಸಿ ಪ್ರಾಂತವನ್ನು ಆಳಿದ ಮಂಡಳೇಶ್ವರನಾಗಿದ್ದಾನೆ.[೧೨೧] ಧ್ರುವನ ಕಾಲಕ್ಕೆ ಸೇರಿದ ಸಿಡೆನೂರು ಶಾಸನವು ಸಹ ಮಾರಕ್ಕೆ ಅರಸನು ಬನವಾಸಿಯನ್ನು ಆಳುತ್ತಿದ್ದುದಾಗಿ ಹೇಳುತ್ತದೆ.[೧೨೨] ಈ ವೇಳೆಯಲ್ಲಿ ಸಿಡೆನೂರನ್ನು ಬಿನವತಿಯಬ್ಬೆ ಆಳುತ್ತಿದ್ದಳು. ಮದೆನೂರ ಮಾರನು ಬನವಾಸಿಯನ್ನು ಆಳುತ್ತಿರುವಾಗ ಮಳೆಆರನಿಂದ ಕಚ್ಛವಿಯ ಮಾರಬ್ಬೆದೇವಿಗೆ ತುಪ್ಪದೆರೆಯ ದಾನವನ್ನು ಕಚವಿ ಶಾಸನ ತಿಳಿಸುತ್ತದೆ.[೧೨೩] ಈತನ ನಂತರ ಆಳಿದ ಇವನ ಮಗ ಮೂರನೇ ಗೋವಿಂದನ ಕಾಲದ ಹಿರೇಕೆರೂರು ತಾಲೂಕಿನ ಎರಡು ಶಾಸನಗಳು ಮೇಂಟಿ ನಿಲ್ಲಿಸಿದ ಮಾಹಿತಿಯನ್ನು ಒದಗಿಸುತ್ತದೆ.[೧೨೪] ಮೇದೂರು ಶಾಸನವು ಉಲ್ಲೇಖಿಸುವ ಸುಳಕಿವಂಶದ ರಾಜಾದಿತ್ಯನು ಬನವಾಸಿಯನ್ನು ಮತ್ತು ಆತನ ಹೆಂಡತಿ ಶ್ರೀಮಾದೇವಿ ಹಾನಗಲ್ಲು ತಾಲೂಕು ಸಾವಿಕೆರೆ(ಸಮಕರಿಗೆ)ಯನ್ನು ಆಳುತ್ತಿದ್ದುದಾಗಿ ಹೇಳುತ್ತದೆ.[೧೨೫] ರಾಷ್ಟ್ರಕೂಟರ ಪ್ರಮುಖ ದೊರೆ ಅಮೋಘವರ್ಷನ ಆಡಳಿತದ ಬಗ್ಗೆ ಅನೇಕ ಶಾಸನಗಳು ಜಿಲ್ಲೆಯಲ್ಲಿ ಲಭ್ಯವಾಗಿವೆ. ಇವನ ಬಲಗೈ ಬಂಟನಂತಿದ್ದ ಚಲ್ಲಕೇತನ ಬಂಕೇಯನು ಬನವಾಸಿ-೧೨೦೦೦ನ್ನು ಆಳುತ್ತಿದ್ದನು. ಅಮೋಘವರ್ಷನ ಚಕ್ರಾಧಿಪತ್ಯದಲ್ಲಿ ಬಂಕೇಯನು ಕಂಕಾಳ ಗೊರವನಿಗೆ ಕಿರಗುಪ್ಪದೂರ ಗ್ರಾಮವನ್ನು ದಾನ ಮಾಡಿದ ಬಗ್ಗೆ ಅರಿಷಿಣಗುಪ್ಪಿ ಶಾಸನ[೧೨೬] ಉಲ್ಲೇಖಿಸಿದೆ. ಇವನ ಕಾಲದಲ್ಲಿ ಉಪ್ಪುಣುಸೆಯ ೪೦ ಮಹಾಜನರು ಶಿಗ್ಗಾವಿಯ ಮೂಲಸ್ಥಾನದೇವರಿಗೆಂದು ಗೋಕರ್ಣ ಪಂಡಿತ ಭಟಾರರಿಗೆ ಭೂದಾನ ಮಾಡಿರುವರು. ಇದರಿಂದ ಉಪ್ಪುಣುಸೆಯು ಅಗ್ರಹಾರವನ್ನು ಹೊಂದಿತ್ತು ಎಂದು ತಿಳಿದುಬರುತ್ತದೆ.[೧೨೭] ದೀರ್ಘಕಾಲ ರಾಜ್ಯವಾಳಿದ ಅಮೋಘವರ್ಷನ ಗಣ್ಯ ಸೇನಾನಿ ಚಲ್ಲಕೇತನ ವಂಶದ ಬಂಕೇಯನು ಶಿಗ್ಗಾವಿ ತಾಲೂಕಿನ ಬಂಕಾಪುರ ಊರಿನ ನಿರ್ಮಾಣಕ್ಕೆ ಕಾರಣನಾದವನು. ಅಮೋಘವರ್ಷನ ಮಗ ಎರಡನೇ ಕೃಷ್ಣನ ಆಡಳಿತಾವಧಿಯಲ್ಲಿ ಬಂಕೇಯನ ಮಗ ಲೋಕಟೆ ರಾಷ್ಟ್ರಕೂಟರಿಗೆ ಅನುಕೂಲವಾಗಿ ಬನವಾಸಿ-೧೨೦೦೦ದ ಆಡಳಿತವನ್ನು ನಿರ್ವಹಿಸಿದನು. ಮಾಂಡಳಿಕ ಮನೆತನದ ಬಗ್ಗೆ ವಿವರಿಸುವಾಗ

ಚಲ್ಲಕೇತನರ ಬಗ್ಗೆ ಮುಂದೆ ವಿವರಿಸಲಾಗಿದೆ. ಎರಡನೇ ಕೃಷ್ಣನು ಬದುಕಿರುವಾಗಲೇ ಅವನ ಮಗ ಜಗತ್ತುಂಗನು ಮೃತನಾದನು ಹಾಗೂ ಮೊಮ್ಮಗ ಮೂರನೇ ಇಂದ್ರನು ಪಟ್ಟಕ್ಕೆ ಬಂದಾಗ[೧೨೮] ಬನವಾಸಿಯ ಆಡಳಿತದಲ್ಲಿ ಬದಲಾವಣೆ ಕಂಡುಬರುತ್ತದೆ. ಹಾನಗಲ್ಲು ತಾಲೂಕು ಲಕ್ಷ್ಮೀಪುರ ಶಾಸನವು[೧೨೯] ಬನವಾಸಿ ೧೨೦೦೦ವನ್ನು ಎರಡನೇ ಬಂಕೇಯ ಹಾಗೂ ಶಂಕರಗಂಡರು ಇಬ್ಭಾಗಿಸಿ ಆಳುತ್ತಿರುವುದಾಗಿ ಸ್ಪಷ್ಟ ದಾಖಲೆ ಒದಗಿಸುತ್ತದೆ. ಹಾಗೆಯೇ ಖಂಡೇಬಾಗೂರು[೧೩೦] ಮತ್ತು ಹಾವಣಗಿ[೧೩೧] ಶಾಸನಗಳು ಶಂಕರಗಂಡನ ಆಳ್ವಿಕೆಯನ್ನು ಸೂಚಿಸುತ್ತವೆ. ಇದು ಈ ಭಾಗದಲ್ಲಿ ಚಲ್ಲಕೇತನರ ಅವನತಿಯನ್ನು ಸೂಚಿಸುವಂತಾಗಿದೆ. ಹಾವಣಗಿ ಶಾಸನವು ಶಂಕರಗಂಡನನ್ನು ಭುವನೈಕರಾಮ, ಅಭಿಮಾನದವಳ, ಜಯಧೀರ, ರಟ್ಟರಮೇರು ಎಂದು ವರ್ಣಿಸಿದೆ. ನಂತರ ಪಟ್ಟಕ್ಕೆ ಬಂದ ರಾಷ್ಟ್ರಕೂಟ ದೊರೆಗಳಲ್ಲಿ ಎರಡನೇ ಅಮೋಘವರ್ಷ ಮತ್ತು ನಾಲ್ಕನೇ ಗೋವಿಂದರ ಆಳ್ವಿಕೆಯು ಅಲ್ಪಾವಧಿಯಾಗಿದೆ. ಜಿಲ್ಲೆಯಲ್ಲಿ ಅವರ ಆಡಳಿತವನ್ನು ಸೂಚಿಸುವ ಮೂರು ಶಾಸನಗಳನ್ನು ಕಾಣಬಹುದು. ಮೂರನೇ ಅಮೋಘವರ್ಷನ ನಿವೃತ್ತಿ ಜೀವನದಲ್ಲಿ ಅವನ ಮಗ ಮೂರನೇ ಕೃಷ್ಣನು ಆಡಳಿತದ ಚುಕ್ಕಾಣಿಯನ್ನು ಹಿಡಿದನು. ಈತನ ಕಾಲದಲ್ಲಿ ಗರ್ವಿಂದರನು ಬನವಾಸಿಯನ್ನು ಆಳಿರುವನು.[೧೩೨] ಈತನ ಆಳ್ವಿಕೆಯಲ್ಲಿ ದೇವಿಹೊಸೂರಿನ ಮಹಾಜನರು ದೇವಾಲಯ ಒಂದಕ್ಕೆ ಹಣದಾನ ಮಾಡಿರುವರು.[೧೩೩] ಕೃಷ್ಣನ ಮಗನು ಮೊದಲೇ ತೀರಿಕೊಂಡಿದ್ದರಿಂದ ಮೊಮ್ಮಗ ನಾಲ್ಕನೇ ಇಂದ್ರನು ಅಪ್ರಾಪ್ತ ವಯಸ್ಕನಾಗಿದ್ದನು. ಆದ್ದರಿಂದ ಕೃಷ್ಣನ ಸಹೋದರರಲ್ಲಿ ಒಬ್ಬನಾದ ಖೊಟ್ಟಿಗನು ಪಟ್ಟಕ್ಕೆ ಬಂದನು. ಈ ವೇಳೆಯಲ್ಲಿ ಶಂಕರಗಂಡನು ಬನವಾಸಿಯನ್ನು ಆಳುತ್ತಿದ್ದನು.[೧೩೪] ಗುತ್ತಿಯ ಗಂಗನು ಪುಲಿಗೆರೆ-೩೦೦ನ್ನು ಆಳುತ್ತಿದ್ದಾಗ ಆತನ ಹೆಂಡತಿ ಅಂಕಬ್ಬರಸಿಯು ಪುಲ್ಲುಂಗೂರಬ್ಬೆ ದೇವತೆಗೆ ಭೂಮಿ ಹಾಗೂ ಸುಂಕದಾನವನ್ನು ಕೊಟ್ಟಿರುವಳು.[೧೩೫] ರಾಷ್ಟ್ರಕೂಟ ದೊರೆಗಳಲ್ಲಿ ಖೊಟ್ಟಿಗನ ನಂತರ ಅವನ ಸಹೋದರ ನಿರುಪಮನ ಮಗ ಎರಡನೇ ಕರ್ಕ ಈ ಮನೆತನದ ಕೊನೆಯ ಅರಸನಾಗಿದ್ದನು.

ಚಿಕ್ಕೆರೂರಿನ ಬಳರಿ ದೇವಾಲಯದ ಮುಂಭಾಗದಲ್ಲಿದ್ದ ಶಾಸನವು ಐತಿಹಾಸಿಕವಾಗಿ ಬಹು ಮಹತ್ವದ್ದಾಗಿದೆ. ಇದು ರಾಷ್ಟ್ರಕೂಟರನ್ನು ಹಿಂದಕ್ಕೆ ತಳ್ಳಿ ಕಲ್ಯಾಣದ ಚಾಲುಕ್ಯರು ತಮ್ಮ ಚಕ್ರಾಧಿಪತ್ಯವನ್ನು ಸ್ಥಾಪಿಸಿದ ಮಹತ್ವದ ವಿಷಯವನ್ನು ಉಲ್ಲೇಖಿಸುತ್ತದೆ.[೧೩೬] ಈ ಶಾಸನವು 'ಶ್ರೀಮದ್ ಅಹವಮಲ್ಲದೇವಂ ದಕ್ಷಿಣ ದಿಗ್ಭಾಗವಂ ನಿರಾಕುಳಂ ಮಾಡಿ, ಉತ್ತರ ದಿಗ್ವಿಜಯಂಗೈದುಪ್ಪಳನ ಮೇಲೆ ನಡೆದಂದು' ಎಂದು ದಾಖಲಿಸುತ್ತದೆ. ಇಲ್ಲಿ ಬರುವ ಅಹವಮಲ್ಲದೇವ ಎಂದರೆ ಕಲ್ಯಾಣಚಾಲುಕ್ಯರ ದೊರೆ ತೈಲಪ ಅಥವಾ ಅವನ ಮಗ ಇರಿವಬೆಡಂಗನೆಂದು ವಿದ್ವಾಂಸರು ಹೇಳಿದ್ದಾರೆ.[೧೩೭] ಇದೇ ಶಾಸನವು ಭೀಮಯ್ಯ ಎಂಬಾತನು ಬನವಾಸಿ ನಾಡನ್ನು ಆಳುತ್ತಿದ್ದನೆಂದು ಹೇಳಿದೆ. ಕಲ್ಯಾಣಚಾಲುಕ್ಯರ ಐದನೇ ವಿಕ್ರಮಾದಿತ್ಯ ಮತ್ತು ಎರಡನೇ ಜಯಸಿಂಹನ ನಂತರ ಪಟ್ಟಕ್ಕೆ ಬಂದ ಒಂದನೇ ಸೋಮೇಶ್ವರನ ಸಾಕಷ್ಟು ಶಾಸನಗಳು ಜಿಲ್ಲೆಯಲ್ಲಿ ದೊರೆಯುತ್ತವೆ. ಬೆಳವತ್ತಿಯಲ್ಲಿ ನಾಲ್ಕು ಶಾಸನಗಳಿವೆ. ಅದರಲ್ಲಿ ಕ್ರಿ.ಶ.೧೦೪೬ರ ಶಾಸನವು ಬನವಾಸಿ-೧೨೦೦೦, ಹಾನಗಲ್ಲು-೫೦೦ ಆಳುವ ಮಯೂರವರ್ಮನು ಅಲ್ಲಿಯ ಸ್ವಯಂಭೂ ದೇವಸ್ಥಾನಕ್ಕಾಗಿ ಕೊಗಳೇಶ್ವರ ದೇವರ ಆಚಾರ್ಯ ದೇವರಾಸಿ ಪಂಡಿತರಿಗೆ ದಾನಬಿಟ್ಟಿರುವನು.[೧೩೮] ಬಾಸವೂರ-೧೪೦ನ್ನು ಆಳುವ ಕಲಿಯಮ್ಮರಸನು ಕೊಳೂರ ಕಲಿದೇವೇಶ್ವರ ದೇವಾಲಯಕ್ಕೆ ಗೃಹ ಮತ್ತು ಭೂದಾನವನ್ನು ಕೊಟ್ಟಿರುವನು.[೧೩೯] ತ್ರೈಲೋಕ್ಯಮಲ್ಲ,

ಅಹವಮಲ್ಲ ಎಂಬ ಬಿರುದುಗಳನ್ನು ಹೊಂದಿದ್ದ ಒಂದನೇ ಸೋಮೇಶ್ವರನು ಸಮರ್ಥವಾಗಿ ರಾಜ್ಯಭಾರ ಕೈಗೊಂಡು ಜೀವನದಲ್ಲಿ ಜಿಗುಪ್ಸೆ ತಾಳಿ ಹಾವೇರಿ ಜಿಲ್ಲೆಯ ಸಮೀಪದ ಕುರುವತ್ತಿಯ ತುಂಗಭದ್ರಾ ನದಿಯಲ್ಲಿ ಜಲಸಮಾಧಿಯನ್ನು ಹೊಂದಿದನು.[೧೪೦] ಈತನ ನಂತರ ಬಂದ ಎರಡನೇ ಸೋಮೇಶ್ವರನ ಆಡಳಿತದಲ್ಲಿ ಭುವನೈಕಮಲ್ಲ ವೀರನೊಳಂಬ ಉದಯಾದಿತ್ಯನು ಬನವಾಸಿ-೧೨೦೦೦ ಮತ್ತು ಸತ್ತಳಿಗೆ-೧೦೦೦ ಆಳುತ್ತಿದ್ದನೆಂದು ಸಿರಗಂಬಿ, ಮತ್ತಿಹಳ್ಳಿ, ಕಡೂರು, ನೀರಲಗಿ ಶಾಸನಗಳು ದಾಖಲಿಸುತ್ತವೆ. ಮತ್ತಿಹಳ್ಳಿಯ ಸ್ವಯಂಭೂದೇವರಿಗೆ ಮುದಿಯನ ಗ್ರಾಮವನ್ನು (ಮತ್ತಿಹಳ್ಳಿ) ಪುನರ್ದತ್ತಿ ಮಾಡಿ ಕೊಡಲಾಗಿದೆ.[೧೪೧] ಉದಿಯಾದಿತ್ಯ ಮತ್ತು ಅವನ ಅರಸಿ ಮಾಳಲದೇವಿಯರು ಕಲಕೇರಿ ಸೋಮೇಶ್ವರ ದೇವರಿಗೆ ಪುಲ್ಲವಲ ಗ್ರಾಮವನ್ನು ದಾನಬಿಟ್ಟಿರುವರು.[೧೪೨] ಎರಡನೇ ಸೋಮೇಶ್ವರನ ಆಳ್ವಿಕೆಯಲ್ಲಿ ಅವನ ತಮ್ಮ ಆರನೇ ವಿಕ್ರಮಾದಿತ್ಯನು ಅಣ್ಣನ ವಿರುದ್ಧ ದಂಗೆ ಎದ್ದಿರುವುದು ಮಹತ್ವದ ವಿಷಯವಾಗಿದೆ. ಅಣ್ಣನಿಂದ ತಪ್ಪಿಸಿಕೊಂಡು ಬಂದ ವಿಕ್ರಮಾದಿತ್ಯನಿಗೆ ವನವಾಸಮಂಡಲದಲ್ಲಿ ಕೆಲಕಾಲ ವಿಶ್ರಾಂತಿ ಸಿಕ್ಕು ಅವನಿಗೆ ಅದು ಸುರಕ್ಷಿತ ತಾಣವಾಗಿ ಪರಿಣಮಿಸಿತು. ಸೋಮೇಶ್ವರನನ್ನು ಬದಿಗೊತ್ತಿ ವಿಕ್ರಮಾದಿತ್ಯ ಚಾಲುಕ್ಯ ಪಟ್ಟವನ್ನು ಪಡೆದುಕೊಳ್ಳುವಲ್ಲಿ ಹಾನಗಲ್ಲ ಕದಂಬರು ಗಮನಾರ್ಹ ಪಾತ್ರವಹಿಸಿದ್ದಾರೆ.[೧೪೩] ವಿಕ್ರಮಾದಿತ್ಯನಿಗೂ ಅವನ ಇನ್ನೊಬ್ಬ ಸಹೋದರ ನಾಲ್ಕನೇ ಜಯಸಿಂಹನಿಗೂ ಕೆಲವು ವರ್ಷಗಳ ಕಾಲ ಆತ್ಮೀಯ ಸಂಬಂಧ ಇದ್ದಿತು. ಈ ಮೊದಲು ಜಯಸಿಂಹನು ಬೆಳವೊಲ ಮತ್ತು ಪುಲಿಗೆರೆಗಳನ್ನು ಆಳುತ್ತಿದ್ದನು. ಅದರ ಜೊತೆಗೆ ವಿಕ್ರಮಾದಿತ್ಯನು ಕೋಗಳಿ, ಕುಂದೂರು, ಬನವಾಸಿ ಮತ್ತು ಸಾಂತಲಿಗೆ ಪ್ರಾಂತಗಳನ್ನು ಕೂಡಿಸಿಕೊಟ್ಟನು.[೧೪೪] ಹಿರೇಕೆರೂರು ತಾಲೂಕು ಮತ್ತಿಹಳ್ಳಿಯ ಎರಡು ಶಾಸನಗಳು ಯುವರಾಜ ಜಯಸಿಂಗದೇವನ ಪರಾಕ್ರಮ ವರ್ಣನೆಯನ್ನು ಮಾಡಿವೆ.[೧೪೫] ಗಳಗನಾಥದ ಕ್ರಿ.ಶ.೧೦೮೦ರ ಶಾಸನದಲ್ಲಿ ಯುವರಾಜ ಜಯಸಿಂಘದೇವನ ಅಧೀನನಾದ ಮಹಾಮಂಡಳೇಶ್ವರ ಚನ್ನರಸನಿಂದ ಗಳಗೇಶ್ವರ ದೇವಾಲಯಕ್ಕೆ ಪುಲ್ಲುಣಿ ಗ್ರಾಮವನ್ನು ಪುನರ್ದತ್ತಿಯಾಗಿ ನೀಡಿದ ವಿಷಯವಿದೆ.[೧೪೬] ಆರನೇ ವಿಕ್ರಮಾದಿತ್ಯನ ಆಡಳಿತಾವಧಿಯಲ್ಲಿ ಗೋವಿಂದರಸನು ಬನವಾಸಿ-೧೨೦೦೦ ಮತ್ತು ಸಾಂತಳಿಗೆ-೧೦೦೦ಗಳ ದಂಡನಾಯಕನಾಗಿದ್ದನು.[೧೪೭] ಇವನು ಅಬ್ಬಲೂರಿನ ಬ್ರಹ್ಮೇಶ್ವರ ದೇವಾಲಯಕ್ಕೆ ಮುರಿಗನಹಳ್ಳಿಯನ್ನು ದಾನಕೊಟ್ಟಿರುವನು.[೧೪೮] ಇವನ ಅಧಿಕಾರಿಯಾಗಿದ್ದ ಜಟಾಚೋಳನು ಚೌಡದಾನಪುರ ಮುಕ್ತೇಶ್ವರ ದೇವಾಲಯವನ್ನು ನಿರ್ಮಿಸಿದನು.[೧೪೯] ವಿಕ್ರಮಾದಿತ್ಯನ ಇನ್ನೊಬ್ಬ ಸಮರ್ಥ ದಳಪತಿಯಾದ ಅನಂತಪಾಲನ ಉಲ್ಲೇಖ ಹಾವೇರಿ ಮತ್ತು ಹಿರೇಹುಲ್ಯಾಳಗಳ ಶಾಸನಗಳಲ್ಲಿವೆ.[೧೫೦] ಬನವಾಸಿ-೧೨೦೦೦ ಮತ್ತು ಹಾನಗಲ್ಲ-೫೦೦ರ ಮಹಾಮಂಡಳೇಶ್ವರನಾಗಿ ಹಾನಗಲ್ಲ ಕದಂಬ ತೈಲಪನು ನೇಮಕಗೊಂಡನು. ಇವನ ಆಡಳಿತವನ್ನು ಮಡಲೂರು, ಹಾನಗಲ್ಲ, ಮಲಗುಂದ, ನರೇಗಲ್ಲ, ಗೆಜ್ಜೆಹಳ್ಳಿ, ಕರಗುದರಿ, ಅರಿಷಿಣಗುಪ್ಪಿ ಮತ್ತು ಶಿಗ್ಗಾವಿ ಶಾಸನಗಳು ಉಲ್ಲೇಖಿಸಿವೆ. ಬಾಸವೂರು-೧೪೦ನ್ನು ಕಲಿಯಮರಸನು ಆಳಿರುವನು.[೧೫೧] ಆರನೇ ವಿಕ್ರಮಾದಿತ್ಯನ ನಂತರ ಪಟ್ಟಕ್ಕೆ ಬಂದ ಮೂರನೇ ಸೋಮೇಶ್ವರನ ಅವಧಿಯಲ್ಲಿ ದಂಡನಾಯಕ ಪದ್ಮನಾಭರಸನು[೧೫೨] ಹಾಗೂ ಮಹಾಮಂಡಳೇಶ್ವರನಾಗಿ ಕದಂಬ ತೈಲಪನೇ ಮುಂದುವರೆದಿರುವನು.[೧೫೩]

ಇವರ ಮಾಂಡಳಿಕರಾಗಿ ಹಾನಗಲ್ಲ ಕದಂಬರು, ಗುತ್ತಲದ ಗುತ್ತರು, ನೂರುಂಬಾಡದ ಕದಂಬರು ತಮ್ಮ ಪ್ರದೇಶದಲ್ಲಿ ಮಾಂಡಳಿಕತ್ವವನ್ನು ನಿರ್ವಹಿಸಿದ್ದಾರೆ. ಕಲ್ಯಾಣ ಚಾಲುಕ್ಯರ ಕಾಲವು ದೇವಾಲಯ ದೃಷ್ಟಿಯಿಂದ

ಸುವರ್ಣಕಾಲ. ಇವರ ಆಡಳಿತಾವಧಿಯಲ್ಲಿ ಸಾಕಷ್ಟು ದೇವಾಲಯಗಳು ಮೈತಳೆದು ನಿಂತವು. ಅವುಗಳಿಗೆ ಸಂಬಂಧಿಸಿದಂತೆ ದಾನ, ಧರ್ಮಗಳನ್ನು ಉಲ್ಲೇಖಿಸುವ ಶಾಸನಗಳು ಬಹುಸಂಖ್ಯೆಯಲ್ಲಿ ದೊರೆಯುತ್ತವೆ.

ಕಲ್ಯಾಣ ಚಾಲುಕ್ಯರ ನಂತರ ಅವರ ಮುಖ್ಯ ಸಾಮಂತರಾಗಿದ್ದ ಕಲಚೂರಿಗಳು ಸ್ವತಂತ್ರ ಆಡಳಿತವನ್ನು ಕೈಗೆತ್ತಿಕೊಂಡಾಗ ಕರ್ನಾಟಕದಲ್ಲಿ ರಾಜಕೀಯ, ಸಾಮಾಜಿಕ, ಧಾರ್ಮಿಕ ಕ್ಷೇತ್ರಗಳಲ್ಲಿ ಗಮನಾರ್ಹ ಕ್ರಾಂತಿ ಹಾಗೂ ಬದಲಾವಣೆಗಳು ಕಂಡುಬಂದವು. ಕಲಚೂರಿ ಬಿಜ್ಜಳನು ಚಾಲುಕ್ಯ ಸಾಮ್ರಾಜ್ಯವನ್ನು ವಶಪಡಿಸಿ ಕೊಂಡುದಾಗಿ ಹೇಳಿದರೂ ಸಾಮ್ರಾಜ್ಯದ ದಕ್ಷಿಣಭಾಗ ಮಾತ್ರ ಅವನ ಹಿಡಿತದಿಂದ ಹೊರಗಾಗಿತ್ತು.[೧೫೪] ಬನವಾಸಿಯು ಅವನ ರಾಜ್ಯದ ದಕ್ಷಿಣದ ಭಾಗವಾಗಿದ್ದರಿಂದ ಹೊಯ್ಸಳರ ದಾಳಿ, ಕಲಚೂರಿಗಳ ಬಂಡಾಯ, ಚಾಲುಕ್ಯರ ಪತನ, ಸೇವುಣರ ಏಳಿಗೆಯ ಸನ್ನಿವೇಶದಿಂದ ಇಲ್ಲಿಯ ಪ್ರದೇಶವು ರಣರಂಗವಾಗಿತ್ತು. ಇಲ್ಲಿ ಹೇರಳವಾಗಿ ಸಿಗುವ ವೀರಗಲ್ಲುಗಳೇ ಇದಕ್ಕೆ ಸಾಕ್ಷಿ, ಇಂಥ ಪರಿಸ್ಥಿತಿಯಲ್ಲಿ ಎದ್ದ ದಂಗೆಯು ಮಠಮಾನ್ಯ ಗಳನ್ನೂ ಬಿಡಲಿಲ್ಲ. ಕ್ರಿ.ಶ.೧೧೯೨ರಲ್ಲಿ ಬಳ್ಳಿಗಾವೆಯ ಕಾಳಾಮುಖ ಪಂಥದ ಗುರು ವಾಮಶಕ್ತಿದೇವನನ್ನು ಸೆರೆಗೆ ಹಾಕಲಾಯಿತು.[೧೫೫] ಎಂಬುದು ಗಮನಾರ್ಹ ವಿಷಯ. ಮುಂದೆ ಕಲಚೂರಿ ಸಂಕಮನ ದುರ್ಬಲ ಆಳ್ವಿಕೆಯಲ್ಲಿ ಹೊಯ್ಸಳ ಸಾಮ್ರಾಜ್ಯವು ವಿಸ್ತಾರಗೊಂಡಿತು. ಅಲ್ಲದೆ ನಾಲ್ಕನೇ ಸೋಮೇಶ್ವರನ ನೇತೃತ್ವದಲ್ಲಿ ಕಲ್ಯಾಣ ಚಾಲುಕ್ಯರು ಮತ್ತೆ ಆಡಳಿತಕ್ಕೆ ಬಂದರು. ಈ ವಿಷಯವನ್ನು ಅಬ್ಬಲೂರಿನ ಶಾಸನ ಸ್ಪಷ್ಟಪಡಿಸುತ್ತದೆ. ಕುಮಾರ ಬಮ್ಮರಸ ದಂಡನಾಯಕ ಕಲಚೂರಿ ಕುಲವನ್ನು ನಿರ್ಮೂಲಗೊಳಿಸಿ ನಾಲ್ಕನೇ ಸೋಮೇಶ್ವರನನ್ನು ಪಟ್ಟಗಟ್ಟಿದಂತೆ ಈ ಶಾಸನವು ಮಹತ್ವದ ದಾಖಲೆಯನ್ನು ಒದಗಿಸುತ್ತದೆ. ಸೋಮೇಶ್ವರನು ಮರಳಿ ಅಧಿಕಾರಕ್ಕೆ ಬಂದರೂ ಚಾಲುಕ್ಯ ರಾಜ್ಯವನ್ನು ಸಮಗ್ರವಾಗಿ ಹಿಡಿತದಲ್ಲಿ ಇಟ್ಟುಕೊಳ್ಳಲು ಅವನಿಗೆ ಸಾಧ್ಯವಾಗಲಿಲ್ಲ. ನಂತರ ಚಾಲುಕ್ಯ ರಾಜ್ಯವನ್ನು ವಶಪಡಿಸಿಕೊಳ್ಳುವಲ್ಲಿ ಸೇವುಣರು ಮತ್ತು ಹೊಯ್ಸಳರು ಮುಖ್ಯ ಸ್ಪರ್ಧಾಳು ಗಳಾದರು. ಅದರಲ್ಲೂ ಹಾವೇರಿ ಜಿಲ್ಲೆಯು ಅವರಿಬ್ಬರ ರಾಜ್ಯಗಳ ಗಡಿಪ್ರದೇಶವಾಗಿದ್ದರಿಂದ ಸ್ಥಳೀಯ ಮಾಂಡಳೀಕರು ಘಾಸಿಗೊಳ್ಳಬೇಕಾಯಿತು. ಇಲ್ಲಿಯ ಭೂಪ್ರದೇಶ ಒಮ್ಮೆ ಹೊಯ್ಸಳರಿಗೂ ಒಮ್ಮೆ ಸೇವುಣರಿಗೂ ಹಸ್ತಾಂತರಗೊಳುತ್ತ ಸೇವುಣ ಸಿಂಘಣನ ಕಾಲದಲ್ಲಿ ಈ ಪ್ರದೇಶವು ಸೇವುಣರ ಗಟ್ಟಿ ಆಡಳಿತಕ್ಕೆ ಒಳಪಟ್ಟಿತ್ತು.

ಸೇವುಣರು ಸ್ವತಂತ್ರ ರಾಜರಾಗಿ ಬೆಳಕಿಗೆ ಬಂದದ್ದು ಕ್ರಿ.ಶ.೧೨ನೆಯ ಶತಮಾನದ ಉತ್ತರಾರ್ಧದಲ್ಲಾದರೂ ಅವರ ರಾಜಕೀಯ ವೃತ್ತಿಯು ಎರಡು ಶತಮಾನಗಳ ಹಿಂದೆಯೆ ಅಸ್ತಿತ್ವದಲ್ಲಿತ್ತು.[೧೫೬] ಅಂದರೆ ಕ್ರಿ.ಶ.೧೦ನೇ ಶತಮಾನದಿಂದಲೇ ಪ್ರಾರಂಭವಾಗುತ್ತದೆ. ಈ ವಂಶದ ಮೂಲವ್ಯಕ್ತಿ ಸೇವುಣ ಚಂದ್ರ. ಈ ವಂಶದ ಎಲ್ಲ ರಾಜರೂ ಜಿಲ್ಲೆಯಲ್ಲಿ ಆಳದ ಕಾರಣ ಅವರ ದೀರ್ಘ ಇತಿಹಾಸ ಇಲ್ಲಿ ಅಪ್ರಸ್ತುತ. ಈ ವಂಶದಲ್ಲಿ ಬರುವ ಎರಡನೇ ಮಲ್ಲುಗಿಯು ಚಾಲುಕ್ಯರ ಪರಮಾಧಿಕಾರವನ್ನು ಕಸಿದುಕೊಂಡ ಕಲಚೂರಿಗಳ ಪ್ರಭುತ್ವವನ್ನು ಒಪ್ಪಿಕೊಂಡು ಅಧೀನ ರಾಜನಾಗಿರುವುದರಿಂದ ತೃಪ್ತನಾಗದೆ ಸ್ವತಂತ್ರನಾಗಲು ಸಂಕಲ್ಪ ಮಾಡಿದ್ದನು. ಅವನ ಸಂಕಲ್ಪವನ್ನು ಐದನೇ ಭಿಲ್ಲಮನು ಈಡೇರಿಸಿದನು. ಈತನ ಆಡಳಿತಾವಧಿಯಲ್ಲಿ ಹೊಯ್ಸಳರು ಹಾವೇರಿ ಜಿಲ್ಲೆಯ ಭೂಪ್ರದೇಶವನ್ನು ತಮ್ಮದಾಗಿಸಿಕೊಂಡಿದ್ದರು. ಸೇವುಣ ಮತ್ತು ಹೊಯ್ಸಳರಿಗೆ ಕ್ರಿ.ಶ.೧೧೯೦ರಲ್ಲಿ

ಗದಗ ತಾಲೂಕಿನ ಸೊರಟೂರು ಬಳಿ ನಡೆದ ಯುದ್ಧದಿಂದ ಸೇವುಣರು ಹಿಂದೆ ಸರಿಯಬೇಕಾಯಿತು.[೧೫೭] ಮುಂದೆ ಬಂದ ಒಂದನೇ ಜೈತುಗಿಗೂ ಹೊಯ್ಸಳರ ಕೈಯಿಂದ ಈ ಜಿಲ್ಲೆಯ ಪ್ರದೇಶವನ್ನು ಕಿತ್ತುಕೊಳ್ಳಲು ಆಗಲಿಲ್ಲ. ಈ ಕಾರ್ಯವನ್ನು ಎರಡನೇ ಸಿಂಘಣನು ಬಹು ಯಶಸ್ವಿಯಾಗಿ ನಿರ್ವಹಿಸಿದನು. ಸಿಂಘಣನನ್ನು ಸೇವುಣ ರಾಜವಂಶದ ಮುಕುಟಮಣಿ ಎಂದು ಹೇಳಲಾಗಿದೆ.[೧೫೮] ಹೊಯ್ಸಳ ಬಲ್ಲಾಳನನ್ನು ಚಾಲುಕ್ಯ ರಾಜ್ಯದ ದಕ್ಷಿಣ ಭಾಗಗಳಿಂದ ಹೊರನೂಕಿದನು. ಹಾವೇರಿ ಜಿಲ್ಲೆಯು ಸೇವುಣರ ಆಡಳಿತಾವಧಿಯಲ್ಲಿ ಅವರ ರಾಜ್ಯದ ಭಾಗವಾಗಿ ಉಳಿಯಿತು. ಸಿಂಘಣನು ಗೆದ್ದುಕೊಂಡ ಈ ಪ್ರದೇಶಗಳನ್ನು ತನ್ನ ಆಪ್ತ ಸಚಿವ ಸರ್ವಾಧಿಕಾರಿ ಮಾಯಿದೇವನ ಆಡಳಿತಕ್ಕೆ ವಹಿಸಿಕೊಟ್ಟನು.[೧೫೯] ಈ ಅವಧಿಯಲ್ಲಿ ನಾರಗಖಂಡದ ನಾಳ್ಪ್ಬ್ರು ಬೊಮ್ಮಿಸೆಟ್ಟಿಯು ಸಾತೇನಹಳ್ಳಿಯಲ್ಲಿ ಶಂಕರನಾರಾಯಣದೇವರನ್ನು ಪ್ರತಿಷ್ಠಾಪಿಸಿ ದಾನ ಬಿಟ್ಟಿರುವನು.[೧೬೦] ರಟ್ಟಿಹಳ್ಳಿಯ ಕದಂಬೇಶ್ವರ ದೇವಾಲಯ ಸನ್ನಿಧಿಯಲ್ಲಿ ಮಲ್ಲೇಶ್ವರ, ರಾಜೇಶ್ವರ ಲಿಂಗಗಳನ್ನು ಪ್ರತಿಷ್ಠಾಪಿಸಿದನು.[೧೬೧] ಮತ್ತು ಸೊನ್ನಲಿಗೆಯ ಕಲಿಪಸಿದ್ದ ಮಲ್ಲಿಕಾರ್ಜುನ ದೇವರಿಗೆ ಮಂತ್ರವಾಡಿ ಗ್ರಾಮವನ್ನು ದಾನಮಾಡಿರುವನು.[೧೬೨] ಅಲ್ಲದೆ ಚಿಕ್ಕಮಲ್ಲೂರು ಧವಳೇಶ್ವರ ದೇವಾಲಯಕ್ಕೆ ಎಳಬಳ್ಳಿ ಗ್ರಾಮವನ್ನು ದಾನ ಕೊಟ್ಟಿರುವನು.[೧೬೩] ರಟ್ಟಿಹಳ್ಳಿ ಶಾಸನದಿಂದ ಈ ಹೊನ್ನಬೊಮ್ಮಸೆಟ್ಟಿಯು ಸಿಂಘಣನ ಕೊಂಕಣದ ಅಧಿಕಾರಿ ಆರಿಯಮಲ್ಲಿಸೆಟ್ಟಿಯ ಮಗನೆಂದೂ ಆರಿಯಮಲ್ಲಸೆಟ್ಟಿಯು ದ್ವಾರಸಮುದ್ರವನ್ನು ಗೆದ್ದು ಹೊಯ್ಸಳ ನರಸಿಂಹನ ಹನ್ನೆರಡು ಆನೆಗಳನ್ನು ಗೆದ್ದುಕೊಂಡಿದ್ದನೆಂದು ತಿಳಿದುಬರುತ್ತದೆ. ಸಿಂಘಣನ ಮಗ ಜೈತುಗಿ ಅಕಾಲಮರಣ ಹೊಂದಿದ್ದರಿಂದ ಉತ್ತರಾಧಿಕಾರವು ಅವನ ಮಗ ಕನ್ನರನಿಗೆ ದೊರೆಯಿತು. ಈತನ ಅಧಿಕಾರಿ ಚಾವುಂಡರಾಯ ಹಾವೇರಿ ಅಗ್ರಹಾರದ ದತ್ತಿಯನ್ನು ನವೀಕರಿಸಿದನು.[೧೬೪] ಅಲ್ಲದೆ ಗೋಪಾಲ ದೇವರ ಹೂದೋಟಕ್ಕೆ ವಿಜಯಾಪುರದ ಮಲ್ಲಿಸೆಟ್ಟಿ ಸುವರ್ಣ ದಾನ ಮಾಡಿದನೆಂಬ ವಿಚಾರವಿದೆ.[೧೬೫] ಕನ್ನರನ ನಂತರ ಅವನ ತಮ್ಮ ಮಹದೇವನು ಸೇವುಣರ ಸಿಂಹಾಸನವನ್ನು ಏರಿದನು. ಈತನ ಕಾಲದ ಚೌಡದಾನಪುರ ಶಾಸನದಲ್ಲಿ ಮಾಂಡಳಿಕ ಗುತ್ತರು ಅಲ್ಲಿಯ ಮುಕ್ತೇಶ್ವರ ದೇವಾಲಯಕ್ಕೆ ದಾನಬಿಟ್ಟಿರುವರು.[೧೬೬] ಸುಂಕಾಧಿಕಾರಿ ಬೈಚರಸನು ಹಾವೇರಿಯ ಸಿದ್ಧನಾಥ ದೇವರಿಗೆ ಸುಂಕದಾನ ನೀಡಿರುವನು.[೧೬೭] ಮಹದೇವನ ನಂತರ ಅವನ ಮಗ ಅಮಣನಿಗೆ ಪಟ್ಟವಾದರೂ ಕೃಷ್ಣನ ಮಗ ರಾಮಚಂದ್ರನು ಅದನ್ನು ಕಸಿದುಕೊಂಡನು. ರಾಮಚಂದ್ರನ ಪ್ರಧಾನಿ ಪರಶುರಾಮ ದೇವನು ಚೌಡದಾನಪುರದ ಮುಕ್ತೇಶ್ವರ ದೇವಾಲಯಕ್ಕೆ ಭೂದಾನ ಕೊಟ್ಟಿರುವನು.[೧೬೮] ಸುಂಕದ ಅಧಿಕಾರಿ ಹಾವೇರಿ ಸಿದ್ಧನಾಥ ದೇವರಿಗೆ ಸುಂಕದಾನ ನೀಡಿರುವನು.[೧೬೯] ರಾಮಚಂದ್ರನ ನಂತರ ಮೂರನೇ ಸಿಂಘಣನ ಕಾಲದಲ್ಲಿ ಮಲ್ಲಿಕಾಫರ್ ಕ್ರಿ.ಶ.೧೩೧೩ರಲ್ಲಿ ದೇವಗಿರಿಯ ಮೇಲೆ ದಾಳಿ ಮಾಡಿ ಅವನನ್ನು ಕೊಂದನು. ನಂತರ ರಾಮಚಂದ್ರನ ಅಳಿಯ ಹರಿಪಾಲದೇವನು ರಾಜ್ಯವನ್ನು ಪುನರುಜ್ಜೀವನಗೊಳಿಸಲು ಯತ್ನಿಸಿದನು. ಆದರೆ ಕ್ರಿ.ಶ.೧೩೧೮ರಲ್ಲಿ ದೆಹಲಿ ಸುಲ್ತಾನನಿಂದ ಕೊಲ್ಲಲ್ಪಟ್ಟನು. ಮೂರನೇ ಸಿಂಘಣನ ಮಗ ಮೂರನೇ ಮಲ್ಲುಗಿ ಕ್ರಿ.ಶ.೧೩೩೪ರಲ್ಲಿ ದೆಹಲಿ ಸುಲ್ತಾನರ ಮಾಂಡಳಿಕನಾಗಿದ್ದನು.[೧೭೦]

ಹೊಯ್ಸಳರೂ ಸಹ ಇಲ್ಲಿಯ ಭೂಪ್ರದೇಶವನ್ನು ಕೆಲಕಾಲ ಆಳಿದರು. ಬಂಕಾಪುರ ಅವರ ಇನ್ನೊಂದು ರಾಜಧಾನಿ ಆಗಿತ್ತು. ಅವರ ಆಡಳಿತವನ್ನು ಸೂಚಿಸುವ ಶಾಸನಗಳು ಇಲ್ಲಿ ದೊರೆಯುತ್ತವೆ. ಇಲ್ಲಿಯ ಪ್ರಮುಖ ಮಾಂಡಳಿಕರ ಆಡಳಿತದ ಬಗ್ಗೆ ಬರೆಯುವಾಗ ಹೊಯ್ಸಳರ ವಿಷಯವೂ ಅಲ್ಲಲ್ಲಿ ಕಾಣಿಸುತ್ತದೆ.

ಹೀಗಾಗಿ ಹೊಯ್ಸಳರ ಬಗ್ಗೆ ಪ್ರತ್ಯೇಕವಾಗಿ ಇಲ್ಲಿ ಬರೆಯದೆ ಇನ್ನು ಮುಂದೆ ಈ ಪ್ರದೇಶದ ಪ್ರಮುಖ ಮಾಂಡಳಿಕ ಮನೆತನದ ಬಗ್ಗೆ ವಿವರಿಸಲಾಗಿದೆ.

**ಮಾಂಡಳಿಕರು :** ಹಾವೇರಿ ಜಿಲ್ಲೆಯನ್ನು ಶಾತವಾಹನ, ಕದಂಬ, ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಹೊಯ್ಸಳರು, ಯಾದವ ವಿಜಯನಗರದ ಅರಸರು ಕ್ರಮವಾಗಿ ಆಳಿದರೆ ಚಲ್ಲಕೇತನ, ಹಾನಗಲ್ಲ ಕಂದಬ, ಗುತ್ತಲದ ಗುತ್ತ ನೂರುಂಬಾಡದ ಕದಂಬರು ಮಾಂಡಳಿಕರಾಗಿ ನೇರವಾಗಿ ಇಲ್ಲಿಯ ಆಡಳಿತವನ್ನು ನಡೆಸಿದ್ದಾರೆ. ಇಲ್ಲಿಯ ಧರ್ಮ, ಕಲೆ, ಸಂಸ್ಕೃತಿಗಳಿಗೆ ಆಶ್ರಯ, ಪ್ರೋತ್ಸಾಹ ಕೊಟ್ಟಿದ್ದಾರೆ.

**ಚಲ್ಲಕೇತನರು :** ರಾಷ್ಟ್ರಕೂಟರ ಬಲಗೈ ಬಂಟರಾಗಿ 'ಸತ್ಯ ಸಮರ ಸಂಘಟ್ಟನೋಪಲಬ್ದ ವಿಜಯಲಕ್ಷ್ಮೀ ನಿವಾಸಿತ ಚಲ್ಲಕೇತನ ಬಂಕೇಯರಸರ್' ಎಂದು ಹೊಗಳಿಸಿಕೊಂಡ ಚಲ್ಲಕೇತನರು[೧೭೧] ಬನವಾಸಿ ಪನ್ನಿಚ್ಛಾಸಿರದ ಜೊತೆಗೆ ಪಲಸಿಗೆ, ಮಾನ್ಯಖೇಟ, ತರ್ದವಾಡಿ, ಕೊಳನೂರು, ಲೋಕಾಪುರ, ತೊರಗಲೆ ಹೀಗೆ ಒಟ್ಟು ೩೧೧೦೨ ಗ್ರಾಮಗಳ ಆಳ್ವಿಕೆ ನಡೆಸಿದವರು.[೧೭೨] ಶಾಸನಗಳು ಪ್ರಸ್ತುತ ಮನೆತನವನ್ನು '......ಸಲ್ಲಕೇತನ', 'ವಿಕ್ರಮ ವಿಲಾಸನಿಲಯೊ ಮುಕುಲಕುಲೆ' ಎಂದು ಕರೆದಿವೆ.[೧೭೩] ರಾಷ್ಟ್ರಕೂಟರ ಸಮಕಾಲೀನ ಗುಣಭದ್ರಾಚಾರ್ಯರ **ಉತ್ತರ ಪುರಾಣವೂ** 'ಪದ್ಮಾಲಯ ಮುಕುಲಕುಲ ಪ್ರವಿಕಾಸನ ಸತ್ಪ್ರತಾಪ ತತಮಹಸಿ' ಎಂದು ಈ ಮನೆತನವನ್ನು ಹೆಸರಿಸಿದೆ.[೧೭೪] ಬಂದಳಿಕೆ ಶಾಸನದ ಆಧಾರದಿಂದ ಚಲ್ಲಕೇತನ ಮನೆತನದ ಮೂಲಪುರುಷ 'ಕುರುದೇವಯ್ಯ' ಎಂದು ತಿಳಿಯಬಹುದು.[೧೭೫]

ಈ ವಂಶದಲ್ಲಿ ರಾಷ್ಟ್ರಕೂಟ ಸೇನಾನಾಯಕನೂ ಕೊಳನೂರಾಧಿಪನಾಗಿದ್ದ ಧೋರನ ಮಗ ಬಂಕೇಯನು ಗಮನಾರ್ಹ ವ್ಯಕ್ತಿ ಆಗಿದ್ದಾನೆ. ಯುದ್ಧೋತ್ಸಾಹದಲ್ಲಿ ಅಪ್ರತಿಮ ಆಕಾಂಕ್ಷೆ ಹೊಂದಿದ್ದ ಬಂಕೇಯ ತಂದೆ ಯಂತೆ ರಾಷ್ಟ್ರಕೂಟರ ದಂಡನಾಯಕನಾಗಿದ್ದ. ರಾಷ್ಟ್ರಕೂಟ ಪ್ರಮುಖ ದೊರೆ ಮೂರನೇ ಗೋವಿಂದ ಕಾಲವಾದ ಮೇಲೆ ಅಪ್ರಾಪ್ತ ವಯಸ್ಕನಾದ ಅಮೋಘವರ್ಷನು ಪಟ್ಟಕ್ಕೆ ಬಂದಾಗ ರಾಷ್ಟ್ರಕೂಟ ಸಿಂಹಾಸನಕ್ಕೆ ಸಂಕಷ್ಟಗಳು ಎರಗಿದವು.[೧೭೬] ಇಂಥ ಅಪಾಯದ ಪರಿಸ್ಥಿತಿಯಲ್ಲಿ ನೃಪತುಂಗನಿಗೆ ಆಸರೆಯಾಗಿ ನಿಂತವರು ಅವನ ಚಿಕ್ಕಪ್ಪ ಗುಜರಾತ ಸುವರ್ಣವರ್ಷ ಮತ್ತು ಚಲ್ಲಕೇತನ ಬಂಕೇಯ.[೧೭೭] ಈತನ ಬಗ್ಗೆ ನವಲಗುಂದ ತಾಲೂಕು ಕೊಣ್ಣೂರು ಶಾಸನ ಸಮಗ್ರ ಮಾಹಿತಿಯನ್ನು ಕೊಡುತ್ತದೆ. ಅಲ್ಲದೆ ಹಾನಗಲ್ಲ ತಾಲೂಕು ಅರಿಷಿಣಗುಪ್ಪೆ, ಶಿಗ್ಗಾಂವ, ನಿಡಗುಂದಿ ಮತ್ತು ಸವಣೂರು ತಾಲೂಕು ಚಿಲ್ಲೂರು ಶಾಸನಗಳು ಬಂಕೇಯನನ್ನು ಪರಿಚಯಿಸು ತ್ತವೆ. ಇವೆಲ್ಲವೂ ನೃಪತುಂಗ ಅಮೋಘವರ್ಷನ ಶಾಸನಗಳಾಗಿದ್ದರಿಂದ ಬಂಕೇಯನು ಅಮೋಘವರ್ಷನ ಆಡಳಿತದಲ್ಲಿ ಸೇವೆ ಸಲ್ಲಿಸಿದನೆಂಬುದು ಸ್ಪಷ್ಟ. ಬಂಕೇಯನು ಕೊಳನೂರಿನಲ್ಲಿ ಜಿನಾಲಯವನ್ನು ಕಟ್ಟಿಸಿದನು. ಆ ಜಿನಾಲಯಕ್ಕೆ ನೃಪತುಂಗನು ತಲೆಯೂರನ್ನು ದಾನ ಕೊಟ್ಟನೆಂದು ಕೊಣ್ಣೂರು ಶಾಸನ ಉಲ್ಲೇಖಿಸಿದೆ.

ಬಂಕೇಯನ ಐದು ಮಕ್ಕಳಲ್ಲಿ ಕುಂದಟ್ಟೆ ಮತ್ತು ಲೋಕಟ್ಟೆಯರು ತಂದೆಯ ಜೊತೆಗೆ ಮತ್ತು ಅವನ ನಂತರವೂ ರಾಷ್ಟ್ರಕೂಟರ ಮೇಳ್ವಿಕೆಯಲ್ಲಿ ಸೇವೆ ಸಲ್ಲಿಸಿದವರಲ್ಲಿ ಪ್ರಮುಖರು. ತಂದೆ ಬಂಕೇಯನು ಬನವಾಸಿ ಆಡಳಿತವನ್ನು ನೋಡಿಕೊಳ್ಳುತ್ತಿರುವಾಗ ಕುಂದಟ್ಟೆಯು ನಿಡಗುಂದಿಗೆ-೧೨ರ ಅಧಿಕಾರಿಯಾಗಿದ್ದನು.[೧೭೮] ಇವನು ನಿಡಗುಂದಿಯ ಕುಪ್ಪಣ್ಣನ ದೇಗುಲದ ಮಹಾದೇವರಿಗೆ 'ಬಂಕೆಯಂಗೆ ಧಮ್ಮಮಕ್ಕೆನ್ದು' ಭೂದಾನ

ವನ್ನು ಕೊಟ್ಟಿರುವನು. ಈತನ ಮರಣದ ಸಂಗತಿಯನ್ನು ಆಂಧ್ರಪ್ರದೇಶದ ಅನಂತಪುರ ಜಿಲ್ಲೆ ಮಡಕಸಿರಾ ತಾಲೂಕು ಹರೇಸಮುದ್ರದಲ್ಲಿರುವ ಹೆಂಜೇರು ಕೆರೆಯ ಮಧ್ಯದ ಶಾಸನ ಕುಂದಟ್ಟೆಯು 'ಮೂವತ್ತು ದಿನ ಸನ್ಯಾಸ ವ್ರತವನ್ನು' ಮಾಡಿ ಸಮಾಧಿ ಮರಣವನ್ನು ಹೊಂದಿದನೆಂದು ಹೇಳುತ್ತದೆ.[೧೭೯]

ಬಂಕೇಯನ ಇನ್ನೊಬ್ಬ ಮಗ ಲೋಕಾದಿತ್ಯನಿಗೆ ಸಂಬಂಧಿಸಿದ ಶಾಸನಗಳು ಜಿಲ್ಲೆಯ ಕುಣಿಮೆಳ್ಳಳ್ಳಿ, ಗುಡ್ಡದ ಚೆನ್ನಾಪುರ, ಮಂತಗಿ, ಹಲಸೂರು, ಬ್ಯಾಡಗಿ, ಸಿಡೆನೂರು, ಹೊನ್ನತ್ತಿ, ಅಣಜಿ, ಶಿರಗಂಬಿ, ಮಾಸಣಗಿಗಳಲ್ಲಿ ಲಭ್ಯವಾಗಿವೆ. ಇವೆಲ್ಲವೂ ರಾಷ್ಟ್ರಕೂಟ ಎರಡನೇ ಕೃಷ್ಣನ ಮೇಲ್ಬಾಳಿಕೆಯನ್ನು ಹೇಳುತ್ತವೆ. ಕ್ರಿ.ಶ. ೯೦೨ರ ಬಂದಳಿಕೆ ಶಾಸನ 'ಬನವಾಸಿ-ಪನ್ನಿರ್ಚ್ಛಾಸಿರಿಮುಂ, ಪಲಸಿಗೆ ಪನ್ನಿರ್ಚ್ಛಾಸಿರಮುಂ, ಮಾಳ್ವಲೆವ ಮೂರುಸಾಸಿರ ಮುರಾಳನ್ಯರ್ಮೂವತ್ತುಂ ಲೋಕಾಪುರ ಪನ್ನೆರಡು ತೊರೆಗೆರೆಯರವತ್ತು ಇನ್ತು ಮೂವತ್ತೊರ್ಚ್ಛಾಸಿರದ ನೂರೆರಡು ಬಾಡಮಂ ಲೋಕಟೆಯರಾಳೆ' ಎಂದು ಉಲ್ಲೇಖಿಸಿದೆ. ಇದರಿಂದ ಲೋಕಟೆಯ ಆಡಳಿತ ವ್ಯಾಪ್ತಿ ಅರಿವಾಗುತ್ತದೆ.[೧೮೦] ಲೋಕಾಪುರ ಶಾಸನ ಲೋಕಟೆಯನ್ನು 'ಕೃಷ್ಣನ ಮೈದುನ' ಎಂದು ಕರೆದಿದೆ. ರಾಷ್ಟ್ರಕೂಟರಿಗೂ ಚಲ್ಲಕೇತನ ಮನೆತನಕ್ಕೂ ರಕ್ತಸಂಬಂಧ ಇತ್ತೆಂದು ಇದರಿಂದ ಊಹಿಸಿಲು ಅವಕಾಶವಿದೆ. ಅಮೋಘವರ್ಷ ನೃಪತುಂಗ ಹಾಗೂ ಬಂಕೇಯನ ಕಾಲದಲ್ಲಿ ಜಿನಸೇನಾಚಾರ್ಯರಿಂದ ರಚಿಸಲ್ಪಟ್ಟ 'ಪೂರ್ವಪುರಾಣ'ದ ಮುಂದಿನ ಭಾಗವಾದ 'ಉತ್ತರಪುರಾಣ'ವನ್ನು ಗುಣಭದ್ರಾಚಾರ್ಯರು ಲೋಕಾದಿತ್ಯನ ಕಾಲದಲ್ಲಿ ಪೂರ್ಣಗೊಳಿಸಿದರು. ಈ ಉತ್ತರ ಪುರಾಣವು ಚಲ್ಲಕೇತನ ಮನೆತನದ ಬಗ್ಗೆ ಸ್ಪಷ್ಟ ಬೆಳಕನ್ನು ಬೀರಿದೆ. ಇದರಲ್ಲಿ ಬಂಕೇಯ, ಕುಂದಟ್ಟೆ, ಲೋಕಟೆಯರನ್ನು ಕ್ರಮವಾಗಿ 'ಚಲ್ಲಕೇತನ' 'ಚಲ್ಲಧ್ವಜ' 'ಚಲ್ಲಪತಾಕ' ಎಂದು ಕರೆದಿದೆ ಮತ್ತು ಲೋಕಾದಿತ್ಯನು ತನ್ನ ತಂದೆ ಬಂಕೇಯನ ಹೆಸರಲ್ಲಿ ಬಂಕಾಪುರ ಪಟ್ಟಣವನ್ನು ರಚಿಸಿದನೆಂದು ತಿಳಿಸುತ್ತದೆ.[೧೮೧]

ಬಂಕೇಯನ ಇನ್ನೊಬ್ಬ ಮಗ ಧೋರನನ್ನು ಇಟಗಿ ಮತ್ತು ನರಗುಂದ ತಾಲೂಕ ದಂಡಾಪುರ ಶಾಸನಗಳು ಪರಿಚಯಿಸುತ್ತದೆ. ಈತನ ಶಾಸನಗಳು ಮೂರನೇ ಇಂದ್ರನ ಆಳ್ವಿಕೆಯ ಕಾಲದ್ದಾಗಿವೆ. ಕ್ರಿ.ಶ.೮೧೫-೧೬ರಲ್ಲಿ ಈತನು ಬನವಾಸಿ ನಾಡನ್ನು ಆಳುತ್ತಿರುವಾಗ ಕಡುವಣ್ಣಗಣ್ಣ-೭೦, ಇಟ್ಟಿಗೆ-೩೦ಕ್ಕೆ ಆಯ್ಯಣ್ಣನೆಂಬವ ನಾಳ್ಗಾವುಂಡನಾಗಿದ್ದನೆಂದು ಇಟಗಿ ಶಾಸನ ತಿಳಿಸುತ್ತದೆ.[೧೮೨] ನರಗುಂದ ತಾಲೂಕಿನ ದಂಡಾಪುರದ ಕಣ್ಣಮಗೆರೆ ಧೋರನ ಕಾಲದಲ್ಲಿ ರಚಿತವಾದ ಸುಪ್ರಸಿದ್ಧ ಕೆರೆಯಾಗಿದೆ.[೧೮೩]

ಕ್ರಿ.ಶ.೯೧೫ರ ಬಂಕಾಪುರ ಬಳಿಯ ಬಿಸನಹಳ್ಳಿ[೧೮೪], ಶಿಗ್ಗಾಂವ[೧೮೫] ಶಾಸನಗಳು ಇಂದ್ರವಲ್ಲಭನ ಅಧಿಕಾರದಲ್ಲಿ ಬಂಕೇಯರಸನ ಆಡಳಿತವನ್ನು ಉಲ್ಲೇಖಿಸುತ್ತವೆ. ಕ್ರಿ.ಶ.೯೧೮ರ ಹಾವಣಗಿ ಶಾಸನ ಮಹಾಸಾಮಂತ ಬಂಕೇಯ ಅಧಿಕಾರದಲ್ಲಿರುವಾಗ ಎಡೆವೊಳಲ್-೭೦ರ ಸುಂಕವೆಗ್ಗಡೆ ಕಾಮರಸ ಅಲ್ಲಿಯ ಕಲಿದೇವರಿಗೆ ದೀಪದಾನ ಕೊಟ್ಟಿರುವನು. ಚಲ್ಲಕೇತನ ಮನೆತನದ ಸಮರ್ಥವಂತಿಕೆಯನ್ನು ಪ್ರಶ್ನಿಸುವಂತೆ ರಾಷ್ಟ್ರಕೂಟ ಮೂರನೇ ಇಂದ್ರನು ಸು.೧೦ನೇ ಶತಮಾನದಲ್ಲಿ ಬನವಾಸಿ-೧೨೦೦೦ವನ್ನು ಎರಡನೇ ಬಂಕೇಯರಸ ಮತ್ತು ಶಂಕರಗಂಡನಿಗೆ ಇಬ್ಭಾಗಿಸಿ ಆಳ್ವಿಕೆಗೆ ಕೊಟ್ಟಿರುವನು.[೧೮೬]

ಮೇಲೆ ವಿವರಿಸಿದ ವ್ಯಕ್ತಿಗಳೆಲ್ಲ ಬಂಕೇಯನ ಮಕ್ಕಳಾದರೆ ಒಂದನೇ ಕಲಿವಿಟ್ಟ ಲೋಕಾದಿತ್ಯನ ಮಗನಾಗಿರುವನು. ಇವನ ಆಳ್ವಿಕೆಯ ಶಾಸನಗಳು ರಾಷ್ಟ್ರಕೂಟ ಮೂರನೆಯ ಅಮೋಘವರ್ಷ ಹಾಗೂ ಮೂರನೆಯ ಕೃಷ್ಣನ ಕಾಲದ್ದಾಗಿವೆ. ಈತನು ತನ್ನ ತಂದೆಯ ಆಡಳಿತಾವಧಿಯಲ್ಲಿ ಪುನ್ನವಂತಿ-೧೨ರ ಅಧಿಕಾರಿಯಾಗಿದ್ದನು.[೧೮೭] ಇವನು ಬನವಾಸಿ ಮಂಡಲಾಧಿಪತಿಯಾದಾಗ ಜಿಕ್ಕಿಯಬ್ಬೆಯು ನಾಗರಖಂಡದ ನಾಳ್ಗಾವುಂಡಿಯಾಗಿ ನೇಮಕಗೊಂಡಿರುವಳು.[೧೮೮] ಕ್ರಿ.ಶ.೯೪೫-೪೯ರ ಕ್ಯಾಸನೂರು ಶಾಸನದಲ್ಲಿ ಉಲ್ಲೇಖಗೊಂಡ ಎರಡನೇ ಕಲಿವಿಟ್ಟರಸನು ರಾಷ್ಟ್ರಕೂಟರ ಸಾಮಂತಿಕೆಯನ್ನು ನಿರ್ವಹಿಸಿದ ಕೊನೆಯ ದೊರೆ. ಇವನ ತರುವಾಯ ಕ್ರಿ.ಶ.೯೪೫ ರಿಂದ ಗಭಿಂದರನೆಂಬವನು ಬನವಾಸಿಯ ಆಡಳಿತಗಾರನಾಗಿ ಮುಂದುವರೆದಿರುವನು.[೧೮೯] ಮುಂದೆ ಈ ಮನೆತನದಲ್ಲಿ ಚಟ್ಟಯ್ಯ, ಕಲಿಬಿಟ್ಟಯ್ಯ ಎಂಬ ಹೆಸರುಗಳು ಅಲ್ಲಲ್ಲಿ ಗೋಚರಿಸಿವೆ.




(ಆಧಾರ : ಚನ್ನಕ್ಕ ಪಾವಟೆ, ರಾಷ್ಟ್ರಕೂಟ ಸಾಮಂತ ಚಲ್ಲಕೇತನರು)

## ಕದಂಬರ ಶಾಖೆಗಳು

ಈ ಹಿಂದೆ ಹೇಳಿದಂತೆ ಕದಂಬರು ಬಾದಾಮಿ ಚಾಲುಕ್ಯರಿಗೆ ಸೋತು ಚಕ್ರಾಧಿಪತ್ಯವನ್ನು ಕಳೆದುಕೊಂಡ ಮೇಲೆ ೧೦ನೇ ಶತಮಾನದಿಂದ ೧೪ನೇ ಶತಮಾನದವರೆಗೆ ಕರ್ನಾಟಕದ ಇತರ ಪ್ರದೇಶಗಳಲ್ಲಿ ಚಿಕ್ಕಪುಟ್ಟ ನಾಡುಗಳನ್ನು ಕಟ್ಟಿಕೊಂಡು ಮಾಂಡಳಿಕರಾಗಿ ರಾಜ್ಯಭಾರ ಮಾಡಿದರು. ಅವುಗಳಲ್ಲಿ ಮೂಲ ವಂಶದಷ್ಟೇ ಮಹತ್ವವನ್ನು ಹೊಂದಿದ ಮೊದಲ ಎರಡು ಶಾಖೆಗಳೆಂದರೆ ಹಾನಗಲ್ಲ ಕದಂಬರು ಮತ್ತು ಗೋವೆಯ ಕದಂಬರು. ಹಾನಗಲ್ಲ ಕದಂಬರು ಹಾನಗಲ್ಲನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರೆ ಗೋವೆಯ ಕದಂಬರ ರಾಜಧಾನಿಗಳು ಗೋವೆ, ಅನಿಲಾಪುರ, ಚಂದ್ರಾಪುರು.[೯೦] ಮೊರೆಸ್ ಮತ್ತು ಬಿ.ಎಲ್.ರೈಸ್ ಅವರುಗಳು[೯೧] ಇನ್ನೂ ಕೆಲವು ಶಾಖೆಗಳನ್ನು ಗುರುತಿಸಿದ್ದಾರೆ.[೯೨] ಈ ಶಾಖೆಗಳಲ್ಲಿ ಪ್ರಸ್ತುತ ಜಿಲ್ಲೆಗೆ ಸಂಬಂಧಿಸಿದಂತೆ ಮುಖ್ಯವಾಗಿ ಹಾನಗಲ್ಲ ಕದಂಬರು, ಬಂಕಾಪುರ ಕದಂಬರು ಹಾಗೂ ರಟ್ಟಿಹಳ್ಳಿ ಕಡಂಬರ ಬಗ್ಗೆ ಇಲ್ಲಿ ವಿವರಿಸಲಾಗಿದೆ.

## ಹಾನಗಲ್ಲ ಕದಂಬರು

ಬನವಾಸಿ ಕದಂಬರ ಉತ್ತರಾಧಿಕಾರಿಗಳು ತಾವೆಂದು ಹೇಳಿಕೊಂಡ ಹಾನಗಲ್ಲ ಕದಂಬರು ಕಲ್ಯಾಣ ಚಾಲುಕ್ಯರ ನಿಷ್ಠಾವಂತ ಮಾಂಡಳಿಕರೆನಿಸಿಕೊಂಡರು. ಮೂಲ ಕದಂಬರಂತೆ ಇವರೂ 'ಬನವಾಸಿ ಪುರಾವರಾಧೀಶ್ವರ'ರೆಂದು ತಮ್ಮನ್ನು ಕರೆದುಕೊಂಡಿದ್ದಾರೆ. ಹಾನಗಲ್ಲಿನ ಕದಂಬರಿಗೆ ಪಾನುಂಗಲ್ಲ-೫೦೦ ನಾಡಿನ ಮೇಲೆ ಪಾರಂಪರ್ಯದ ಅಧಿಕಾರವಿದ್ದಿತು. ಇವರು ಒಮ್ಮೆಮ್ಮೆ ಬನವಾಸಿ ನಾಡಿಗೂ ತಮ್ಮ ಅಧಿಪತ್ಯವನ್ನು ವಿಸ್ತರಿಸಿಕೊಂಡಿದ್ದರು. ಆದರೆ ಬನವಾಸಿಯು ಕಾಲಕಾಲಕ್ಕೆ ಬೇರೆ ಬೇರೆ ಸಾಮಂತಾಧಿಕಾರಿಗಳ ಒಡೆತನಕ್ಕೆ ಒಳಪಟ್ಟಿತ್ತೆಂಬುದರಿಂದ, ಹಾನಗಲ್ಲಿನ ಕದಂಬರಿಗೆ ಬನವಾಸಿಯ ಮೇಲೆ ಪಾರಂಪರ್ಯಾಧಿಕಾರವು ಇದ್ದಿರಲಾರದು.[೯೩] ಇವರದು ಸಿಂಹಲಾಂಛನ, ಶಾಖಾಚರೇಂದ್ರಧ್ವಜ (ಹನುಮಂತ) ಮತ್ತು ಕುಲದೇವತೆ ಜಯಂತಿ ಮಧುಕೇಶ್ವರ. ಇವರ ಮೂಲ ವಂಶಾವಳಿಯನ್ನು ಕುರಿತು ಕರಗುದರಿ ಶಾಸನ ವಿವರಿಸುತ್ತದೆ[೯೪]. ಆ ಪ್ರಕಾರ ಆಳ್ವಿಕೆಯನ್ನು ನಡೆಸಿದವರು ಒಂದನೇ ಮಯೂರವರ್ಮ[೯೫], ಕೃಷ್ಣವರ್ಮ, ಒಂದನೇ ನಾಗವರ್ಮ, ವಿಷ್ಣುವರ್ಮ, ಮೃಗವರ್ಮ, ಸತ್ಯವರ್ಮ, ವಿಜಯವರ್ಮ, ಜಯವರ್ಮ, ಎರಡನೇ ನಾಗವರ್ಮ, ಮೊದಲನೇ ಶಾಂತಿವರ್ಮ, ಮೊದಲನೇ ಕೀರ್ತಿವರ್ಮ, ಆದಿತ್ಯವರ್ಮ, ಚಟ್ಟಯ್ಯ, ಜಯವರ್ಮ. ಜಯವರ್ಮನ ತಂದೆ ಚಟ್ಟಯ್ಯನೇ ಹಾನಗಲ್ಲ ಕದಂಬರ ಮೂಲ ಪುರುಷ. ಈತನು ಕ್ರಿ.ಶ.೯೬೯ರಲ್ಲಿ ರಾಷ್ಟ್ರಕೂಟರ ಪೇರ್ಗಡೆಯಾಗಿ ಮುಂದೆ ಸಾಮಂತನಾಗಿ ಆಳಿರುವನು.[೯೬] ಶಿರಸಿ ಬಳಿಯ ಯಸಳೆಯಲ್ಲಿ ಈತನ ನಾಲ್ಕು ಶಾಸನಗಳಿವೆ. ಇವನು ಬನವಾಸಿ-೧೨೦೦೦, ಸಾಂತಳಿಗೆ-೧೦೦೦ಗಳನ್ನು ಆಳುತ್ತಿದ್ದು ಕಾಲಾಂತರದಲ್ಲಿ ರಾಷ್ಟ್ರಕೂಟರಿಂದ ಚಾಲುಕ್ಯರ ಅಧಿಕಾರ ವ್ಯಾಪ್ತಿಗೆ ಒಳಪಟ್ಟ ಈತನು ಚಾಲುಕ್ಯ ಎರಡನೇ ತೈಲಪನ ಮಾಂಡಳಿಕನಾಗಿ ಆಳ್ವಿಕೆ ನಡೆಸಿದನು. ನಂತರದ ಚಾಲುಕ್ಯ ದೊರೆ ಸತ್ಯಾಶ್ರಯನ ಕಾಲದಲ್ಲೂ ಆಡಳಿತ ನಿರ್ವಹಿಸಿದ ಬಗ್ಗೆ ದೇವತೆ ಮನೆ ಶಾಸನ ಉಲ್ಲೇಖಿಸಿದೆ.[೯೭] ಸತ್ಯಾಶ್ರಯನು ತನ್ನ ಅಳಿಯ, ಪಂಪಾದೇವಿಯ ಪತಿಯಾದ ಕುಂದಮರಸನನ್ನು ಬನವಾಸಿ ಪ್ರಾಂತದ ಮಾಂಡಳಿಕನನ್ನಾಗಿ ನಿಯಮಿಸಲು

ಜಯವರ್ಮನ ಮಗ ಚಟ್ಟಯ್ಯನು ಅವನ ಅಧೀನನಾಗಿ ಆಳ್ವಿಕೆ ನಡೆಸಿರುವನು. ಚಾಲುಕ್ಯ ಎರಡನೇ ಜಯಸಿಂಹನ ಕಾಲದಲ್ಲಿ ರಾಜಧಾನಿ ಮಳಖೇಡದ ಮೇಲೆ ದಾಳಿಯಾದಾಗ ಇವನು ಚಾಲುಕ್ಯರಿಗೆ ನೆರವಾಗಿ 'ಕಟಕದ ಗೋವ' ಎಂಬ ಬಿರುದನ್ನು ಪಡೆದಿರುವನು. ಮಾನ್ಯಖೇಟದ ಲೂಟಿಯನ್ನು ನಿಗ್ರಹಿಸುವಲ್ಲಿ ಚಟ್ಟಯ್ಯನು ಅತ್ಯಂತ ಪ್ರಮುಖ ಪಾತ್ರವಹಿಸಿದ್ದು ಇತಿಹಾಸ ಪುಟಗಳಲ್ಲಿ ದಾಖಲಾಗಿದೆ.[೧೯೮] ಎರಡನೇ ಜಯಸಿಂಹನ ಉಪ್ಪುಣಸಿ[೧೯೯] ಮತ್ತು ಕುಳೆನೂರು[೨೦೦] ಶಾಸನಗಳು ಬನವಾಸಿ-೧೨೦೦೦ದ ಮಾಂಡಳಿಕ ಕುಂದರಾಜನ ಮಹಾದೇವಿ ಕುಂದಬ್ಬರಸಿ ಅಲ್ಲಿಯ ದೇವಾಲಯಕ್ಕೆ, ಮಠಕ್ಕೆ ದಾನ ಕೊಟ್ಟಿರುವುದನ್ನು ತಿಳಿಸುತ್ತವೆ. ಇವೆರಡೂ ದೇವಾಲಯಗಳು ತ್ರಿಕೂಟ ದೇವಾಲಯಗಳಾಗಿವೆ.

ಕೀರ್ತಿವರ್ಮನ ಬನವಾಸಿ ಮತ್ತು ಎರಡನೇ ತೈಲಪನ ಕರಗುದರಿ ಶಾಸನಗಳ ದಾಖಲೆಗಳಿಂದ ಚಟ್ಟಯ್ಯನಿಗೆ ಜಯಸಿಂಹನೆಂಬ ಮಗನಿದ್ದನೆಂದು ತಿಳಿದುಬರುತ್ತದೆ. ಆದರೆ ಇವನು ಈ ಪ್ರದೇಶದಲ್ಲಿ ಆಳಿದಂತೆ ತೋರುವುಲ್ಲ. ಮುಂದಿನ ೬೦ ವರ್ಷಗಳ ಕಾಲ ಹಾನಗಲ್ಲ ಮತ್ತು ಬನವಾಸಿ ಪ್ರದೇಶವನ್ನು ಬಂಕಾಪುರ ಕದಂಬರು ಆಳಿದರು.[೨೦೧]

## ಬಂಕಾಪುರ ಕದಂಬರು

ಈ ಮನೆತನದಲ್ಲಿ ಹರಿಕಾಂತದೇವ, ಮಯೂರವರ್ಮ, ಹರಿಕೇಸರಿ, ತೋಯಿಮದೇವರನ್ನು ಗಮನಿಸಬಹುದು. ಮಯೂರವರ್ಮನಿಗೆ ಸಂಬಂಧಿಸಿದಂತೆ ಶಿಗ್ಗಾವಿ ತಾಲೂಕು ಹೊಟ್ಟೂರು ಶಾಸನವು[೨೦೨] 'ಮಹಾಮಂಡಳೇಶ್ವರ ಮಯೂರವರ್ಮ ಬನವಾಸಿ ಪನ್ನಿರ್ಚ್ಛಾಸಿರಮುಮಂ ಪಾನುಂಗಲ್ಲೈನ್ನೂರುಮನೇಕಾಯತ ಪದಿನಾಳ್ದು ಸುಖಸಂಕಥಾ ವಿನೋದದೊಳಿರೆ' ಎಂದು ಸೂಚಿಸಿದೆ. ಈತನ ಸಮರ್ಥವಂತಿಕೆಯನ್ನು ಮೆಚ್ಚಿ ಚಾಲುಕ್ಯರು ಇವನೊಂದಿಗೆ ರಕ್ತಸಂಬಂಧ ಬೆಳೆಸಿರುವರು. ಚಕ್ರವರ್ತಿ ಎರಡನೇ ಜಯಸಿಂಹನ ಸೋದರಿ ಅಕ್ಕಾದೇವಿಯನ್ನು ಮಯೂರವರ್ಮನು ವಿವಾಹವಾಗಿರುವನು. ಇವಳು ಕಿಸುಕಾಡು-೭೦ನ್ನು ಆಳುತ್ತಿದ್ದಳು. ಇವರಿಗೆ ಮೂರು ಜನ ಮಕ್ಕಳಿದ್ದದ್ದು ತಿಳಿದುಬರುತ್ತದೆ.[೨೦೩] ಅವರು ಹರಿಕೇಸರಿ, ತೋಯಿಮದೇವ ಮತ್ತು ಹರಿಕಾಂತದೇವ. ಮಯೂರವರ್ಮನು ಬನವಾಸಿ ಪನ್ನಿರ್ಚ್ಛಾಸಿರವನ್ನು ಆಳುತ್ತಿರುವಾಗ ಹಾವಣಿಗೆಯ ಮೂಲಸ್ಥಾನ ಕಲಿದೇವಸ್ವಾಮಿಗೆ ಊರಾಳ್ವಿಕೆಯ ಪ್ರಭು ಸಾಮಗಾವುಂಡ ಹಾಗೂ ಇತರ ಅಧಿಕಾರಿಗಳ ಸಮ್ಮುಖದಲ್ಲಿ ದಾನಬಿಟ್ಟಿರುವನು.[೨೦೪] ಬೆಳವಂತಿಯ ಸ್ವಯಂಭು ಕೋಗಲೇಶ್ವರದೇವರ ದೇವಸ್ಥಾನದ ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆಂದು ಆಚಾರ್ಯ ದೇವರಾಸಿ ಪಂಡಿತರ ಪಾದ ತೊಳೆದು ದತ್ತಿ ಕೊಟ್ಟಿರುವನು.[೨೦೫] ಇವನ ಉತ್ತರಾಧಿಕಾರಿಯಾಗಿ ಮಗ ಹರಿಕೇಸರಿ ಕ್ರಿ.ಶ.೧೦೪೪ ರಿಂದ ೧೦೫೫ ರವರೆಗೆ ಬನವಾಸಿ, ಹಾನಗಲ್ಲುಗಳ ಅಧಿಕಾರವನ್ನು ನಿರ್ವಹಿಸಿದನು.[೨೦೬] ಚಾಲುಕ್ಯ ಚಕ್ರವರ್ತಿ ಒಂದನೇ ಸೋಮೇಶ್ವರನ ಪ್ರತಿನಿಧಿಯಾಗಿ ಆರನೇ ವಿಕ್ರಮಾದಿತ್ಯ ಬನವಾಸಿ ಹಾಗೂ ಗಂಗವಾಡಿ ಪ್ರದೇಶದ ಅಧಿಪತ್ಯ ಕೈಗೊಂಡಿದ್ದ ಕಾಲದಲ್ಲಿ ವಿಕ್ರಮಾದಿತ್ಯನ ಅಧೀನನಾಗಿ ಹರಿಕೇಸರಿ ಆಳ್ವಿಕೆ ನಡೆಸಿದನು. ಈ ಸಂದರ್ಭದಲ್ಲಿ ಹಾನಗಲ್ಲನ್ನು ಕೇಂದ್ರವನ್ನಾಗಿಸಿಕೊಂಡು ಬಂಕಾಪುರವನ್ನು ವ್ಯಾಪಾರಿ ಕೇಂದ್ರವನ್ನಾಗಿಸಿದನು. ಬಂಕಾಪುರದ ಕದಂಬೇಶ್ವರ ದೇವಸ್ಥಾನ ಈ ಮನೆತನದ ಬಹುದೊಡ್ಡ ಕೊಡುಗೆ. ಮಹಾಮಂಡೇಳ್ವರ ಹರಿಕೇಸರಿದೇವ ಮತ್ತು ಸ್ಥಳೀಯ

ಸಂಘಗಳಿಂದ ಕದಂಬೇಶ್ವರ ದೇವಾಲಯಕ್ಕೆ ನಿಡಗುಂದಗೆ ಪನ್ನೆರಡರ ಬಳಿಯ ಪಳ್ಳವೂರ ಗ್ರಾಮವನ್ನು ಸೋಮೇಶ್ವರ ಪಂಡಿತರ ಕಾಲಂ ಕರ್ಚಿ ದಾನ ಬಿಟ್ಟಿರುವನು.[೨೦೭] ಮುಂದೆ ಮಯೂರವರ್ಮನ ಇನ್ನೊಬ್ಬ ಮಗ ತೋಯಿಮದೇವ ಬನವಾಸಿ ಹಾಗೂ ಹಾನಗಲ್ಲ ವಿಭಾಗಗಳ ಅಧಿಕಾರವನ್ನು ನಿರ್ವಹಿಸಿರುವನು (ಕ್ರಿ.ಶ.೧೦೬೬). ಈತನ ಆಳ್ವಿಕೆಯ ಅವಧಿಯಲ್ಲಿ ಬಂಕಾಪುರದ ಇಂದ್ರೇಶ್ವರ ಹಾಗೂ ಹೊಟ್ಟೂರಿನ ಕೇಶವೇಶ್ವರ ದೇವಾಲಯಗಳು ವೈಭವದಿಂದ ಇದ್ದುವೆಂದು ಅವುಗಳ ದಾನದತ್ತಿಗಳ ಶಾಸನಗಳಿಂದ ಹೇಳ ಬಹುದು.[೨೦೮] ಈತನ ನಂತರ ಹರಿಕಾಂತದೇವ ಈ ಪ್ರದೇಶದ ಆಳ್ವಿಕೆ ನಡೆಸಿರುವನು(ಕ್ರಿ.ಶ.೧೦೭೨). ಮಹಾಮಂಡೇಳ್ವರ ಹರಿಕಾಂತದೇವ, ನೊಳಂಬ ಉದಯಾದಿತ್ಯ ಹಾಗೂ ದಂಡನಾಯಕ ಸೋಮೇಶ್ವರಭಟ್ಟ ಮೂವರೂ ಬಂಕಾಪುರದಲ್ಲಿ ಬೀಡುಬಿಟ್ಟಾಗ ಬಂಕಾಪುರದ ಲೋಕಿಸೆಟ್ಟಿ ಗುಡಗುಡಿಯ ಕಲಿದೇವಸ್ವಾಮಿ ದೇವಸ್ಥಾನವನ್ನು ನಿರ್ಮಿಸಿ ದಾನಗಳನ್ನು ಕೊಟ್ಟಿರುವನು.[೨೦೯] ಕ್ರಿ.ಶ.೧೦೭೧ರಲ್ಲಿ ನೊಳಂಬ ಉದಯಾದಿತ್ಯನು ಕಲಕೇರಿ ಸೋಮೇಶ್ವರ ದೇವರಿಗೆ ಬಾಸವೂರ-೧೪೦ ಕಂಪಣದ 'ಪುಲ್ಲವಳ' ಗ್ರಾಮವನ್ನು ದಾನ ಕೊಟ್ಟಿರುವನು. ಹೀಗೆ ಸುಮಾರು ನೂರೈವತ್ತು ವರ್ಷಗಳ ಕಾಲ ಕಲ್ಯಾಣ ಚಾಲುಕ್ಯರ ಮಹಾಮಂಡಳೇಶ್ವರರಾಗಿ ಭದ್ರ ಆಡಳಿತವನ್ನು ನಿರ್ವಹಿಸಿದ ಇವರ ಕುರಿತು ಮಾಹಿತಿ ಒದಗಿಸುವ ಶಾಸನಗಳು ಗುಡಗುಡಿ, ಮಂತಗಿ, ಆಡೂರು, ಬೈಚವಳ್ಳಿ, ಉಪ್ಪುಹುಣಸಿ, ಮಲಗುಂದ ಹಿರೇಬಾಸೂರು, ಅಕ್ಕಿವಳ್ಳಿ, ಅರಳೇಶ್ವರ, ಹಿರೇಕಣಗಿ, ಹಾವಣಗಿ, ಬೆಳವತ್ತಿ ಹಾಗೂ ನರೇಗಲ್ಲಗಳಲ್ಲಿ ದೊರೆತಿವೆ.

ಬಂಕಾಪುರ ಕದಂಬರು

ಹರಿಕಾಂತದೇವ

|

ಮಯೂರವರ್ಮ (ಕ್ರಿ.ಶ.೧೦೩೫-೧೦೪೭)

|

ಅಕ್ಕಾದೇವಿ



ಹರಿಕೇಸರಿ (ಹೆಂ. ಲಚ್ಚಲದೇವಿ) | ತೋಯಿಮದೇವ (ಹೆಂ. ಮೈಳಲದೇವಿ) | ಹರಿಕಾಂತದೇವ

(ಆಧಾರ : ಚೆನ್ನಕ್ಕ ಪಾವಟೆ, ಹಾನಗಲ್ಲ ಕದಂಬರು)

## ಹಾನಗಲ್ಲ ಕದಂಬರು

ಸುಮಾರು ೬೦ ವರ್ಷಗಳ ತರುವಾಯ ಚಟ್ಟಯ್ಯನ ಮಗ ಜಯಸಿಂಹನ ಐದು ಮಕ್ಕಳಲ್ಲಿ ಒಬ್ಬನಾದ ಮಾವುಲಿಯ ಮಗ ಕೀರ್ತಿವರ್ಮನು ಬನವಾಸಿ, ಹಾನಗಲ್ಲ ಪ್ರದೇಶಗಳನ್ನು ಏಕಛತ್ರಾಧಿಪತ್ಯದಲ್ಲಿ ಆಳ್ವಿಕೆ ನಡೆಸಿದನು.[೨೧೦] ಇಮ್ಮಡಿ ಸೋಮೇಶ್ವರನ ಕಾಲದಲ್ಲಿ ನಡೆದ ಸೋದರರ ಹೋರಾಟ ಕೀರ್ತಿವರ್ಮನ ಮೇಲೆ ಪೆಟ್ಟುಕೊಟ್ಟಿತು. ಇಮ್ಮಡಿ ಸೋಮೇಶ್ವರನ ವಿರುದ್ಧ ಆರನೇ ವಿಕ್ರಮಾದಿತ್ಯನು ಬಂಡಾಯ ಹೂಡಿದಾಗ

ಕೀರ್ತಿವರ್ಮನು ವಿಕ್ರಮಾದಿತ್ಯನಿಗೆ ನೆರವಾದನೆಂದು ತಮ್ಮಡಿಕಲ್ಲಾಳ ಶಾಸನದಿಂದ ತಿಳಿಯಬಹುದು. ಇವನ ಜೊತೆ ಇವನ ಸಹೋದರ ಎರಡನೇ ಚಟ್ಟಯ್ಯ ಜಂಟಿ ಅರಸನಾಗಿದ್ದನು. ಚಾಲುಕ್ಯ ವಿಕ್ರಮಾದಿತ್ಯನು ಅಣ್ಣನನ್ನು ಸೋಲಿಸಿ ಕಲ್ಯಾಣದ ಸಿಂಹಾಸನವನ್ನೇರಿದಾಗ ಕೀರ್ತಿವರ್ಮನ ಅಧಿಕಾರ ಅವನಿಗೆ ದೊರೆಯದೇ ಅವನ ಚಿಕ್ಕಪ್ಪನಾದ ಶಾಂತಿವರ್ಮನನ್ನು ಬನವಾಸಿಯ ಸಾಮಂತನನ್ನಾಗಿ ನೆಲೆಗೊಳಿಸಿದಂತಿದೆ.[೨೧೧] ಮುಂದೆ ಶಾಂತಿವರ್ಮನ ವಂಶಸ್ಥರೇ ಬನವಾಸಿಯಲ್ಲಿ ಸಾಮಂತರಾಗಿ ಮುಂದುವರೆದರು.

ಶಾಂತಿವರ್ಮನ ಮಗ ಎರಡನೇ ತೈಲನು ಹಾನಗಲ್ಲ ಕದಂಬರ ದೊರೆಗಳಲ್ಲಿ ಗಮನಾರ್ಹ ವ್ಯಕ್ತಿ. ಕ್ರಿ.ಶ. ೧೦೮೨ರ ಶೇಷಗಿರಿ ದಾಖಲೆ ಶಾಂತಿವರ್ಮನ ಮಗ ತೈಲಪನನ್ನು ಹೆಸರಿಸಿದೆ.[೨೧೨] ಮಹಾಮಂಡಳೇಶ್ವರ ತೈಲಪದೇವನು ಚಕ್ರವರ್ತಿ ವಿಕ್ರಮಾದಿತ್ಯನ ಪಾದಪದ್ಮೋಪಜೀವಿಯಾಗಿ ಪಾನುಂಗಲ್ಲ ಐನೂರನ್ನು 'ಉಭಯಸ್ವಾಮ್ಯ'ದಿಂದ ಆಳುತ್ತಿದ್ದನೆಂದು ನಿಡಗುಂದಿಗೆ ಶಾಸನ ತಿಳಿಸಿದೆ. ಲಕ್ಷ್ಮೇಶ್ವರ ಶಾಸನ ಪಾನುಂಗಲ್ಲ ಐನೂರನ್ನು ಪಾನುಂಗಲ್ಲ ನೆಲವೀಡಿನಿಂದ 'ತ್ರಿಭೋಗ'ವಾಗಿ ಆಳುತ್ತಿದ್ದನೆಂದು ತಿಳಿಸಿದೆ.[೨೧೩] ಕ್ರಿ.ಶ.೧೧೦೮ರ ಕರಗುದರಿ ಶಾಸನ ದಂಡನಾಯಕಿತಿ ಮಲ್ಲಯಕ್ಕ ಕರಗುದರಿಯಲ್ಲಿ ತ್ರೈಪುರುಷರ ದೇವಾಲಯ ಪ್ರತಿಷ್ಠೆ ಮಾಡಿದಳೆಂದು ಉಲ್ಲೇಖಿಸಿದೆ. ಅಲ್ಲದೆ ತೈಲಪನು ಬನವಾಸಿ ಪನ್ನಿರ್ಚ್ಛಾಸಿರ ಪಾನುಂಗಲ್ಲ-೫೦೦, ಕೊನ್ತಕುಳಿ-೩೦ಗಳಷ್ಟು ದೊಡ್ಡ ವಿಭಾಗಕ್ಕೆ ಅಧಿಪತಿಯಾಗಿದ್ದನೆಂದು ಹೇಳುತ್ತದೆ. ಹಾವೇರಿ ಶಾಸನವು ಈತನನ್ನು 'ಜಯಂತಿ ಪುರೇಶ ಮಧುಕೇಶ ಜಗಜನವಂದ್ಯ, ಮಧುಕೇಶಪದ ಸರೋಜಾರ್ಚನ ಸಮರಲೋಲ' ಎಂದು ಮುಂತಾಗಿ ವರ್ಣಿಸಿದೆ. ಇವನ ಕಾಲದಲ್ಲಿ ಹೊಯ್ಸಳರು ಪ್ರಬಲರಾಗಿದ್ದು ಕಲ್ಯಾಣ ಚಾಲುಕ್ಯರ ನಾಯಕತ್ವದ ವಿರುದ್ಧ ಧ್ವನಿ ಎತ್ತಿದ್ದರು. ಕಲ್ಯಾಣ ಚಾಲುಕ್ಯರಿಗೆ ಬದ್ಧರಾಗಿದ್ದ ಹಾನಗಲ್ಲ ಕದಂಬರು ಹೊಯ್ಸಳ ವಿಷ್ಣುವರ್ಧನನನ್ನು ಎದುರಿಸಬೇಕಾಯಿತು.[೨೧೪] ಹಾನಗಲ್ಲ, ಮಲ್ಲಿಗಾರ ಮತ್ತು ಹಾವಣಗಿಗಳ ವೀರಗಲ್ಲುಗಳಿಂದ ಇದು ಸ್ಪಷ್ಟವಾಗುತ್ತದೆ. ಇವನ ಕಾಲವೆಲ್ಲಾ ಹೊಯ್ಸಳರೊಂದಿಗೆ ಹೋರಾಡುವುದರಲ್ಲೇ ಕಳೆದಿದೆ. ಬಲಾಢ್ಯರಾದ ಹೊಯ್ಸಳರ ಎದುರು ಹಾನಗಲ್ಲ ಕದಂಬರ ಪಡೆ ನಿಲ್ಲದಾಯಿತು. ಹಾನಗಲ್ಲ ಕೋಟೆ ಹೊಯ್ಸಳರ ವಶವಾಯಿತು.[೨೧೫] ಆದರೆ ಅದು ಬಹುದಿನ ಅವರ ಕೈಯಲ್ಲಿ ಉಳಿಯಲಿಲ್ಲ. ಎರಡನೇ ತೈಲಪನ ಮಗ ಮಲ್ಲಿಕಾರ್ಜುನ ವಿಷ್ಣುವರ್ಧನನನ್ನು ಎದುರಿಸಿ ಕ್ರಿ.ಶ.೧೧೩೫ರಲ್ಲಿ ಕೋಟೆಯನ್ನು ಮರಳಿ ಕೈವಶಮಾಡಿಕೊಂಡನು. ಕಲ್ಯಾಣ ಚಾಲುಕ್ಯ ಮೂರನೇ ಸೋಮೇಶ್ವರನ ಅಧಿಕಾರದಲ್ಲಿ ಮಲ್ಲಿಕಾರ್ಜುನನು ಅವನ ಸಾಮಂತನಾಗಿ ಅಧಿಕಾರ ನಿರ್ವಹಿಸಿರುವನು. ಹೀಗೆ ಬನವಾಸಿಯು ಒಮ್ಮೆ ಕದಂಬರ ಕೈಗೂ ಒಮ್ಮೆ ಹೊಯ್ಸಳರ ಕೈಗೂ ಬದಲಾಯಿತು. ಎರಡನೇ ತೈಲಪನ ಇನ್ನೊಬ್ಬ ಮಗ ಮೂರನೇ ತೈಲಪನ ಮಕ್ಕಳಾದ ಮಾವುಲಿ ತೈಲ(ಕ್ರಿ.ಶ.೧೧೫೨), ಎರಡನೇ ಕೀರ್ತಿವರ್ಮ(ಕ್ರಿ.ಶ.೧೧೬೨-೭೮) ಹಾಗೂ ಕಾಮದೇವ (ಕ್ರಿ.ಶ.೧೧೮೦-೧೨೧೩) ಆಳ್ವಿಕೆ ನಡೆಸಿರುವರು. ಇವರ ಆಳ್ವಿಕೆಯ ವೇಳೆಯಲ್ಲಿ ಬಂದಳಿಕೆಯನ್ನು ರಾಜಧಾನಿಯನ್ನಾಗಿಸಿಕೊಂಡು ಆಳಿದ ನಾಗರಖಂಡ-೭೦ರ ಕದಂಬರ ಸೋಯಿದೇವ ಗಮನಾರ್ಹ ಪಾತ್ರವಹಿಸಿದ್ದಾನೆ.

## ಹಾನಗಲ್ಲ ಕದಂಬರ ವಂಶಾವಳಿ

ಮಯೂರವರ್ಮ I

|

ಕೃಷ್ಣವರ್ಮ

|

ನಾಗವರ್ಮ I

|

ವಿಷ್ಣುವರ್ಮ

|

ಮೃಗವರ್ಮ

|

ಸತ್ಯವರ್ಮ

|

ವಿಜಯವರ್ಮ

|

ಜಯವರ್ಮ I

|

ನಾಗವರ್ಮ II

|

ಶಾಂತಿವರ್ಮ I

|

ಕೀರ್ತಿವರ್ಮ

|

ಆದಿತ್ಯವರ್ಮ

|

ಚಟ್ಟ, ಚಟ್ಟಯ್ಯ, ಚಟ್ಟುಗಿ

|

ಜಯವರ್ಮ II (ಜಯಸಿಂಹ)



ಹಾನಗಲ್ಲ ಹಾಗೂ ಬಂದಳಿಕೆ ಕದಂಬ ವಂಶಗಳು ಏಕಕಾಲದಲ್ಲಿಯೇ ಪ್ರಾರಂಭವಾದಂತೆ ತೋರುತ್ತದೆಂದು ಭೋಜರಾಜ ಪಾಟೀಲ ಅವರು ತಮ್ಮ ಪ್ರಬಂಧದಲ್ಲಿ ಶಾಸನಾಧಾರಗಳಿಂದ ವಿವರಿಸಿದ್ದಾರೆ.[೨೦೬] ಈ ಎರಡೂ ಮನೆತನಗಳಲ್ಲಿ ವಿವಾಹ ಬಾಂಧವ್ಯಗಳು ಏರ್ಪಟ್ಟಿವೆಯಾದರೂ[೨೦೭] ಇಬ್ಬರ ನಡುವೆ ದಾಳಿಗಳೂ ನಡೆದಿವೆ. ಹಾನಗಲ್ಲ ಕದಂಬ ಎರಡನೇ ತೈಲಪನು ನಾಗರಖಂಡ ಸೀಮೆಯಲ್ಲಿಯ ಹಿರೇಚೌಟಿಯ ತರುಗಳನ್ನು ಸೆರೆಹಿಡಿದಿರುವನು[೨೦೮] ಇದು ಈ ಎರಡೂ ಮನೆತನಗಳ ನಡುವಿನ ಅಸಮಾಧಾನವನ್ನು ಸೂಚಿಸುತ್ತದೆ.

ನಾಗರಖಂಡ ಕದಂಬ ವಂಶದ ದೊರೆಗಳಲ್ಲಿ ಪ್ರಖ್ಯಾತನಾದವನು ಸೋಯಿದೇವ(ಕ್ರಿ.ಶ.೧೧೩೯-೧೧೭೭). ಈತನ ಆಳ್ವಿಕೆಯ ಪ್ರಾರಂಭ ಕಾಲದಲ್ಲಿ ಹೊಯ್ಸಳರಿಗೂ ಚಾಲುಕ್ಯನಿಷ್ಠ ಹಾನಗಲ್ಲ ಕದಂಬರಿಗೂ ವೈರತ್ವ ಬೆಳೆದಿತ್ತು. ಈ ವೇಳೆಯಲ್ಲಿ ಹೊಯ್ಸಳ ವಿಷ್ಣುವರ್ಧನನು ಗಂಗವಾಡಿ, ನೊಳಂಬವಾಡಿ, ತಲಕಾಡು ಕೋಟೆ, ಉಚ್ಚಂಗಿ, ಬನವಾಸಿ ಕೋಟೆ ಮತ್ತು ಹಾನಗಲ್ಲ ಕೋಟೆಗಳನ್ನು ಮುತ್ತಿ ವಿಜಯ ಸಾಧಿಸಿದ್ದನು.[೨೦೯] ನಾಗರ ಖಂಡದ ಸೋಯಿದೇವನು ಹಾನಗಲ್ಲ ಕದಂಬ ವಂಶದ ಮೇಲಾಳ್ತನವನ್ನು ಮನ್ನಿಸಿ ನಡೆಯುತ್ತಿದ್ದನೆಂದು ಕಂಡುಬರುತ್ತದೆ.[೨೧೦]

ಕಲ್ಯಾಣ ಚಾಲುಕ್ಯರ ಆಳ್ವಿಕೆ ಅಂತ್ಯವಾಗಿ ಕಳಚೂರ್ಯರದು ಪ್ರಾರಂಭವಾದಾಗ ಹಾನಗಲ್ಲ ಕದಂಬರು ಈ ಬದಲಾವಣೆಯನ್ನು ಕೂಡಲೆ ಒಪ್ಪಿಕೊಳ್ಳಲಿಲ್ಲ. ಆದ್ದರಿಂದ ಕಳಚೂರ್ಯ ಬಿಜ್ಜಳ ಬನವಾಸಿ ಮಂಡಲ ವನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳಲು ಕದಂಬರ ಮೇಲೆ ಯುದ್ಧ ಮಾಡಬೇಕಾಯಿತು. ಇವರ ಮೇಲೆ ಹಿಡಿತ ಸಾಧಿಸಲು ಬಿಜ್ಜಳನು ನಾಗರಖಂಡದ ಸೋಯಿದೇವನನ್ನು ಬಳಸಿಕೊಂಡನು.[೨೧೧] ಈ ಕಾರಣದಿಂದ ಬಿಜ್ಜಳ-ಸೋಯಿದೇವರ ಮಧ್ಯ ಮಧುರ ಬಾಂಧವ್ಯ ಬೆಳೆದು ಸೋಯಿದೇವನನ್ನು ಬಿಜ್ಜಳನು ಬನವಾಸಿಗೆ ಮಂಡಳೇಶ್ವರನನ್ನಾಗಿ ನಿಯಮಿಸಿದನು.[೨೧೨] ಕ್ರಿ.ಶ.೧೧೬೮ರಲ್ಲಿ ಕದಂಬರು ಹಾಗೂ ಕಳಚೂರ್ಯರಲ್ಲಿ ಶಾಂತಿ ಏರ್ಪಟ್ಟು ಬನವಾಸಿಯನ್ನು ಪುನಃ ಅವರಿಗೆ ಒಪ್ಪಿಸಿದಂತೆ ತೋರುತ್ತದೆ.[೨೧೩] ಹಾನಗಲ್ಲ ಕದಂಬ ಮನೆತನದ ಕೊನೆಯ ಅರಸ ಕಾಮದೇವನ ಕಾಲವೂ ಹೊಯ್ಸಳರೊಂದಿಗೆ ಹೋರಾಟದ ಕಾಲವಾಗಿತ್ತು. ಕಲ್ಯಾಣದಲ್ಲಿ ಕಳಚೂರ್ಯರನ್ನು ಬದಿಗೊತ್ತಿ ಕಲ್ಯಾಣ ಚಾಲುಕ್ಯರ ನಾಲ್ಕನೆಯ ಸೋಮೇಶ್ವರ ಚಕ್ರವರ್ತಿ ಸ್ಥಾನವನ್ನು ಪಡೆದುಕೊಂಡರೂ ಅದು ಬಹುಕಾಲ ತಾಳದೆ ಯಾದವರ (ಸೇವುಣರ) ಕೈ ಸೇರಿತು. ಹೀಗೆ ಹೊಯ್ಸಳರ ದಾಳಿ, ಕಲಚೂರ್ಯರ ಬಂಡಾಯ, ಚಾಲುಕ್ಯರ ಪತನ ಜೊತೆಗೆ ಸೇವುಣರ ಏಳ್ಗೆಯ ಸನ್ನಿವೇಶ ಗಳಿಂದ ಗಡಿ ಭಾಗವಾಗಿದ್ದ ಈ ಪ್ರದೇಶ ರಣರಂಗವಾಗಿತ್ತು.

## ಗುತ್ತಲದ ಗುತ್ತರು

ಹಾನಗಲ್ಲ ಕದಂಬರಂತೆ ಇವರೂ ಕೂಡ ಕಲ್ಯಾಣ ಚಾಲುಕ್ಯರ ನಾಯಕತ್ವವನ್ನು ಒಪ್ಪಿಕೊಂಡು ಹಾವೇರಿ ತಾಲೂಕಿನ ಗುತ್ತವೊಳಲ್‌ದಿಂದ ಆಡಳಿತವನ್ನು ನಿರ್ವಹಿಸಿದರು. ಕಲ್ಯಾಣ ಚಾಲುಕ್ಯರ ಪತನದ ನಂತರ ಕೆಲಕಾಲ ಸ್ವತಂತ್ರರಾಗಿ ಮುಂದೆ ದೇವಗಿರಿ ಯಾದವರ ಮಾಂಡಳಿಕರಾಗಿ ೧೨ನೇ ಶತಮಾನದ ಆದಿಯಿಂದ ೧೩ನೇ ಶತಮಾನದ ಕೊನೆಯವರೆಗೆ ಆಳಿದ ವಂಶವಿದು. ಇವರು ಶಾಸನಗಳಲ್ಲಿ ತಮ್ಮನ್ನು ಮಗಧದ ಗುಪ್ತರ ಉತ್ತರಾಧಿಕಾರಿಗಳೆಂದೂ, ಉಜ್ಜಯಿನೀಪುರವರಾಧೀಶ್ವರರೆಂದು, ಚಂದ್ರಗುಪ್ತಾನ್ವಯರೆಂದೂ

ಕರೆದುಕೊಂಡಿದ್ದಾರೆ.[೨೨೪] ಶಾಸನಗಳು ಇವರ ವಂಶಾವಳಿಯನ್ನು ಹೇಳುವಾಗ ಇವರ ಮೂಲ ಪುರುಷ ಮಾಗುತ್ತ ಹಾಗೂ ಆತನ ಮಗ ಗುತ್ತ ಎಂದು ಹೇಳಿವೆ. ಬಹುಶಃ ಇವನು ಕಲ್ಯಾಣ ಚಾಲುಕ್ಯರ ಒಂದನೇ ಸೋಮೇಶ್ವರನ ಕಾಲದಲ್ಲಿ ಅಧಿಕಾರ ಹೊಂದಿದ್ದು ಹಾನಗಲ್ಲ ಕದಂಬರ ಕೆಲವು ಪ್ರದೇಶಗಳನ್ನು ಗೆದ್ದುಕೊಂಡಿರಬಹುದು.[೨೨೫]

ಕ್ರಿ.ಶ.೧೧೧೫ರ ಚೌಡದಾನಪುರ ಶಾಸನವು ಅವನ ಮಗ ಮಲ್ಲಿದೇವನನ್ನು ಹೆಸರಿಸುತ್ತದೆ. ಮಲ್ಲಿದೇವನ ಸಹೋದರನಾದ ಜೋಯಿದೇವನು ಕ್ರಿ.ಶ.೧೧೨೪ರಲ್ಲಿ ಪೊನ್ನವರ್ತಿ ಪನ್ನೆರಡುಂ, ಬೆಳಹುಗೆಯೆತ್ತುಂ, ಬೆಣ್ಣೆವೂರ ಪನ್ನೆರಡುಂ[೨೨೬] ಮನ್ನೆಯಾಧಿಪತ್ಯದಿಂದ ಆಳುತ್ತಿದ್ದನೆಂದು ಹೊನ್ನತ್ತಿ ಶಾಸನ ಉಲ್ಲೇಖಿಸಿದೆ. ಇಲ್ಲಿ ಜೋಯಿದೇವನನ್ನು ಮಹಾಮಂಡಳೇಶ್ವರ ಎಂದೇ ಕರೆದಿದೆ. ಇದೇ ಶಾಸನವು ಜೋಯಿದೇವನ ಮಂತ್ರಿಗಳಾದ ದೇಕಣ್ಣ ಮತ್ತು ನಾಕಣ್ಣ ಎಂಬುವವರು ಕಟ್ಟಿಸಿದ ಹೊನ್ನತ್ತಿಯ ಚಾಮೇಶ್ವರ ದೇವಾಲಯಕ್ಕೆ ಕೊಟ್ಟ ಭೂದಾನವನ್ನು ವಿವರಿಸಿದೆ. ಅಲ್ಲದೆ ಹೊನ್ನತ್ತಿ ಅಗ್ರಹಾರದ ಮಹಾಜನವಿನ್ನೂರ್ವರನ್ನು ಹೊಗಳಿದೆ. ಜೋಯಿದೇವನ ನಂತರ ಮಲ್ಲಿದೇವನ ಮಗ ಎರಡನೇ ವಿಕ್ರಮಾದಿತ್ಯನು ಪಟ್ಟಕ್ಕೆ ಬಂದನು. ಕ್ರಿ.ಶ.೧೧೮೩ರ ಗುಡ್ಡದಾನೇವರಿ ಶಾಸನವು[೨೨೭] ಎರಡನೇ ವಿಕ್ರಮಾದಿತ್ಯನನ್ನು ಜೋಯಿದೇವನ ಮಗನೆಂದೆ (ತತುಪುತ್ರನಪ್ಪ) ಕರೆದಿದೆ. ಈತನನ್ನು ಉಲ್ಲೇಖಿಸುವ ಗುತ್ತಲ ಶಾಸನ[೨೨೮] ಇವನೂ ಪಣ್ಣವತ್ತಿ-೧೨, ಬೆಳಹುಗೆ-೭೦, ಬೆಣ್ಣೆಯೂರು-೧೨ ಆಳುತ್ತಿದ್ದನೆಂದು ಹೇಳುತ್ತದೆ. ಈ ಶಾಸನದಲ್ಲಿ ಯಾವುದೇ ಚಕ್ರವರ್ತಿಯನ್ನು ಹೆಸರಿಸಿಲ್ಲ. ಕಲ್ಯಾಣದಲ್ಲಿ ಚಕ್ರವರ್ತಿಯಾಗಿ ಅಧಿಕಾರ ಗ್ರಹಣ ಮಾಡಿಕೊಂಡಿದ್ದ ಬಿಜ್ಜಳನನ್ನು ಇವನು ಒಪ್ಪಿಕೊಂಡಂತೆ ಕಾಣುವುದಿಲ್ಲ. ಮುಂದೆ ಕ್ರಿ.ಶ.೧೧೮೧ರ ಹರಳಹಳ್ಳಿ ಶಾಸನದಲ್ಲಿ[೨೨೯] ಕಲಚೂರಿ ಅಹವಮಲ್ಲನನ್ನು ಚಕ್ರವರ್ತಿಯೆಂದು ಒಪ್ಪಿಕೊಂಡಿರುವನು. ಈ ಶಾಸನವು ಜೋಯಿದೇವರಸನು ತುಂಗಭದ್ರಾನದಿ ದಂಡೆಯ ಮೇಲೆ ವಿಕ್ರಮಪುರವನ್ನೂ, ವಿಕ್ರಮೇಶ್ವರ, ಗುತ್ತೇಶ್ವರ ಲಿಂಗಗಳನ್ನು ಸ್ವಯಂಭೂ ಸೋಮೇಶ್ವರನ ಸನ್ನಿಧಿಯಲ್ಲಿ ಪ್ರತಿಷ್ಠಾಪಿಸಿ ತ್ರಿಕೂಟ ದೇವಾಲಯವನ್ನು ನಿರ್ಮಿಸಿದನೆಂದು ಉಲ್ಲೇಖಿಸಿದೆ. ಕ್ರಿ.ಶ.೧೧೮೮[೨೩೦] ಮತ್ತು ೧೨೧೩ರ[೨೩೧] ಹರಳಹಳ್ಳಿ ಶಾಸನಗಳಿಂದ ಗುತ್ತ ವಿಕ್ರಮಾದಿತ್ಯನು ಸ್ವತಂತ್ರ ಆಡಳಿತ ಕೈಗೊಂಡನೆಂದು ಊಹಿಸಬಹುದು. ಈ ಎರಡೂ ಶಾಸನಗಳಲ್ಲಿ ಖಚಿತವಾಗಿ ಯಾವ ಚಕ್ರವರ್ತಿಯ ಉಲ್ಲೇಖವಿಲ್ಲ. ಕ್ರಿ.ಶ.೧೧೮೫ರಲ್ಲಿ ಕಲ್ಯಾಣದಲ್ಲಿ ಆದ ಬದಲಾವಣೆಗಳು ಇವನಿಗೆ ಅನುಕೂಲವಾಗಿರಬೇಕು. ಕಲ್ಯಾಣ ಚಾಲುಕ್ಯರ ನಾಲ್ಕನೇ ಸೋಮೇಶ್ವರನ ಅಭದ್ರ ಆಡಳಿತ ಕಲಚೂರಿಗಳ ಪತನ ಸ್ವತಂತ್ರನಾಗಲು ಪ್ರೇರಣೆ ನೀಡಿರಬೇಕು.

ಕ್ರಿ.ಶ.೧೨೧೩ರ ಶಾಸನದ ಪ್ರಕಾರ ಗುತ್ತ ವಿಕ್ರಮಾದಿತ್ಯನ ವಿಜಯಾದೇವಿ ಎಂಬ ಸಹೋದರಿಯನ್ನು ಸಾಂತಲಿ ಮಂಡಲದ ಸಿಂಹಭೂಪಾಲನಿಗೆ ಕೊಟ್ಟು ವಿವಾಹ ಮಾಡಲಾಗಿತ್ತು. ಅವರ ಮಗ ಬಲ್ಲಾಳನಿಗೆ ವಿಕ್ರಮಾದಿತ್ಯನ ಮಗಳಾದ ತುಳುವಲದೇವಿಯನ್ನು ಕೊಟ್ಟು ವಿವಾಹ ಮಾಡಲಾಗಿತ್ತು. ಕೆಲವು ವರ್ಷಗಳ ನಂತರ ತುಳುವಲದೇವಿಯ ಮರಣವಾಯಿತು. ಅವಳ ಪರಲೋಕಹಿತಾರ್ಥವಾಗಿ ವಿಕ್ರಮಾದಿತ್ಯನು ತುಳುವಲೇಶ್ವರ ದೇವಾಲಯವನ್ನು ಮಾಡಿಸಿ ತ್ರಿಲೋಚನದೇವರ ಪಾದಪ್ರಕ್ಷಾಳನಂ ಮಾಡಿ ಗುಡ್ಡ(ಹಾ)ಳ ಪಳ್ಳಿಯನ್ನು ದಾನ ಕೊಟ್ಟಿರುವನು. ಕ್ರಿ.ಶ.೧೧೮೮ರ ಶಾಸನದಲ್ಲಿ ವಿಕ್ರಮಾದಿತ್ಯನ ದಂಡನಾಯಕ ದೋಸಿ ರಾಜನು ದಾಸೇಶ್ವರ ದೇವಾಲಯವನ್ನು ನಿರ್ಮಿಸಿ ದಾನ ಕೊಟ್ಟಿರುವನು. ವಿಕ್ರಮಾದಿತ್ಯನ ಇನ್ನೊಬ್ಬ ಸಹೋದರಿ

ಲಳಿಯಾದೇವಿ ನೂರುಂಬಾಡದ ಕದಂಬ ಕೇತರಸನನ್ನು ವರಿಸಿದ್ದಳು.[೨೩೨] ಗುತ್ತವಂಶದಲ್ಲೇ ಪ್ರಬಲ ಅರಸನಾಗಿದ್ದ ಎರಡನೇ ವಿಕ್ರಮಾದಿತ್ಯನನ್ನು ಶಾಸನಗಳು 'ಗುತ್ತತಿಳಕ' ಎಂದು ವರ್ಣಿಸಿವೆ. ಇವನ ನಂತರ ಇವನ ಮಕ್ಕಳಾದ ಎರಡನೇಯ ಜೋಯಿದೇವ ಮತ್ತು ಮೂರನೇ ವಿಕ್ರಮರು ರಾಜ್ಯಭಾರ ಮಾಡಿರುವರು. ಜೋಯಿದೇವನು ಸೇವುಣ ಸೇನಾನಿ ಬೀಚಿದೇವನಿಂದ ಸೋತು ಅವನ ಮಾಂಡಳಿಕನಾದನು. ಹೊನ್ನತ್ತಿಯ ಒಂದು ಶಾಸನವು[೨೩೩] ಶ್ರೀಮಮ್ಮಾಹಪ್ರಧಾನ ಸರ್ವ್ವಾಧಿಕಾರಿ ಬೀಚಿಸೆಟಿಯ ಹೇಳಿಕೆಯಿಂದ ಸರ್ವ್ವಪ್ರಧಾನ ತಿಪ್ಪರಸರು ಹೊನ್ನತ್ತಿಯ ಚಾಮೇಶ್ವರ ದೇವರ ಸಮೀಪದಲ್ಲಿ ರಾಜೇಶ್ವರ ದೇವರ ಪ್ರತಿಷ್ಠೆಯನ್ನು ಮಾಡಿದನು(ಈ ದೇವಾಲಯವೂ ತ್ರಿಕೂಟ ಮಾದರಿಯಲ್ಲಿದೆ). ಈ ಶಾಸನದಲ್ಲಿ ಮಹಾಮಂಡಳೇಶ್ವರ ಗುತ್ತ ಜೋಯಿದೇವನು ರಾಜೇಶ್ವರ ದೇವರಿಗಾಗಿ ಅಲ್ಲಿಯ ಆಚಾರ್ಯ ವಿರೂಪಾಕ್ಷದೇವ ತ್ರಿಲೋಚನದೇವರ ಕಾಲಂ ತೊಳೆದು ಭೂದಾನ ಕೊಟ್ಟಿರುವನು. ಅಲ್ಲದೆ ತನ್ನನ್ನು ಶ್ರೀಪರುಶಲಿಂಗ ಗಳಗನಾಥದೇವರ ಪಾದಾರಾಧಕ ಎಂದು ಹೇಳಿಕೊಂಡಿದ್ದಾನೆ. ಸೇವುಣ ಕನ್ನರ ಹಾಗೂ ಮಹಾದೇವರ ಮಾಂಡಳಿಕನಾಗಿ ಮೂರನೆಯ ವಿಕ್ರಮ ಗುತ್ತನು ಸು.ಕ್ರಿ.ಶ.೧೨೫೪ರಿಂದ ಆಳಿದನು. ಇವನು ಸೇವುಣರ ವಿರುದ್ಧ ಬಂಡೆದ್ದರೂ, ಹತ್ತಿಕಲ್ಪಟ್ಟು ಸಾಳುವ ತಿಕ್ಕಮನೆಂಬ ಸೇವುಣ ಸೇನಾನಿ ಈತನ ರಾಜಧಾನಿಯಲ್ಲಿ ತಂಗಿದ ಉಲ್ಲೇಖವಿದೆ.[೨೩೪] ಇವನ ನಂತರ ಇವನ ತಮ್ಮ ಜೋಯಿದೇವನ ಮಗ ವಿಕ್ರಮಾದಿತ್ಯನು ಆಳುತ್ತಿದ್ದು ಅವನ ಸತಿ ಪದುಮಲದೇವಿ ಹಿರೇಬಿದರಿಯ ಶಿವಾಲಯವೊಂದಕ್ಕೆ ದಾನ ಕೊಟ್ಟಿದ್ದು[೨೩೫] ಇದರಲ್ಲಿ ಸೇವುಣ ರಾಮಚಂದ್ರನ ಉಲ್ಲೇಖವಿದೆ.

ಗುತ್ತಲದ ಗುತ್ತರ ಸಣ್ಣ ಸಾಮಂತರಾದರೂ ಹಾವೇರಿ ಪರಿಸರದಲ್ಲಿ ಇವರ ಕೊಡುಗೆ ಗಣನೀಯವಾಗಿದೆ. ಹರಳಹಳ್ಳಿಯ ಸೋಮೇಶ್ವರ ತ್ರಿಕೂಟ ದೇವಾಲಯವು ಈ ವಂಶಜರು ಕೊಟ್ಟ ಶ್ರೇಷ್ಟ ಕೊಡುಗೆ ಆಗಿದೆ.

### ಗುತ್ತಲದ ಗುತ್ತರ ವಂಶಾವಳಿ




(ಆಧಾರ : ಜೆ.ಎಫ್.ಪ್ಲೀಟ್, ಡೈನಾಸ್ಟೀಜ್ ಆಫ್ ದ ಕನರೆಸಾ ಡಿಸ್ಟ್ರಿಕ್ಟ್)

## ನೂರುಂಬಾಡದ ಕಡಂಬರು

ಕಲ್ಯಾಣ ಚಾಲುಕ್ಯರ ಕಾಲದಲ್ಲಿ ತಲೆ ಎತ್ತಿದ ನೂರುಂಬಾಡದ ಕಡಂಬರು ಬನವಾಸಿ ಪನ್ನಿಚ್ಛಾಸಿರದ ಕಂಪಣವಾದ ನೂರಂಬಾಡದ ಆಡಳಿತವನ್ನು ನಿರ್ವಹಿಸುತ್ತ ಕಲಚೂರಿಗಳ, ಸೇವುಣರ ಪ್ರಭುತ್ವವನ್ನು ಒಪ್ಪಿ ನಡೆದರು. ಇವರು ಶಾಸನದಲ್ಲಿ ಕಂಡುಕೊಳ್ಳುವುದು ಚಾಲುಕ್ಯ ಎರಡನೇ ಜಗದೇವಕಮಲ್ಲನ ಕಾಲದಲ್ಲಿ (ಕ್ರಿ.ಶ.೧೧೩೬-೧೧೪೯). ರಟ್ಟಿಹಳ್ಳಿ ಮತ್ತು ಕಣವಿಸಿದ್ದಗೇರಿ ಶಾಸನಗಳು ನೂರುಂಬಾಡದ ಇತಿಹಾಸವನ್ನು ಸ್ಪಷ್ಟಪಡಿಸುತ್ತವೆ. ರಟ್ಟಿಹಳ್ಳಿಯ ಎರಡನೇ ಜಗದೇಕಮಲ್ಲನ ಶಾಸನವು[೨೩೬] ರಟ್ಟಿಹಳ್ಳಿಯಧಿನಾಥ ಬೀರದೇವ ಮತ್ತು ಅವನ ವಂಶಾವಳಿಯನ್ನು ಹೇಳುತ್ತದೆ. ಕಣವಿಸಿದ್ಧಗೇರಿ ಶಾಸನದ[೨೩೭] ಪ್ರಕಾರ ಬೀರದೇವನು ಚಾಲುಕ್ಯ ಚಕ್ರವರ್ತಿ ಇಮ್ಮಡಿ ಜಯಸಿಂಹನ(?) ಶತ್ರುಗಳನ್ನು ಸೋಲಿಸಿ ಶತ್ರುವಿನ ಒಂದು ಆನೆಯನ್ನು ಚಕ್ರವರ್ತಿಗೆ ನೀಡಿದ್ದರಿಂದ ರಟ್ಟಿಹಳ್ಳಿ-೭೦ ಮತ್ತು ಇಟ್ಟಿಗೆ-೩೦ನ್ನು ಸೇರಿಸಿ ನೂರುಂಬಾಡವನ್ನು ಬೀರದೇವನಿಗೆ ನೀಡಲಾಯಿತು. ಈ ಶಾಸನವು ಉಲ್ಲೇಖಿಸುವ ಇಮ್ಮಡಿ ಜಯಸಿಂಹನು ಚಾಲುಕ್ಯ ಚಕ್ರವರ್ತಿ ಕ್ರಿ.ಶ.೧೦೧೫-

೧೦೪೪ರಲ್ಲಿ ಆಳಿದ ಎರಡನೇ ಜಯಸಿಂಹನನ್ನು ಸೂಚಿಸುತ್ತದೆ. ಅದೇ ಶಾಸನದಲ್ಲಿ ಉಲ್ಲೇಖಗೊಂಡ ವ್ಯಕ್ತಿಗಳು ನಂತರದ ಕಾಲದವರು. ಹೀಗಾಗಿ ನೂರುಂಬಾಡ ಕಡಂಬರ ಮೂಲವ್ಯಕ್ತಿ ಬೀರದೇವನ ಬಗ್ಗೆ ಸ್ಪಷ್ಟತೆ ದೊರೆಯುವುದಿಲ್ಲ. ಅಲ್ಲದೆ ಚಾಲುಕ್ಯ ಇಮ್ಮಡಿ ಜಯಸಿಂಹನ ನಂತರ ಆಳಿದ ಅರಸು ಒಂದನೇ ಸೋಮೇಶ್ವರನ ಕಾಲದ ಮೇದುರು ಶಾಸನವು[೨೩೮] 'ಮಹಾಸಾಮನ್ತಂ ಭಾವ ಬಿಜ್ಜರಸರ್ ಎಡವಟ್ಟೆಪ್ಪತ್ತಮಂ ರಟ್ಟೆಹಳ್ಳಿಯಳ್ಪತ್ತುಮಂ ಮಾಗುನ್ದ ಪನ್ನೆ.. ತ್ರಿಭೋಗಾಭ್ಯನ್ತರಸಿದ್ದಿಯಿನ್ದಮಾಳುತ್ತಿರೆ' ಎಂದು ವಿವರಿಸಿದೆ. ಇಲ್ಲಿ ರಟ್ಟೆಹಳ್ಳಿ-೨೦ ಎಂದು ಉಲ್ಲೇಖಿಸಿರುವುದು ಗಮನಿಸಬೇಕಾದ ಅಂಶ. ರಟ್ಟೆಹಳ್ಳಿ ಶಾಸನದಲ್ಲಿ[೨೩೯] ಉಲ್ಲೇಖಿಸುವ ನೂರುಂಬಾಡ ಕಡಂಬರ ವಂಶಾವಳಿಯಲ್ಲಿ ಬರುವ ಕೊನೆಯ ವ್ಯಕ್ತಿ ಪಾಂಡ್ಯದೇವರಸ. ಇವನು ಕಲಚೂರಿ ರಾಯಮುರಾರಿ ಸೋಯಿದೇವರಸನ ಕ್ರಿ.ಶ.೧೧೭೪ರ ಮಂಡಳೇಶ್ವರನಾಗಿದ್ದನು. ಶಾಸನದ ಕಾಲಕ್ಕೂ ಅದರಲ್ಲಿ ಉಲ್ಲೇಖಿಸಿದ ವಿಷಯಕ್ಕೂ ಶತಮಾನಕ್ಕೂ ಹೆಚ್ಚು ಅಂತರವು ಕಂಡುಬರುತ್ತದೆ. ನೂರುಂಬಾಡದ ಆಡಳಿತವನ್ನು ಬೀರದೇವನಿಗೆ ಕೊಟ್ಟ ರಾಜನ ಬಗ್ಗೆ ಅನುಮಾನ ಹುಟ್ಟುತ್ತದೆ. ಹೀಗಾಗಿ ನೂರುಂಬಾಡದ ಮೂಲಪುರುಷ ಬೀರದೇವನು ಪರಂಪರಾಗತ ವ್ಯಕ್ತಿ ಎಂದು ಊಹಿಸಲಾಗಿದೆ.[೨೪೦] ಶಾಸನಗಳು ವಿವರಿಸುವ ನೂರುಂಬಾಡದ ಕಡಂಬರ ವಂಶಾವಳಿ ಈ ಕೆಳಗಿನಂತಿದೆ.




(ಆಧಾರ: **ಕ.ಇನ್ಸ್., ಸಂ.VI**)

ಈ ವಂಶಾವಳಿಯಲ್ಲಿ ಬರುವ ಎರಡನೇ ಕೇತರಸನ ಕೊನೆಯ ಮೂರು ಮಕ್ಕಳು ಬೀರದೇವ, ಬೊಮ್ಮರಸ, ಮಲ್ಲಿದೇವರು ಕೇತರಸನ ಪಟ್ಟದರಸಿ ಅತ್ತಿಮಬ್ಬೆಗೆ ಹುಟ್ಟಿದವರು. ಮೊದಲ ಮೂರು ಮಕ್ಕಳು ಇನ್ನೊಬ್ಬ ರಾಣಿಯಿಂದ ಹುಟ್ಟಿದವರು.[೨೪೧] ನೂರುಂಬಾಡದ ಕಡಂಬರಿಗೂ ಗುತ್ತರಿಗೂ ವೈವಾಹಿಕ ಸಂಬಂಧಗಳು ನಡದಿದ್ದವು. ಅತ್ತಿಮಬ್ಬೆಯ ಮಗ ಎರಡನೇ ಬೀರದೇವನ ರಾಣಿ ಬಾಚಲದೇವಿಯು ಮತ್ತು ಮೂರನೇ ಕೇತರಸನರಾಣಿ ಲಳಿಯಾದೇವಿಯು ಮತ್ತು ಪಾಂಡ್ಯರಸನು ಗುತ್ತವಿಕ್ರಮಾದಿತ್ಯನ ಮಗಳು ಬಾಚಲದೇವಿ

ಯರನ್ನು ವಿವಾಹವಾಗಿದ್ದಾಗಿ ಉಲ್ಲೇಖವಿದೆ.[೨೪೨] ಕಿಟ್ಟಗಾವಿ ಸಂತತಿಯ ಕಲ್ಯಾಣಶಕ್ತಿಯು ರಟ್ಟೆಹಳ್ಳಿ ಕಡಂಬೇಶ್ವರದ ಮತ್ತು ಗುತ್ತವಂಶರ ಹರಳಹಳ್ಳಿ ಸ್ವಯಂಭೂ ಸೋಮೇಶ್ವರದ ಸ್ಥಾನಪತಿಗಳಾಗಿದ್ದರು. ಈ ಎರಡೂ ದೇವಾಲಯಗಳಿಗೆ ಸಂಬಂಧಪಟ್ಟ ಶಾಸನಗಳು ಕಿಟ್ಟಗಾವಿ ಸಂತತಿಯ ಯತಿಪರಂಪರೆಯನ್ನು ಸ್ಪಷ್ಟವಾಗಿ ದಾಖಲಿಸಿವೆ.[೨೪೩] ಎರಡೂ ದೇವಾಲಯಗಳು ತ್ರಿಕೂಟ ಮಾದರಿಯಲ್ಲಿವೆ.

ಕಲಚೂರಿಗಳ ನಂತರ ಬಂದ ಸೇವುಣರ ಚಕ್ರಾಧಿಪಥ್ಯ ನೂರುಂಬಾಡದ ಕಡಂಬರ ತೇಜಸ್ಸನ್ನು ಮಂಕಾಗಿಸಿದಂತೆ ತೋರುತ್ತದೆ. ಇದನ್ನು ಸೇವುಣ ಸಿಂಘಣನ ಕ್ರಿ.ಶ.೧೨೩೮ರ ಶಾಸನದಿಂದ ಊಹಿಸಬಹುದು.[೨೪೪] ಏಕಕೂಟವಾಗಿದ್ದ ರಟ್ಟೆಹಳ್ಳಿ ಕಡಂಬೇಶ್ವರ ತ್ರಿಕೂಟವಾಗಿ ಮಾರ್ಪಟ್ಟಿದ್ದನ್ನು ಉಲ್ಲೇಖಿಸುವ ಈ ಶಾಸನದಲ್ಲಿ ಹೊನ್ನಬೊಮ್ಮಿಸೆಟ್ಟಿಯ ಬಗ್ಗೆ ವಿವರಣೆ ಇದೆ. ಹೊನ್ನಬೊಮ್ಮಸೆಟ್ಟಿಯು ಸಿಂಘಣನ ಮಂತ್ರಿ ಕೊಂಕಣಚಕ್ರಿ ಆರ್ಯಮಲ್ಲನ ಮಗನೆಂದು ಉಲ್ಲೇಖಗೊಂಡಿದ್ದಾನೆ. ಈ ವೇಳೆಯಲ್ಲಿ ಹೊಯ್ಸಳ ಮತ್ತು ಸೇವುಣರ ಮಧ್ಯ ಆಗಾಗ ಯುದ್ಧಗಳು ಜರಗುತ್ತಲೇ ಇದ್ದವು.[೨೪೫] ಆಗ ಹೊಯ್ಸಳ ಎರಡನೇ ನರಸಿಂಹನ ಹದಿನಾಲ್ಕು ಆನೆಗಳನ್ನು ಆರ್ಯಮಲ್ಲನು ಸೆರೆಹಿಡದು ಸಿಂಘಣನಿಗೆ ಒಪ್ಪಿಸಿದನೆಂದು ಶಾಸನ ವಿವರಿಸುತ್ತದೆ. ಇವನ ಮಗನೆ ಹೊನ್ನಬೊಮ್ಮಸೆಟ್ಟಿ.




ಹೊನ್ನಬೊಮ್ಮಸೆಟ್ಟಿಯು ರಟ್ಟೆಹಳ್ಳಿ ಕಡಂಬೇಶ್ವರ ದೇವಾಲಯದಲ್ಲಿ ತನ್ನ ತಾಯಿ ತಂದೆಯ ಹೆಸರಿನಲ್ಲಿ ಮಲ್ಲೇಶ್ವರ ಮತ್ತು ರಾಜೇಶ್ವರ ಲಿಂಗಗಳನ್ನು ಪ್ರತಿಷ್ಠಾಪಿಸಿ ಅವುಗಳ ಪೂಜೆಗಾಗಿ ಕಾಡವೂರು ಗ್ರಾಮವನ್ನು ಮೂರುಜಾವಿದೇವರಿಗೆ ದಾನ ಮಾಡಿರುವನು. ಹೊನ್ನಬೊಮ್ಮಸೆಟ್ಟಿಯ ನಂತರ ನೂರುಂಬಾಡದ ಇತಿಹಾಸ ತಿಳಿದುಬರುವುದಿಲ್ಲ. ಸೇವುಣರು ಅಥವಾ ದೆಹಲಿ ಸುಲ್ತಾನರ ದಾಳಿಯಿಂದ ಇವರು ನಾಮಾವಶೇಷ ಆಗಿರಬಹುದು.

ಈ ರೀತಿಯಾಗಿ ಚಲ್ಲಕೇತನರು, ಹಾನಗಲ್ಲ ಕದಂಬರು, ಗುತ್ತಲದ ಗುತ್ತರು, ನೂರುಂಬಾಡದ ಕಡಂಬರು, ನಾಗರಖಂಡದ ಕದಂಬರು ತಮ್ಮ ಒಡೆಯರಿಗೆ ನಿಷ್ಠೆಯನ್ನು ಪ್ರದರ್ಶಿಸುತ್ತ ಸ್ಥಳೀಯ ಸಂಸ್ಕೃತಿಯನ್ನು ಕಾಪಾಡಿ ಒಂದು ರೀತಿಯಿಂದ ಪ್ರಭುಗಳ ರಾಜ್ಯಶಕ್ತಿಗೆ ಸ್ಥಿರತೆಯನ್ನು ನೀಡಿದ್ದರು. ಹಾಗೂ ಸಾಹಿತ್ಯ, ವಾಸ್ತುಶಿಲ್ಪ, ವಿದ್ಯೆ, ಧರ್ಮ, ನೀತಿ, ವಾಣಿಜ್ಯ, ಯುದ್ಧಶಾಸ್ತ್ರ ಸಂಗೀತ, ನೃತ್ಯ ಮುಂತಾದ ಕಲೆಗಳಿಗೆ ಪ್ರೋತ್ಸಾಹವನ್ನು ಕೊಟ್ಟು ಉಳಿಸಿ ಬೆಳೆಸಿದರು.

ಕಲ್ಯಾಣ ಚಾಲುಕ್ಯರ ಮೇಲಾಳ್ವಿಕೆಯಲ್ಲಿ ಬಹು ವ್ಯವಸ್ಥಿತವಾಗಿ ನಡೆದು ಬಂದ ಇಲ್ಲಿಯ ರಾಜಕೀಯ ಸ್ಥಿತಿಯು ಅವರ ಪತನಾನಂತರ ಈ ಪ್ರದೇಶ ರಣರಂಗವಾಯಿತು. ಇದು ಬರೀ ಹಾವೇರಿ ಜಿಲ್ಲೆಗೆ ಮಾತ್ರವಲ್ಲ ಇಡೀ ಕರ್ನಾಟಕದ ಪರಿಸ್ಥಿತಿ. ಕಲ್ಯಾಣ ಚಾಲುಕ್ಯರ ಅವನತಿಯ ನಂತರ ಕಾವೇರಿಯಿಂದ ನರ್ಮದೆಯವರೆಗಿನ ಕರ್ನಾಟಕವು ಒಡೆದು ಮುಖ್ಯವಾಗಿ ದೇವಗಿರಿಯ ಸೇವುಣರು, ಓರಂಗಲ್ ಕಾಕತೀಯರು ಹಾಗೂ ದ್ವಾರಸಮುದ್ರ ಹೊಯ್ಸಳರಲ್ಲಿ ಹಂಚಿ ಹೋಯಿತು. ದಕ್ಷಿಣ ಗಡಿರೇಖೆಯಾಗಿ ತುಂಗಭದ್ರೆಯನ್ನು ಹೊಂದಿದ ಹಾವೇರಿ ಜಿಲ್ಲೆಯು ಸೇವುಣ-ಹೊಯ್ಸಳ ರಾಜ್ಯಗಳ ಗಡಿ ಪ್ರದೇಶವಾಗಿ ಇವರಿಬ್ಬರ ಹೋರಾಟದ ರುದ್ರಭೂಮಿಯಾಗಿ ನಿಲ್ಲಬೇಕಾಯಿತು. ಹೊಯ್ಸಳರ ಎರಡನೇಯ ವೀರಬಲ್ಲಾಳನ ನಂತರ ಅವರು ಜಿಲ್ಲೆಯಲ್ಲಿ ಹೆಚ್ಚು ಪ್ರಭಾವವನ್ನು ಹೊಂದದೆ ಈ ಪ್ರದೇಶ ಬಹುಮಟ್ಟಿಗೆ ಸೇವುಣರ ಅಧೀನದಲ್ಲೇ ಇತ್ತು. ಸೇವುಣರು ಇಲ್ಲಿಯವರೆಗೂ ಸುವ್ಯವಸ್ಥಿತವಾಗಿ ನಡೆದುಕೊಂಡು ಬಂದಿದ್ದ ಮಾಂಡಲಿಕ ವ್ಯವಸ್ಥೆಯನ್ನು ಕೊನೆಗೊಳಿಸಿದರು. ಮಾಂಡಲಿಕ ದೊರೆಗಳ ಬದಲಿಗೆ ಅವರು ಪ್ರಾಂತೀಯ ಅಧಿಕಾರಿಗಳನ್ನು ನೇಮಿಸಿದರು.[೨೪೬] ಇದರ ಫಲವನ್ನು ಸೇವುಣ ರಾಜ್ಯವು ಬಹು ಕೆಟ್ಟದಾಗಿ ಅನುಭವಿಸಬೇಕಾಯಿತು. ಉತ್ತರದ ಮುಸ್ಲಿಂ ರಾಜರ ಒತ್ತಡದಿಂದಾಗಿ ಕುಸಿದಾಗ ಸೇವುಣರ ರಾಜ್ಯದುದ್ದಕ್ಕೂ ಆಕ್ರಮಣಕಾರಿಗಳನ್ನು ಎದುರಿಸುವವರು ಯಾರೂ ಉಳಿಯಲಿಲ್ಲ. ಮುಸ್ಲಿಮರು ಒಂದೇ ಏಟಿಗೆ ಎಂಬಂತೆ ದಖ್ಖಣದ ಸ್ವಾಮಿಗಳಾದರು.[೨೪೭] ಸೇವುಣ, ಹೊಯ್ಸಳ, ಕಾಕತೀಯರ ಪರಸ್ಪರ ಕಚ್ಚಾಟದಿಂದ ಎಲ್ಲಾ ಪಕ್ಷಗಳ ಸಂಪನ್ಮೂಲಗಳು ನಶಿಸಿ ಅವರು ದುರ್ಬಲರಾದ್ದು ದಾಳಿಕೋರ ಅಲ್ಲಾ-ಉ-ದ್ದೀನ್ ಖಿಲ್ಜಿಗೆ ಅನುಕೂಲವಾಯಿತು.[೨೪೮] ದೇವಗಿರಿಯ ಅಪಾರ ಸಂಪತ್ತು ಅವನ ಕಣ್ಣುಕುಕ್ಕಿತು. ಸೇವುಣ ದೊರೆ ರಾಮಚಂದ್ರನ ಕಾಲದಲ್ಲಿ ದೇವಗಿರಿಯನ್ನು ಇವನು ಸೂರೆಗೊಂಡನು. ರಾಮಚಂದ್ರನ ನಂತರ ಪಟ್ಟವೇರಿದ ಮೂರನೇ ಸಿಂಘಣನ ಆಳ್ವಿಕೆಯ ಕ್ರಿ.ಶ.೧೩೧೨ರಲ್ಲಿ ಮಲ್ಲಿಕಾಫರನು ಇನ್ನೊಮ್ಮೆ ದೇವಗಿರಿಯ ಮೇಲೆ ಆಕ್ರಮಣ ಮಾಡಿದನು. ಮೂರನೇ ಸಿಂಘಣನ ಮಗ ಮೂರನೇ ಮಲ್ಲುಗಿಯ ನಂತರ ಸೇವುಣರ ಆಡಳಿತ ಮುಗಿದಂತಾಯಿತು.[೨೪೯] ಎಲ್ಲ ದಿಕ್ಕುದೆಸೆಗಳಲ್ಲೂ ಒಂದು ಸಾವಿರ ವರ್ಷಗಳಿಗೂ ದೀರ್ಘ ಕಾಲ ಭಾರಿ ಪ್ರಭಾವ ಬೀರಿದ್ದ ಕನ್ನಡನಾಡು ರಾಜಕೀಯ ದೃಷ್ಟಿಯಿಂದ ಅಸ್ತಿತ್ವ ಕಳೆದುಕೊಂಡಿತು.[೨೫೦] ಕನ್ನಡನಾಡಿನ ಪುಟ್ಟ ಭೂಪ್ರದೇಶವಾದ ಹಾವೇರಿ ಜಿಲ್ಲೆಯ ಪರಿಸ್ಥಿತಿಯೂ ಇದಕ್ಕೆ ಹೊರತಾದುದಲ್ಲ. ಯಾವ ರಾಜರ ಬಿಗಿ ಹಿಡಿತಕ್ಕೂ ಸಿಗದೆ ಇಲ್ಲಿ ಅರಾಜಕತೆ ತಾಂಡವವಾಡುತ್ತಿರಬಹುದು. ದೂರದ ಉತ್ತರದ ಸುಲ್ತಾನರ ಹಿಡಿತವು ಬಿಗಿಯಾಗಿರಲಿಲ್ಲ. ಅಲ್ಲಾ-ಉ-ದ್ದಿನ್ ಖಿಲ್ಜಿ ತನ್ನ ಆಡಳಿತದಲ್ಲಿ ಇಲ್ಲಿಯ ರಾಜ್ಯಗಳನ್ನೇ ಅಧೀನ ರಾಜ್ಯಗಳನ್ನಾಗಿ ಮಾಡಿಕೊಂಡರೆ ಮುಂದೆ ಬಂದ ತುಘಲಕ್‌ನ ಆಡಳಿತವು ಇಲ್ಲಿ ಇರುವ ದೇಶಿಯ ರಾಜ್ಯಗಳನ್ನು ನಾಶಮಾಡಿ ನೇರವಾಗಿ ತನ್ನ ನಿಯಂತ್ರಣದಲ್ಲಿರುವ ಆಡಳಿತ ವ್ಯವಸ್ಥೆಯನ್ನು ಕಟ್ಟಲು ಪ್ರಯತ್ನಿಸಿತು. ಇದರಿಂದ ತಕ್ಕಮಟ್ಟಿಗೆ ಇದ್ದ ರಾಜಕೀಯ ಸ್ಥಿರತೆಯು ಪೂರ್ತಿ ಹದಗೆಟ್ಟು ರಾಜಕೀಯ ಶೂನ್ಯತೆಯು ಉಂಟಾಯಿತು.[೨೫೧] ಈ ಶೂನ್ಯತೆಯನ್ನು ತುಂಬಲು ಹದಿನಾಲ್ಕನೆಯ ಶತಮಾನದ ಆರಂಭದಲ್ಲಿ ಕಂಪಿಲಿಯ ಸಿಂಗೆಯ ನಾಯಕನು ಯತ್ನಿಸಿರಬೇಕು. ಆದರೆ ಮಹಮದ್ ಬಿನ್ ತುಘಲಖನ ಸೋದರಳಿಯ, ರಾಜಕುಮಾರ ಬಹಾವುದ್ದೀನ್ ಗುರ್ಷಸ್‌ನಿಗೆ ಆಶ್ರಯಕೊಟ್ಟು ಅವನನ್ನು ಉಳಿಸಿಕೊಳ್ಳುವುದಕ್ಕಾಗಿ ರಾಜ್ಯವನ್ನೂ, ಪ್ರಾಣವನ್ನೂ ಕಳೆದುಕೊಂಡರು.[೨೫೨] ಕಂಪಿಲಿಯ ನಾಯಕ ಮತ್ತು ಕುಮಾರರಾಮನಂತಹ ನಾಯಕರನ್ನು ಕಳೆದು

ಕೊಂಡದ್ದಕ್ಕಾಗಿ ಸ್ಥಳೀಯರು ರಾಮನನ್ನು ದೈವೀಕರಿಸಿ ದೇವಾಲಯಗಳನ್ನು ಕಟ್ಟಿದಂತೆ ತೋರುತ್ತದೆ.[೨೫೩] ಹಾವೇರಿ ತಾಲೂಕ ಸಂಗೂರಿನಲ್ಲಿ ವಿಜಯನಗರ ಅರಸ ಒಂದನೇ ದೇವರಾಯನ ಕಾಲದ ಶಾಸನ ಮಾದರಸನಿಂದ ಕುಮಾರರಾಮನಾಥ ದೇವರ ವಿಗ್ರಹ ಪ್ರತಿಷ್ಠಾಪನೆಯ ಬಗ್ಗೆ ಉಲ್ಲೇಖಿಸಿದೆ.[೨೫೪] ಇಂಥ ಪರಿಸ್ಥಿತಿಯಲ್ಲಿ ಇಲ್ಲಿಯ ಶೂನ್ಯತೆಯನ್ನು ತುಂಬುವಲ್ಲಿ ಯಶಸ್ಸು ಕಂಡವರು ವಿಜಯನಗರದ ಅರಸರು.

ವಿಜಯನಗರದ ಸ್ಥಾಪಕರಾದ ಹರಿಹರ ಬುಕ್ಕರು[೨೫೫] ಹೊಯ್ಸಳರ ಅಧಿಕಾರವನ್ನು ಒಪ್ಪಿಕೊಂಡರು. ಕಂಪಿಲರಾಯ ಮತ್ತು ಕುಮಾರರಾಮನ ಬಗ್ಗೆ ಈ ಪ್ರದೇಶದಲ್ಲಿ ಭಕ್ತಿ ಗೌರವ ಇದ್ದೇ ಇತ್ತು. ಕುಮಾರರಾಮನು ಹೊಯ್ಸಳರ ಸಂಬಂಧಿಯಾಗಿದ್ದರಿಂದ[೨೫೬] ಹೊಯ್ಸಳರ ಅಧಿಕಾರವನ್ನು ಒಪ್ಪಿಕೊಂಡ ಸಂಗಮ ಸಹೋದರರಲ್ಲಿ ಇಲ್ಲಿಯ ಜನ ಗೌರವ ತೋರಿತು. ಕುಮಾರರಾಮನ ಕಾರ್ಯವನ್ನು ಹರಿಹರ ಬುಕ್ಕರು ಮುಂದುವರಿಸುವರೆಂಬ ಭಾವನೆಯಿಂದ ವಿಜಯನಗರ ಸಾಮ್ರಾಜ್ಯಕ್ಕೆ ಬೆಂಬಲ ಕೊಟ್ಟರು. ಅಧಿಕ ಪರಿಶ್ರಮ ಪಡದೆ ಈ ಪ್ರದೇಶದ ಜನರ ನಿಷ್ಠೆಯನ್ನು ಸಂಗಮ ಸಹೋದರರು ಪಡೆದುಕೊಂಡರು. ಅಲ್ಲದೆ ವಿಜಯನಗರದ ಅಧಿಕಾರಿಗಳೇ ಕುಮಾರರಾಮನ ಪ್ರತಿಮೆಗಳನ್ನು ಸ್ಥಾಪಿಸಿದರು. ಕ್ರಿ.ಶ.೧೩೪೭ರಲ್ಲಿ ದೇವಗಿರಿಯಲ್ಲಿದ್ದ ದೆಹಲಿ ಸುಲ್ತಾನನ ಸೇನಾನಿ ಅಲ್ಲಾ ಉದ್ ದೀನ್ ಬಹಮನಿ ಬಂಡೆದ್ದು ಕಲಬುರ್ಗಿಯಿಂದ ಸ್ವತಂತ್ರ ರಾಜ್ಯ ಸ್ಥಾಪಿಸಿದ.[೨೫೭] ಈ ಬಹಮನಿ ಸುಲ್ತಾನನಿಗೂ ವಿಜಯನಗರ ಅರಸರಿಗೂ ಮೇಲಿಂದ ಮೇಲೆ ಘರ್ಷಣೆಗಳು ನಡೆಯುತ್ತಿದ್ದವು.

ಸಮುದ್ರ ಸಾಳ್ವವೀರ ಬಾಚಪ್ಪದೇವ ಎಂಬ ಅಧಿಕಾರಿಯನ್ನು ಉಲ್ಲೇಖಿಸುವ ಹರಿಹರನ ಕಾಲದ ವೀರಗಲ್ಲು ಶಾಸನವು ಅಬ್ಬಲೂರಿನಲ್ಲಿದೆ.[೨೫೮] ಎರಡನೇ ಹರಿಹರನ ಶಾಸನಗಳು ಬ್ಯಾಡಗಿ ತಾಲೂಕು ಹಿರೇಹಳ್ಳಿ, ಚಿಕ್ಕಣಜಿ ಶಿಗ್ಗಾವ ತಾಲೂಕು ಮುತ್ತಳ್ಳಿಯಲ್ಲಿವೆ. ಬಂಕಾಪುರದ ಒಂದು ಶಾಸನದಲ್ಲಿ ಹರಿಹರ ಮತ್ತು ಮಾಧವಮಂತ್ರಿಯ ಉಲ್ಲೇಖವಿದೆ. ಎರಡನೇ ಹರಿಹರನ ನಂತರ ಕ್ರಿ.ಶ.೧೪೦೬ರಲ್ಲಿ ಒಂದನೇ ದೇವರಾಯನು ಪಟ್ಟಕ್ಕೆ ಬಂದನು. ಈ ವೇಳೆಯಲ್ಲಿ ಬಹಮನಿಗಳು ಹಾಗೂ ರೆಡ್ಡಿಗಳು ಒಟ್ಟಾಗಿ ವಿಜಯನಗರದ ಮೇಲೆ ದಾಳಿ ಮಾಡಿದರು. ಇದರ ಪರಿಣಾಮವಾಗಿ ಬಂಕಾಪುರವು ಬಹಮನಿಯವರ ಪಾಲಾಯಿತು. ಬಂಕಾಪುರದ ವ್ಯಾಪ್ತಿಗೆ ಎಷ್ಟು ಪ್ರದೇಶಗಳು ಒಳಪಟ್ಟಿತ್ತೆಂಬುದು ನಿಖರವಾಗಿ ತಿಳಿದು ಬರುವುದಿಲ್ಲ. ದೇವರಾಯನ ನಂತರ ಪಟ್ಟಕ್ಕೆ ಬಂದ ಮಲ್ಲಿಕಾರ್ಜುನ (ಕ್ರಿ.ಶ.೧೪೪೬-೬೫) ಮತ್ತು ವಿರೂಪಾಕ್ಷ (ಕ್ರಿ.ಶ.೧೪೬೫-೮೫) ದುರ್ಬಲರಾಗಿದ್ದು, ವ್ಯಸನಿಗಳಾಗಿದ್ದರು. ಹೀಗಾಗಿ ಇವರ ಪ್ರದೇಶಗಳು ಒಂದೊಂದಾಗಿ ಕೈ ಬಿಡತೊಡಗಿದವು.

ವಿಜಯನಗರ ದೊರೆಗಳಲ್ಲಿ ಅತ್ಯಂತ ಗಮನಾರ್ಹನಾದ, ಸಮರ್ಥ ದೊರೆ ಎಂದು ಖ್ಯಾತನಾದ ಕೃಷ್ಣ ದೇವರಾಯನ ಅನೇಕ ಶಾಸನಗಳು ಜಿಲ್ಲೆಯಲ್ಲಿ ಕಂಡುಬರುವುದರಿಂದ ಇವನ ಕಾಲದಲ್ಲಿ ಈ ಪ್ರದೇಶವು ವಿಜಯನಗರದ ಭದ್ರ ಆಡಳಿತಕ್ಕೆ ಒಳಪಟ್ಟಿತ್ತೆಂದು ಸ್ಪಷ್ಟವಾಗುತ್ತದೆ. ಮುಂದೆ ಅಚ್ಯುತರಾಯನ ತರುವಾಯ ಪಟ್ಟವೇರಿದ ಸದಾಶಿವರಾಯನ ಶಾಸನಗಳು ಗುತ್ತಲ, ರಾಣೆಬೆನ್ನೂರುಗಳಲ್ಲಿ ಕಂಡುಬಂದಿವೆ. ಸದಾಶಿವರಾಯನು ನಾಮಮಾತ್ರ ಅರಸನಾಗಿದ್ದು ಆಡಳಿತವೆಲ್ಲ ಕೃಷ್ಣದೇವರಾಯನ ಅಳಿಯ ರಾಮರಾಯನ ಕೈಯಲ್ಲಿತ್ತು. ಬಹಮನಿ ರಾಜ್ಯ ಒಡೆದು ಹುಟ್ಟಿಕೊಂಡ ಐದು ಷಾಹಿ ರಾಜ್ಯಗಳ ಒಳಜಗಳದ ಲಾಭ ಪಡೆದು ಇವನು ರಾಜ್ಯವನ್ನು ಕೃಷ್ಣೆಯ ಆಚೆಗೆ ವಿಸ್ತರಿಸಿದನು. ಆದರೆ ಕ್ರಿ.ಶ.೧೫೬೫ರ ರಕ್ಕಸತಂಗಡಿ ಕದನದಲ್ಲಿ

ವಿಜಯನಗರ ಸೋತಿತು. ರಾಮರಾಯ ಮೃತನಾದ.[೨೯] ಆಗ ಹಾವೇರಿ ಜಿಲ್ಲೆಯಲ್ಲಿ ವಿಜಯನಗರದ ಅರಸರ ಆಳ್ವಿಕೆ ಕೊನೆಗೊಂಡು ವಿಜಾಪುರ ಆದಿಲ್‌ಷಾಹಿಗಳ ಆಡಳಿತ ಆರಂಭಗೊಂಡಿತು. ಆದಿಲ್‌ಷಾಹಿಗಳ ಆಡಳಿತದಲ್ಲಿ ಬಂಕಾಪುರ ಒಂದು ಗಣ್ಯ ಸ್ಥಾನವಾಗಿತ್ತು. ಬಂಕಾಪುರ, ಸವಣೂರು ಹಾಗೂ ರಾಣೆಬೆನ್ನೂರುಗಳಲ್ಲಿ ಇವರ ಕಾಲದ ಮಸೀದಿಗಳು ಇವೆ. ಕ್ರಿ.ಶ.೧೬೫೬ರ ನಂತರ ಒಂದು ಕಡೆ ಮರಾಠರ, ಶಿವಾಜಿ, ಮತ್ತೊಂದು ಕಡೆ ಮೊಘಲರು ವಿಜಾಪುರ ಆದಿಲ್‌ಷಾಹಿಗಳ ವಿನಾಶಕ್ಕೆ ಕಾರಣರಾದರು. ಆದರೆ ಕ್ರಿ.ಶ.೧೯೪೭ರವರೆಗೂ ಸವಣೂರು ನವಾಬರು ಈ ಪ್ರದೇಶದಲ್ಲಿ ಮುಂದುವರಿದರು.

ವಿಜಾಪೂರ ಷಾಹಿಗಳ ಪತನದ ನಂತರ ಜಿಲ್ಲೆಯು ಮೊಘಲರ ಮತ್ತು ಮರಾಠರ ದ್ವಂದ್ವವನ್ನು ಎದುರಿಸ ಬೇಕಾಯಿತು. ಮುಘಲರ ಔರಂಗಜೇಬನು ಅಬ್ದುಲ್ ಕರೀಂಖಾನನ ಮಗ ಅಬ್ದುಲ್ ರಾವುಫ್ ಖಾನನಿಗೆ ತೊರಗಲ್ ಮತ್ತು ಬಂಕಾಪುರಗಳ ಸರಕಾರವನ್ನು ಒಪ್ಪಿಸಿದನು.[೩೦] ಚೌರಂಗಜೇಬನ ಮರಣದ ನಂತರವು (ಕ್ರಿ.ಶ.೧೭೦೭) ಸವಣೂರು ನವಾಬರ ಮಾಂಡಳೀಕತ್ವದ ಮುಖಾಂತರ ಜಿಲ್ಲೆಯಲ್ಲಿ ಮೊಘಲರ ನೇರ ಪ್ರಭಾವ ಚಟುವಟಿಕೆಗಳು ನಡೆದಿದ್ದವು. ಕಾಲಕ್ರಮದಲ್ಲಿ ಮೊಘಲರ ನೇರ ಪ್ರಭಾವ ಕಡಿಮೆಯಾಗಿ ಸವಣೂರು ನವಾಬರಿಗೆ ಈ ಪ್ರದೇಶ ಸೇರಿತು.

ಕ್ರಿ.ಶ.೧೭೬೪ರ ಸುಮಾರಿಗೆ ಹೈದರಾಲಿ ಸವಣೂರಿನ ಮೇಲೆ ದಾಳಿ ಮಾಡಲು ಸವಣೂರಿನ ದಿವಾನ ಖಂಡೇರಾಯನ ಮಧ್ಯಸ್ಥಿಕೆಯಿಂದ ಹೈದರಾಲಿ ಮತ್ತು ಸವಣೂರ ನವಾಬರಲ್ಲಿ ಸ್ನೇಹ ಉಂಟಾಯಿತು. ಈ ಸ್ನೇಹದ ಫಲವಾಗಿ ಉಭಯ ಕುಟುಂಬಗಳ ಮಧ್ಯೆ ವಿವಾಹ ಸಂಬಂಧಗಳು ಏರ್ಪಟ್ಟವು.[೩೧] ಆದರೆ ಪೇಶ್ವೆ ಮಾಧವರಾಯನು ಹೈದರಾಲಿಯನ್ನು ಸೋಲಿಸಿದಾಗ ನವಾಬರು ಪೇಶ್ವೆಯರಿಗೆ ತಲೆಬಾಗಬೇಕಾಯಿತು. ಹೈದರನ ಮಗ ಟಿಪ್ಪುಸುಲ್ತಾನ್ ಕ್ರಿ.ಶ.೧೭೮೬ರಲ್ಲಿ ಮತ್ತೆ ಸವಣೂರನ್ನು ಗೆದ್ದುಕೊಡನು. ಕ್ರಿ.ಶ.೧೭೮೭ರ ಗಜೇಂದ್ರಗಡ ಒಪ್ಪಂದದಂತೆ ಟಿಪ್ಪುವು ಸವಣೂರನ್ನು ಬಿಟ್ಟುಕೊಡಬೇಕಾಯಿತು. ಮುಂದೆ ಟಿಪ್ಪುವಿನ ಪತನಾನಂತರ ಅಬ್ದುಲ್ ಖೈರ್‌ಖಾನನು ಕ್ರಿ.ಶ.೧೮೦೬ರ ಸುಮಾರಿಗೆ ೨೩ ಗ್ರಾಮಗಳನ್ನು ಒಳಗೊಂಡ ಸವಣೂರು ಸಂಸ್ಥಾನವನ್ನು ಪೇಶ್ವೆಯರ ಅಧೀನನಾಗಿ ಆಳಿದನು. ಕ್ರಿ.ಶ.೧೮೧೮ರಲ್ಲಿ ಪೇಶ್ವೆಯ ಪತನಾನಂತರ ಸವಣೂರು ಬ್ರಿಟಿಷರ ಆಶ್ರಿತ ಸಂಸ್ಥಾನವಾಯಿತು.

ಇಪ್ಪತ್ತನೇ ಶತಮಾನದ ಆದಿಭಾಗದಲ್ಲಿ ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳುವಳಿ ಮತ್ತು ಕರ್ನಾಟಕ ಏಕೀಕರಣ ಚಳವಳಿ ಎರಡೂ ಏಕಕಾಲಕ್ಕೆ ನಡೆದವು. ಈ ಎರಡೂ ಚಳುವಳಿಗೂ ಜಿಲ್ಲೆಯು ಗಮನಾರ್ಹ ಕೊಡುಗೆಯನ್ನು ಕೊಟ್ಟಿದೆ. ಸ್ವಾತಂತ್ರ್ಯಾನಂತರ ಸವಣೂರು ಸಂಸ್ಥಾನ ಭಾರತದ ಒಕ್ಕೂಟದಲ್ಲಿ ಸೇರಿತು. ಫಜಲ್ ಆಲಿ ಆಯೋಗದ ವರದಿಯಂತೆ ಮತ್ತು ಭಾರತ ಸರ್ಕಾರದ ತೀರ್ಮಾನದಂತೆ ಕನ್ನಡಿಗರ ರಾಜ್ಯ ಕ್ರಿ.ಶ.೧೯೫೬ರ ನವೆಂಬರ್-೧ ರಂದು ಅಸ್ತಿತ್ವಕ್ಕೆ ಬಂದಿತು. ಆಗ ಹಾವೇರಿ ಜಿಲ್ಲೆಯು ಪ್ರತ್ಯೇಕ ಜಿಲ್ಲೆ ಆಗಿರದೆ, ಭೂವಿಸ್ತೀರ್ಣದಲ್ಲಿ ಕರ್ನಾಟಕದಲ್ಲಿ ನಾಲ್ಕನೇ ಸ್ಥಾನದಲ್ಲಿದ್ದ ಧಾರವಾಡ ಜಿಲ್ಲೆಯ ದಕ್ಷಿಣ ಭಾಗದ ಭೂಪ್ರದೇಶವಾಗಿತ್ತು. ೨೪-೮-೧೯೯೭ರಲ್ಲಿ ಧಾರವಾಡ ಜಿಲ್ಲೆಯು ವಿಭಜನೆಗೊಂಡು ಗದಗ ಮತ್ತು ಹಾವೇರಿ ಎಂಬ ಹೊಸ ಜಿಲ್ಲೆಗಳು ಹುಟ್ಟಿಕೊಂಡವು. ಈಗ ಹಾವೇರಿ ಜಿಲ್ಲೆಯು ಭೂವಿಸ್ತೀರ್ಣದಲ್ಲಿ ಎಂಟನೆಯ ಸ್ಥಾನವನ್ನು ಪಡೆದಿದೆ(೪೮೩೧.೩ ಚ.ಕಿ.ಮೀ.).

## ಅಡಿಟಿಪ್ಪಣಿಗಳು

೧. ಧಾ.ಜಿ.ಗ್ಯಾ., ಪು.೧೩

೨. ಅದೇ, ಪು.೯

೩. ಕ.ಇನ್ಸ್., ಸಂ. VI, ನಂ. ೩೭ ಶಾಸನವು ರಟ್ಟಿಹಳ್ಳಿ ಭೌಗೋಳಿಕ ವರ್ಣನೆಯನ್ನು ಏಳು ಪಂಕ್ತಿಗಳಷ್ಟು ಸುಧೀರ್ಘವಾಗಿ (೧೪-೨೦) ಮಾಡಿದೆ. ಕುಮದ್ವತಿ ನದಿಯನ್ನು ಕುರಿತು ಹೇಳುವಾಗ

'ಸುತ್ತಿದಳಾಪುರವರವಧು ಚಿತ್ತಂ ಚೆತ್ತೆಸೆಯಲೆಸೆವ ದಗುಲಮನೆನೆ ತಾಂ ಸುತ್ತಿಕುಮುತ್ವತಿ ನೆಲಸಿರೆ

ಸುತ್ತಿಂ ತತ್ಪುರದ ಪುಂಣ್ಯವಾದುದ ಗಣ್ಯಂ' ಎಂದು ವರ್ಣಿಸಿದೆ.

ಹರಳಹಳ್ಳಿಯ ಕ್ರಿ.ಶ.೧೧೮೧ ರ ಶಾಸನ (ಸೌ.ಇಂ.ಇನ್ಸ್., ಸಂ. VIII, ಶಾ.ಸ. ೨೨೭) ಐದು ಪಂಕ್ತಿಗಳಷ್ಟು ಸುಧೀರ್ಘವಾಗಿ ರಾಜಧಾನಿ ಗುತ್ತಲದ ಭೌಗೋಳಿಕ ವರ್ಣನೆಯನ್ನು ಮಾಡಿದೆ (೪೯-೫೮).

ಸುತ್ತಿರೆ ಕೋಟೆಯಂ ಪರಿಖೆಯಂತದನೊಪ್ಪುವ ನಂದಾಳಿಗಳ್ಸುತ್ತಿರೆಯಂತವಂತರದೆ ಸುತ್ತಿರೆ ಶಾಳಿವನಂಗಳಂತವ ಸುತ್ತಿರೆ ಪಾಮರೀನ ಯನದೀಧಿತಿ[ಪಾ]ನ್ಥ...... ವಗುತ್ತವೊಳಲ್ವಿ ಚಿತ್ರಮೆನಿಪ್ಪುದು ವಂರ್ಣವಿಕೀರ್ಣ ಶೋಭೆಯಿಂ' ಎಂದು ವರ್ಣಿಸಿದೆ.

ಇದೇ ರೀತಿ ಅನೇಕ ಶಾಸನಗಳಲ್ಲಿ ಆಯಾ ಭೂಪ್ರದೇಶದ ವರ್ಣನೆಯನ್ನು ಗಮನಿಸಬಹುದು.

೪. ಇಂ.ಆ.ರಿ., ೧೯೫೯-೬೦, ಪು. ೩೭-೩೮ ಈ ಸಂಸ್ಕೃತಿಯ ಉಪಕರಣಗಳು ಅಶ್ಯೂಲಿಯನ್ ಮಾದರಿಯಲ್ಲಿವೆ.

೫. ಅದೇ, ೧೯೬೦-೬೧, ಪು.೨೮

೬. ಅದೇ, ಪು.೨೯

೭. ಅದೇ, ೧೯೫೮-೫೯, ಪು.೩೨

೮. ಅದೇ, ೧೯೬೨-೬೩, ಪು.೧೭

೯. ಅದೇ, ೧೯೯೨-೯೩, ಪು.೩೨

೧೦. ಅದೇ, ೧೯೫೯-೬೦, ಪು.೩೭-೩೮

೧೧. ಅದೇ, ಪು.೩೭-೩೮

೧೨. ಅದೇ, ೧೯೬೬-೬೭, ಪು.೨೭ ಈ ನೆಲೆಯಲ್ಲಿ ಕಂದು ವರ್ಣದ ಮಡಕೆ ಭಾಗಗಳು ದೊರೆತಿದ್ದು, ಬ್ರಹ್ಮಗಿರಿಯ ಮಾದರಿಯಲ್ಲಿದೆ.

೧೩. ಅದೇ, ೧೯೬೫-೬೬, ಪು.೩೨

೧೪. ಶಿವತಾರಕ, ಕೆ.ಬಿ., ಕರ್ನಾಟಕದ ಪುರಾತತ್ವ ನೆಲೆಗಳು, ಪು.೭೪೭

೧೫. ಇಂ.ಆ.ರಿ., ೧೯೬೨-೬೩, ಪು.೧೬-೧೭

೧೬. ನಾಗರಾಜ್‌ರಾವ್ ಎಂ.ಎಸ್., ಪ್ರೋಟೋ ಹಿಸ್ಟಾರಿಕ್ ಕಲ್ಚರ್ಸ್ ಆಫ್ ದಿ ತುಂಗಭದ್ರಾ ವ್ಯಾಲಿ, (ಎ ರಿಪೋರ್ಟ್ ಆನ್ ಹಳ್ಳೂರು ಎಕ್ಸಕವೇಶನ್), ಪು.೨೩ ಮತ್ತು ೧೩೪-೩೫

೧೭. ಇಂ.ಆ.ರಿ., ೧೯೫೮-೫೯, ಪು.೩೭

೧೮. ಸುಂದರ ಅ., ಅರ್ಲಿ ಚೇಂಬರ್ ಟೊಂಬ್ಸ್ ಆಫ್ ಸೌತ್ ಇಂಡಿಯಾ, ಪು.೪೩-೫

೧೯. ಇಂ.ಆ.ರಿ., ೧೯೫೯-೬೦, ಪು.೩೭-೩೮

೨೦. ಅದೇ, ಪು.೩೭-೩೮

೨೧. ಅದೇ, ೧೯೬೬-೬೭, ಪು.೨೭

೨೨. ಅದೇ, ೧೯೫೯-೬೦, ಪು.೩೭-೩೮ ಈ ನೆಲೆಯಲ್ಲಿ ದಪ್ಪವಾದ ಮತ್ತು ಒರಟಾದ ಕಂದುಬಣ್ಣದ ಮಡಕೆ ಭಾಗ ಬ್ರಹ್ಮಗಿರಿಯ ರೀತಿಯಲ್ಲಿದ್ದು, ಕಪ್ಪುವರ್ಣದ ಕೆಂಪು ಮಡಕೆ ಭಾಗಗಳು ಹಾಗೂ ೧೫ ಉಜ್ಜಿ ನಯಗೊಳಿಸಿದ ಕೊಡಲಿಗಳು ದೊರೆತಿವೆ.

೨೩. ಶಿವತಾರಕ, ಕೆ.ಬಿ., ಪೂರ್ವೋಕ್ತ, ಪು.೬೪೪

೨೪. ಅದೇ.

೨೫. ಸುಂದರ, ಅ., ಪೂರ್ವೋಕ್ತ, ಪು.೧೩೧-೩೩

೨೬. ಕ.ಚ., ಸಂ.೧, ಪು.೨೩೯

೨೭. ಶಿವತಾರಕ, ಕೆ.ಬಿ., ಪೂರ್ವೋಕ್ತ, ಪು.೬೪೯-೬೫೩

೨೮. ಪ.ಪೂ. ಶ್ರೀ ವಿಶ್ವೇಶತೀರ್ಥ ಶ್ರೀಪಾದರು, (ಸಂ) ಸರ್ವಮೂಲಗ್ರಂಥಗಳು, ಸಂ. ೭, ಪು.೧೮೩

೨೯. ಕಲಬುರ್ಗಿ, ಎಂ.ಎಂ., ಮಾರ್ಗ-೪, ಪು.೪೬೩

೩೦. ಭೋಜರಾಜ ಪಾಟೀಲ, 'ಹಾವೇರಿ ಗ್ರಾಮನಾಮ', ಇ.ದ., ಸಂ.೧೭, ಪು.೨೦೧

೩೧. ಸೌ.ಇಂ.ಇನ್ಸ್., ಸಂ. XVIII, ಶಾ.ಸಂ.೩೦, (ಕ್ರಿ.ಶ.ಸು.೯೬೦)

೩೨. ಅದೇ, ಶಾ.ಸಂ.೧೩೬

೩೩. ಅದೇ.

೩೪. ಮೇಲಿನ ಅಡಿ ಟಿಪ್ಪಣಿ ೩೦ ರಂತೆ

೩೫. ಸೌ.ಇಂ.ಇನ್ಸ್., ಸಂ. XVIII, ಶಾ.ಸಂ.೧೩೬

೩೬. ಅದೇ, ಸಂ.XVIII, ಶಾ.ಸಂ.೧೫೯, (ಕ್ರಿ.ಶ.೧೧೫೭)

೩೭. ಅದೇ, ಶಾ.ಸಂ.೨೪೩ (ಕ್ರಿ.ಶ.೧೨೬೦)

೩೮. ಮೇಲಿನ ಅಡಿಟಿಪ್ಪಣಿ ೩೬ ರಂತೆ

೩೯. ಧಾ.ಜಿ.ಗ್ಯಾ., ಪು.೩೦೪

೪೦. ಲಕ್ಷ್ಮಿನಾರಾಯಣ, ಎನ್. ಮತ್ತು ಪಂಚಮುಖಿ, ಆರ್.ಎಸ್., ಕರ್ನಾಟಕ ಅರಸು ಮನೆತನಗಳು, ಪು.೧-೩

೪೧. ರೈಸ್, ಬಿ.ಎಲ್., ಮೈಸೂರ ಆ್ಯಂಡ ಕೂರ್ಗ್ ಫ್ರಂ ದಿ ಇನ್‌ಸ್ಕ್ರಿಪ್ಶನ್ಸ್, ಪು.೧೭೪.

೪೨. ಕೃಷ್ಣಸ್ವಾಮಿ ಅಯ್ಯಂಗಾರ್ ಎಸ್., ಎನ್ಶಿಯಂಟ್ ಇಂಡಿಯಾ, ಪು.೪೬

೪೩. ಫ್ಲಿಟ್, ಜಿ.ಎಫ್., ಇನ್‌ಸ್ಕ್ರಿಪ್ಶನ್ಸ್ ರಿಲೆಟಿಂಗ್ ಟು ದಿ ರಟ್ಟ ಚಿಫನ್ಸ್ ಆಫ್ ಸೌದತ್ತಾ ಆ್ಯಂಡ್ ಬೆಳಗಾಂ, ಪು.೧೬೮-೧೬೯

೪೪. ಶ್ರೀನಿವಾಸ ರಿತ್ತಿ, ಮುಳಗುಂದ ನಾಡು, ಪು.೧-೩

೪೫. ದೀಕ್ಷಿತ್, ಜಿ.ಎಸ್., ಲೋಕಲ್ ಸೆಲ್ಫಗವರ್ನಮೆಂಟ್ ಇನ್ ಮಿಡಿವಲ್ ಕರ್ನಾಟಕ, ಪು.೨೬-೨೮

೪೬. ಕ.ಇನ್ಸ್., ಸಂ.VI, ಶಾ.ಸಂ.೨೩, ಮತ್ತಿಹಳ್ಳಿ

೪೭. ಅದೇ, ಶಾ.ಸಂ.೨೫, ನಾಗವಂದ

೪೮. ಸೌ.ಇಂ.ಇನ್., ಸಂ.XVIII, ಶಾ.ಸಂ.೬೧, ರಟ್ಟೆಹಳ್ಳಿ

೪೯. ಅದೇ, ಶಾ.ಸಂ.೧೯

೫೦. ಕ.ಇನ್., ಸಂ.VI, ಶಾ.ಸಂ.೧೧, ಮೆದೂರು

೫೧. ಅದೇ.

೫೨. ಸೌ.ಇಂ.ಇನ್ಸ್., ಸಂ.XVIII, ಶಾ.ಸಂ.೧೭, ಹೊನ್ನತ್ತಿ

೫೩. ಅದೇ, ಸಂ.XX, ನಂ.೪೯

೫೪. ಕ.ಇನ್., ಸಂ.V, ನಂ. ೪

೫೫. ಎ.ಕ. (ಹಳೆಯ) ಸಂ.VII, ಶಾ.ಸಂ.೯೨, ಬಳ್ಳಿಗಾವೆ

೫೬. ಕ.ಇನ್ಸ್., ಸಂ.V, ಶಾ.ಸಂ.೨೧

೫೭. ಇಂ.ಆಂ, ಸಂ.೧೦, ಶಾ.ಸಂ., CXVIII

೫೮. ಕ.ಇನ್ಸ್., ಸಂ.೧, ಶಾ.ಸಂ.೧೭

೫೯. ಅದೇ, ಸಂ.೧೬, ಶಾ.ಸಂ.೮

೬೦. ಅಣ್ಣಿಗೇರಿ ಎ.ಎಂ., ಶೇಷಶಾಸ್ತ್ರಿ ಆರ್., ಶಾಸನ ಸಂಗ್ರಹ, ಪು.೪೨

೬೧. ಚೆನ್ನಕ್ಕ ಪಾವಟೆ, ಹಾನಗಲ್ಲ ಕದಂಬರು, ಪು.೧೧

೬೨. ಎ.ಕ., (ಹಳೆಯ) ಸಂ.VII, ಶಿಕಾ., ೨೨೫ ಬಂದಳಿಕೆ, ಕ್ರಿ.ಶ.೧೨೦೪

೬೩. ಕ.ಚ., ಸಂ.೧, ಪು. ೨೮೬-೮೭

೬೪. ಕೃಷ್ಣರಾವ್, ಎಂ.ವಿ. ಮತ್ತು ಕೇಶವಭಟ್ಟ, ಎಂ., ಕರ್ನಾಟಕ ಇತಿಹಾಸ ದರ್ಶನ, ಪು.೧೧

೬೫. ಕ.ಚ., ಸಂ.೧, ಪು.೨೮೬

೬೬. ಅದೇ.

೬೭. ಪುರುಷೋತ್ತಮ, ರಾ.ಲ., ಕಂಬನಿದುಂಬಿದ ಕಲ್ಲುಗಳು, ಪು.೧೮

೬೮. ಸೌ.ಇಂ.ಇನ್., ಸಂ.XVIII, ನಂ.೨೯೬, ಹರಳಹಳ್ಳಿ, ಕ್ರಿ.ಶ.೧೧೮೮

೬೯. ರಿತ್ತಿ ಎಸ್.ಎಚ್., ದಿ ಸೇವುಣಾಸ್, ಪು.೩೧೩

೭೦. ಸೌ.ಇಂ.ಇನ್., ಸಂ. XX, ಶಾ.ಸಂ.೨, ರಾಣೆಬೆನ್ನೂರು (ತಾ) ಹಿರೇಬಿದರಿ

೭೧. ಎ.ಕ., (ಹಳೆಯ) ಸಂ.VIII, ಸೊರಬ ೪೧೬, ಹಿರೆಮಾಗಡಿ

೭೨. ಕ.ಚ., ಸಂ.೧, ಪು.೩೦೧

೭೩. ಅದೇ.

೭೪. ನೀಲಕಂಠಶಾಸ್ತ್ರೀ, ಕೆ.ಎ., ಎ ಹಿಸ್ಟರಿ ಆಫ್ ಸೌತ್ ಇಂಡಿಯಾ, ಪು.೯೨

೭೫. ಕ.ಸ್ಟೇ.ಗ್ಯಾ., (ಸಂ) ಸೂರ್ಯನಾಥ ವಿ. ಕಾಮತ, ೧೯೮೨, ಪು.೨೧೫

೭೬. ಕ.ಚ., ಸಂ.೧, ಪು.೩೬೬

೭೭. ಮೇಲಿನ ಅಡಿಟಿಪ್ಪಣಿ ೭೫ರಂತೆ

೭೮. ತಿಪ್ಪೇರುದ್ರಸ್ವಾಮಿ, ಎಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು.೮೧

೭೯. ಅದೇ.

೮೦. ಅದೇ.

೮೧. ಕ.ಸ್ವೇ.ಗೆ., ಪು.೨೧೭-೧೮

೮೨. ಕ.ಚ., ಸಂ.೧, ಪು.೩೧೪

೮೩. ಕರ್ನಾಟಕ ಸಾಹಿತ್ಯ ಚರಿತ್ರೆ, ಸಂ.೧, ಪು.೯೨

೮೪. ಧಾ.ಜಿ.ಗೆ., ಪು.೫೪

೮೫. ಸುರೇಶ ಗು.ದೊಡ್ಡಮನಿ, 'ಶಾತವಾಹನರ ಒಂದು ಹೊಸನೆಲೆ ಮತ್ತು ಚುಟುಗಳ ನಾಣ್ಯಗಳು', ಇ.ದ., ಸಂ.೧೭, ಪು.೪೮

೮೬. ನೀಲಕಂಠ ಶಾಸ್ತ್ರಿ, ಪೂರ್ವೋಕ್ತ, ಪು.೩೦೪

೮೭. ಕ.ಚ., ಪೂರ್ವೋಕ್ತ, ಪು.೩೦೪

೮೮. ಎ.ಕ., (ಹಳೆಯ) ಸಂ.VIII, ಶಿಕಾ ೨೬೩, ಮಳವಳ್ಳಿ

೮೯. ಅದೇ, ಶಿಕಾ ೨೭೬, ತಾಳಗುಂದ

೯೦. ಮೇಲಿನ ಅಡಿಟಿಪ್ಪಣಿ ೮೫ರಂತೆ

೯೧. ಕ.ಚ., ಸಂ.೧, ಪು.೩೬೬

೯೨. ಅದೇ.

೯೩. ಕರ್ನಾಟಕ ಪರಂಪರೆ, ಸಂ.೧, ಪು.೧೩೭

೯೪. ಅದೇ.

೯೫. ಅದೇ.

೯೬. ಎ.ಕ., (ಹಳೆಯ) ಸಂ.VIII, ಸೊರಬ ೨೬೮, ಕುಬಟೂರು

೯೭. ಶೆಟ್ಟಿ, ಎಸ್.ಆರ್., ಬನವಾಸಿ ಥ್ರೂ ದ ಏಜಸ್, ಪು.೫೩

೯೮. ಧಾ.ಜಿ.ಗೆ., ಪು.೫೫

೯೯. ಪಂಚಮುಖಿ ಆರ್.ಎಸ್., ಪ್ರಾಚೀನ ಕರ್ನಾಟಕ ಇತಿಹಾಸ, ಪು.೧೩೩

೧೦೦. ಕ.ಚ., ಸಂ.೧, ಪು.೩೭೨

೧೦೧. ಪಂಚಮುಖಿ, ಆರ್.ಎಸ್., ಪೂರ್ವೋಕ್ತ, ಪು.೧೪೫

೧೦೨. ಕರ್ನಾಟಕ ಪರಂಪರೆ, ಸಂ.೧, ಪು.೧೩೫

೧೦೩. ಅದೇ.

೧೦೪. ಕ.ಚ., ಸಂ.೧, ಪು.೩೭೨

೧೦೫. ಎ.ಇಂ., ಸಂ.XXXII, ಪು.೩೧೭-೨೪

೧೦೬. ಕ.ಚ., ಸಂ.೧, ಪು.೪೪೦

೧೦೭. ಎ.ಕ., (ಹಳೆಯ) ಸಂ.VII, ಶಿಕಾ ೧೦, ಗ್ರಾಮ

೧೦೮. ೧. ವಿನಯಾದಿತ್ಯನ ಕಾಲದ್ದು ಎನ್ನಲಾದ ಹರಿಹರ ತಾಮ್ರಶಾಸನದಲ್ಲಿ ರಾಜನು ತನ್ನ ಆಳ್ವಿಕೆಯ ೧೪ನೆಯ ವರ್ಷದ ಶಕ ೬೧೬, ಕಾರ್ತಿಕ ಪೌರ್ಣಿಮೆಯ ದಿನದಲ್ಲಿ ಹರೇಷಪುರದ ಸಮೀಪದಲ್ಲಿದ್ದ ಕರಂಜಪತ್ರದಲ್ಲಿ ಬೀಡುಬಿಟ್ಟಾಗ ಆಳುವ ರಾಜನ ವಿಜ್ಞಾಪನೆಯ ಮೇರೆಗೆ ವನವಾಸಿ ಮಂಡಲದ ಎಡೆವೊಳಲ್ ಭೋಗದಲ್ಲಿದ್ದ ಕಿರುಕಾಗಾಮಾಸಿ ಎಂಬ ಗ್ರಾಮವನ್ನು ಪೆಗಾಳಗಾಮಾಸಿ ಗ್ರಾಮದಲ್ಲಿಯ ಭೂಮಿಯನ್ನು ಬ್ರಾಹ್ಮಣನಿಗೆ ದಾನ ಮಾಡಿದನು. ಹರೇಷಪುರವು ಈಗಿನ ಹರಿಹರವು. ಕರಂಜಪತ್ರ ಹಾವೇರಿ ತಾಲೂಕಿನ ಕರಜಗಿಯಾಗಿದೆ.

೨. ಸೊರಬ ತಾಮ್ರಶಾಸನದಿಂದ ವಿನಯಾದಿತ್ಯನು ಚಿತ್ರವಾಹನನ ವಿಜ್ಞಾಪನೆಯ ಮೇರೆಗೆ ವೈಜಯಂತಿಯ ಈಶಾನ್ಯ ದಿಕ್ಕಿನಲ್ಲಿದ್ದ ಎಡೆವೊಳಲ್ ವಿಷಯದ ಸೇರಿವೂಗೆ ಗ್ರಾಮವನ್ನು ಒಬ್ಬ ಬ್ರಾಹ್ಮಣನಿಗೆ ದಾನ ಮಾಡಿದನೆಂದು ತಿಳಿಯುತ್ತದೆ.

೧೦೯. ಎ.ಇಂ., ಸಂ.XXXII, ಪು.೨೦೭-೨೪

೧೧೦. ಎ.ಇಂ., ಸಂ.XXIX, ಪು.೨೦೭

೧೧೧. ಕಲಬುರ್ಗಿ ಎಂ.ಎಂ., (ಸಂ) ಧಾ.ಜಿ.ಶಾ.ಸೂ., ಪು.೬೧

೧೧೨. ಸೌ.ಇಂ.ಇನ್ಸ್., ಸಂ.XVIII, ಶಾ.ಸಂ.೧

೧೧೩. ಅದೇ.



೧೧೪. ಇಂ.ಆಂ., ಸಂ.XI, ಪು.೬೯ ಮತ್ತು ಸೌ.ಇಂ.ಇನ್., ಸಂ.XX, ಶಾ.ಸಂ.೯

೧೧೫. ಎ.ಇಂ., ಸಂ.VI, ಪು.೨೫೧-೫೩

೧೧೬. ಸೌ.ಇಂ.ಇನ್ಸ್., ಸಂ.XX, ಶಾ.ಸಂ.೨೭೮

೧೧೭. ಭೋಜರಾಜ ಬ.ಪಾಟೀಲ, ನಾಗರಖಂಡ, ೭೦ ಒಂದು ಅಧ್ಯಯನ, ೧೯೯೫ ಪು.೩೬

೧೧೮. ಕ.ಚ., ಸಂ.೨, ಪು.೩೭

೧೧೯. ಎ.ಇಂ., ಸಂ.VI, ಪು.೧೬೦-೧೬೨

೧೨೦. ಭೋಜರಾಜ ಬ.ಪಾಟೀಲ, ಪೂರ್ವೋಕ್ತ, ಪು.೩೬

೧೨೧. ಅದೇ.

೧೨೨. ಸೌ.ಇಂ.ಇನ್ಸ್., ಸಂ.XX, ಶಾ.ಸಂ.೧೦

೧೨೩. ಕನ್ನಡ ರಿಸರ್ಚ್ ಇನ್ಸ್‌ಸ್ಟಿಟ್ಯೂಟ್ ಕಲೆಕ್ಷನ್, ೧೯೫೩-೫೭, ಪು.೬೫

೧೨೪. ಅದೇ, ೧೯೫೩-೫೭, ಪು. ೬೬

೧೨೫. ಕ.ಇನ್ಸ್., ಸಂ.VI, ಶಾ.ಸಂ.೧

೧೨೬. ಕ.ರಿ.ಇನ್ಸ್.ಕ., ೧೯೫೩-೫೭, ಪು.೭೨

೧೨೭. ಕ.ಇನ್ಸ್., ಸಂ.೧, ನಂ. ೧೩

೧೨೮. ಕ.ರಿ.ಇನ್ಸ್.ಕ., ೧೯೫೩-೫೭, ಪು.೪೯

೧೨೯. ಧಾ.ಜಿ.ಶಾ.ಸೂ., ಪೂರ್ವೋಕ್ತ, ಪು.೬೭

೧೩೦. ಚನ್ನಕ್ಕ ಪಾವಟೆ, ರಾಷ್ಟ್ರಕೂಟ ಸಾಮಂತ ಚಲ್ಲಕೇತನರು, ಪು.೩೬

೧೩೧. ಧಾ.ಜಿ.ಶಾ.ಸೂ., ಪು.೬೭

೧೩೨. ಕ.ಇನ್ಸ್., ಸಂ.VI, ಶಾ.ಸಂ.೫

೧೩೩. ಎ.ಇಂ., ಸಂ.XVI, ಪು.೨೮೫-೮೬

೧೩೪. ಅದೇ, ಪು.೨೮೪-೮೫

೧೩೫. ಧಾ.ಜಿ.ಶಾ.ಸೂ., ಪು.೩೨

೧೩೬. ಗೋಪಾಲ, ಬಾ.ರಾ., ದ ಲೇಟರ್ ವೆಸ್ಟರ್ನ್ ಚಾಲುಕ್ಯಾಸ್, ಪು.೩೬೬ ಮತ್ತು ಎ.ಇಂ., ಸಂ.XXXIII, ಪು.೧೩೧-೩೩

೧೩೭. ದೇಸಾಯಿ ಪಿ.ಬಿ., ಎ ಹಿಸ್ಟರಿ ಆಫ್ ಕರ್ನಾಟಕ ಪು.೧೭೧

೧೩೮. ಧಾ.ಜಿ.ಶಾ.ಸೂ., ಪು.೬೫

೧೩೯. ಎ.ಇಂ., ಸಂ.XVI, ಪು.೧೮೦-೮೩

೧೪೦. ಎ.ಕ., (ಹಳೆಯ) ಸಂ.VII, ಶಿಕಾರಿಪುರ ೧೩೬, ಬಳ್ಳಿಗಾವೆ

೧೪೧. ಕ.ಇನ್ಸ್., ಸಂ.VI, ಶಾ.ಸಂ.೧೨

೧೪೨. ಸೌ.ಇಂ.ಇನ್ಸ್., ಸಂ.XX, ಶಾ.ಸಂ.೪೯

೧೪೩. ಚನ್ನಕ್ಕ ಪಾವಟೆ, ಹಾನಗಲ್ಲ ಕದಂಬರು, ಪು.೨೪-೨೮

೧೪೪. ಕ.ಚ., ಸಂ.೧, ಪು.೬೪

೧೪೫. ಕ.ಇನ್ಸ್., ಸಂ.VI, ಶಾ.ಸಂ.೨೨, ೨೩



೧೪೬. ಧಾ.ಜಿ.ಶಾ.ಸೂ., ಪು.೪೫

೧೪೭. ಕ.ಇನ್ಸ್., ಸಂ.IV, ಶಾ.ಸಂ.೩೯

೧೪೮. ಎ.ಇಂ., ಸಂ.V, ಪು.೨೧೩-೩೧

೧೪೯. ಸೌ.ಇಂ.ಇನ್ಸ್., ಸಂ.XVIII, ಶಾ.ಸಂ.೧೧೨

೧೫೦. ಸೌ.ಇಂ.ಇನ್ಸ್., ಸಂ.XVIII, ಶಾ.ಸಂ.೧೦೮

೧೫೧. ಕ.ಇನ್ಸ್., ಸಂ.IV, ಶಾ.ಸಂ.೧೦

೧೫೨. ಸೌ.ಇಂ.ಇನ್ಸ್., ಸಂ.XVIII, ಶಾ.ಸಂ.೧೩೬

೧೫೩. ಕ.ಇನ್ಸ್., ಸಂ.V, ಶಾ.ಸಂ.೨೩



೧೫೪. ಕ.ಚ., ಸಂ.೨, ಪು.೭೦

೧೫೫. ಅದೇ.

೧೫೬. ಅದೇ, ಪು.೭೬

೧೫೭. ರಿತ್ತಿ ಎಚ್.ಎಸ್., ಪೂರ್ವೋಕ್ತ, ಪು.೩೧೩

೧೫೮. ಕರ್ನಾಟಕ ಪರಂಪರೆ, ಪು.೭೪

೧೫೯. ಕೃಷ್ಣರಾವ್ ಎಂ.ವಿ. ಮತ್ತು ಕೇಶವಭಟ್ಟ, ಪೂರ್ವೋಕ್ತ, ಪು.೨೯೩

೧೬೦. ಕ.ಇನ್ಸ್., ಸಂ.IV, ಶಾ.ಸಂ.೨

೧೬೧. ಕ.ಇನ್ಸ್., ಸಂ.VI, ಶಾ.ಸಂ.೪೪

೧೬೨. ಧಾ.ಜಿ.ಶಾ.ಸೂ., ಪು.೨೯

೧೬೩. ಅದೇ, ಪು.೨೮

೧೬೪. ಸೌ.ಇಂ.ಇನ್ಸ್., ಸಂ.XVIII, ಶಾ.ಸಂ.೨೪೨

೧೬೫. ಅದೇ, ಶಾ.ಸಂ.೨೩೫

೧೬೬. ಸೌ.ಇಂ.ಇನ್ಸ್., ಸಂ.XVIII, ಶಾ.ಸಂ.೨೪೭

೧೬೭. ಅದೇ, ಶಾ.ಸಂ.೨೪೯

೧೬೮. ಅದೇ, ಶಾ.ಸಂ.೨೬೮

೧೬೯. ಅದೇ, ಶಾ.ಸಂ.೨೭೦

೧೭೦. ಕ.ಚ., ಸಂ.೨, ಪು.೮೯

೧೭೧. ಎ.ಇಂ., ಸಂ.VII, ಪು. ೨೧೨, ನಿಡಗುಂದಿ

೧೭೨. ಅದೇ, ಪು. ೩೬೮, ಬಂದಳಿಕೆ

೧೭೩. ಎ.ಇಂ., ಸಂ.VI, ಪು.೨೮, ಕೊಣ್ಣೂರು

೧೭೪. ಚನ್ನಕ್ಕ ಪಾವಟೆ, ಪೂರ್ವೋಕ್ತ, ಪು.೭

೧೭೫. ಭೋಜರಾಜ ಪಾಟೀಲ, ಪೂರ್ವೋಕ್ತ, ಪು.೮೭

೧೭೬. ಅಲ್ತೆಕರ್, ಎ.ಎಸ್., ದ ರಾಷ್ಟ್ರಕೂಟಾಸ್ ಆ್ಯಂಡ್ ದೇರ್ ಟೈಮ್ಸ್, ಪು.೭೬, ೭೭

೧೭೭. ಚನ್ನಕ್ಕ ಪಾವಟೆ, ರಾ.ಸಾ.ಚ., ಪು.೧೩

೧೭೮. ಎ.ಇಂ., ಸಂ.VII, ಪು.೨೧೨

೧೭೯. ವಾಸುದೇವನ್, ಸಿ.ಎಸ್., (ಸಂ) ಕನ್ನಡ ಇನ್ಸ್‌ಕ್ರಿಪ್ಶನ್ಸ್ ಆಫ್ ಆಂಧ್ರಪ್ರದೇಶ, ಪು.೫೨

೧೮೦. ಕ.ರಿ.ಇನ್ಸ್.ಕ., ೧೯೪೨-೪೩, ಪು.೪೫-೪೬

೧೮೧. ಚನ್ನಕ್ಕ ಪಾವಟೆ, ಪೂರ್ವೋಕ್ತ, ಪು.೮

೧೮೨. ಸೌ.ಇಂ.ಇನ್ಸ್., ಸಂ.XVIII, ಶಾ.ಸಂ.೧೯, ಇಟಗಿ

೧೮೩. ಕ.ಇನ್ಸ್., ಸಂ.II, ಶಾ.ಸಂ.೪, ದಂಡಾಪುರ

೧೮೪. ಇಂ.ಆಂ, ಸಂ.XXXII, ಪು.೨೨೧-೨೨೬

೧೮೫. ಕ.ಇನ್ಸ್., ಸಂ.I, ಶಾ.ಸಂ.೧೬

೧೮೬. ಧಾ.ಜಿ.ಶಾ.ಸೂ., ಪು.೬೭

೧೮೭. ಸೌ.ಇಂ.ಇನ್ಸ್., ಸಂ.XVIII, ಶಾ.ಸಂ.೧೭

೧೮೮. ಎ.ಕ., (ಹಳೆಯ) ಸಂ.VII, ಶಿಕಾ, ೨೧೯, ಬಂದಳಿಕೆ

೧೮೯. ಅದೇ, ಸೊರಬ, ೪೦೮, ಹಿರೇಮಾಗಡಿ ಕ್ರಿ.ಶ.೯೫೧

೧೯೦. ಗೋಪಾಲ ಬಿ.ಆರ್., ಮೈನರ್ ಡೈನಾಸ್ಟೀಸ್ ಆಫ್ ಸೌಥ್ ಇಂಡಿಯಾ : ಕರ್ನಾಟಕ, ಸಂ.೧, ಪು.೭೫ ಇಲ್ಲಿ ಚಂದ್ರಾಪುರ ಕದಂಬರನ್ನು ಗೋವೆಯ ಶಾಖೆಯಿಂದ ಪ್ರತ್ಯೇಕವಾದೊಂದು ಶಾಖೆ ಎಂದೂ ಪರಿಗಣಿಸಲಾಗಿದೆ.

೧೯೧. ರೈಸ್ ಬಿ.ಎಲ್., ಮೈಸೂರ ಆಂಡ್ ಕೂರ್ಗ, ಪು. ೨೬

೧೯೨.

| ಕದಂಬರ ಶಾಖೆಗಳು | ರಾಜಧಾನಿ |
|---|---|
| ಪುನ್ನಾಡು | ಪುನ್ನಾಡು ೧೦,೦೦೦ ದ ಕೀರ್ತಿಪುರ |
| ಬೇಲೂರು | ಬೇಲೂರು |
| ಬಂಕಾಪುರ | ಬಂಕಾಪುರ |
| ಉಚ್ಚಂಗಿ | ಉಚ್ಚಂಗಿ |
| ನಾಗರಖಂಡ | ಬಂದಳಿಕೆ |
| ಕಳಿಂಗ | ? |
| ಕರಡಿಕಲ್ | ಕರಡಿಕಲ್ಲು |
| ರಟ್ಟಿಹಳ್ಳಿ | ನೂರಂಬಾಡ ರಟ್ಟಿಹಳ್ಳಿ |
| ಮಂಜರಾಬಾದ | ? |
| ಲುಂಕೆ (ಮೊಳಕಾಲ್ಮೂರು) | ? |
| ಕೋಗಳಿ | ಕೋಗಳಿ |

೧೯೩. ಕೃಷ್ಣರಾವ್, ಎಂ.ವಿ. ಮತ್ತು ಕೇಶವಭಟ್ಟ, ಎಂ., ಪೂರ್ವೋಕ್ತ, ಪು.೩೧೯

೧೯೪. ಇಂ.ಆಂ, ಸಂ.X, ಪು.೧೬, ಕರಗುದರಿ

೧೯೫. ತಾಳಗುಂದ ಶಾಸನದಲ್ಲಿ ವರ್ಣಿತನಾದ ಮುಕ್ಕಣ್ಣ ಕದಂಬರನೂ ಇಲ್ಲಿ ಬರುವ ಮಯೂರವರ್ಮನೂ ಅಭಿನ್ನರೆಂದು ತೋರುತ್ತದೆ. ಮೇಲಿನ ಅಡಿಟಿಪ್ಪಣಿ ೧೯೩ ರಂತೆ.

೧೯೬. ಎ.ಕ., (ಹಳೆಯ) ಸಂ.VII, ಸೊರಬ, ೪೫೪, ಸೋಮನಹಳ್ಳಿ

೧೯೭. ಗುರವ, ಆರ್.ಎನ್., ಕಾರವಾರ ಜಿಲ್ಲೆಯ ಶಾಸನಗಳು, ಧಾರವಾಡ, ೧೯೭೫, ಪು.೪೪

೧೯೮. ಇಂ.ಆಂ, ಸಂ.XVI, ಪು.೨೯, ಬನವಾಸಿ

೧೯೯. ಧಾ.ಜಿ.ಶಾ.ಸೂ., ಪು.೫೯

೨೦೦. ಎ.ಇಂ., ಸಂ.XV, ಪು.೩೩೧-೩೬

೨೦೧. ಗೋಪಾಲ ಬಿ.ಆರ್., ಪೂರ್ವೋಕ್ತ, ಪು.೩೬-೩೭ರಲ್ಲಿ ಬಂಕಾಪುರ ಕದಂಬರು, ಹಾನಗಲ್ಲ ಕದಂಬರ ಒಂದು ಪ್ರಮುಖ ಶಾಖೆ ಎಂದು ಹೇಳಿದ್ದಾರೆ.

೨೦೨. ಎ.ಇಂ., ಸಂ.XVI, ಶಾ.ಸಂ.೭೫-೮೧

೨೦೩. ಚನ್ನಕ್ಕ ಪಾವಟೆ, ಹಾನಗಲ್ಲ ಕದಂಬರು, ಪು.೪೪

೧೮೮. ಎ.ಕ., (ಹಳೆಯ) ಸಂ.VII, ಶಿಕಾ, ೨೧೯, ಬಂದಳಿಕೆ

೧೮೯. ಅದೇ, ಸೊರಬ, ೪೦೮, ಹಿರೇಮಾಗಡಿ ಕ್ರಿ.ಶ.೯೫೧

೧೯೦. ಗೋಪಾಲ ಬಿ.ಆರ್., ಮೈನರ್ ಡೈನಾಸ್ಟೀಸ್ ಆಫ್ ಸೌಥ್ ಇಂಡಿಯಾ : ಕರ್ನಾಟಕ, ಸಂ.೧, ಪು.೭೫ ಇಲ್ಲಿ ಚಂದ್ರಾಪುರ ಕದಂಬರನ್ನು ಗೋವೆಯ ಶಾಖೆಯಿಂದ ಪ್ರತ್ಯೇಕವಾದೊಂದು ಶಾಖೆ ಎಂದೂ ಪರಿಗಣಿಸಲಾಗಿದೆ.

೧೯೧. ರೈಸ್ ಬಿ.ಎಲ್., ಮೈಸೂರ ಆಂಡ್ ಕೂರ್ಗ್, ಪು. ೨೭

೧೯೨. ಕದಂಬರ ಶಾಖೆಗಳು — ರಾಜಧಾನಿ

| ಕದಂಬರ ಶಾಖೆಗಳು | ರಾಜಧಾನಿ |
|---|---|
| ಪುನ್ನಾಡು | ಪುನ್ನಾಡು ೧೦,೦೦೦ ದ ಕೀರ್ತಿಪುರ |
| ಬೇಲೂರು | ಬೇಲೂರು |
| ಬಂಕಾಪುರ | ಬಂಕಾಪುರ |
| ಉಚ್ಚಂಗಿ | ಉಚ್ಚಂಗಿ |
| ನಾಗರಖಂಡ | ಬಂದಳಿಕೆ |
| ಕಳಿಂಗ | ? |
| ಕರಡಿಕಲ್ | ಕರಡಿಕಲ್ಲು |
| ರಟ್ಟಿಹಳ್ಳಿ | ನೂರಂಬಾಡ ರಟ್ಟಿಹಳ್ಳಿ |
| ಮಂಜರಾಬಾದ | ? |
| ಲುಂಕೆ (ಮೊಳಕಾಲ್ಮೂರು) | ? |
| ಕೋಗಳಿ | ಕೋಗಳಿ |

೧೯೩. ಕೃಷ್ಣರಾವ್, ಎಂ.ವಿ. ಮತ್ತು ಕೇಶವಭಟ್ಟ, ಎಂ., ಪೂರ್ವೋಕ್ತ, ಪು.೩೧೯

೧೯೪. ಇಂ.ಆಂ, ಸಂ.X, ಪು.೧೭, ಕರಗುದರಿ

೧೯೫. ತಾಳಗುಂದ ಶಾಸನದಲ್ಲಿ ವರ್ಣಿತನಾದ ಮುಕ್ಕಣ್ಣ ಕದಂಬರನೂ ಇಲ್ಲಿ ಬರುವ ಮಯೂರವರ್ಮನೂ ಅಭಿನ್ನರೆಂದು ತೋರುತ್ತದೆ. ಮೇಲಿನ ಅಡಿಟಿಪ್ಪಣಿ ೧೯೩ ರಂತೆ.

೧೯೬. ಎ.ಕ., (ಹಳೆಯ) ಸಂ.VII, ಸೊರಬ, ೪೫೪, ಸೋಮನಹಳ್ಳಿ

೧೯೭. ಗುರವ, ಆರ್.ಎನ್., ಕಾರವಾರ ಜಿಲ್ಲೆಯ ಶಾಸನಗಳು, ಧಾರವಾಡ, ೧೯೭೫, ಪು.೪೪

೧೯೮. ಇಂ.ಆಂ, ಸಂ.XVI, ಪು.೨೯, ಬನವಾಸಿ

೧೯೯. ಧಾ.ಜಿ.ಶಾ.ಸೂ., ಪು.೫೯

೨೦೦. ಎ.ಇಂ., ಸಂ.XV, ಪು.೩೩೧-೩೬

೨೦೧. ಗೋಪಾಲ ಬಿ.ಆರ್., ಪೂರ್ವೋಕ್ತ, ಪು.೩೬-೩೭ರಲ್ಲಿ ಬಂಕಾಪುರ ಕದಂಬರು, ಹಾನಗಲ್ಲ ಕದಂಬರ ಒಂದು ಪ್ರಮುಖ ಶಾಖೆ ಎಂದು ಹೇಳಿದ್ದಾರೆ.

೨೦೨. ಎ.ಇಂ., ಸಂ.XVI, ಶಾ.ಸಂ.೭೫-೮೧

೨೦೩. ಚನ್ನಕ್ಕ ಪಾವಟೆ, ಹಾನಗಲ್ಲ ಕದಂಬರು, ಪು.೪೪

೨೦೪. ಎ.ರಿ.ಸೌ.ಇಂ.ಎ., ೧೯೪೯-೫೦, ಶಾ.ಸಂ.೪೯, ಹಾವಣಗಿ

೨೦೫. ಅದೇ, ೧೯೪೬-೪೭, ಶಾ.ಸಂ.೨೦೯, ಬೆಳವತ್ತಿ

೨೦೬. ಅದೇ, ಶಾ.ಸಂ.೨೧೦, ಬೆಳವತ್ತಿ

೨೦೭. ಕ.ಇನ್ಸ್., ಸಂ.I, ಶಾ.ಸಂ.೧೭

೨೦೮. ಸೌ.ಇಂ.ಇನ್ಸ್., ಸಂ.XVIII, ಶಾ.ಸಂ.೬೬, ಬಂಕಾಪುರ

೨೦೯. ಎ.ರಿ.ಸೌ.ಇಂ.ಎ., ೧೯೪೭-೪೮, ಶಾ.ಸಂ.೧೯೮, ಗುಡಗುಡಿ

೨೧೦. ಕ.ಇನ್ಸ್., ಸಂ.V, ಶಾ.ಸಂ.೭, ತಮ್ಮಡಿಕಲ್ಲಾಳ (ತಾ) ಸಿದ್ದಾಪುರ

೨೧೧. ಗೋಪಾಲ, ಬಿ.ಆರ್., ಬನವಾಸಿ, ಪು.೩೮

೨೧೨. ಎ.ರಿ.ಸೌ.ಇಂ.ಎ., ೧೯೪೫-೪೬, ಶಾ.ಸಂ.೨೪೪

೨೧೩. ಚನ್ನಕ್ಕ ಪಾವಟೆ, ಹಾನಗಲ್ಲ ಕದಂಬರು, ಪು.೪೪ ಇಲ್ಲಿ ಉಭಯಸ್ವಾಮ್ಯ ಎಂಬುದನ್ನು ಇಬ್ಬರಿಂದ ಒಡೆತನದ ಮಾನ್ಯತೆ ಪಡೆದು ಆಳುವ ಅಧಿಕಾರವನ್ನು ಸೂಚಿಸುವಂತಹ ಪದ. ತ್ರಿಭೋಗ ಎಂಬುದು ದಾನಭೋಗದ ಮೂರು ತಲೆಮಾರಿನ ಅಧಿಕಾರ ಮುಗಿದು ಮುಂದೆ ಬಂದವರು ಅದನ್ನು ಪುನರ್ದತ್ತಿ ಮಾಡಿಕೊಟ್ಟ ಅಧಿಕಾರವೆನ್ನಬಹುದು.

೨೧೪. ಫ್ಲೀಟ್, ಜೆ.ಓಫ್., ಡಾಯ್‌ನಾಸ್ಟಿಸ್ ಆಫ್ ದ ಕನರೆಸಾ ಡಿಸ್ಟ್ರಿಕ್ಟ್ಸ್, ಪು.೫೬೨

೨೧೫. ಜಾರ್ಜ್ ಎಂ. ಮೋರೇಸ್, ಕದಂಬಕುಲ, ಪು.೧೨೯

೨೧೬. ಭೋಜರಾಜ, ಬ.ಪಾಟೀಲ, ಪೂರ್ವೋಕ್ತ, ಪು.೫೩

೨೧೭. ಹಾನಗಲ್ಲ ಕದಂಬದೊರೆ ಶಾಂತವರ್ಮನ ಮಗಳು ಸಿರಿಯಾದೇವಿಯನ್ನು ನಾಗರಖಂಡದ ಬೊಪ್ಪನಿಗೆ ಕೊಟ್ಟು ವಿವಾಹ ಮಾಡಲಾಗಿತ್ತು.

೨೧೮. ಎ.ಕ., (ಹಳೆಯ) ಸಂ.VIII, ಸೊರಬ, ೪೫೪, ಸೋಮನಹಳ್ಳಿ

೨೧೯. ಕ.ಇನ್ಸ್., ಸಂ.IV, ಶಾ.ಸಂ.೧, ಸೊರಬ ೩೩೬, ಹಿರೇಚೌಟಿ

೨೨೦. ಭೋಜರಾಜ ಬ. ಪಾಟೀಲ, ಪೂರ್ವೋಕ್ತ, ಪು. ೫೪

೨೨೧. ಬಿಜ್ಜಳನು ಸೋವಿದೇವನನ್ನು ಬಳಸಿಕೊಂಡ ಎನ್ನುವಲ್ಲಿ ಭೋಜರಾಜ ಪಾಟೀಲ ಅವರು ‘ಬಿಜ್ಜಳನಿಗೆ ಚಾಲುಕ್ಯ ಸಿಂಹಾಸನ ದೊರಕಿಸಿ ಕೊಡುವಲ್ಲಿ ನಾಗರಖಂಡದ ಬಮ್ಮರಸ ಮತ್ತು ದಂಡನಾಯಕ ರೇಚರಸನೂ ಕಾರಣ. ರೇಚರಸ ಕ್ರಿ.ಶ. ೧೧೪೨ ರಲ್ಲಿಯೇ ಬನವಾಸಿಗೆ ರಾಜಪ್ರತಿನಿಧಿಯಾಗಿದ್ದನು, ಆದ್ದರಿಂದ ಬನವಾಸಿ ಮಂಡಲದ ಸಾಮಂತ ಅರಸರೆಲ್ಲರ ಬಲಾಬಲಗಳ ಪರಿಚಯ ಬಿಜ್ಜಳ ಹಾಗೂ ಅವನ ವಿಶ್ವಸ್ಥ ದಂಡನಾಯಕರಿಗೆ ಚೆನ್ನಾಗಿತ್ತು. ಹಾನಗಲ್ಲ ಕದಂಬರ ಮೇಲೆ ಹಿಡಿತ ಸಾಧಿಸಲು ಪರಾಕ್ರಮಿ ಸೋಯಿದೇವನನ್ನು ಆರಿಸಿಕೊಂಡರು. ಅವರ ವಿರುದ್ಧ ಇವನನ್ನು ಎತ್ತಿಕಟ್ಟಿ ಸ್ವತಂತ್ರನಾಗಲು ಬಿಜ್ಜಳ ಪ್ರಚೋದಿಸಿದುದಕ್ಕೆ ಕ್ರಿ.ಶ.೧೧೪೪ ಹಾಗೂ ಕ್ರಿ.ಶ. ೧೧೫೯ರ ದಾಖಲೆಗಳು ಆಧಾರ ಒದಗಿಸುತ್ತವೆ ಎಂದು ದಾಖಲಿಸಿದ್ದಾರೆ. ನೋಡಿ. ಭೋಜರಾಜ ಬ. ಪಾಟೀಲ ಪೂರ್ವೋಕ್ತ, ಪು.೫೪

೨೨೨. ಎ.ಕ., (ಹಳೆಯ) ಸಂ.VIII, ಸೊರಬ, ೩೪೬, ಬೆಣ್ಣೆಗೇರಿ

೨೨೩. ಜಾರ್ಜ್ ಎಂ. ಮೊರೇಸ್, ಪೂರ್ವೋಕ್ತ, ಪು.೨೩೭

೨೨೪. ಕ.ಇನ್ಸ್., ಸಂ.VI, ಶಾ.ಸಂ.೩೯, ಹರಳಹಳ್ಳಿ

೨೨೫. ಫ್ಲೀಟ್, ಜೆ.ಎಫ್., ಪೂರ್ವೋಕ್ತ, ಪು.೫೮೦

೨೨೬. ಸೌ.ಇಂ.ಇನ್ಸ್., ಸಂ.XVIII, ಶಾ.ಸಂ.೧೨೪

೨೨೭. ಅದೇ, ಶಾ.ಸಂ.೧೯೨ ಹಿಂದೂ ಸಂಪ್ರದಾಯದಲ್ಲಿ ಅಣ್ಣನ ಮಗನನ್ನೂ ಮಗನೆಂದು ಕರೆಯುವ ಸಂಪ್ರದಾಯವಿದೆ.

೨೨೮. ಸೌ.ಇಂ.ಇನ್ಸ್., ಸಂ.XVIII, ಶಾ.ಸಂ.೨೯೨

೨೨೯. ಕ.ಇನ್ಸ್., ಸಂ.VI, ಶಾ.ಸಂ.೩೯

೨೩೦. ಅದೇ, ಶಾ.ಸಂ.೭೪, ಹರಳಹಳ್ಳಿ

೨೩೧. ಅದೇ, ಶಾ.ಸಂ.೭೫, ಹರಳಹಳ್ಳಿ

೨೩೨. ಅದೇ, ಶಾ.ಸಂ.೩೫, ರಟ್ಟಿಹಳ್ಳಿ

೨೩೩. ಸೌ.ಇಂ.ಇನ್ಸ್., ಸಂ.XVIII, ಶಾ.ಸಂ.೩೦೨, ಹೊನ್ನತ್ತಿ

೨೩೪. ಧಾ.ಜಿ.ಗೆ., ಪು.೭೭

೨೩೫. ಸೌ.ಇಂ.ಇನ್ಸ್., ಸಂ.XX, ಶಾ.ಸಂ.೨೨೧

೨೩೬. ಕ.ಇನ್ಸ್., ಸಂ.VI, ಶಾ.ಸಂ.೩೧

೨೩೭. ಅದೇ, ಶಾ.ಸಂ.೭

೨೩೮. ಅದೇ, ಶಾ.ಸಂ.೧೧

೨೩೯. ಅದೇ, ಶಾ.ಸಂ.೩೭

೨೪೦. ಅದೇ, ಪ್ರಸ್ತಾವನೆ, ಪು.xxvii

೨೪೧. ಅದೇ, ಶಾ.ಸಂ.೩೧ ಮತ್ತು ೩೭

೨೪೨. ಅದೇ.

೨೪೩. ಅದೇ.

೨೪೪. ಅದೇ, ಶಾ.ಸಂ.೪೪

೨೪೫. ದೇಸಾಯಿ ಪಿ.ಬಿ., ಹಿಸ್ಟರಿ ಆಫ್ ಕರ್ನಾಟಕ ಪು.೨೩೭

೨೪೬. ಕರ್ನಾಟಕ ಪರಂಪರೆ, ಮೂಲ ಲೇಖಕರು : ಆರ್.ಎನ್.ಗುರವ್, ಅನು: ಸೂರ್ಯನಾಥ ಕಾಮತ್ ಪು.೨೪೧

೨೪೭. ಅದೇ.

೨೪೮. ಕ.ಚ., ಸಂ.೨, ಪು.೮೭

೨೪೯. ಅದೇ.

೨೫೦. ಮೇಲಿನ ಅಡಿಟಿಪ್ಪಣಿ ೨೪೬ ರಂತೆ

೨೫೧. ಕ.ಚ., ಸಂ. ೩, ಪು. ೧೧

೨೫೨. ರಾಬರ್ಟ್ ಸಿವೆಲ್, ಎ ಫಾರಗಾಟನ್ ಎಮ್‌ಪಾಯರ್, ಪು. ೧೭

೨೫೩. ಧಾ.ಜಿ.ಗೆ., ಪು.೮೫

೨೫೪. ಧಾ.ಜಿ.ಶಾ.ಸೂ., ಪು.೪೭

೨೫೫. ರಾಬರ್ಟ್ ಸಿವೆಲ್, ಪೂರ್ವೋಕ್ತ, ಪು.೭

೨೫೬. ಅದೇ, ಪು.೧೭

೨೫೭. ಅದೇ, ಪು.೩೦

೨೫೮. ಧಾ.ಜಿ.ಶಾ.ಸೂ., ಪೂರ್ವೋಕ್ತ, ಪು.೭೧

೨೫೯. ರಾಬರ್ಟ್ ಸಿವೆಲ್, ಪೂರ್ವೋಕ್ತ, ಪು.೨೦೫-೬

೨೬೧. ಗೋವಿಂದಮೂರ್ತಿ ದೇಸಾಯಿ, ಸವಣೂರು ನವಾಬರು, ಪು.೭

೨೬೧. ಅದೇ, ಪು.೪೪

# ಅಧ್ಯಾಯ ೩

# ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳು

## ೩.೧. ದೇವಾಲಯಗಳ ಉಗಮ ಮತ್ತು ಪ್ರಾಚೀನತೆ

ಮಧ್ಯಯುಗೀನ ಕಾಲದ ಸಮಾಜದಲ್ಲಿ ದೇವಾಲಯಗಳು ಇಲ್ಲದೆ ಬದುಕೇ ಇಲ್ಲ ಎನ್ನುವಷ್ಟರ ಮಟ್ಟಿಗೆ ಭದ್ರವಾಗಿ ತಳವೂರಿ ನಿಂತ ದೇವಾಲಯಗಳ ವಿಕಾಸದ ವಿವಿಧ ಹಂತಗಳನ್ನು ಗುರುತಿಸುವುದು ತಕ್ಕಮಟ್ಟಿಗೆ ಸಾಧ್ಯವಾದರೂ ಅದು ಉಗಮಗೊಂಡ ಬಗೆಗೆ ಖಚಿತವಾಗಿ ಹೇಳಲು ಸಾಧ್ಯವಾಗುವುದಿಲ್ಲ. ಈ ವಿಷಯದಲ್ಲಿ ಅಲ್ಟೇಕರ ಅವರು "ಮೂರ್ತಿ ಪೂಜೆಯ ಆರಂಭ ಮತ್ತು ಬೆಳವಣಿಗೆಗಳ ವಿಷಯವಾಗಿ ಇನ್ನೂ ಕೆಲಸ ನಡೆಯಬೇಕಾಗಿದೆ. ಮನೆಯಲ್ಲಾಗಲಿ, ದೇವಸ್ಥಾನದಲ್ಲಾಗಲಿ ದೇವತಾಮೂರ್ತಿಗಳನ್ನು ಪೂಜಿಸುವ ವಿಷಯವನ್ನು ಧರ್ಮಸೂತ್ರಕಾರರು ಸಾಮಾನ್ಯವಾಗಿ ಹೇಳುವುದಿಲ್ಲ. ಮನುವೂ ಹೇಳುವುದಿಲ್ಲ. ದೇವಸ್ಥಾನಗಳನ್ನು ಸ್ಥಾಪಿಸುವ ಸಂಪ್ರದಾಯವು ಅಶೋಕನಿಗಿಂತ ಈಚಿನದೆಂದು ಕಾಣುತ್ತದೆ. ಬಹುಜನ ನೆರೆಯುತ್ತಿದ್ದ ಶೌತ್ರಯಜ್ಞಗಳ ಸ್ಥಾನದಲ್ಲಿ ಇವು ಕಾಣಿಸಿಕೊಂಡವು. ಬೌದ್ಧರ ಭವ್ಯ ದೇವಾಲಯಗಳನ್ನು, ವಿಹಾರಗಳನ್ನು ನೋಡಿದ ಹಿಂದೂಗಳ ಮನಸ್ಸಿನಲ್ಲಿ ಅಂತಹ ಸಾರ್ವಜನಿಕ ಆರಾಧನಾ ಕೇಂದ್ರಗಳನ್ನು ಸ್ಥಾಪಿಸಬೇಕೆಂಬ ಇಚ್ಛೆ ಉದಯಿಸಿದ್ದರೂ ಇರಬಹುದು. ಅಂತೂ ನಿಜವಾದ ಕಾರಣಗಳೇನೇ ಇರಲಿ ದೇವಸ್ಥಾನಗಳು ಸಾರ್ವಜನಿಕ ಪೂಜಾ ಕೇಂದ್ರಗಳೆಂದು ಮುಂದೆ ಪರಿಗಣಿತವಾದವು..." ಎಂದು ಅಭಿಪ್ರಾಯಪಡುತ್ತಾರೆ.[೧] ವೇದಕಾಲದಲ್ಲಿ 'ಅಗ್ನಿದ್ರಿಯ' ಎಂಬ ಸಮಾಧಿ ಮಂದಿರಗಳು ಇದ್ದವು ಎನ್ನಲಾಗಿದೆ. ಈ ಅಗ್ನಿದ್ರಿಯಗಳೇ ಬೌದ್ಧಸ್ತೂಪಗಳಿಗೆ ಮೂಲ ಎಂಬ ನಿರ್ಧಾರಕ್ಕೆ ಕೆಲವು ವಿದ್ವಾಂಸರು ಬಂದಿದ್ದಾರೆ.[೨] ಸಮಾಧಿಗಳೇ ದೇವಾಲಯಗಳ ಮೂಲ ಎಂಬ ಪ್ರಬಲವಾದ ವಾದವೂ ಇದೆ.[೩] ಆದ್ದರಿಂದ ದೇವಾಲಯಗಳ ಉಗಮಕ್ಕೆ ಬೌದ್ಧಸ್ತೂಪಗಳು ಕಾರಣವೆ? ವೇದಕಾಲೀನ ಯಜ್ಞವೇದಿಕೆಗಳೇ? ಸಮಾಧಿ ಮಂದಿರಗಳು ಕಾರಣವೆ? ಎಂಬ ಪ್ರಶ್ನೆಗೆ ಸರಿಯಾದ ಉತ್ತರ ದೊರೆಯಬೇಕಿದೆ.

### ದೇವಾಲಯಗಳ ಉಗಮ

**ಪ್ರಕೃತಿ ಪೂಜೆ :** ಪ್ರಪಂಚದಲ್ಲಿ, ಕಣ್ಣಿಗೆ ಕಾಣದ ಮತ್ತು ಕೈಗೆ ಎಟುಕದೆ ಇರುವ ಪ್ರಬಲವಾದ ಶಕ್ತಿಗಳು ಪ್ರಕೃತಿಯಲ್ಲಿ ತುಂಬಿವೆ ಎನ್ನುವುದು ತುಂಬ ಪುರಾತನ ನಂಬಿಕೆ. ಪ್ರಕೃತಿಯ ಪ್ರಕೋಪದ ಮುಂದೆ ಮನುಷ್ಯ

ನಿಸ್ಸಹಾಯಕನಾದ. ತನ್ನ ಸುತ್ತಲೂ ನಡೆಯುವ ವಿಚಿತ್ರಾದ್ಭುತಗಳಿಗೆ ಮಾನವನು ಬೆರಗಾಗಿರುವುದು ಸಹಜ. ಅವ್ಯಕ್ತವಾದ ಈ ಶಕ್ತಿಯನ್ನು ಒಲಿಸಿಕೊಂಡರೆ, ಅವುಗಳನ್ನು ಸ್ತುತಿಸಿದರೆ ಅವು ತನಗೆ ಅನುಕೂಲವಾಗಬಹುದು ಎಂಬ ನಂಬಿಕೆ ಹುಟ್ಟಿಕೊಂಡಿದ್ದೂ ಸಹಜ. ಈ ಭಯ ಮಿಶ್ರಿತ ಗೌರವದಿಂದ ಪ್ರಕೃತಿಯಲ್ಲಿಯ ಗುಡುಗು, ಮಿಂಚು, ನದಿ, ಬೆಟ್ಟ, ಗಿಡ, ಮರ, ಪ್ರಾಣಿ ಹಾಗೂ ಪಕ್ಷಿಗಳೆಲ್ಲ ಪೂಜಾರ್ಹವಾದವು. ಶಿಲಾಯುಗದ ಮಾನವನು ಬೇಟೆಗೆ ಹೊರಟಾಗ ತಾನು ಬೇಟೆ ಆಡಬೇಕೆಂದಿರುವ ಪ್ರಾಣಿಯ ಚಿತ್ರವೊಂದನ್ನು ರೇಖಿಸಿ ಅದಕ್ಕೆ ತನ್ನ ಆಯುಧ ತಗುಲಿದಂತೆ, ಅದು ಮರಣವನ್ನಪ್ಪಿದಂತೆ ತೋರಿಸತೊಡಗಿದನು. ಆ ಇಡೀ ಚಿತ್ರದ ಸುತ್ತಲೂ ಒಂದು ಮಂಡಲವನ್ನು ಎಳೆದನು. ಅದನ್ನು ಪವಿತ್ರ ಎಂದು ಭಾವಿಸಿದನು.[೪] ಇದರಿಂದ ಧಾರ್ಮಿಕ ಮನೋಭಾವ ಮೊಳಕೆಯೊಡೆಯಿತು.

**ವೃಕ್ಷಪೂಜೆ :** ಸಿಂಧೂ ಸಂಸ್ಕೃತಿಯ ನೆಲೆಗಳಲ್ಲಿ (ಕ್ರಿ.ಪೂ.ಸು.೩೦೦೦-೧೮೦೦) ಲಭ್ಯವಾದ ಮುದ್ರಿಕೆಗಳ (ಸ್ಟಿಯಟೈಟ್) ಆಧಾರದ ಮೇಲಿಂದ ಸಿಂಧೂ ಸಂಸ್ಕೃತಿಯ ಜನರು ವೃಕ್ಷಗಳು, ಪ್ರಾಣಿಗಳು ಹಾಗೂ ಮನುಷ್ಯ ರೂಪದಲ್ಲಿ ದೈವವನ್ನು ಅರ್ಚಿಸುತ್ತಿದ್ದರು ಎಂಬುದು ಸ್ಪಷ್ಟವಾಗಿದೆ.[೫] ಲಭ್ಯವಾದ ಮುದ್ರಿಕೆಗಳಲ್ಲಿ ಅಶ್ವತ್ಥ ವೃಕ್ಷವನ್ನು ಸೂಚಿಸುವ ಮುದ್ರಿಕೆಗಳು ಹೇರಳವಾಗಿ ದೋರಕಿರುವುದರಿಂದ ಅಶ್ವತ್ಥ ವೃಕ್ಷವು ಸಿಂಧೂ ನಾಗರಿಕ ಜನರಿಂದ ಪೂಜೆಗೊಳ್ಳುತ್ತಿತ್ತು ಹಾಗೂ ವೃಕ್ಷಪೂಜೆಯು ಪ್ರಚಲಿತವಾಗಿತ್ತು ಎಂಬುದು ಸುಸ್ಪಷ್ಟ.[೬] ಆದರೆ ಈಜಿಪ್ಟ್ ಮತ್ತು ಮೆಸೊಪೊಟೇಮಿಯಾಗಳಂತೆ ದೇವರುಗಳನ್ನು ಈ ಸಂಸ್ಕೃತಿಯ ಜನರು ದೇವಾಲಯಗಳಲ್ಲಿ ಇಡುತ್ತಿರಲಿಲ್ಲ. ಮೊಹೆಂಜೊದಾರೊ ಮತ್ತು ಹರಪ್ಪ ಉತ್ಖನನಗಳಲ್ಲಿ ಸಾರ್ವಜನಿಕ ಕಟ್ಟಡಗಳನ್ನು ಗುರುತಿಸ ಬಹುದೇ ಹೊರತು ದೇವಾಲಯ ರಚನೆಗಳು ಕಂಡುಬಂದಿಲ್ಲ.[೭]

ಸಿಂಧೂ ಸಂಸ್ಕೃತಿಯ ನಂತರ ಭಾರತದ ಚರಿತ್ರೆಯ ಆಕರವೆಂದರೆ ಋಗ್ವೇದ(ಕ್ರಿ.ಪೂ.೧೫೦೦-೧೦೦೦). ಋಗ್ವೇದ ಕಾಲದಲ್ಲಿ ಪಶುಸಂಗೋಪನೆ ಮತ್ತು ಕೃಷಿಗೆ ಪ್ರಾಧಾನ್ಯತೆಯನ್ನು ಕೊಡಲಾಗಿತ್ತು. ಅಥರ್ವಣವೇದದ ಕೆಲವು ಸ್ತೋತ್ರಗಳು ಆ ಕಾಲದ ಕಟ್ಟಡಗಳ ನಿರ್ಮಾಣದ ಬಗ್ಗೆ ಕೆಲವು ಮಾಹಿತಿಗಳನ್ನು ಒದಗಿಸುತ್ತವೆ.[೮] ಅವರು ಬಂಬೂಗಳನ್ನು ಮತ್ತು ಗೋಡೆಗಳಿಗೆ ಹುಲ್ಲುಗಳನ್ನು ಬಳಸುತ್ತಿದ್ದರು ಎಂದು ತಿಳಿದುಬರುತ್ತದೆ. ಅಲ್ಲದೆ ಅವರು ಸೃಷ್ಟಿಯ ಉಪಾಸಕರಾಗಿದ್ದು[೯] ತಮ್ಮ ಧಾರ್ಮಿಕ ಆಚರಣೆಗಳಾದ ಯಜ್ಞ ಯಾಗಗಳನ್ನು ನೆರವೇರಿಸಲು ಇಟ್ಟಿಗೆಗಳನ್ನು ಬಳಸಿ ಯಜ್ಞ ವೇದಿಕೆಗಳನ್ನು ನಿರ್ಮಿಸುತ್ತಿದ್ದರು.[೧೦] ವೇದಗಳ ಕಾಲ ಮತ್ತು ನಂತರದ ಕಾಲಘಟ್ಟಗಳಲ್ಲಿ ದೇವಾಲಯಗಳು ನಾಶವಾಗುವ ಮರ ಹಾಗೂ ಇಟ್ಟಿಗೆಗಳಿಂದ ನಿರ್ಮಾಣ ಗೊಂಡಿದ್ದವು ಎಂಬ ಅಭಿಪ್ರಾಯವಿದೆ. ವಿ.ರಾಘವೇಂದ್ರರಾವ್ ಅವರು ಸಿಂಧೂನದಿ ಬಯಲಿನ ನಾಗರೀಕತೆಯ ಕಾಲ ಮತ್ತು ವೇದ ಕಾಲಕ್ಕೆ ಮುಂಚೆಯೂ ದೇವಾಲಯಗಳು ಇದ್ದವು. ಆದರೆ ಅವು ನಾಶವಾಗುವ ಮರ ಹಾಗೂ ಇಟ್ಟಿಗೆಗಳಿಂದ ನಿರ್ಮಿತವಾಗಿ ಕ್ರಮೇಣ ನಶಿಸಿಹೋಗಿವೆ ಎಂದು ಅಭಿಪ್ರಾಯಪಟ್ಟಿದ್ದಾರೆ.[೧೧] ಸದಾಶಿವ ಅಂಬಾದಾಸ್ ಡಾಂಗೆ ಅವರು ಸಿಂಧೂನದಿಯ ಬಯಲಿನ ಮತ್ತು ವೇದಕಾಲೀನ ಜನರ ಸಾಮಾಜಿಕ ಸಮಾವೇಶದಿಂದ ದೇವಾಲಯಗಳ ನಿರ್ಮಾಣವಾಯಿತು ಎನ್ನುತ್ತಾರೆ.[೧೨] ಎಸ್.ಕೆ.ರಾಮಚಂದ್ರರಾವ್ ಅವರು ಇದೇ ಅಭಿಪ್ರಾಯ ಕೊಡುತ್ತಾರೆ.[೧೩] ಪ್ರಾಚೀನ ಕಾಲದಿಂದ ಇಂದಿನವರೆಗೂ ನಡೆದು ಬಂದ ಸಂಸ್ಕೃತಿಯತ್ತ

ಗಮನಹರಿಸಿದರೆ ಎರಡು ವಿರುದ್ಧ ಮನೋಭಾವದ ಜನಾಂಗಗಳ ನಡುವೆ ಭಿನ್ನಾಭಿಪ್ರಾಯಗಳು ಇರುವುದು ಎಷ್ಟು ಸಹಜವೋ ಅಷ್ಟೇ ಹೊಂದಾಣಿಕೆಗಳು ಏರ್ಪಡುವುದೂ ಸಹಜ ಎಂದು ತಿಳಿದುಬರುತ್ತದೆ. ಅದನ್ನು ಅನಿವಾರ್ಯ ಎನ್ನಲೂಬಹುದು. ಹಾಗೆ ಸಿಂಧೂಕೊಳ್ಳದ ಜನರೊಂದಿಗೆ ವೇದಕಾಲೀನ ಜನರ ವೈಮನಸ್ಸು ಹೊಡೆದಾಟಗಳು ಸಂಭವಿಸಿದರೂ ನಂತರದಲ್ಲಿ ಹೊಂದಾಣಿಕೆ ಎಂಬುದು ಏರ್ಪಟ್ಟಿರಬೇಕು.[೧೪] ಸಿಂಧೂಜನರ ವೈಯಕ್ತಿಕ ಪೂಜಾ ಪದ್ಧತಿ ವೇದಕಾಲೀನರ ಸಾಮೂಹಿಕ ಆರಾಧನಾ ಪದ್ಧತಿಯೊಂದಿಗೆ ಸಮಾವೇಶಗೊಂಡು, ದೇವಾಲಯಗಳು ಮೈತಳೆದವು ಎನ್ನಬಹುದು.

ಧರ್ಮದ ಹಿನ್ನೆಲೆಯಲ್ಲಿ ಬಹುಕಾಲದವರೆಗೂ ಉಳಿದು ಬರುವಂತಹ ಕಟ್ಟಡಗಳನ್ನು ನಿರ್ಮಿಸಿದವರು ಅವೈದಿಕರಾದ ಬೌದ್ಧರು. ಈಗ ದೇವಾಲಯಗಳ ಹಿನ್ನೆಲೆಯಲ್ಲಿ ಉಳಿದುಬಂದ ಕಟ್ಟಡಗಳೆಂದರೆ ಬೌದ್ಧ ಸ್ತೂಪಗಳಾಗಿವೆ. ಇವು ಬುದ್ಧನ ಶಾರೀರಿಕ ಅಸ್ಥಿ ಅಥವಾ ಬೌದ್ಧ ಧರ್ಮದ ಉಪಾಧ್ಯಾಯ ಭಿಕ್ಷುಗಳ ಅಸ್ಥಿಗಳನ್ನು ಸ್ಥಾಪಿಸಿ ಇರಿಸುವುದಕ್ಕಾಗಿ ರೂಪಗೊಂಡಿರುವವು. ಬೌದ್ಧರ ಪೂಜನೀಯ ಸ್ಥಳಗಳು ಬುದ್ಧನ ಅಂತ್ಯದ ನಂತರ (ಕ್ರಿ.ಪೂ.೪೮೦) ಆತನ ಅಸ್ಥಿಗಳನ್ನು ಇರಿಸಿ ಎಂಟು ಸ್ತೂಪಗಳನ್ನು ನಿರ್ಮಿಸಲಾಗಿತ್ತೆಂದು ಬೌದ್ಧ ಧರ್ಮಗ್ರಂಥಗಳು ಉಲ್ಲೇಖಿಸುತ್ತವೆ. ಆದರೆ ಅವು ತಾಳಿಕೆ ಬಾರದ ಮರ, ಇಟ್ಟಿಗೆ ಹಾಗೂ ಇನ್ನಿತರ ವಸ್ತುಗಳನ್ನು ಬಳಸಿ ನಿರ್ಮಿಸಿದ್ದರಿಂದ ಅವು ನಾಶಹೊಂದಿದವು. ಇದಕ್ಕೆ ಪುಷ್ಟಿ ಎಂಬಂತೆ ಬಿಹಾರದ ಬರಾಬರ್ ಬೆಟ್ಟಗಳಲ್ಲಿ ಕೊರೆಯಲಾಗಿರುವ ಮೌರ್ಯರ ಕಾಲದ ಪ್ರಾಚೀನ ಗುಹಾಂತರ ದೇವಾಲಯವಾದ (ಕ್ರಿ.ಪೂ. ೨೭೩-೨೩೨) ಲೋಮಶ ಋಷಿ ಗುಹೆಯು, ಆ ಕಾಲದ ಮರದ ರಚನೆಯನ್ನು ಬಿಂಬಿಸುತ್ತದೆ. ಬಾಗಿಲು ಮರದ ತೊಲೆಗಳನ್ನು ಆಧಾರವಾಗಿ ಪಡೆದಿರುವಂತೆಯೂ, ಛತ್ತು ಕೂಡ ಗುಡಿಸಲ ಸೂರನ್ನೇ ಹೋಲುವಂತೆ ಕೊರೆಯಲಾಗಿದೆ. ಇಲ್ಲಿ ಶಿಲ್ಪಿಗಳು ಸಂಪ್ರದಾಯಿಕ ಕಟ್ಟಡಗಳಲ್ಲಿಯ ಮರ ಗೆಲಸವನ್ನು ಬಂಡೆಯಲ್ಲಿಯೂ ಉಳಿಸಿಕೊಂಡು ಬಂದಿದ್ದಾರೆ.[೧೫]

ಪವಿತ್ರವಾದ ಸ್ಥಳಕ್ಕೆ ಕಟಾಂಜನವನ್ನು ಕಟ್ಟಿ ಪೂಜಿಸುವುದು ಪ್ರಾಚೀನ ಪದ್ಧತಿ. ಸಿಂಧೂ ನಾಗರೀಕತೆಯಲ್ಲಿ ದೊರೆತ ಒಂದು ಮುದ್ರೆ ಗುರುತಿನಲ್ಲಿ ಒಂದು ಮರಕ್ಕೆ ಕಟಾಂಜನದ ಆವರಣವಿದ್ದು, ಈ ಮರವನ್ನು ಪೂಜಿಸುತ್ತಿದ್ದುದನ್ನು ಸೂಚಿಸುತ್ತದೆ.[೧೬] ಶಿಲಾಯುಗದ ಜನರೂ ಪವಿತ್ರ ಎಂದುಕೊಂಡ ಸ್ಥಳದ ಸುತ್ತಲು ಮಂಡಲವನ್ನು ಎಳೆಯುತ್ತಿದ್ದರೆಂದು ಈಗಾಗಲೇ ಗಮನಿಸಿದ್ದೇವೆ. ಬೋಧಿ ವೃಕ್ಷಕ್ಕೆ ಕಟಾಂಜನ ಕಟ್ಟಿ ಪೂಜಿಸುವ ಸ್ಥಳವನ್ನು ಬೌದ್ಧ ಗ್ರಂಥಗಳು, 'ಬೋಧಿಗೃಹ' ಎಂದು ಉಲ್ಲೇಖಿಸಿವೆ. ಕಟಾಂಜನವನ್ನು ಕಟ್ಟಿ ಪೂಜಿಸುವ ವೃಕ್ಷಗಳು 'ವೃಕ್ಷ ಚೈತ್ಯಗಳು.'[೧೭] ವೃಕ್ಷಪೂಜೆ ಬೌದ್ಧಧರ್ಮಿಯರಲ್ಲಿ ಮಾತ್ರವಲ್ಲ ಹಿಂದೂ ಧರ್ಮದಲ್ಲಿಯೂ ಇದೆ. ತಮಿಳು ಸಾಹಿತ್ಯದ ಪ್ರಾಚೀನ ಗ್ರಂಥವಾದ 'ಅಹನಾನೂರು'ನಲ್ಲಿ ಆಲ ವೃಕ್ಷದ ಸುತ್ತಲೂ ಇಟ್ಟಿಗೆಯಿಂದ ಕಟ್ಟೆ ಕಟ್ಟಿ ಪೂಜಿಸುವುದನ್ನು ಉಲ್ಲೇಖಿಸುತ್ತದೆ. 'ಶಿಲಪ್ಪದಿಕಾರಂ' ಗ್ರಂಥವು ಪೋದಿಮರಮ್ (Podimaram) ಅಥವಾ ಬೋಧಿವೃಕ್ಷ ದೇವಾಲಯ ಎಂದು ಹೇಳಿದೆ.[೧೮] ದೇವರ ವಾಸಸ್ಥಾನವೆಂದು ತಿಳಿಯಲಾದ ವೃಕ್ಷಗಳನ್ನು ಪೂಜಿಸುವ ಪದ್ಧತಿ ಇಂದಿಗೂ ನಡೆದುಬಂದಿದೆ ಎಂಬುದನ್ನು ಗಮನಿಸಬಹುದು.[೧೯]

ಬೌದ್ಧ ಗ್ರಂಥಗಳ ಪ್ರಕಾರ ಬುದ್ಧನಿಗೆ ಬೋಧಿವೃಕ್ಷದ ಕೆಳಗೆ ಜ್ಞಾನೋದಯವಾಯಿತು. ಬೌದ್ಧರು ಬೋಧಿ ವೃಕ್ಷವನ್ನು ತಮ್ಮ ಪೂಜನೀಯ, ಪವಿತ್ರ ಸ್ಥಳವನ್ನಾಗಿಸಿಕೊಂಡು, ವೃಕ್ಷದ ಸುತ್ತಲೂ ಕಟಾಂಜನವನ್ನು ಕಟ್ಟಿ, ಹೂಮಾಲೆಗಳಿಂದ ಅಲಂಕರಿಸಿ, ಪರಿಮಳಯುಕ್ತ ನೀರನ್ನು ಸಿಂಪಡಿಸಿ, ವೃಕ್ಷದ ಬುಡಕ್ಕೆ ವಜ್ರಾಸನವನ್ನು ಇರಿಸಿ ಪೂಜಿಸುತ್ತಿದ್ದರು. ತಮ್ಮ ಇಷ್ಟಾರ್ಥಗಳನ್ನು ಅಲ್ಲಿ ಬೇಡಿಕೊಳ್ಳುತ್ತಿದ್ದರು. ಪ್ರಾಚೀನ ಕಟ್ಟಡಗಳೆಂದು ಉಳಿದು ಬಂದ ಸ್ತೂಪಗಳಲ್ಲಿ ಇಂಥ ಬೋಧಿವೃಕ್ಷದ ಉಬ್ಬು ಕೆತ್ತನೆಗಳನ್ನು ಸಾಕಷ್ಟು ಕಾಣುತ್ತೇವೆ. ಅಮರಾವತಿ ಸ್ತೂಪದಲ್ಲಿ (ಕ್ರಿ.ಪೂ.೧ನೇ ಅಥವಾ ಕ್ರಿ.ಶ.೧ನೇ ಶತಮಾನ) ಆರು ಮುಖವುಳ್ಳ ಸ್ತಂಭವೊಂದರ ಪಾರ್ಶ್ವದ ಮೇಲೆ ಬೋಧಿಗೃಹದ ಉಬ್ಬುಶಿಲ್ಪವಿದೆ. ಅಲ್ಲದೆ ಬುದ್ಧಗಯೆಯ ಬೋಧಿಗೃಹದ ಚಿತ್ರಣವೂ ಇದೆ. ಇದರಲ್ಲಿ ವೃಕ್ಷದ ಸುತ್ತಲೂ ಎತ್ತರವಾದ ಕಟಾಂಜನ, ವೃಕ್ಷದ ಬುಡಕ್ಕೆ ವಜ್ರಾಸನ, ಬುದ್ಧ ಪಾದಗಳು, ಅಕ್ಕಪಕ್ಕದಲ್ಲಿ ಛತ್ರಾವಳಿಗಳು, ಆ ಬರಿದಾದ ವಜ್ರಾಸನಕ್ಕೆ ಜನರು ಭಕ್ತಿಭಾವದಿಂದ ವಿವಿಧ ಭಂಗಿಗಳಲ್ಲಿ ನಮಸ್ಕರಿಸುತ್ತಿರು ವಂತೆ ಕೆತ್ತಲಾಗಿದೆ. ಮಧ್ಯಪ್ರದೇಶದ ಬೆಸ್‌ನಗರದಲ್ಲಿ ದೊರೆತಿರುವ (ಈಗ ಇದನ್ನು ಕಲ್ಕತ್ತದ ಇಂಡಿಯನ್ ಮ್ಯೂಝಿಯಮ್‌ನಲ್ಲಿ ಇಡಲಾಗಿದೆ) ಕ್ರಿ.ಪೂ.ಸು.೧೦೦ರ ಕಾಲಕ್ಕೆ ಸೇರಬಹುದಾದ ಧ್ವಜ ಸ್ತಂಭದ ಮೇಲೆ ಬೋಧಿವೃಕ್ಷ ಶಿಲ್ಪವನ್ನು ಕೊರೆಯಲಾಗಿದೆ. ಇದು ೧೫೦ಸೆಂ.ಮೀ. ಎತ್ತರವಾಗಿದ್ದು, ಉಸುಕು ಕಲ್ಲಿನಲ್ಲಿ ನಿರ್ಮಿಸಲಾಗಿದೆ. ಇಲ್ಲಿಯೂ ವೃಕ್ಷದ ಕೆಳಭಾಗದಲ್ಲಿ ವೇದಿಕೆಯನ್ನು ಕಟ್ಟಿ ಅದರ ಮೇಲೆ ಕಟಾಂಜನವನ್ನು ಕಟ್ಟಲಾಗಿದೆ. ಕಟಾಂಜನದ ಒಳಭಾಗದಲ್ಲಿ ಬಂಗಾರದ ನಾಣ್ಯಗಳನ್ನು ತುಂಬಿದ ಕುಂಭ ಮತ್ತು ಚೀಲಗಳನ್ನು, ಶಂಖ, ಕಮಲಗಳನ್ನು ವೃಕ್ಷದ ಸುತ್ತಲೂ ಇಟ್ಟಂತೆ ಕೊರೆಯಲಾಗಿದೆ. ಇಲ್ಲಿ ಬೋಧಿವೃಕ್ಷವು ಕೇಳಿದ್ದನ್ನು ಕೊಡುವ ಕಲ್ಪವೃಕ್ಷದಂತೆ ಚಿತ್ರಿತಗೊಂಡಿದೆ.[೨೦] ಅಮರಾವತಿ ಸ್ತೂಪದಲ್ಲಿ 'ಬಹುಪುತ್ರ-ಚೈತ್ಯ'ವನ್ನು ವಿವರಿಸ ಲಾಗಿದೆ. ಈ ಉಬ್ಬು ಶಿಲ್ಪದಲ್ಲಿ ಮೂರು ವೃಕ್ಷಗಳಿವೆ. ಅವುಗಳಲ್ಲಿ ಎರಡು ವೃಕ್ಷಗಳನ್ನು ಸೇರಿಸಿ ಕಟಾಂಜನ ವನ್ನು ಕಟ್ಟಲಾಗಿದೆ. ಅವುಗಳ ಬದಿಯಲ್ಲಿ ಪ್ರಧಾನವಾದ ಇನ್ನೊಂದು ವೃಕ್ಷವಿದೆ. ಅದಕ್ಕೆ ಇನ್ನಷ್ಟು ಎತ್ತರವಾದ ಕಟಾಂಜನವನ್ನು ಕಟ್ಟಲಾಗಿದೆ. ಎದುರಲ್ಲಿ ಇಬ್ಬರು ಭಕ್ತರನ್ನು ಕಂಡರಿಸಲಾಗಿದೆ. ಒಂದು ಕೈ ಜೋಡಿಸಿ ನಿಂತಿದೆ, ಇನ್ನೊಂದು ಮಗುವೊಂದನ್ನು ವೃಕ್ಷಕ್ಕೆ ತೋರಿಸುತ್ತಿರುವಂತೆ ಕಂಡರಿಸಲಾಗಿದೆ. ಇದರ ಕೆಳಗೆ ಸಣ್ಣ ಶಾಸನವಿದ್ದು 'ವೈಶಾಲಿಯ ಬಹುಪುತ್ರ ಚೈತ್ಯ' ಎಂಬ ಅರ್ಥವನ್ನು ಸೂಚಿಸುತ್ತದೆ.[೨೧] ಈ ದೃಶ್ಯದ ಮೇಲಿಂದ ವೃಕ್ಷಗಳನ್ನು ತಮ್ಮ ಆಕಾಂಕ್ಷೆ ಈಡೇರಿಸಿಕೊಳ್ಳುವುದಕ್ಕಾಗಿ ಅದರಲ್ಲೂ ಸಂತಾನ ಅಪೇಕ್ಷೆಯನ್ನು ಈಡೇರಿಸಿಕೊಳ್ಳಲು ಆರಾಧಿಸುತ್ತಿದ್ದರೆಂದು ಸ್ಪಷ್ಟವಾಗುತ್ತದೆ. ಬುದ್ಧಗಯೆಯಲ್ಲಿ ವೇದಿಕೆಯೊಂದರ ಅವಶೇಷದ ಮೇಲಿನ ಬೋಧಿವೃಕ್ಷದ ಉಬ್ಬುಶಿಲ್ಪದಲ್ಲಿ, ಬೋಧಿವೃಕ್ಷ ಮತ್ತು ಅಕ್ಕಪಕ್ಕದಲ್ಲಿ ಕಟ್ಟಿದ ಹೂಮಾಲೆಗಳು ನೋಡುಗರ ಕಣ್ಣಿನ ಮಟ್ಟಕ್ಕೆ ಸಮನಾಗಿ ಇರುವಂತೆ ಅಕ್ಕಪಕ್ಕದ ಛತ್ರಾವಳಿಗಳು ಕಣ್ಣಿನ ಮಟ್ಟಕ್ಕಿಂತ ಮೇಲೆ ಇರುವಂತೆ ಮತ್ತು ವೃಕ್ಷದ ಸುತ್ತಲೂ ಇರುವ ಕಟಾಂಜನವು ಕಣ್ಣಿನ ಮಟ್ಟಕ್ಕಿಂತ ಕೆಳಗೆ ಇರುವಂತೆ ಚಿತ್ರಿಸಲಾಗಿದೆ.[೨೨] ಇದು ಬೌದ್ಧಸ್ತೂಪದ ಭೌತಿಕ ರೂಪವನ್ನು ಸೂಚಿಸುತ್ತದೆ. ಹೀಗೆ ವೃಕ್ಷಪೂಜೆಯ ಹಿನ್ನೆಲೆ ಯಿಂದ ಸ್ತೂಪಗಳು ಮೈತಳೆದವು ಎಂದು ಸ್ಪಷ್ಟವಾಗುತ್ತದೆ. ಪವಿತ್ರ ಸ್ಥಳಗಳ ಸುತ್ತಲೂ ಕಟ್ಟುವ ಕಟಾಂಜನವು ಆ ಸ್ಥಳಕ್ಕೆ ತೋರುವ ಗೌರವವಾಗಿ ಮಾತ್ರ ಉಳಿಯದೆ ಅದೊಂದು ಸಂಪ್ರದಾಯವಾಗಿ, ಕಡ್ಡಾಯವಾಗಿ ಬೆಳೆದು ಬಂದಿತೆಂದು ನಂತರದ ಸ್ತೂಪಗಳಿಂದ ಸ್ಪಷ್ಟವಾಗುತ್ತದೆ.

ಈ ಹಿನ್ನೆಲೆಯಲ್ಲಿ ಇನ್ನೊಂದು ಕುತೂಹಲಕಾರಿ ಅಂಶವೆಂದರೆ ಆಂಧ್ರ ಪ್ರದೇಶದಲ್ಲಿಯ ಗುಡಿಮಲ್ಲಮ್ ದೇವಾಲಯದ ಉತ್ಖನನದಲ್ಲಿ ಶಿವಲಿಂಗದ ಸುತ್ತಲೂ ಕಟಾಂಜನದಂತಹ ರಚನೆ ಇರುವ ಅಂಶವನ್ನು ಹೊರತೆಗೆಯಲಾಗಿದೆ. ಇದರ ಕಾಲಮಾನವು ಕ್ರಿ.ಪೂ.೧ನೇ ಅಥವಾ ೨ನೇ ಶತಮಾನವಾಗಿದ್ದು ಬೋಧಿವೃಕ್ಷದ ಸುತ್ತಲು ಕಟ್ಟಿದ ಕಟಾಂಜನವನ್ನು ಹೋಲುತ್ತದೆ.[೨೩] ಪವಿತ್ರ ಸ್ಥಳಗಳಿಗೆ ಕಟಾಂಜನ ಕಟ್ಟುವ ಹಿನ್ನೆಲೆಯಲ್ಲಿಯೇ ಶಿವಲಿಂಗಗಳು ರೂಪಗೊಂಡಿವೆ. ಪೂಜಾರ್ಹವಾದ ಲಿಂಗದ ಸುತ್ತಲೂ ಇರುವ ಕಟ್ಟು ಯೋನಿಪೀಠ ಎನಿಸಿಕೊಂಡಿತು. ಅಭಿಷೇಕದ ನೀರು, ಹಾಲು ಇತ್ಯಾದಿಗಳನ್ನು ಸುಲಭವಾಗಿ ಸಂಗ್ರಹಿಸಲು ಪ್ರನಾಳಗಳು ರೂಪಗೊಂಡವು ಎಂದು ಹೇಳಬಹುದು.

### ಸಮಾಧಿಗಳು ಮತ್ತು ದೇವಾಲಯಗಳು

ಸಮಾಧಿಗಳೇ ದೇವಾಲಯದ ಮೂಲ ಎಂಬ ಪ್ರಬಲವಾದ ವಾದವು ಇದೆ. ಎನ್.ವೆಂಕಟರಮಣಯ್ಯನವರು ಬೃಹತ್ ಶಿಲಾಯುಗ ಕಾಲದ ಸಮಾಧಿಗಳು (Dolmens) ದೇವಾಲಯಗಳ ಮೂಲ ಎಂದು ಅಭಿಪ್ರಾಯಪಡುತ್ತಾರೆ.[೨೪] ಜೊತೆಗೆ ಪ್ರಾಚ್ಯ ವಸ್ತು ಸರ್ವೇಕ್ಷಣಾ ಇಲಾಖೆಯ ದಕ್ಷಿಣ ವೃತ್ತದ ೧೯೧೫-೧೬ರ ವರದಿಯಲ್ಲಿಯ ಮೂರು ಶಾಸನಗಳ ನೆರವನ್ನು ಪಡೆದಿದ್ದಾರೆ. ಅದರಲ್ಲಿ ಚೋಳರಾಜ ರಾಜಾದಿತ್ಯನು ತನ್ನ ತಂದೆಯನ್ನು ಹೂತಿದ್ದ ಸ್ಥಳದಲ್ಲಿ ಈಶ್ವರ ದೇವಾಲಯವನ್ನು ನಿರ್ಮಿಸಿದನೆಂದೂ; ಚೋಳರಾಜ ಒಂದನೆಯ ಆದಿತ್ಯನ ಪಳ್ಳಿಪ್ಪಡೈ(ಸ್ಮಶಾನ)ನ ಮೇಲೆ ಅಥವಾ ಸಮೀಪ ದೇವಾಲಯವೊಂದು ನಿರ್ಮಾಣವಾಯಿತೆಂದೂ; ನಾಯಕನಿಗಾಗಿ ಪಳ್ಳಿಪ್ಪಡೈಯಾಗಿ ಅರ್ಜುನೇಶ್ವರ ದೇವಾಲಯವನ್ನು ಒಂದನೆಯ ರಾಜರಾಜನು ಕಟ್ಟಿಸಿದನೆಂದು ತಿಳಿದುಬರುತ್ತದೆ. ಈ ಉಲ್ಲೇಖಗಳನ್ನು ಆಧರಿಸಿ ಸಮಾಧಿಗಳೇ ದೇವಾಲಯ ಮೂಲ ಎಂಬ ತೀರ್ಮಾನಕ್ಕೆ ಬಂದಿದ್ದಾರೆ. ಆದರೆ ಇವರ ತೀರ್ಮಾನವನ್ನು ಸಾರ್ವತ್ರಿಕವೆಂದು ಒಪ್ಪಿಕೊಳ್ಳಲು ಆಗುವುದಿಲ್ಲ. ವ್ಯಕ್ತಿಯ ಹೆಸರಿನಲ್ಲಿ ದೇವಾಲಯಗಳನ್ನು ನಿರ್ಮಿಸುವ ಪದ್ಧತಿ ಅಪರೂಪವಲ್ಲ. ಸಮಾಧಿಗಳ ಮೇಲೆ ದೇವಾಲಯಗಳನ್ನು ನಿರ್ಮಿಸುವ ಪದ್ಧತಿ ಮಾತ್ರ ವಿರಳ ಎಂದು ಹೇಳಬಹುದು.

**ದೇವಾಲಯಗಳ ಪ್ರಾಚೀನತೆ :** ದೇವಾಲಯಗಳ ಹಿನ್ನೆಲೆಯಲ್ಲಿ ಗುರುತಿಸಲಾಗುವ ಸ್ತೂಪಗಳು ಬೌದ್ಧ ಧರ್ಮೀಯರ ಕಟ್ಟಡಗಳು. ಬೌದ್ಧೇತರ ಧರ್ಮಗಳಾದ ಜೈನ ಮತ್ತು ಹಿಂದೂಧರ್ಮೀಯರ ಸಮಕಾಲೀನ ಕಟ್ಟಡಗಳು ಕಂಡುಬಂದಿಲ್ಲ. ಆದರೆ ಕೆಲವು ಶಾಸನಗಳ ಹಾಗೂ ಪ್ರಾಚ್ಯವಸ್ತು ಅವಶೇಷಗಳ ಆಧಾರಗಳಿಂದ ಕ್ರಿ.ಪೂ.೧ನೇ ಶತಮಾನಕ್ಕಾಗಲೇ ದೇವಾಲಯ ನಿರ್ಮಾಣವಾಗಿರುವುದನ್ನು ಗಮನಿಸಬಹುದಾಗಿದೆ. ಇತ್ತೀಚೆಗೆ ದ್ವಾರಕೆಯ ದ್ವಾರಕಾಧೀಶ ದೇವಾಲಯದ ಎದುರು ನಡೆದಿರುವ ಸಮುದ್ರ ಶೋಧನೆ[೨೫]ಯಲ್ಲಿ ದೊರೆತ ಹೂಜಿಯೊಂದರ ಮೇಲಿನ ಬರವಣಿಗೆಯು ಹರಪ್ಪೋತ್ತರ ಕಾಲಕ್ಕೆ ಸೇರಿದ್ದು 'ಮಹಾಗಚ್ಚ ಶಪಾ' (ಸಮುದ್ರ ರಾಜನೇ ರಕ್ಷಿಸು) ಎಂದಿರುವ ಶಾಸನದ ಕಾಲವನ್ನು ಕ್ರಿ.ಪೂ.ಹದಿನೈದನೆಯ ಶತಮಾನವೆಂದು ತಿಳಿಯಲಾಗಿದೆ. ಇಲ್ಲಿಯ ಕ್ರಿ.ಪೂ.೧ನೇ ಶತಮಾನದಿಂದ ಕ್ರಿ.ಶ.೨ನೇ ಶತಮಾನದಲ್ಲಿ ನಿರ್ಮಾಣಗೊಂಡ ಎರಡು ದೇವಾಲಯಗಳು ಮತ್ತು ಕ್ರಿ.ಶ.೯ನೇ ಶತಮಾನದ ದೇವಾಲಯವೊಂದು ಸಮುದ್ರದ ಉಬ್ಬರದಿಂದ ನಾಶವಾಗಿರಬಹುದೆಂದು ವಿದ್ವಾಂಸರು ಊಹಿಸಿದ್ದಾರೆ.[೨೬] ರಾಜಸ್ಥಾನದ ಘೋಸುಂಡಿ ಎಂಬಲ್ಲಿ ಭಾಗವತ ಪಂಥವನ್ನು

ಸೂಚಿಸುವ ಶಾಸನಗಳು ಲಭ್ಯವಾಗಿವೆ. ಇವು ಕ್ರಿ.ಪೂ.ಎರಡನೇ ಶತಮಾನದ ಶಾಸನಗಳಾಗಿವೆ.[೨೭] ಪಾರಾಶರೀಪುತ್ರನಾದ 'ಭಾಗವತ' ಗಜೌಯನನು ವಾಸುದೇವ ಸಂಕರ್ಷಣರಿಗೆ ಕಲ್ಲಿನ ಗೋಡೆಗಳಿದ್ದ ಗುಡಿಯನ್ನು ಕಟ್ಟಿಸಿದ ಉಲ್ಲೇಖ ಇಲ್ಲಿ ಬರುತ್ತದೆ.[೨೮] ಈ ಗುಡಿಯನ್ನು 'ನಾರಾಯಣವಾಟಿಕ' ಎಂದು ಕರೆದಿರುವುದು ಗಮನಾರ್ಹ. ಇದು ವೃಕ್ಷಪೂಜೆಯ ಹಿನ್ನೆಲೆಯನ್ನೇ ಸೂಚಿಸುತ್ತದೆ. ಕ್ರಿ.ಪೂ.೨ನೇ ಶತಮಾನದ ವಿದಿಶಾನಗರದಲ್ಲಿಯ (ಮಧ್ಯಪ್ರದೇಶ ಬೆಸ್‌ನಗರ) ಗರುಡಸ್ತಂಭವನ್ನು ಇಂಡೋ-ಗ್ರೀಕ್‌ರಾಜ ಅಂತಿಯಲ್ಕಿಡಾಸ್‌ನ ಪ್ರತಿನಿಧಿಯಾಗಿ ಬಂದಿದ್ದ ಹಿಲಿಯೊಡೋರಸ್ ಎಂಬಾತನು ನಿಲ್ಲಿಸಿದನು. ತಾನು 'ಭಾಗವತ'ನೆಂದೂ ಈ ಗರುಡ ಕಂಬವು ದೇವದೇವನಾದ ವಾಸುದೇವನಿಗೆಂದೂ ಬ್ರಾಹ್ಮಿಲಿಪಿಯ ಶಾಸನವೊಂದು ತಿಳಿಸುತ್ತದೆ.[೨೯] ಬಿಹಾರದ ರಾಜಗೀರ್, ರಾಜಸ್ಥಾನದ ನಗರಿಯಲ್ಲಿ ಕ್ರಿ.ಪೂ.ನಾಲ್ಕರಿಂದ ಕ್ರಿ.ಪೂ.ಎರಡನೇ ಶತಮಾನದವರೆಗಿನ ಇಟ್ಟಿಗೆಯ ದೇವಾಲಯಗಳು ಇದ್ದುವೆಂದು ಮತ್ತು ಈ ದೇವಾಲಯಗಳು ಕಟ್ಟಿಗೆಯ ಪ್ರವೇಶ ದ್ವಾರವನ್ನು ಒಳಗೊಂಡಿದ್ದವೆಂದು ತಿಳಿದುಬರುತ್ತದೆ.[೩೦] ಈ ದೇವಾಲಯಗಳು ಬಾಳಿಕೆ ಬಾರದ ವಸ್ತುಗಳನ್ನು ಉಪಯೋಗಿಸಿ (ಮರ, ಇಟ್ಟಿಗೆ) ಕಟ್ಟಿರುವುದರಿಂದ ಕ್ರಮೇಣ ನಾಶ ಹೊಂದಿದವು. ಈ ಮೊದಲೇ ಹೇಳಿದಂತೆ ಮೌರ್ಯರ ಕಾಲದ್ದೆನ್ನಲಾದ ಲೋಮಶ ಋಷಿ ಗುಹೆಯ ಸೂರು, ಪ್ರವೇಶ ದ್ವಾರಗಳು ಮರದ ರಚನೆಯನ್ನು ಹೋಲುವುದು ಮೇಲಿನ ಊಹೆಗೆ ಪುಷ್ಟಿಯನ್ನು ಕೊಡುತ್ತದೆ.

ಮೌರ್ಯರ ಕಾಲದಲ್ಲಿ ಆರಂಭಗೊಂಡ ಗುಹಾಂತರ ದೇವಾಲಯಗಳು ಮುಂದೆ ಸಾವಿರ ವರ್ಷಗಳವರೆಗೂ ನಡೆದುಬಂದವು. ಭಾರತದ ತುಂಬ ವ್ಯಾಪಿಸಿದವು. ಗಾತ್ರದಲ್ಲಿ, ಆಕಾರದಲ್ಲಿ ವಿಶಾಲಗೊಳ್ಳುತ್ತ, ಹಂತಹಂತವಾಗಿ ಸಂಮಿಶ್ರಿತಗೊಂಡು, ಸಂಕೀರ್ಣಗೊಳ್ಳುತ್ತ ಕೊನೆಯಲ್ಲಿ ರಾಷ್ಟ್ರಕೂಟರ ಕಾಲದಲ್ಲಿ ಪಶ್ಚಿಮ ಘಟ್ಟಗಳಲ್ಲಿ ಕೊರೆಯಲಾದ ಸುಂದರ ಕೈಲಾಸನಾಥ ಗುಹಾಂತರ ದೇವಾಲಯವನ್ನು ಕೊಡುವಲ್ಲಿ ಯಶಸ್ಸನ್ನು ಕಂಡಿತು. ಈ ಯಶಸ್ಸಿನ ಹಾದಿಯಲ್ಲಿ ಬಾರ್ಹುತ್(ಮಧ್ಯಪ್ರದೇಶ, ಕ್ರಿ.ಪೂ.ಸು.೧೦೦-೮೦), ಭಾಜ್(ಮಹಾರಾಷ್ಟ್ರ, ಕ್ರಿ.ಪೂ.ಸು.೧೦೦-೭೦), ಬೆದ್‌ಶಾ(ಮಹಾರಾಷ್ಟ್ರ, ಕ್ರಿ.ಶ.೧ನೇ ಶತಮಾನ), ರಾಣಿಗುಂಫಾ(ಒರಿಸ್ಸಾ, ಕ್ರಿ.ಶ.ಸು. ೧ನೇ ಶತಮಾನ), ಕಾರ್ಲೆ(ಮಹರಾಷ್ಟ್ರ, ಕ್ರಿ.ಶ.ಸು.೧೨೦), ನಾಸಿಕ್(ಮಹಾರಾಷ್ಟ್ರ, ಕ್ರಿ.ಶ.ಸು.೧೨೪), ಕನ್ಹೇರಿ (ಮಹಾರಾಷ್ಟ್ರ, ಕ್ರಿ.ಶ.ಸು ೧೭೫-೨೦೦) ಅಜಂತಾ(ಮಹಾರಾಷ್ಟ್ರ, ಐದನೇ ಶತಮಾನ), ಬಾದಾಮಿ(ಕರ್ನಾಟಕ, ಕ್ರಿ.ಶ.೫೭೮), ಮಂಡಗಪಟ್ಟು(ತಮಿಳುನಾಡು, ಕ್ರಿ.ಶ.೫೮೦-೬೩೦), ಮಾಮಂಡೂರು ಮುಂತಾದ ಗುಹಾಲಯಗಳನ್ನು ಗಮನಿಸಬಹುದು. ಗುಪ್ತರ ಕಾಲದಲ್ಲಿ ಹಿಂದೂ ಗುಹಾಲಯಗಳು ರೂಪಗೊಂಡವು. ಗುಹಾಲಯಗಳ ಒಳಗೆ ಅಳವಡಿಸುವ ಗರ್ಭಗೃಹಗಳ ಸಂಖ್ಯೆಯು ಹೆಚ್ಚಾಯಿತು. ತ್ರಿಮೂರ್ತಿಗಳಿಗಾಗಿಯೇ ಮೀಸಲಾದ ಗುಹಾಲಯಗಳು ನಿರ್ಮಾಣಗೊಂಡವು. ಉದಾಹರಣೆಗೆ ಮಂಡಗಪಟ್ಟು ಲಕ್ಷಿತಾಯತನ (ಕ್ರಿ.ಶ. ೫೮೦-೬೩೦)[೩೧] ಮಾಮಂಡೂರಿನ ರುದ್ರವಲ್ಲೀಶ್ವರ ಗುಹಾಲಯಗಳನ್ನು ಹೇಳಬಹುದು. ಇಲ್ಲಿ ಸಾಲಾಗಿರುವ ಮೂರು ಗರ್ಭಗೃಹಗಳು ತ್ರಿಮೂರ್ತಿಗಳಿಗಾಗಿಯೇ ಮೀಸಲಾಗಿವೆ ಎಂದು ಅಲ್ಲಿಯ ಶಾಸನ ಸೂಚಿಸುತ್ತದೆ.[೩೨]

ಈಗ ಕಂಡುಬರುವ ರಚನಾತ್ಮಕ ದೇವಾಲಯಗಳಲ್ಲಿ ಸಾಂಚಿಯ ಹದಿನೇಳನೆ ಸಂಖ್ಯೆಯ ದೇವಾಲಯವು ಪ್ರಾಚೀನವಾದುದು (ಕ್ರಿ.ಶ.೫ನೇ ಶತಮಾನದ ಮೊದಲ ಎರಡು ದಶಕಗಳು) ಎಂದು ಗುರುತಿಸಲಾಗಿದೆ. ಈ

ದೇವಾಲಯಕ್ಕಿಂತ ಸುಮಾರು ಐವತ್ತು ವರ್ಷಗಳ ನಂತರದಲ್ಲಿ ನಿರ್ಮಾಣಗೊಂಡಿವೆ ಎನ್ನಲಾದ ಬಿತರ್‌ಗಾವ್(ಉತ್ತರ ಪ್ರದೇಶ)ದಲ್ಲಿಯ ಹಿಂದೂ ದೇವಾಲಯವು ಇಟ್ಟಿಗೆಯಿಂದ ನಿರ್ಮಾಣಗೊಂಡಿದ್ದು ಜೇಡಿಮಣ್ಣಿನಿಂದ ತಯಾರಿಸಿದ ಶಿಲ್ಪಗಳಿಂದ ಅಲಂಕೃತಗೊಂಡಿವೆ. ಇಲ್ಲಿಯ ಶಿಖರವೂ ಸುಸ್ಥಿತಿಯಲ್ಲಿದೆ. ಅಲ್ಲದೆ ಭೂಮಾರ ಮತ್ತು ದೇವಗಡ(ಕ್ರಿ.ಶ.೬ನೇ ಶತಮಾನದ ಮೊದಲ ಭಾಗ)ಗಳಲ್ಲಿಯೂ ಪ್ರಾಚೀನ ರಚನಾತ್ಮಕ ದೇವಾಲಯಗಳನ್ನು ಕಾಣಬಹುದು. ದೇವಗಡದ ವೈಷ್ಣವ ದೇವಾಲಯದಲ್ಲಿ ದ್ವಾರಶಾಖೆಯ, ಪ್ರತಿ ಶಾಖೆಯ ಕೆಳಗೂ ತ್ರಿಭಂಗಿಯಲ್ಲಿ ನಿಂತ ಪರಿಚಾರಕರನ್ನು ಹಾಗೂ ದೇವಾಲಯ ಭಿತ್ತಿಯ ಹೊರಕೋಷ್ಟಗಳಲ್ಲಿ ನಾರಾಯಣ, ಅನಂತಶಾಯಿ, ಗಜೇಂದ್ರಮೋಕ್ಷ ಶಿಲ್ಪಗಳನ್ನು ಕಾಣಬಹುದು. ಈ ಪ್ರಾಚೀನ ದೇವಾಲಯಗಳನ್ನು ಆಧುನಿಕ ದೇವಾಲಯಗಳೊಂದಿಗೆ ಹೋಲಿಸಿದರೆ ಬಹು ಚಿಕ್ಕದಾಗಿವೆ. ಆದರೆ ಆಧುನಿಕ ದೇವಾಲಯಗಳ ಪೂರ್ವ ರೂಪವನ್ನು ಇವು ಖಂಡಿತವಾಗಿ ತೋರಿಸುತ್ತವೆ. ವೇದಿಕೆ, ಸ್ತಂಭಗಳಿಂದ ಕೂಡಿದ ಮುಖಮಂಟಪ, ದೇವಾಲಯ ಹೊರಭಿತ್ತಿಯಲ್ಲಿಯ ದೇವಕೋಷ್ಟಗಳು, ಶಿಖರ, ದ್ವಾರಬಂಧ ಇವು ಆಧುನಿಕ ದೇವಾಲಯಗಳಲ್ಲಿಯೂ ಕಂಡುಬರುವ ಪೂರ್ವಾಂಶಗಳು.

ಕರ್ನಾಟಕದಲ್ಲಿ ದೇವಾಲಯಗಳ ಪ್ರಾಚೀನತೆಯತ್ತ ಗಮನ ಹರಿಸಿದರೆ ಕ್ರಿಸ್ತಶಕದ ಆರಂಭದ ಶತಕದಲ್ಲಿ ಇಲ್ಲಿ ದೇವಾಲಯಗಳು ಇದ್ದುವೆಂದು ಪ್ರಾಚ್ಯವಸ್ತು ಅವಶೇಷಗಳು ಮತ್ತು ಲಭ್ಯ ಶಾಸನಗಳಿಂದ ಸ್ಪಷ್ಟವಾಗಿ ಹೇಳಬಹುದು. ಗುಲ್ಬರ್ಗ ಜಿಲ್ಲೆಯ ಸನ್ನತಿಯು ಕ್ರಿ.ಶ.ಎರಡನೇ ಶತಮಾನದ ವೇಳೆಗಾಗಲೇ ಬೌದ್ಧರ ಬಹುಮುಖ್ಯ ನೆಲೆಯಾಗಿತ್ತು. ಇಲ್ಲಿ ಸ್ತೂಪ ಮತ್ತು ಇಟ್ಟಿಗೆಯ ಕಟ್ಟಡಗಳ ಅವಶೇಷಗಳು ದೊರೆತಿವೆ. ಶಿಲ್ಪಾಲಂಕೃತ ಶಿಲಾಶಾಸನಗಳು, ಮೂರ್ತಿ ಶಿಲ್ಪಾವಶೇಷಗಳು ಸಾಕಷ್ಟು ಸಂಖ್ಯೆಯಲ್ಲಿ ಲಭ್ಯವಾಗಿವೆ.[೩೩] ಬನವಾಸಿಯಲ್ಲಿ ದೊರೆತ ಪ್ರಾಕೃತ ಭಾಷೆಯ ಎರಡು ಶಾಸನಗಳು[೩೪] ಒಂದನೇ ವಿಣ್ಹಿಚುಟುಕುಲಾನಂದ ಶಾತಕರ್ಣಿಯ ಮಗಳು ಶಿವಸ್ಕಂದ ನಾಗಶ್ರೀಯು ಮುಚಲಿಂಗ ನಾಗಪ್ರತಿಮೆಯನ್ನು, ತಟಾಕ, ವಿಹಾರಗಳನ್ನು ನಿರ್ಮಿಸಿದಳೆಂದು ತಿಳಿಸುತ್ತದೆ. ಕ್ರಿ.ಶ.ಸು.೧೫೦ರ ಕದಂಬ ಪ್ರಾಕೃತ ಶಾಸನದಲ್ಲಿ[೩೫] ಶಾತವಾಹನ ರಾಜನೊಬ್ಬನು 'ಮಟ್ಟಪಟ್ಟಿದೇವ'ರಿಗೆ ದತ್ತಿಯನ್ನು ಬಿಟ್ಟುಕೊಟ್ಟ ವಿಷಯವಿದೆ. ಅಲ್ಲದೆ ಅದು ಮಹಾಮುನಿಗಳ ವಾಸಸ್ಥಾನವಾಗಿತ್ತು ಎಂದು ಉಲ್ಲೇಖಿಸಿದೆ. ಗದಗ ಜಿಲ್ಲೆ ನರಗುಂದ ತಾಲೂಕಿನ ವಾಸನದಲ್ಲಿ ಶಾತವಾಹನದೊರೆ ವಾಸಿಷ್ಠಪುತ್ರ ಶ್ರೀಪುಳುಮಾಮಿಯ ಪ್ರಾಕೃತ ಶಾಸನವೊಂದು ದೊರೆತಿದ್ದು (ಕ್ರಿ.ಶ.೧ ಅಥವ ೨ನೇ ಶತಮಾನ) ಅದರಲ್ಲಿ ಪುಳುಮಾಮಿಯು 'ಚಂಡಶಿವ' ದೇವಾಯತನವನ್ನು ನಿರ್ಮಿಸಿದನೆಂದು ಉಲ್ಲೇಖಿಸಿದೆ.[೩೬] ಈ ದೇವಾಲಯವು ಕರ್ನಾಟಕದಲ್ಲಿ ಈವರೆಗೆ ತಿಳಿದಿರುವ ಅತೀ ಪ್ರಾಚೀನ ಶೈವ ದೇವಾಲಯದ ಉಲ್ಲೇಖವಾಗಿದೆ. ಅದರಂತೆ ಅಂಕೋಲಾದ ಬಳಿ ಬೋಳೆಯಲ್ಲಿ ದೊರೆತ ಶಿವಲಿಂಗವು ಮೂರು ಭಾಗಗಳಿಂದ ಕೂಡಿದ್ದು (ಬ್ರಹ್ಮ, ವಿಷ್ಣು, ಮಹೇಶ್ವರ) ಬ್ರಹ್ಮಸೂತ್ರವನ್ನು ಹೊಂದಿದೆ.[೩೭] ಕ್ರಿ.ಶ.ಸು. ೪೫೦ರ ತಾಳಗುಂದ ಶಾಸನವು[೩೮] ಅಲ್ಲಿ ಪ್ರಣವೇಶ್ವರ ದೇವಸ್ಥಾನ ಇದ್ದುದಾಗಿ ಉಲ್ಲೇಖಿಸಿದೆ. ಶಾತವಾಹನರು ಈ ದೇವರನ್ನು ಪೂಜಿಸುತ್ತಿದ್ದರೆಂದೂ ಶಾಸನದಲ್ಲಿ ಹೇಳಲಾಗಿದೆ. ಈ ದೇವಾಲಯವು ಕದಂಬ ಮೃಗೇಶ ವರ್ಮನ ಕಾಲದಲ್ಲಿಯೂ ರಾಜಗೌರವ ಪಡೆದಿತ್ತು. ಬನವಾಸಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದ ಬನವಾಸಿ ಕದಂಬರ (ಕ್ರಿ.ಶ.೩೨೫-೫೪೦) ದೇವಾಲಯಗಳು ಇಂದು ಕಾಣುವುದಿಲ್ಲವಾದರೂ

ದೇವಾಲಯಗಳು ಇದ್ದುದರ ಬಗ್ಗೆ ಶಾಸನಗಳು ಸ್ಪಷ್ಟ ದಾಖಲೆ ಒದಗಿಸುತ್ತವೆ. ಹಲಸಿಯ ತಾಮ್ರಪಟಗಳು ಮೃಗೇಶವರ್ಮನು ಶ್ರೀವಿಜಯ ಫಲಾಶಿಕದಲ್ಲಿ ಜಿನಾಲಯವೊಂದನ್ನು ನಿರ್ಮಿಸಿದನೆಂದು ಉಲ್ಲೇಖಿಸಿವೆ.[೩೯] ಶಿರಸಿ ತಾಮ್ರಪಟಗಳು[೪೦] ರವಿವರ್ಮನ ವೈದ್ಯ ನೀಲಕಂಠ ದೇಶಾಮಾತ್ಯನು ಬನವಾಸಿಯಲ್ಲಿ ಮಹಾದೇವಾಯ ತನವನ್ನು ಕಟ್ಟಿಸಿದನೆಂದು ಹೇಳುತ್ತವೆ. ರವಿವರ್ಮನ ಗುಡ್ನಾಪುರ ಶಾಸನವು[೪೧] ಮನ್ಮಥ ಜಿನಾಲಯವೊಂದರ ನಿರ್ಮಾಣವನ್ನು ಸೂಚಿಸುತ್ತದೆ. ಪಟ್ಟದಕಲ್ಲಿನ ಸುತ್ತಮುತ್ತ ಭೂಶೋಧನೆ ನಡೆಸಿ ಕದಂಬರ ಕಾಲದ ಹಲವು ದೇವಾಲಯ ಕಟ್ಟಡಗಳ ಅವಶೇಷಗಳನ್ನು ಅ.ಸುಂದರ ಅವರು ಗುರುತಿಸಿದ್ದಾರೆ.[೪೨] ಇದೇ ವೇಳೆಯಲ್ಲಿ ದಕ್ಷಿಣ ಕರ್ನಾಟಕದಲ್ಲಿ ರಾಜ್ಯವಾಳಿದ ಗಂಗರ ಶಾಸನಗಳಲ್ಲಿಯೂ ಸಹ ಗಂಗರು ಕಟ್ಟಿಸಿದ ದೇವಾಲಯ ಹಾಗೂ ಬಸದಿಗಳ ಉಲ್ಲೇಖಗಳಿವೆ. ಹರಿವರ್ಮನ ಕಾಲದ 'ಮೂಲಸ್ಥಾನೇಶ್ವರ', ಅವನೀತ ಕಟ್ಟಿಸಿದ 'ವಿನಿತೇಶ್ವರ', ಮಾಧವ ಅವನೀತರ ಕಾಲದ 'ಅರ್ಹದಾಯತನ', 'ನೀತಿಮಾರ್ಗೇಶ್ವರ', 'ಶಿವಮಾರೇಶ್ವರ', ಶಿವಮಾರನ ಬಸದಿಗಳನ್ನು ಉದಾಹರಿಸಬಹುದು. ಇವುಗಳಲ್ಲಿ ಬಹು ಮಟ್ಟಿನವು ಶಿಥಿಲಗೊಂಡಿವೆ ಅಥವಾ ಜೀರ್ಣೋದ್ಧಾರಗೊಂಡಿವೆ.[೪೩]

ಬಾದಾಮಿ ಚಾಲುಕ್ಯರು ಕ್ರಿ.ಶ.೬ನೇ ಶತಮಾನದಿಂದ ಗುಹಾಲಯಗಳನ್ನು ಅಲ್ಲದೆ ರಚನಾತ್ಮಕ ದೇವಾಲಯಗಳ ನಿರ್ಮಾಣವನ್ನು ಆರಂಭಿಸಿ 'ಚಾಲುಕ್ಯ ರಚನೆ'ಗೆ ಪೀಠಿಕೆ ಹಾಕಿದರು. ಇವರ ಪ್ರಮುಖ ವಾಸ್ತುಶಿಲ್ಪ ಕೇಂದ್ರವೆನಿಸಿದ ಐಹೊಳೆಯನ್ನು 'ದೇವಾಲಯಗಳ ನಗರ'ವೆಂದೂ 'ಭಾರತೀಯ ದೇವಾಲಯ ವಾಸ್ತುಶಿಲ್ಪದ ತೊಟ್ಟಿಲು' ಎಂದೂ ಕರೆಯಲಾಗಿದೆ.[೪೪] ಇವರ ವಾಸ್ತುಶಿಲ್ಪ ಚಟುವಟಿಕೆ ಎರಡು ನಿರ್ದಿಷ್ಟ ಹಂತಗಳನ್ನು ಕಂಡಿತು. ಮೊದಲ ಹಂತವು ಗುಹಾಂತರ ದೇವಾಲಯಗಳ ನಿರ್ಮಾಣ. ಇದು ಬಾದಾಮಿ ಮತ್ತು ಐಹೊಳೆಯಲ್ಲಿ ನಡೆಯಿತು. ಎರಡನೇ ಹಂತವು ನಿರ್ಮಿತ ವಾಸ್ತುಶಿಲ್ಪ ಕಲೆಯು. ಇಲ್ಲಿ ಶಿಲ್ಪಗಳ ಲಾಲಿತ್ಯ, ಗಾಂಭೀರ್ಯ ಮತ್ತು ನವ್ಯತೆಗಳೂ ಬೆಳಕಿಗೆ ಬಂದವು. ಐಹೊಳೆ, ಪಟ್ಟದಕಲ್ಲು ಮತ್ತು ಆಂಧ್ರಪ್ರದೇಶದ ಆಲಂಪುರಗಳಲ್ಲಿ ಇವುಗಳನ್ನು ವಿಶೇಷವಾಗಿ ಕಾಣುತ್ತೇವೆ. ಬಾದಾಮಿ ಚಾಲುಕ್ಯರು ಪ್ರತಿಮಾ ಪೂಜೆಯನ್ನೊಲ್ಲದ ವೈದಿಕ ಮತದ ಯಾಗ ಯಜ್ಞಗಳ ಆಚರಣೆ ಮತ್ತು ಪ್ರತಿಮಾ ಪೂಜೆಯನ್ನೊಪ್ಪುವ ಪುರಾಣಗಳ ಆಸರೆ ಪಡೆದ ಅದೇ ವೈದಿಕ ಮತದ ಪ್ರತಿಮೆಗಳ ಪ್ರತಿಷ್ಠೆ ಮತ್ತು ಅವುಗಳಿಗೆ ದೇವಾಲಯ ನಿರ್ಮಾಣದಂತಹ ಚಟುವಟಿಕೆಗಳು ಏಕಕಾಲದಲ್ಲಿ ನಡೆಯುತ್ತ ಸಮನ್ವಯತೆಯನ್ನು ಸಾಧಿಸುವ ಪ್ರಯತ್ನವನ್ನು ಮಾಡಿದರು. ಇದು ಕ್ರಿ.ಶ.೫೭೮ರ ಬಾದಾಮಿಯ ಗುಹಾಶಾಸನದಿಂದ ಸ್ಪಷ್ಟವಾಗುತ್ತದೆ.[೪೫] ಐಹೊಳೆ, ಬಾದಾಮಿ, ಪಟ್ಟದಕಲ್ಲುಗಳಲ್ಲಿರುವ ರಚನೆಗಳನ್ನು ವಿಶ್ಲೇಷಿಸಿ ದೇವಾಲಯಗಳು ಬೆಳೆದು ಬಂದ ಹಾದಿಯನ್ನು ಗುರುತಿಸಲು ಹಲವಾರು ಪ್ರಯತ್ನಗಳು ಈವರೆಗೆ ನಡೆದಿವೆ. ಐಹೊಳೆಯ ಲಾಡಖಾನ್ ದೇವಾಲಯ, ಗೌಡರಗುಡಿ, ಕೊಂತಿಗುಡಿಗಳನ್ನು ಪ್ರಾರಂಭಿಕ ದೇವಾಲಯಗಳೆಂದು ಗುರುತಿಸಲಾಗಿದ್ದು; ಇವುಗಳ ಪ್ರಾಚೀನತೆಯ ಬಗೆಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಐಹೊಳೆಯಲ್ಲಿ ಕಂಡುಬರುವಷ್ಟು ದೇವಾಲಯ ವೈವಿಧ್ಯತೆ ಬೇರೆ ಯಾವ ಸ್ಥಳದಲ್ಲೂ ಕಂಡುಬರುವುದಿಲ್ಲ. ಸಾಂಧಾರ ಹಾಗೂ ನಿರಾಂಧಾರ ಎರಡೂ ಬಗೆಯ ದೇವಾಲಯಗಳು ನಿರ್ಮಾಣಗೊಂಡವು. ಚಾಲುಕ್ಯ ಕಾಲದ ಶಿಲ್ಪಿಗಳು ರೇಖಾನಗರ, ಕದಂಬನಾಗರ ಮತ್ತು ದ್ರಾವಿಡ ಶಿಖರಗಳನ್ನು ತಮ್ಮ ದೇವಾಲಯಗಳಲ್ಲಿ ಅಳವಡಿಸಿಕೊಂಡಿದ್ದಾರೆ. ಐಹೊಳೆ, ಬಾದಾಮಿ, ಪಟ್ಟದಕಲ್ಲುಗಳು ಶಾತವಾಹನರ

ಕಾಲದಿಂದ ಕಲ್ಯಾಣ ಚಾಲುಕ್ಯರ ಕಾಲದವರೆಗೂ ನಿರಂತರವಾಗಿ ದೇವಾಲಯಗಳ ನಿರ್ಮಾಣದ ಕೇಂದ್ರಗಳಾಗಿದ್ದುದಕ್ಕೆ ಶಾಸನಗಳು ಮತ್ತು ಉಳಿದಿರುವ ದೇವಾಲಯ ಅವಶೇಷಗಳು ಸಾಕ್ಷಿಯಾಗಿವೆ.

ಬಾದಾಮಿ ಚಾಲುಕ್ಯರಿಂದ ಕರ್ನಾಟಕ ವಾಸ್ತುಶಿಲ್ಪ ರಚನೆಗೆ ಒಂದು ನಿರ್ದಿಷ್ಟವಾದ ನೆಲೆ ದೊರಕಿದಂತಾಯಿತು. ಇವರ ವಾಸ್ತುಶಿಲ್ಪ ಕ್ರಮವನ್ನೇ ಅನುಸರಿಸಿ, ಮುಂದೆ ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಹೊಯ್ಸಳರು ಹಾಗೂ ವಿಜಯನಗರ ಅರಸರು ಕರ್ನಾಟಕದ ವಾಸ್ತುಶಿಲ್ಪಕ್ಕೆ ತಮ್ಮದೇ ಆದ ಉತ್ತಮ ಕೊಡುಗೆಯನ್ನು ಕೊಟ್ಟಿದ್ದಾರೆ.

## ೩.೨. ವಾಸ್ತುಶಿಲ್ಪ

'ಶಿಲ್ಪ' ಎನ್ನುವುದು ಮೊದಲು ಬಹಳ ವ್ಯಾಪಕವಾದ ಅರ್ಥವನ್ನು ಪಡೆದಿತ್ತು. ಪ್ರಸಿದ್ಧವಾದ ಅರವತ್ತು ನಾಲ್ಕು ಕಲೆಗಳಿಗೆಲ್ಲ 'ಶಿಲ್ಪ' ಎನ್ನುವ ಹೆಸರೇ ಅನ್ವಯವಾಗುತ್ತಿತ್ತು.[೪೬] ವಾಸ್ತುಶಿಲ್ಪ ಅದರಲ್ಲಿನ ಒಂದು ಭಾಗವೆಂದು ಹೇಳಬಹುದು. ಮಯಮತ ಗ್ರಂಥವು ವಾಸ್ತು ವಿಷಯದ ಕುರಿತು ಮರ್ತ್ಯರು ಮತ್ತು ಅಮರ್ತ್ಯರು ವಾಸಿಸುವ ಸ್ಥಳಕ್ಕೆ ವಸ್ತು ಎಂದು, ವಸ್ತುವನ್ನು ಆಶ್ರಯಿಸಿದ್ದು 'ವಾಸ್ತು' ಎಂದು ಹೇಳಿದೆ. ಮುಂದೆ ಪ್ರಾಸಾದ, ಹರ್ಮ್ಯ, ಸೌದ ಇತ್ಯಾದಿಗಳು ವಸ್ತುವನ್ನು ಆಶ್ರಯಿಸಿದ್ದು 'ವಾಸ್ತು' ಎಂದೆನಿಸಿಕೊಳ್ಳುತ್ತದೆ.[೪೭] ಭೂಮಿಯನ್ನು ಒಂದು ವಸ್ತುವೆಂದು ಪರಿಗಣಿಸಿ ಅದರ ಮೇಲೆ ನಿರ್ಮಾಣಗೊಂಡ ಗ್ರಾಮಗಳು, ನಗರಗಳು, ಕೋಟೆಗಳು, ಪಟ್ಟಣಗಳು, ಮಠಗಳು ಸಹ ವಾಸ್ತುಗಳೆಂದು ಗರುಡ ಪುರಾಣದಲ್ಲಿಯೂ ಹೇಳಿದೆ.[೪೮]

ವಾಸ್ತುಶಾಸ್ತ್ರ ಗ್ರಂಥಗಳು ಪ್ರಾಚೀನ ಶಾಸ್ತ್ರಗಳಲ್ಲಿ ಒಂದೆಂದು ಪರಿಗಣಿತವಾಗಿವೆ. ಈ ಗ್ರಂಥಗಳನ್ನು ಶಿಲ್ಪಶಾಸ್ತ್ರಗ್ರಂಥಗಳೆಂದು ಕರೆಯಲಾಗಿದೆ.[೪೯] ಶಿಲ್ಪಶಾಸ್ತ್ರವನ್ನು ಒಂದು ಉಪವೇದವೆಂದೂ ಹೇಳಲಾಗುತ್ತದೆ. ಋಗ್ವೇದಕ್ಕೆ ಆಯುರ್ವೇದವು, ಯಜುರ್ವೇದಕ್ಕೆ ಧನುರ್ವೇದವು, ಸಾಮವೇದಕ್ಕೆ ಗಾಂಧರ್ವವೇದವು ಉಪವೇದಗಳಿದ್ದಂತೆ ಅಥರ್ವಣವೇದಕ್ಕೆ ಸ್ಥಾಪತ್ಯವೇದವು ಉಪವೇದವಾಗಿದೆ.[೫೦] ಸುಮಾರು ೬-೭ನೇ ಶತಮಾನದ ವರಾಹಮಿಹಿರನ 'ಬೃಹತ್ಸಂಹಿತೆ' ಗ್ರಂಥವು ವಾಸ್ತುಶಿಲ್ಪಾಚಾರ್ಯರೆನಿಸಿದ ಮಯ, ಗರ್ಗ, ವಿಶ್ವಕರ್ಮ, ಮನುಗಳು ರೂಪಿಸಿದ ಪ್ರಮಾಣವಾಕ್ಯಗಳನ್ನು ಒಳಗೊಂಡ ಗ್ರಂಥಗಳಾಗಿದೆ. ಕ್ರಿ.ಶ.೭ನೇ ಶತಮಾನದ್ದೆನ್ನಲಾದ 'ಹಯಶೀರ್ಷ' ಪಂಚರಾತ್ರ ತಂತ್ರ ಸಾಹಿತ್ಯವು ಪುರಾಣ ಸಾಹಿತ್ಯಗಳಾದ 'ವಿಷ್ಣು ಧರ್ಮೋತ್ತರ', 'ಮತ್ಸ', 'ಗರುಡ' ಪುರಾಣಗಳು, 'ಸುಪ್ರಭೇದಾಗಮ', 'ಕಾಮಿಕಾಗಮ', 'ಕಾರಣಾಗಮ', 'ರೌರವಾಗಮ', 'ಅಜಿತಾಗಮ', 'ವೈಖಾನಸಾಗಮ' ಮುಂತಾದ ಆಗಮ ಗ್ರಂಥಗಳು ವಾಸ್ತುಶಿಲ್ಪಶಾಸ್ತ್ರದ ವಿಷಯಗಳನ್ನು ಒಳಗೊಂಡಿವೆ.

ಪ್ರತ್ಯೇಕವಾಗಿ ವಾಸ್ತುಶಿಲ್ಪಕ್ಕೆ ಸಂಬಂಧಿಸಿದ ಗ್ರಂಥಗಳನ್ನು ದಕ್ಷಿಣಾತ್ಯ ಮತ್ತು ಔತ್ತರೇಯ ಗ್ರಂಥಗಳೆಂದು ವಿಭಾಗಿಸಲಾಗಿದೆ. ಕ್ರಿ.ಶ.೧೧ನೇ ಶತಮಾನದ ಭುವನಪ್ರದೀಪನ 'ಅಪರಾಜಿತಪೃಚ್ಛಾ', ಕ್ರಿ.ಶ.ಸು.೧೦- ೧೧ನೇ ಶತಮಾನದೆನ್ನಲಾದ ಭೋಜನ 'ಸಮರಾಂಗಣ ಸೂತ್ರಧಾರ', ಮತ್ಸಪುರಾಣಕ್ಕೂ ಮೊದಲಿನ ಕಾಲದೆನ್ನಲಾದ ವಿಶ್ವಕರ್ಮನ 'ವಿಶ್ವಕರ್ಮಪ್ರಕಾಶ', ಕ್ರಿ.ಶ.೧೧ನೇ ಶತಮಾನದ ಚಾಳುಕ್ಯ ಮೂರನೇ ಸೋಮೇಶ್ವರನ 'ಮಾನಸೋಲ್ಲಾಸ', ಕ್ರಿ.ಶ.೧೨ನೇ ಶತಮಾನದ ಮಂಡನನ 'ರೂಪಮಂಡನ' ಗ್ರಂಥಗಳು ಔತ್ತರೇಯ

ಗ್ರಂಥಗಳು ಅದರಂತೆ ಕ್ರಿ.ಶ.೯ನೇ ಶತಮಾನದ 'ಮಯಮತ', ಕ್ರಿ.ಶ.೫ನೇ ಶತಮಾನದ 'ಮಾನಸಾರ' ಕ್ರಿ.ಶ.೧೫ನೇ ಶತಮಾನದ 'ತಂತ್ರಸಮುಚ್ಛಯ' 'ಕಾಶ್ಯಪಶಿಲ್ಪ', 'ವಿಮಾನಾರ್ಚನಕಲ್ಪ', 'ಪದ್ಮಸಂಹಿತಾ', 'ಪ್ರಯೋಗಮಂಜರಿ' ಕ್ರಿ.ಶ.೧೬ನೇ ಶತಮಾನದ 'ವಾಸ್ತುವಿದ್ಯಾ', ಶ್ರೀಕುಮಾರನ 'ಶಿಲ್ಪರತ್ನ' ಮುಂತಾದ ಗ್ರಂಥಗಳು ದಕ್ಷಿಣಾತ್ಯ ಗ್ರಂಥಗಳೆಂದು ವಿದ್ವಾಂಸರು ಗುರುತಿಸಿದ್ದಾರೆ.

**ದೇವಾಲಯ ವಾಸ್ತು :** ತನಗಾಗಿ ಕಟ್ಟಿಕೊಂಡ ಮನೆ ಗೃಹವಾಸ್ತು ಶಿಲ್ಪ ಎನಿಸಿಕೊಂಡರೆ; ದೇವರಿಗಾಗಿ ಕಟ್ಟಿದ ಆಲಯವು 'ದೇವಾಲಯ ವಾಸ್ತುಶಿಲ್ಪ' ಎನಿಸಿಕೊಂಡಿತು. ದೇವಾಲಯಗಳನ್ನು ಕಟ್ಟುವ ಮೊದಲು ಉತ್ತಮವಾದ ನಿವೇಶನವನ್ನು ಆಯ್ಕೆ ಮಾಡಲಾಗುತ್ತದೆ. ಸಾಧಾರಣವಾಗಿ ಎಲ್ಲಾ ಶಿಲ್ಪಶಾಸ್ತ್ರಗಳಲ್ಲಿ ಭೂ ಪರೀಕ್ಷಾ ಎಂಬ ಶೀರ್ಷಿಕೆಯ ಪ್ರತ್ಯೇಕ ಅಧ್ಯಾಯವು ಪ್ರಾರಂಭದಲ್ಲಿಯೇ ಇರುತ್ತದೆ. ಈ ಬಗ್ಗೆ ವಿಸ್ತಾರವಾದ ವಿವರಣೆಗಳು ದೊರೆಯುತ್ತವೆ. ಶತಪಥ ಬ್ರಾಹ್ಮಣದಲ್ಲಿ ಭೂಮಿ ಆಯ್ಕೆಯ ಬಗ್ಗೆ ಬಹಳಷ್ಟು ಮಹತ್ವಪೂರ್ಣ ಅಂಶಗಳನ್ನು ಹೇಳಲಾಗಿದೆ.[೧] ನಿವೇಶನ ಆಯ್ಕೆಯ ನಂತರ ಕಟ್ಟಡದ ತಲ ನಕ್ಷೆಯನ್ನು ತಯಾರಿಸಲಾಗುತ್ತದೆ. ಇದೇ ವಾಸ್ತು ಪುರುಷ ಮಂಡಲ. ಭಾರತೀಯ ಕಟ್ಟಡ ರಚನಾ ವಿನ್ಯಾಸದ ಮೂಲ ಸ್ವರೂಪವು ಚಚ್ಚೌಕಾಕೃತಿ. ಅದೇ ಅದರ ಮುಖ್ಯ ರೂಪ. ಅದನ್ನು ತ್ರಿಕೋಣ, ಷಟ್‌ಕೋನ, ಅಷ್ಟಕೋನ ವೃತ್ತವಾಗಿಯೂ ಪರಿವರ್ತಿಸ ಬಹುದು. ವೇದಕಾಲದಲ್ಲಿ ಯಜ್ಞಕುಂಡಗಳು ಚೌಕಾಕಾರ ಹಾಗು ಇತರ ಜ್ಯಾಮಿತಿಯ ಆಕಾರಗಳಲ್ಲಿ ಇರುತ್ತಿದ್ದವು. ಅದೇ ರೀತಿಯಾಗಿ ಯಜ್ಞವೇದಿಗಳು ಮಾತ್ರ ಚೌಕಾಕಾರದಲ್ಲಿಯೇ ಇರುತ್ತಿದ್ದವು. ಈ ಬಗ್ಗೆ ಪ್ರೊ. ಸ್ಟೆಲ್ಲಾ ಕ್ರಮ್ರಿಶ್ ಅವರು[೨] 'ಯಜ್ಞ ಮತ್ತು ದೇವಾಲಯಗಳ ಶಿಲ್ಪಗಳ ಮೂಲಭೂತ ಸಂಕೇತವಾಗಿ ಚೌಕವಿದೆ. ಬೌದ್ಧಾಯನನು ಮೊದಲಿಗೆ ರಥಚಕ್ರಚಿತಿಯನ್ನು ನಿರ್ಮಾಣ ಮಾಡುವುದರ ಬಗ್ಗೆ ಹೇಳುವುದನ್ನು ವ್ಯಾಖ್ಯಾನಕಾರನು ವಿಸ್ತರಿಸುತ್ತಾ ಮೊದಲಿಗೆ ನಾಲ್ಕು ಇಟ್ಟಿಗೆಗಳಿಂದ ಸಣ್ಣ ಚೌಕವನ್ನು ಅಗ್ನಿಕ್ಷೇತ್ರದ ಮಧ್ಯೆ ನಿರ್ಮಿಸುವುದನ್ನು ಹೇಳುತ್ತಾನೆ. ಇದನ್ನೇ ಹಿಗ್ಗಿಸಿ ಹದಿನಾರು ಇಟ್ಟಿಗೆಗಳನ್ನು ಬಳಸುವ ಕ್ರಮವನ್ನು ಹೇಳುತ್ತಾನೆ. ವಾಸ್ತುಶಾಸ್ತ್ರದಲ್ಲಿ ಈ ರೀತಿಯಾಗಿ ೧,೨,೩,೪ ಮುಂತಾಗಿ ಚೌಕಗಳು ಇರುವಂತೆ ಅನುಕ್ರಮಿಕ ಶ್ರೇಣಿಯಲ್ಲಿ ವಾಸ್ತು ಮಂಡಲದ ಚೌಕಗಳ ಸಂಖ್ಯೆ ಏರುತ್ತಾ ಸಾಗುತ್ತದೆ. ಇವುಗಳಲ್ಲಿ ೬೪ ಚೌಕಗಳ ವಾಸ್ತು ಮಂಡಲವು ಬಹು ಶ್ರೇಷ್ಠ ಎಂದು ಪರಿಗಣಿತವಾಗಿದೆ. ಇದು ವೇದಿ ನಿರ್ಮಾಣದ ೬೪ ಇಟ್ಟಿಗೆಗಳೊಂದಿಗೆ ಸಂಬಂಧ ಇರಿಸಿಕೊಂಡು ಪಾವನವೆಂದು ಗ್ರಹಿಸಲಾಗಿದೆ' ಎಂದು ಹೇಳಿದ್ದಾರೆ. ವಾಸ್ತು ಪುರುಷ ಮಂಡಲವು ವಾಸ್ತು ಪುರುಷನ ರೂಪ ಹಾಗೂ ಯಂತ್ರ. ವಾಸ್ತು ಪುರುಷನನ್ನು ಮಾನವಾಕಾರದಲ್ಲಿ ಚಿತ್ರಿಸಲಾಗಿದೆ. ೬೪ ಚೌಕಗಳ ಮಂಡಲದಲ್ಲಿ ಈತನ ಶಿರಸ್ಸು ಪೂರ್ವಾಭಿಮುಖವಾಗಿದ್ದು ಪಾದಗಳು ಪಶ್ಚಿಮಕ್ಕಿರುತ್ತವೆ. ಈತನ ಅಂಗಗಳ ಮೇಲೆ ೪೪ ದೇವತೆಗಳಿರುತ್ತಾರೆ. ಹೊರ ಅಂಚಿನಲ್ಲಿ ವಾಸ್ತುಮಂಡಲದ ಪರಿಧಿಯಲ್ಲಿ ೩೨ ದೇವತೆಗಳು ಮತ್ತು ಮಧ್ಯಭಾಗದ ಸುತ್ತಲೂ ಒಳ ಅಂಚಿನಲ್ಲಿ ೧೨ ದೇವತೆಗಳು, ೩೨ ದೇವತೆಗಳನ್ನು ಪ್ರಾಕಾರ ದೇವತೆಗಳೆಂದು ಕರೆಯಲಾಗಿದೆ.[೨]

ದೇವಾಲಯ ನಿರ್ಮಾಣದಲ್ಲಿ ಮಣ್ಣು, ಇಟ್ಟಿಗೆ, ಮರ ಮತ್ತು ಶಿಲೆಗಳೇ ಪ್ರಧಾನ. 'ಮಹಾನಿರ್ವಾಣ ತಂತ್ರ'ವು ಶಿಲೆಗಳಿಂದ ನಿರ್ಮಿಸಿದ ಕಟ್ಟಡವು ಹೆಚ್ಚು ಶ್ರೇಯಸ್ಕರ ಎಂದು ಹೇಳಿದೆ. ಇಟ್ಟಿಗೆಯಿಂದ ನಿರ್ಮಿಸಿದ

ಕಟ್ಟಡವು ಮರದ ನಿರ್ಮಿತಿಗಳಿಗಿಂತ ನೂರು ಪಟ್ಟು ಉತ್ತಮವಾದರೆ ಶಿಲಾ ನಿರ್ಮಿತಿಗಳು ಹತ್ತುಸಾವಿರಪಟ್ಟು ಶ್ರೇಯಸ್ಕರ ಎಂದು ವಿವರಿಸಿದೆ.[೬೪] ಶಾಸ್ತ್ರ ಗ್ರಂಥಗಳು ಈ ಪ್ರಧಾನ ವಸ್ತುಗಳ ಬಗ್ಗೆ ಸಾಕಷ್ಟು ವಿವರಣೆಯನ್ನು ನೀಡುತ್ತವೆ. ಮಣ್ಣನ್ನು ಹೊರ ತೆಗೆದು ಅದರ ಬಲವರ್ಧನೆಗೊಳಿಸಲು ಹಲವು ಮಾರ್ಗಗಳನ್ನು ಶತಪಥ ಬ್ರಾಹ್ಮಣದಲ್ಲಿ, ಬೌಧಾಯನ ಶುಲ್ಬ ಸೂತ್ರದಲ್ಲಿ ಅಪರಾಜಿತ-ಪೃಚ್ಛ ಮುಂತಾದ ಶಾಸ್ತ್ರಗ್ರಂಥಗಳು ಹೇಳಿವೆ.[೬೫] ಇಟ್ಟಿಗೆಯನ್ನು ಸಂಸ್ಕೃತದಲ್ಲಿ 'ಇಷ್ಟಕ' ಎನ್ನುತ್ತಾರೆ. ಇದರ ಪ್ರಯೋಗವು ಯಜುರ್ವೇದಲ್ಲಿಯೇ ಇದೆ. ಇಷ್ಟಕಗಳನ್ನು ತಯಾರಿಸುವ ಕ್ರಮವನ್ನು 'ಶಿಲ್ಪರತ್ನ'ದಲ್ಲಿ ಹೇಳಿದೆ. ಕಲ್ಪಸೂತ್ರದಲ್ಲಿ ಶೌತ್ರಸೂತ್ರ, ಗೃಹ್ಯಸೂತ್ರ, ಧರ್ಮಸೂತ್ರ ಮತ್ತು ಶುಲ್ಬಸೂತ್ರಗಳೆಂಬ ನಾಲ್ಕು ಭಾಗಗಳಿವೆ. ಶೌತ್ರಸೂತ್ರ ವಿವರಿಸುವ ಯಜ್ಞವೇದಿ-ಕುಂಡಗಳ ನಿರ್ಮಾಣ ಮತ್ತು ಯಜ್ಞಸಿದ್ಧಿಗೆ ಬೇಕಾಗಿರುವ ಇಟ್ಟಿಗೆ ಮತ್ತು ಇತರ ಪರಿಕರಗಳನ್ನು ತಯಾರಿಸುವ ಕ್ರಮವನ್ನು ಶುಲ್ಬಸೂತ್ರ ವಿವರಿಸುತ್ತದೆ.[೬೬] ಅದರಂತೆ ಮರದ ಬಗ್ಗೆ ಸಾಕಷ್ಟು ವಿವರಣೆಯನ್ನು ಒದಗಿಸುವ ಶಾಸ್ತ್ರಗ್ರಂಥಗಳು ಮರವನ್ನು ವಯೋಮಾನ, ದೋಷಗಳು ಮತ್ತು ಲಿಂಗ ಇವುಗಳ ಆಧಾರದಿಂದ ವರ್ಗೀಕರಿಸಿವೆ. ಹಾಗೆಯೇ ಶಿಲೆಗಳ ಸ್ವೀಕಾರ ನಿರಾಕರಣೆಯನ್ನು ಅವುಗಳ ಬಣ್ಣ, ಲಿಂಗ ಮತ್ತು ವಯೋಮಾನಗಳ ಆಧಾರದಿಂದ ತೀರ್ಮಾನಿಸಲಾಗಿದೆ.[೬೭]

ಪ್ರಾಸಾದ-ವಿಮಾನ : ದೇವಾಲಯವನ್ನು ಪ್ರಾಸಾದ ಅಥವಾ ವಿಮಾನ ಎಂದು ಕರೆಯಲಾಗಿದೆ. ತನ್ನ ಸೌಂದರ್ಯದಿಂದ ದೇವರನ್ನು ಮನುಷ್ಯರನ್ನೂ ಆಹ್ಲಾದಗೊಳಿಸುತ್ತದೆ (ಪ್ರಸೀದತಿ) ಎಂಬ ಕಾರಣದಿಂದ ಅದನ್ನು ಪ್ರಾಸಾದವೆನ್ನಲಾಗಿದೆ. ಪ್ರಾಸಾದ ಎಂಬ ಮಾತು ದೇವರ ವಿಗ್ರಹವಿರುವ ಚೌಕಾಕಾರದ ನಾಲ್ಕು ದಪ್ಪ ಗೋಡೆಗಳ ನಡುವಣ ಕಿರಿದಾದ ಗರ್ಭಗೃಹ. ಅದರ ಕೆಳಗಿನ ಅಧಿಷ್ಠಾನ ಅಥವಾ ಪೀಠ ಹಾಗೂ ಶಿಖರಕ್ಕೆ ಆಸರೆಯಾಗಿರುವಂತಹ ಮೇಲ್ಕಟ್ಟಡಗಳನ್ನೊಳಗೊಂಡ ಭಾಗಕ್ಕೆ ಅನ್ವಯಿಸುತ್ತದೆ. ಈ ಸಮಗ್ರ ಪ್ರಾಸಾದವು ಒಂದು ಚಿತಿಯನ್ನು ಸೂಚಿಸುವಂತಿದೆ. ಪ್ರಾಸಾದ, ಸದ್ಮ, ಸದನಮ್ ಎಂಬ ಹೆಸರುಗಳು ಸಾದನಮ್ ವೇದಿಯನ್ನು ಒಟ್ಟುಗೂಡಿಸುವಿಕೆ ಎಂಬ ಮೂಲ ಶಬ್ದದಿಂದಲೇ ಬಂದವುಗಳು.[೬೮]

ವಿಮಾನ ಎಂಬುದಕ್ಕೂ ದೇವಾಲಯ ಎಂಬ ಅರ್ಥವಿದೆ. 'ಮಾನ' ಎಂದರೆ ಅಳತೆಗೋಲು, 'ಮಾ' ಎಂಬುದಕ್ಕೆ ಒಂದು ವಸ್ತುವಿಗೆ ರೂಪ ಕೊಡುವುದು ಎಂಬ ಅರ್ಥವಿದೆ. ಆದ್ಯಂತವಾಗಿ ಪ್ರಮಾಣಬದ್ಧವಾಗಿ ಅಳೆದು ಶಾಸ್ತ್ರೋಕ್ತವಾಗಿ ಕಟ್ಟಿ ಅದರಲ್ಲಿ ದೇವರನ್ನು ನೆಲೆಗೊಳಿಸಿದ ಆಲಯ. ಇಲ್ಲೂ ಇದು ಗರ್ಭಗೃಹಕ್ಕೆ ಮಾತ್ರ ಅನ್ವಯಿಸುತ್ತದೆ.[೬೯]

ದೇವಾಲಯಗಳ ಪ್ರಭೇದಗಳು : ವಿಮಾನಗಳ ಆಕಾರವನ್ನು ಅವಲಂಬಿಸಿ ದೇವಾಲಯಗಳ ಪ್ರಭೇದಗಳನ್ನು ವಿಂಗಡಿಸಲಾಗಿದೆ. ಶಾಸ್ತ್ರಗ್ರಂಥಗಳು ದೇವಾಲಯಗಳ ನೂರಾರು ಮಾದರಿಗಳನ್ನು ಹೆಸರಿಸಿವೆ. ಅವುಗಳಲ್ಲಿ ಇಪ್ಪತ್ತು ಮಾದರಿಗಳು ಪ್ರಮುಖವಾಗಿವೆ. ಮೇರು, ಮಂದರ, ಕೈಲಾಸ, ವಿಮಾನಚ್ಛಂದ, ನಂದನ, ಸಮುದ್ರ, ಪದ್ಮ, ಗರುಡ, ನಂದಿವರ್ಧನ, ಗಜ, ಗೃಹರಾಜ, ವೃಷ, ಹಂಸ, ಕುಂಭ, ಸರ್ವತೋಭದ್ರ, ಮೃಗರಾಜ, ವರ್ತುಲ, ಚತುರಸ್ರ ಷೋಡಶಾಸ್ತ್ರ ಮತ್ತು ಅಷ್ಟಾಸ್ರ. ಇವುಗಳಲ್ಲಿ ಮೊದಲ ಮೂರು ದೇವಾಲಯಗಳಾದ ಮೇರು, ಮಂದರ, ಕೈಲಾಸಗಳು ಪರ್ವತದ ಹೆಸರುಗಳು. ಪೃಥ್ವಿಯ ಅಕ್ಷರೇಖೆಯ ಮೇಲಿರುವ ಮೇರು

ಪರ್ವತ, ವಿಷ್ಣುವಿನ ವಾಸಸ್ಥಾನವಾದ ಮಂದರ, ಕೈಲಾಸವು ಶಿವನ ಸ್ಥಳ. ಈ ಮಾದರಿಗಳಲ್ಲಿ ಹಲವಾರು ಅಂತಸ್ತುಗಳು (ಭೂಮಿಗಳು) ಇರುತ್ತವೆ.[೬೦] ವಿಮಾನಗಳಲ್ಲಿ ಐದು ವಿಧಗಳನ್ನು ಗುರುತಿಸಲಾಗಿದೆ. ವೈರಾಜ, ಪುಷ್ಪಕ, ಕೈಲಾಸ, ಮಣಿಕ ಮತ್ತು ತ್ರಿವಿಷ್ಟಕ. ವಿಮಾನ ಎಂಬುದಕ್ಕೆ ರಥ ಎಂಬ ಅರ್ಥವೂ ಇದೆ. ಇವುಗಳು ಕ್ರಮವಾಗಿ ಬ್ರಹ್ಮ, ಕುಬೇರ, ಶಿವ, ವರುಣ ಹಾಗೂ ಇಂದ್ರರು ಬಳಸಿದ ರಥಗಳು. ಇವುಗಳ ಆಕಾರವೂ ಕ್ರಮವಾಗಿ ಚೌಕ, ಆಯ, ವೃತ್ತ, ಅಂಡವೃತ್ತ ಹಾಗು ಅಷ್ಟಕೋನ ಆಕಾರ ಹೊಂದಿವೆ. ಇವುಗಳನ್ನು ಛಾದ್ಯ ಪ್ರಾಸಾದಗಳೆಂದೂ ಕರೆಯಲಾಗಿದೆ.[೬೧]

ದೇವಾಲಯಗಳನ್ನು ವಿಂಗಡಿಸುವಲ್ಲಿ ಶಿಖರವನ್ನು ಮುಖ್ಯವಾಗಿ ಪರಿಗಣಿಸಿ ಶಾಸ್ತ್ರಗ್ರಂಥಗಳು ಭಿನ್ನ ಭಿನ್ನ ಪದ್ಧತಿಗಳನ್ನು ಸೂಚಿಸುತ್ತವೆ. 'ಸಮರಾಂಗಣ ಸೂತ್ರಧಾರ', 'ಕಾಮಿಕಾಗಮ', 'ಸುಪ್ರಭೇದಾಗಮ'ಗಳು ದೇವಾಲಯಗಳ ಶೈಲಿಗಳನ್ನು ಆಧರಿಸಿ ನಾಗರ, ದ್ರಾವಿಡ ಹಾಗೂ ವೇಸರ ಎಂದು ವರ್ಗೀಕರಿಸಿವೆ.[೬೨] ಕುತೂಹಲಕಾರಿ ಅಂಶವೆಂದರೆ ೧೦-೧೨ನೆಯ ಶತಮಾನಗಳ ಕೆಲವು ಶಾಸನಗಳಲ್ಲಿಯೂ ನಾಗರ, ದ್ರಾವಿಡ, ವೇಸರ ಮುಂತಾದ ಶೈಲಿಗಳ ಪ್ರಸ್ತಾಪವನ್ನು ಕಾಣುತ್ತೇವೆ.[೬೩]

ವಾಸ್ತುಶಾಸ್ತ್ರಗ್ರಂಥಗಳಲ್ಲಿ ದೇವಾಲಯ ವರ್ಗೀಕರಣವನ್ನು ಭೌಗೋಳಿಕವಾಗಿಯೂ ಮಾಡಲಾಗಿದೆ. ಹಿಮಾಲಯ ಮತ್ತು ವಿಂಧ್ಯ ಪರ್ವತಗಳ ನಡುವಿನ ಪ್ರದೇಶಗಳಲ್ಲಿ ನಾಗರ ಮಾದರಿ, ವಿಂಧ್ಯ ಪರ್ವತದಿಂದ ಕೃಷ್ಣಾನದಿ ತೀರದವರೆಗೆ ಬಳಕೆಯಲ್ಲಿರುವುದು ವೇಸರ ಹಾಗೂ ಕೃಷ್ಣಾನದಿಯಿಂದ ಕನ್ಯಾಕುಮಾರಿಯವರೆಗೆ ದ್ರಾವಿಡ ಮಾದರಿಯ ದೇವಾಲಯಗಳು. ಈ ಭೌಗೋಳಿಕ ವರ್ಗೀಕರಣವನ್ನು ಕ್ರಮವಾಗಿ ಸಾತ್ವಿಕ, ರಾಜಸ, ತಾಮಸ ವಲಯಗಳೆಂದೂ ಹೇಳಲಾಗಿದೆ. ಕಾಶ್ಯಪ ಶಿಲ್ಪಗ್ರಂಥದಲ್ಲಿನ ಈ ಕೆಳಗಿನ ಶ್ಲೋಕವನ್ನು ಗಮನಿಸಬಹುದು.[೬೪]

ಹಿಮಾದ್ರಿ ವಿಂಧ್ಯಯೋರಂತರ್ಗತಾ ಸತ್ವಾವಸುಂಧರಾ
ವಿಧ್ಯಾದಿ ಕೃಷ್ಣವೇಣ್ಯಂತಾ ರಾಜಸಾಖ್ಯಾ ಮಹೀಮತಾ
ಕೃಷ್ಣವೇಣ್ಯಾದಿ ಕನ್ಯಾಂತಂ ತಾಮಸಂ ಭೂತಲಂ ಭವೇತ್
ನಾಗರಂ ಸಾತ್ವಿಕೇ ದೇಶೀ ತಾಮಸೇ ವೇಸರಾಲಯೌ
ರಾಜಸ್ಯೆ ದ್ರಾವಿಡೈರ್ಹರ್ಮ್ಯಂ ಕ್ರಮಾತ್ ಪುಂಡಶಿಯೋಷಿತಃ

ಈ ಆಲಯಗಳಿಗೆ ಕ್ರಮವಾಗಿ ವಿಷ್ಣು, ಮಹೇಶ್ವರ, ಬ್ರಹ್ಮಾದಿ ದೇವತೆಗಳನ್ನು ಹರ್ಮ್ಯ ದೇವತೆಗಳೆಂದು ಹೆಸರಿಸಿದೆ.[೬೫]

ರಚನಾ ವಿನ್ಯಾಸದ ಮೇಲಿಂದ ನಾಗರವು ಮೂಲದಿಂದ ಸ್ತೂಪಿಯವರೆವಿಗೂ ಆಯತಾಸ್ರವಾಗಿದ್ದು, ವೇಸರವು ವೃತ್ತಾಕಾರವಾಗಿಯೂ ದ್ರಾವಿಡವು ಅಷ್ಟಾಸ್ರ ಅಥವಾ ಷಡಸ್ರವಾಗಿದೆ ಎಂದು ಹಲವಾರು ಗ್ರಂಥಗಳಲ್ಲಿ ಹೇಳಲಾಗಿದೆ.

ಉದಾಹರಣೆಗೆ ಸುಪ್ರಭೇದಾಗಮದಲ್ಲಿನ ಈ ಕೆಳಗಿನ ಶ್ಲೋಕವನ್ನು ಗಮನಿಸಬಹುದು.[೬]

ನಾಗರಂ ದ್ರಾವಿಡಂ ವೇಸರಂ ಚ ತ್ರಿಧಾ ಮತಮ್

ಕಂಠಾದಾರಭ್ಯ ವೃತ್ತಂ ಯದ್ ವೇಸರಂ ಇತಿ ಶ್ರುತಮ್ ॥

ಗ್ರೀವಮಾರಭ್ಯ ಚೌಷ್ಪಂಶಂ ವಿಮಾನಂ ದ್ರಾವಿಡಾಖ್ಯಕಮ್

ಸರ್ವಂ ವೈ ಚತುರಶ್ರಂ ಯತ್ಪ್ರಾಸಾದಂ ನಾಗರಾಂತ್ವಿದಮ್ ॥

**ನಾಗರಶೈಲಿ :** ಮೇಲೆ ಹೇಳಿದ 'ಸುಪ್ರಭೇದಾಗಮ' ಗ್ರಂಥದ ವಿವರದಂತೆ ತುಸು ಭಿನ್ನ ರೀತಿಯಲ್ಲಿ ಉಳಿದ ಗ್ರಂಥಗಳು ವಿವರಿಸುತ್ತವೆ.

ಆಸ್ತೂಪೀ ಕರ್ಣಮಾರಭ್ಯ ಚರುರಶ್ರಂ ಪ್ರಕಲ್ಪಿತಂ

ಧಾಮಾಯತಾಶ್ರಮಥವಾ ನಾಗರಂ ತದುದಾಹೃತಂ

ಎಂದು 'ಪದ್ಮ ಸಂಹಿತೆ'ಯು ಕರ್ಣದಿಂದ (ಪ್ರಸ್ತರದ ಮೇಲ್ಭಾಗ) ಸ್ತೂಪಿಯವರೆಗೆ ಚತುರಶ್ರ ಅಥವಾ ಆಯತಾಶ್ರಾಕಾರವಾಗಿರುವುದು ನಾಗರ ಶೈಲಿ ಎಂದಿದೆ. 'ಕಾಶ್ಯಪ ಶಿಲ್ಪ' ಗ್ರಂಥವು

'ಜನ್ಮಾದಿ ಸ್ತೂಪಿಪರ್ಯಂತ ಯುಗಾಶ್ರಂ ನಾಗರಂ ಭವೇತ್ ಎಂದು ಜನ್ಮದಿಂದ ಸ್ತೂಪಿಯವರೆ ಚತುರಶ್ರವಿದ್ದರೆ ಅದು ನಾಗರ ಶೈಲಿ ಎಂದು ವಿವರಿಸಿದೆ.

**ದ್ರಾವಿಡ ಶೈಲಿ :** 'ಮಾನಸಾರ' ಗ್ರಂಥವು ದ್ರಾವಿಡ ಶೈಲಿಯ ಬಗ್ಗೆ ವಿಸ್ತಾರವಾಗಿ ವಿವರಿಸಿದೆ.

ಮೂಲಗ್ರಾತ್ ಸ್ತೂಪಿ ಪರ್ಯಂತಂ ಚಾಷ್ಟಾಶ್ರಕಂ ವಾ ಷಡಶ್ರಕಂ

ತದಗ್ರಂ ಚಾಯತಂ ವಾಪಿ ಗ್ರೀವಸ್ಯಾಧೋ ಯುಗಾಶ್ರಕಂ

ಪೂರ್ವವತ್ ಊರ್ಧ್ವದೇಶಂ ಸ್ಯಾತ್ ದ್ರಾವಿಡಂ ಪರಿಕೀರ್ತಿತಂ

ಮೂಲದಿಂದ ಸ್ತೂಪಿಯವರೆಗೆ ಎಂಟು ಅಥವಾ ಆರು ಕೋನವುಳ್ಳದ್ದಾಗಿದ್ದು, ಅಥವಾ ಕೆಳಗೆ ಆರು ಅಥವಾ ಎಂಟು ಕೋನಗಳು ಮೇಲ್ಗಡೆ ಆಯತಾಕಾರ ಅಥವಾ ಚತುಶ್ರವಾಗಿದ್ದು ಅಥವಾ ಗ್ರೀವದಿಂದ ಕೆಳಗೆ ಚತುರಶ್ರವಾಗಿದ್ದು ಕಂಠದಿಂದ ಮೇಲಕ್ಕೆ ಆರು ಅಥವಾ ಎಂಟು ಕೋನವುಳ್ಳದ್ದು ದ್ರಾವಿಡ ಶೈಲಿ ಎಂದು ವಿವರಿಸಿದೆ. 'ಸುಪ್ರಭೇದಾಗಮ' ಮತ್ತು 'ಕಾಶ್ಯಪಶಿಲ್ಪ' ಗ್ರಂಥಗಳು

ಗ್ರೀವಮಾರಭ್ಯ ಅಷ್ಟಾಶ್ರಂ ವಿಮಾನಂ ದ್ರಾವಿಡ್ಹಾಖ್ಯಕಂ

ಕಂಠದಿಂದ ಆರಂಭಗೊಂಡ ಎಂಟು ಕೋನಗಳ ರಚನೆಯು ದ್ರಾವಿಡ ಶೈಲಿ ಎಂದು ಗುರುತಿಸುತ್ತವೆ.

**ವೇಸರ ಶೈಲಿ :** 'ಕಾಶ್ಯಪ ಶಿಲ್ಪ' ಗ್ರಂಥವು 'ವೃತ್ತಗ್ರೀವ ಶಿರೋಪೇತಂ ವೇಸರಂ ಹರ್ಮ್ಯಮೀರಿತಂ'

ಕಂಠ ಹಾಗೂ ಶಿರೋಭಾಗವು ವೃತ್ತಾಕಾರವಿದ್ದಲ್ಲಿ ಅದು ವೇಸರ ಶೈಲಿ ಎಂದಿದೆ. 'ಸುಪ್ರಭೇದಾಗಮ' ಗ್ರಂಥವು ಇದನ್ನೇ ಅನುಮೋದಿಸಿದೆ. ಗರ್ಭಗೃಹವು ವೃತ್ತಾಕಾರವಿದ್ದಲ್ಲಿ ವೇಸರವೆಂದೇ 'ಕಾಶ್ಯಪಶಿಲ್ಪ' ಗ್ರಂಥವು

ಗುರುತಿಸುತ್ತದೆ. 'ಮಾನಸಾರ' ಗ್ರಂಥದ ಪ್ರಕಾರ ಮೂಲ ಅಥವಾ ಕೆಳಭಾಗದಲ್ಲಿ ವೃತ್ತಾಕಾರ ಅಥವಾ ವೃತ್ತಾಯತ, ಕಂಠದಿಂದ ಮೇಲಕ್ಕೆ ಚತುರಶ್ರ ರಚನೆಯೂ ವೇಸರವೆಂದು ಗುರುತಿಸುತ್ತದೆ. ವೃತ್ತಾಕಾರದ ಮೂಲದೊಂದಿಗೆ ಲಾಳಾಕಾರದ ಮೇಲ್ಭಾಗದ ರಚನೆಯು ವೇಸರವೆನ್ನಿಸಿದೆ.

'ವೇಸರ' ಎಂಬುದನ್ನು ದಕ್ಷಿಣಾತ್ಯ ಗ್ರಂಥಗಳು ಮಾತ್ರ ಉಲ್ಲೇಖಿಸುತ್ತವೆ. ಕಾಮಿಕಾಗಮವು 'ವೇಸರ'ವನ್ನು ವಿಸ್ತಾರವಾಗಿ ವಿವರಿಸುತ್ತದೆ. ಸ್ಟೆಲ್ಲಾ ಕ್ರಾಂರಿಚ್ ಅವರು ಈ ಬಗ್ಗೆ ಕಾಮಿಕಾಗಮದ ಸಾರವನ್ನು ಸಂಗ್ರಹಿಸಿ ವೇಸರವನ್ನು 'ಹೇಸರಗತ್ತೆ', ನಾಗರ ಮತ್ತು ದ್ರಾವಿಡಗಳ ಮಿಶ್ರರೂಪ ಎಂದು ಹೇಳಿದ್ದಾರೆ.[೭೭] 'ವೇಸರ' ಎಂಬುದಕ್ಕೆ ಸಂಕರ ಎಂಬ ಅರ್ಥವನ್ನೂ ಕಾಮಿಕಾಗಮವು ಹೇಳುತ್ತದೆ.[೭೮] ಎಂ.ಎನ್.ಪ್ರಭಾಕರ್ ಅವರು ಈ ವೇಸರ ಶೈಲಿಯನ್ನು ಔತ್ತರೇಯ ದ್ರಾವಿಡ ಶೈಲಿ ಎಂದು ಅಭಿಪ್ರಾಯ ಪಡುತ್ತಾರೆ.[೭೯]

ಮೇಲ್ಕಟ್ಟಡ ಅಥವಾ ಶಿಖರದ ವಿವಿಧ ಮಾದರಿಗಳ ಹಿನ್ನೆಲೆಯಲ್ಲಿ ಕಂಡುಬರುವ ಇತರ ಪ್ರಭೇದಗಳೆಂದರೆ ರೇಖಾನಾಗರ, ಲತಿನ, ವಿಮಾನನಾಗರ, ಕಳಿಂಗ, ವರಾಟ, ಭೂಮಿಜ ಮುಂತಾದವು. ಶಿಖರಕ್ಕೆ ಅನ್ವಯಿಸಿ ಈ ಪ್ರಭೇದಗಳು ಉತ್ತರ ಭಾರತಕ್ಕೆ ಅನ್ವಯಿಸುತ್ತವೆ ಎಂದು ಹೇಳಿದರೂ ಇವು ಭಾರತದ ಇತರ ಕಡೆಗಳಲ್ಲೂ ಕಂಡುಬಂದು ಸ್ಥಳೀಯ ಪ್ರಭೇದಗಳಾಗಿ ಬೆಳೆದು ಬಂದಿವೆ. ಭೂಮಿಜ ಶೈಲಿಯು ಮಾಳವ ದೇಶಕ್ಕೆ ಸೇರಿದ್ದು, ಅದು ಅಲ್ಲಿ ಆರಂಭಗೊಂಡಿತು ಎನ್ನಲಾದರೂ ಅದಕ್ಕೆ ಹೆಚ್ಚಿನ ಪ್ರೋತ್ಸಾಹ ದೊರೆತದ್ದು ಮಾಳವದ ಪರಮಾರರು, ಕಲ್ಯಾಣದ ಚಾಲುಕ್ಯರ ಸಾಮಂತರಾಗಿದ್ದ ಯಾದವರಿಂದ. ಅವರು ಈ ಶೈಲಿಯನ್ನು ತಮ್ಮ ಪ್ರದೇಶದಲ್ಲಿ ಸ್ವೀಕರಿಸಿ ವಿಶೇಷವಾಗಿ ಬಳಸಿದರೆಂದು ವಿದ್ವಾಂಸರು ಗುರುತಿಸಿದ್ದಾರೆ.[೮೦] ಸಮರಾಂಗಣ ಸೂತ್ರಧಾರ, ಕಾಮಿಕಾಗಮ ಮತ್ತು ಅಪರಾಜಿತಪೃಚ್ಛಗಳಲ್ಲಿ 'ವಾರಾಟ'ವನ್ನು ವಿವರಿಸಲಾಗಿದೆ. ಸಮರಾಂಗಣ ಸೂತ್ರಧಾರದಲ್ಲಿ ವೇಸರಕ್ಕೆ ಬದಲು ವಾರಾಟ ಎಂಬ ಹೆಸರಿದೆ. ಈ ಎಲ್ಲ ಶಿಖರ ಮಾದರಿಯ ಜೊತೆಗೆ ಕದಂಬನಾಗರ ಶಿಖರ ರಚನೆಯನ್ನು ಕರ್ನಾಟಕದಲ್ಲಿ ಹೆಚ್ಚಾಗಿ ಕಾಣುತ್ತೇವೆ. ಕದಂಬನಾಗರ ಶಿಖರವನ್ನು ವಿದ್ವಾಂಸರು 'ಫಾಂಸನಾ ಶಿಖರ' ಎಂದು ಗುರುತಿಸಿದ್ದಾರೆ.[೮೧] ಈ ಶೈಲಿಯು ಕದಂಬರ ರಚನೆಗಳಲ್ಲಿ ಕಂಡುಬರುತ್ತಿದ್ದರೂ ಕಲ್ಯಾಣ ಚಾಲುಕ್ಯರ ದೇವಾಲಯಗಳಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಈ ರಚನೆಯಲ್ಲಿ ದೇವಾಲಯ ಮೇಲ್ಕಟ್ಟಡವು ಕಂಠ, ಕಪೋತಗಳಿಂದ ಕೂಡಿದ್ದು, ಹಂತಹಂತವಾಗಿ ಚಿಕ್ಕದಾಗುತ್ತಾ ಮೇಲೇರುತ್ತದೆ. ಅಂತ್ಯದಲ್ಲಿ ಗ್ರೀವ, ಶಿಖರ, ಸ್ತೂಪಿ ಭಾಗಗಳಿರುತ್ತವೆ. ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳಲ್ಲಿ ಹೆಚ್ಚು ಸಂಖ್ಯೆಯ ದೇವಾಲಯಗಳು ಕದಂಬನಾಗರ ಶಿಖರವನ್ನೇ ಹೊಂದಿವೆ.

ದೇವಾಲಯದ ಪ್ರಮುಖ ಅಂಗಗಳು : ದೇವಾಲಯಗಳ ಊರ್ಧ್ವಮುಖ ರಚನೆಯಲ್ಲಿ (ಹೊರಭಾಗದ ರಚನೆಗಳು) ಆರು ಅಂಗಗಳನ್ನು ಗುರುತಿಸಲಾಗಿದೆ. ಹೀಗೆ ಆರು ಅಂಗಗಳನ್ನು ಹೊಂದಿರುವ ದೇವಾಲಯಗಳು 'ಷಡ್ವರ್ಗ ದೇವಾಲಯ' ಎಂದೆನಿಸಿಕೊಳ್ಳುತ್ತದೆ.[೮೨] ಸಾಮಾನ್ಯವಾಗಿ ದೇವಾಲಯದ ಎತ್ತರವು ಅದರ ಅಗಲಕ್ಕೆ ಎರಡರಷ್ಟು ಪ್ರಮಾಣದಲ್ಲಿ ಇರುತ್ತದೆ. ಈ ಎತ್ತರವನ್ನು ಎಂಟು ಭಾಗಗಳಾಗಿ ಮಾಡಿದರೆ, ಅದರಲ್ಲಿ ಒಂದು ಭಾಗ ಅಧಿಷ್ಠಾನಕ್ಕೆ, ಎರಡು ಭಾಗ ಭಿತ್ತಿ, ಪ್ರಸ್ತರ ಮತ್ತು ಗ್ರೀವಕ್ಕೆ ಒಂದೊಂದು ಭಾಗ, ಶಿಖರಕ್ಕೆ ಎರಡು ಭಾಗ ಮತ್ತು ಸ್ತೂಪಿಗೆ ಒಂದು ಭಾಗ ಎಂದು ಷಡ್ವರ್ಗಗಳಿಗೆ ಹಂಚಲಾಗಿದೆ.[೮೩]

ಉಪಪೀಠ : ಷಡ್ವರ್ಗ ದೇವಾಲಯದ ಮೊದಲ ಅಂಗವಾದ ಅಧಿಷ್ಠಾನದ ಕೆಳಗೆ ಉಪಪೀಠ ಇರುತ್ತದೆ. ಇದು ಐಚ್ಛಿಕವಾದ ಭಾಗ, ಕಡ್ಡಾಯವಾಗಿ ಇರಲೇಬೇಕೆಂಬ ನಿಯಮವಿಲ್ಲ. ಆದರೆ ದೇವಾಲಯದ ಉನ್ನತಿ, ಶೋಭೆ ಮತ್ತು ಹೆಚ್ಚಿನ ರಕ್ಷಣೆಗಾಗಿ ಇದನ್ನು ಅಳವಡಿಸಿಕೊಳ್ಳಲಾಗಿದೆ. ಅಧಿಷ್ಠಾನ ಭಾಗದಲ್ಲಿ ಇರುವಂತೆ ಜನ್ಮನ್, ಕಂಪ, ಪದ್ಮ, ಕಂಧರ, ಕಪೋತ, ಆಲಿಂಗ, ಅಂತರಿತ ಪ್ರತಿ, ವಾಜನ, ಪಟ್ಟಿಕಾ ಎಂಬ ಅಂಗಗಳು ಇರುತ್ತವೆ. ಉಪಪೀಠವನ್ನು ಅದು ಹೊಂದಿದ ಅಂಗಗಳ ಸಂಖ್ಯೆಯ ಮೇಲಿಂದಲೂ ಮತ್ತು ಅದು ಯಾವ ಯಾವ ಅಂಗಗಳನ್ನು ಹೊಂದಿದೆ ಎಂಬ ಆಧಾರದಿಂದಲೂ ವಿಂಗಡಿಸಲಾಗಿದೆ. ಉದಾ : ಪಂಚಾಂಗ, ಷಡಂಗ, ಅಷ್ಟಾಂಗ ಮತ್ತು ವೇದಿಭದ್ರ, ಮಂಚಭದ್ರ ಇತ್ಯಾದಿ.

ಅದಿಷ್ಠಾನ : ಷಡ್ವರ್ಗ ಕ್ರಮದಲ್ಲಿ ಅಧಿಷ್ಠಾನವು ಮೊದಲ ಭಾಗವಾದ್ದರಿಂದ ಶಾಸ್ತ್ರ ಗ್ರಂಥಗಳು ಈ ಭಾಗವನ್ನು ಆದ್ಯಂಗ ಎಂದೂ ಕರೆದಿದೆ. ಮಾಸೂರಕ, ವಾಸ್ತ್ವಾಧಾರ, ಧರಾತಲ, ತಲ, ಕುಟ್ಟಿಮ ಇವು ಅಧಿಷ್ಠಾನದ ಸಮಾನ ಪದಗಳು. ಅಧಿಷ್ಠಾನವು ಉಪಾನ, ಜಗತಿ, ಖುರ-ಕುಂಭ, ಪದ್ಮ, ಕುಮುದ, ಗಳ, ಕಂಪ, ಆಲಿಂಗ, ಅಂತರಿತ, ಪ್ರತಿ, ವಾಜನ, ಕಪೋತ ಮತ್ತು ಪಟ್ಟಿಕಾ ಭಾಗಗಳನ್ನು ಹೊಂದಿರುತ್ತದೆ. ಶಾಸ್ತ್ರಗ್ರಂಥಗಳು ಅಧಿಷ್ಠಾನವನ್ನು ಕುಮುದ ಅಂಗದ ಆಧಾರದ ಮೇಲಿಂದ ಪಾದಬಂಧ, ಪ್ರತಿಬಂಧ ಎಂದು ವಿಂಗಡಿಸಿವೆ. ಅಧಿಷ್ಠಾನದಲ್ಲಿ ಕುಮುದ ಅಂಗವೇ ಇರದಿದ್ದಲ್ಲಿ ಅದು 'ಮಂಚಕ' ರೀತಿ ಎಂದು ಸೂಚಿಸಿವೆ. ಅಧಿಷ್ಠಾನ ಭಾಗವು ನಾಸಿಗಳಿಂದ, ಬಳ್ಳಿ, ವ್ಯಾಳಿ, ಕುಬ್ಜ, ಕಮಲದಳಗಳಿಂದ ಅಲಂಕೃತಗೊಂಡಿರಬಹುದು. ಕಟ್ಟಡದ ರಕ್ಷಣಾದೃಷ್ಟಿಯಿಂದ ಅಧಿಷ್ಠಾನದ ಭದ್ರತೆ ಬಹಳ ಮುಖ್ಯ. ಅಧಿಷ್ಠಾನವು ಒಂದರಿಂದ ಐದು ಅಡಿ ಎತ್ತರವಾಗಿ ಇರುತ್ತದೆ.

ಭಿತ್ತಿ : ಷಡ್ವರ್ಗ ಕ್ರಮದಲ್ಲಿ ಎರಡನೇ ಭಾಗವು ಭಿತ್ತಿ. ಇದು ಅಧಿಷ್ಠಾನದ ಮೇಲಿನ ಭಾಗ. ಇಲ್ಲಿ ದೇವಾಲಯದ ಮೇಲ್ಕಟ್ಟಡದ ಭಾರವನ್ನು ಹೊರಲೆಂದು ನಿಶ್ಚಿತ ಅಂತರದಲ್ಲಿ ಕುಡ್ಯ ಸ್ತಂಭಗಳನ್ನು ಇಡಲಾಗಿರುತ್ತದೆ. ಅಧಿಷ್ಠಾನದ ರಚನೆಯನ್ನು ಅನುಸರಿಸಿ ದೇವಾಲಯ ಭಿತ್ತಿಯು ರಚನೆಗೊಂಡಿರುತ್ತದೆ. ಅಧಿಷ್ಠಾನವು ಮುಂಚಾಚಿದಂತೆ, ಒಳಸರಿದಂತೆ ರಚನೆಗೊಂಡಿದ್ದರೆ ಭಿತ್ತಿಯು ಅದನ್ನೇ ಅನುಸರಿಸುತ್ತದೆ. ಭಿತ್ತಿಯಲ್ಲಿ ಮುಂಚಾಚಿದ ಈ ಭಾಗಗಳನ್ನು ಭದ್ರ, ಕರ್ಣ, ಪ್ರತಿಭದ್ರ, ಪ್ರತಿಕರ್ಣ, ಸುಭದ್ರ, ಉಪಭದ್ರ ಎಂದು ಹೆಸರಿಸಲಾಗಿದೆ. ಭಿತ್ತಿಯು ರಕ್ಷಣಾರ್ಥವಾಗಿ ನಿರ್ಮಾಣಗೊಂಡಿದ್ದರೂ ಇಲ್ಲಿ ಅನೇಕ ರೀತಿಯ ಅಲಂಕರಣಗಳನ್ನು ಕಾಣುತ್ತೇವೆ. ಶಿಲ್ಪಿಗೆ ತನ್ನ ಕೈಚಳಕವನ್ನು ತೋರಿಸಲು ಭಿತ್ತಿಯಲ್ಲಿ ಬಹಳಷ್ಟು ಅವಕಾಶ ವಿದೆ. ಇಲ್ಲಿ ವೇದಿ/ವೇದಿಕಾ, ಕುಡ್ಯಸ್ತಂಭ, ಕೋಷ್ಠ, ವಾತಾಯನ, ತೋರಣ, ಕುಂಭಲತಾ, ಸ್ತಂಭ ಶಿಖರ ದಂತಹ ಅಲಂಕರಣಗಳನ್ನು ಕಾಣುತ್ತೇವೆ. ಸಾಮಾನ್ಯವಾಗಿ ಭಿತ್ತಿಯ ಭದ್ರ ಭಾಗದಲ್ಲಿ ಕೋಷ್ಠಗಳಿರುತ್ತವೆ.

ಪ್ರಸ್ತರ : ಪ್ರಸ್ತರವು ಷಡ್ವರ್ಗ ಕ್ರಮದಲ್ಲಿ ಮೂರನೆಯ ಭಾಗ. ಮಂಚ, ಪ್ರಚ್ಛಾದನ, ಲುಪಾ ಇವು ಪ್ರಸ್ತರದ ಸಮಾನ ಪದಗಳು. ಇದನ್ನು ಮೇಲುಪಾಯ ಎಂದೂ ಕರೆಯಬಹುದಾಗಿದೆ. ಪ್ರಸ್ತರದಲ್ಲಿ ಉತ್ತರ, ವಾಜನ, ವಲಭಿ, ಕಪೋತ, ಆಲಿಂಗ, ಅಂತರಿತ, ಪ್ರತಿ ಮತ್ತು ವಾಜನ ಎಂಬ ಉಪ ಅಂಗಗಳು ಇರುತ್ತವೆ. ವಲಭಿ ಭಾಗದಲ್ಲಿ ಮಕರ, ಭ್ರಮರ, ಭೂತಗಣ, ಯಕ್ಷ, ವಿದ್ಯಾಧರ ಚಿತ್ರಗಳನ್ನು ಬಿಡಿಸಿರುತ್ತಾರೆ. ಕಪೋತದಲ್ಲಿ ಕ್ಷುದ್ರ ನಾಸಿಗಳ ಅಲಂಕರಣವೂ ಇರುತ್ತದೆ.

**ಗ್ರೀವ :** ಗ್ರೀವವು ಷಡ್ವರ್ಗ ಕ್ರಮದಲ್ಲಿ ನಾಲ್ಕನೆಯ ಭಾಗ. ಕಂಧರ, ಕಂಠ ಇವು ಗ್ರೀವದ ಸಮಾನ ಪದಗಳು. ಇದು ಪ್ರಸ್ತರ ಮತ್ತು ಶಿಖರದ ನಡುವಿನ ಭಾಗವಾಗಿದ್ದು ಕುತ್ತಿಗೆಯಂತೆ ಒಳಸರಿದಿರುತ್ತದೆ. ಗ್ರೀವವು ತನ್ನ ಮೇಲಿನ ಅಂಗವಾದ ಶಿಖರದ ಆಕಾರದಲ್ಲಿಯೇ ಇರುತ್ತದೆ. ಈ ಭಾಗದಲ್ಲಿ ಗ್ರೀವ ಕೋಷ್ಟಗಳಿದ್ದು ಅವುಗಳಲ್ಲಿ ಗ್ರೀವ ದೇವತೆಗಳ ಉಬ್ಬು ಶಿಲ್ಪಗಳಿರುತ್ತವೆ. ಶಿಲ್ಪಶಾಸ್ತ್ರಗ್ರಂಥಗಳು ಹೇಳುವಂತೆ ಗ್ರೀವಾಧರದ ಮೇಲೆ ಗರ್ಭಗೃಹದಲ್ಲಿರುವ ದೇವರಿಗೆ ಸಂಬಂಧಿಸಿದ ವಾಹನವನ್ನು ಕಾಣುತ್ತೇವೆ.

**ಶಿಖರ :** ಶಿಖರವು ಷಡ್ವರ್ಗ ಕ್ರಮದಲ್ಲಿ ಐದನೆಯ ಭಾಗ. ಇದು ಇಡೀ ದೇವಾಲಯಕ್ಕೆ ಶೋಭಾಯಮಾನವಾಗಿ ಕಂಗೊಳಿಸುತ್ತದೆ. ದೇವಾಲಯ ತಲವಿನ್ಯಾಸವನ್ನೇ ಅನುಸರಿಸಿ ಶಿಖರವು ಇರಬೇಕೆಂಬ ನಿಯಮವಿಲ್ಲ. ದೇವಾಲಯ ತಲವಿನ್ಯಾಸ ಚೌಕಾಕಾರವಾಗಿದ್ದರೂ ಶಿಖರವು ನಾಲ್ಕು ಮುಖ, ಎಂಟು ಮುಖ ಅಥವಾ ವೃತ್ತಾಕಾರದಲ್ಲಿಯೂ ರಚನೆಗೊಂಡಿರಬಹುದು. ಶಿಖರದ ಆಕಾರದ ಮೇಲಿಂದ ಕ್ರಮವಾಗಿ ಬ್ರಹ್ಮಛಂದ, ವಿಷ್ಣುಛಂದ, ರುದ್ರಛಂದ ಎಂದು ವರ್ಗೀಕರಿಸಲಾಗಿದೆ. ಶಿಖರವು ಯಾವ ಆಕಾರದಲ್ಲಿದ್ದರೂ ಅದು 'ನಾಸಿ'ಗಳಿಂದ ಅಲಂಕೃತಗೊಂಡಿರುತ್ತದೆ.

**ಸ್ತೂಪಿ :** ಷಡ್ವರ್ಗ ಕ್ರಮದಲ್ಲಿ ಆರನೆಯ ಹಾಗು ಕೊನೆಯ ಭಾಗವೇ ಸ್ತೂಪಿ. ಇದನ್ನು ಕಲಶ, ಘಟ, ಕುಂಭ ಎಂದೂ ಕರೆಯಲಾಗುತ್ತದೆ. ಸ್ತೂಪಿಯಲ್ಲಿ ಘಟ, ಗಲ ಮತ್ತು ಮುಕುಲ ಎಂಬ ಅಂಗಗಳು ಇರುತ್ತವೆ. ಇದನ್ನು ಶಿಖರದ ಮೇಲ್ಭಾಗದಲ್ಲಿರುವ ಮಹಾಪದ್ಮದ ಮಧ್ಯದಲ್ಲಿ ನೆಡಲಾಗಿರುತ್ತದೆ. ಸ್ತೂಪಿಯ ಪ್ರತಿಕೃತಿಯು ಗರ್ಭಗೃಹದ ಅಸ್ತಿಭಾರದಲ್ಲಿ ಇರುತ್ತದೆ.

**ತಲಗಳು :** ಏಕತಲ ವಿಮಾನವು ಷಡ್ವರ್ಗಗಳನ್ನು ಹೊಂದಿದ ಅಲ್ಪವಿಮಾನ ಎಂದೆನಿಸಿಕೊಳ್ಳುತ್ತದೆ. ಷಡ್ವರ್ಗ ದೇವಾಲಯಗಳನ್ನು ಏಕತಲ ಮಾತ್ರವಲ್ಲ ಹಲವು ತಲಗಳನ್ನು ಒಳಗೊಂಡಂತೆಯೂ ರಚಿಸಲಾಗಿದೆ. ಏಕತಲದ ಮೇಲೆ (ಗ್ರಿವ, ಪ್ರಸ್ತರ ಭಾಗಗಳ ಮಧ್ಯ) ಇನ್ನೊಂದು ಹರ್ಮ್ಯ-ಸಣ್ಣಗೋಪುರ ಮತ್ತು ಪ್ರಸ್ತರಗಳನ್ನು ಸೇರಿಸಿದ ಇನ್ನೊಂದು ಕಟ್ಟಡವನ್ನೇರಿಸಿದಾಗ ಅದು ದ್ವಿತಲವೆನಿಸಿಕೊಳ್ಳುತ್ತದೆ. ಇದೇ ರೀತಿ ಒಂದರ ಮೇಲೆ ಒಂದರಂತೆ ಹನ್ನೆರಡು ಅಂತಸ್ತುಗಳವರೆಗೂ ಏರಿಸಿಕೊಂಡು ಹೋಗಬಹುದು. ಪ್ರತಿ ತಲದಲ್ಲೂ ಅಂಗ-ಪ್ರತ್ಯಂಗಗಳಿರುತ್ತವೆ. ಕೂಟ, ಪಂಜರ, ಶಾಲಾಗಳೆಂಬ ಸಣ್ಣ ಗಾತ್ರದ ದೇವಾಲಯಗಳ ಸರವಿರುತ್ತದೆ. ಇದಕ್ಕೆ 'ಹಾರ' ಎಂದು ಹೆಸರು. ಪ್ರತಿ ತಲಕ್ಕೂ ಪ್ರಸ್ತರವಿರುತ್ತದೆ. ಇದು 'ತಲಪ್ರಸ್ತರ'. ಈ ರೀತಿ ಮುಖ್ಯ ಪ್ರಸ್ತರ ಮತ್ತು ಗ್ರೀವದ ನಡುವೆ ಸೇರಿಸುತ್ತ ಹೋಗುವ ತಲಗಳ ಸಂಖ್ಯೆಯ ಮೇಲಿಂದ ದೇವಾಲಯಗಳನ್ನು ವರ್ಗೀಕರಿಸಲಾಗಿದೆ. ಎರಡರಿಂದ ನಾಲ್ಕು ತಲಗಳನ್ನು ಹೊಂದಿದ ದೇವಾಲಯಗಳು 'ಜತಿವಿಮಾನ' ಎಂದೂ, ಐದರಿಂದ ಹನ್ನೆರಡು ತಲಗಳನ್ನು ಹೊಂದಿದ ದೇವಾಲಯಗಳು 'ಮುಖ್ಯ ವಿಮಾನ'ಗಳೆಂದೂ ಗುರುತಿಸಿಕೊಂಡಿದೆ.

**ತಿರ್ಯಙ್ಮುಖ ರಚನೆಗಳು :** ದೇವಾಲಯದ ಒಳಭಾಗದಲ್ಲಿ ಗರ್ಭಗೃಹದ ಆದಿಯಾಗಿ ಅದರ ಮುಂದೆ ಬರುವ ರಚನೆಗಳನ್ನು ತಿರ್ಯಙ್ಮುಖ ರಚನೆಗಳು ಎಂದು ಕರೆಯುತ್ತಾರೆ.

**ಗರ್ಭಗೃಹ-ಅಂತರಾಳ :** ದೇವಾಲಯ ಎಷ್ಟೇ ದೊಡ್ಡದಾಗಿರಲಿ, ಎಷ್ಟೇ ಅಲಂಕೃತ ಮಂಟಪಗಳನ್ನು, ಉಪಗುಡಿಗಳನ್ನು ಹೊಂದಿದ್ದರೂ ಸಹ ಗರ್ಭಗೃಹವೇ ಮೂಲ ಮುಖ್ಯ ಭಾಗ. ಗರ್ಭಗೃಹಕ್ಕೆ ಗರ್ಭಗೇಹ, ಮಧ್ಯಕೋಷ್ಠ, ನಾಲಿಗೇಹ, ದೇವತಾಮಂಟಪ, ಪ್ರಾಸಾದ, ಮೂಲಪ್ರಾಸಾದ ಎಂಬ ಸಮಾನ ಪದಗಳಿವೆ. ಗರ್ಭಗೃಹದ ಆಕಾರವು ಅಲ್ಲಿ ಪ್ರತಿಷ್ಠಾಪಿಸಲಾಗುವ ಮೂಲ ವಿಗ್ರಹದ ಮೇಲಿಂದ ಚೌಕಾಕಾರ, ಆಯತಾಕಾರ ವಾಗಿ ರೂಪಗೊಳ್ಳುತ್ತದೆ. ಸಾಮಾನ್ಯವಾಗಿ ಶಿವಾಲಯಗಳು ಚೌಕಾಕಾರವಾಗಿ ಇರುತ್ತವೆ. ಅನಂತಶಯನ, ಸಪ್ತಮಾತೃಕೆ, ತ್ರಿಮೂರ್ತಿಗಳನ್ನು ಒಂದೇ ಗೃಹದಲ್ಲಿ ಇರಿಸಿದರೆ ಮತ್ತು ೨೪ ತೀರ್ಥಂಕರರಿಗಾಗಿ ಕಟ್ಟಲ್ಪಟ್ಟ ಗರ್ಭಗೃಹಗಳು ಆಯತಾಕಾರದಲ್ಲಿ ಇರುತ್ತವೆ. ಕೆಲವು ದೇವಾಲಯಗಳು ಗಜಪೃಷ್ಠಾಕಾರದಲ್ಲಿಯೂ ಇವೆ. ಸಾಮಾನ್ಯವಾಗಿ ಚೌಕಾಕಾರದ ಗರ್ಭಗೃಹಗಳನ್ನೇ ಹೆಚ್ಚಾಗಿ ಕಾಣುತ್ತೇವೆ. ಗರ್ಭಗೃಹವು ಕತ್ತಲೆಯಿಂದ ಕೂಡಿದ್ದು ಇಲ್ಲಿ ಯಾವ ವಿಧವಾದ ಕಿಟಕಿಗಳೂ ಇರುವುದಿಲ್ಲ. ಮುಂಭಾಗದಲ್ಲಿ ದ್ವಾರ ಮಾತ್ರ ಇರುತ್ತದೆ. ಸಾಮಾನ್ಯವಾಗಿ ಗರ್ಭಗೃಹ ಪೂರ್ವಾಭಿಮುಖವಾಗಿಯೇ ಇರುತ್ತವೆ. ಅಪರೂಪವಾಗಿ ಇತರ ದಿಕ್ಕುಗಳಲ್ಲಿಯೂ ಇರುವುದನ್ನು ಕಾಣುತ್ತೇವೆ. ದೇವಾಲಯದ ಪ್ರವೇಶದ್ವಾರವು ಯಾವ ದಿಕ್ಕಿಗೆ ಇದ್ದರೂ ಗರ್ಭಗೃಹವು ಮುಖ ಮಾಡಿದ ದಿಕ್ಕನ್ನೇ ಮುಖ್ಯವೆಂದು ಪರಿಗಣಿಸಲಾಗುತ್ತದೆ.

ಕೆಲವು ದೇವಾಲಯಗಳಲ್ಲಿ ಗರ್ಭಗೃಹಕ್ಕೆ ಪ್ರದಕ್ಷಿಣಾಪಥವನ್ನು ಒಳಗೇ ಅಳವಡಿಸಲಾಗಿರುತ್ತದೆ. ಇವುಗಳನ್ನು 'ಸಾಂಧಾರ' ದೇವಾಲಯಗಳು ಎಂದು ಕರೆಯುತ್ತಾರೆ. ಈ ಸಂದರ್ಭದಲ್ಲಿ ಗರ್ಭಗೃಹವು ಅಂತರ್ಭಿತ್ತಿ ಮತ್ತು ಬಾಹ್ಯಭಿತ್ತಿ ಎಂಬ ಎರಡು ಭಿತ್ತಿಗಳನ್ನು ಹೊಂದಿರುತ್ತದೆ. ಇನ್ನು ಕೆಲವು ದೇವಾಲಯಗಳು ಧಾರ್ಮಿಕ ಹಿನ್ನೆಲೆಯ ಉದ್ದೇಶದಿಂದ ಒಂದಕ್ಕಿಂತ ಹೆಚ್ಚು ಗರ್ಭಗೃಹಗಳನ್ನು ಹೊಂದಿರುತ್ತವೆ. ಒಂದೇ ಅಧಿಷ್ಠಾನದ ಮೇಲೆ ಎರಡು ಗರ್ಭಗೃಹಗಳಿದ್ದರೆ ಅದು ದ್ವಿಕೂಟ ದೇವಾಲಯ, ಮೂರು ಗರ್ಭಗೃಹಗಳಿದ್ದರೆ ತ್ರಿಕೂಟ ದೇವಾಲಯ ಇದೇ ರೀತಿ ಚತುಷ್ಕೂಟ, ಪಂಚಕೂಟ ದೇವಾಲಯಗಳನ್ನು ಕಾಣುತ್ತೇವೆ.

ಗರ್ಭಗೃಹವನ್ನು ಮುಂದಿನ ಮಂಟಪ ರಚನೆಗಳನ್ನು ಸೇರಿಸುವ ಭಾಗವು ಅಂತರಾಳ(ಇದು ಕಡ್ಡಾಯ ಭಾಗದಲ್ಲಿ). ಸಾಮಾನ್ಯವಾಗಿ ದೇವಾಲಯದ ಮೇಲ್ಕಟ್ಟಡದಲ್ಲಿನ ಶುಕನಾಸವು ಈ ಅಂತರಾಳದ ಮೇಲೆ ಇರುವುದರಿಂದ ಇದನ್ನು ಶುಕನಾಸಿ (ಸುಖನಾಸಿ) ಎಂದೂ ಕರೆಯಲಾಗುತ್ತದೆ. ದೇವಾಲಯವು 'ಸಾಂಧಾರ' ವಾಗಿದ್ದಲ್ಲಿ ಗರ್ಭಗೃಹದ ಪ್ರದಕ್ಷಿಣೆಗಾಗಿ ಈ ಅಂತರಾಳದ ಎರಡು ಪಕ್ಕಗಳಲ್ಲಿಯೂ ಬಾಗಿಲುಗಳು ತೆರೆದಿರುತ್ತವೆ.

**ಇತರ ಭಾಗಗಳು :** ದೇವಾಲಯ ನಿರ್ಮಾಣದ ಆರಂಭದ ಶತಮಾನಗಳಲ್ಲಿ ಗರ್ಭಗೃಹ ಹಾಗೂ ಅಂತರಾಳ ಇಷ್ಟು ಮಾತ್ರ ದೇವಾಲಯ ಎನಿಸಿಕೊಂಡಿದ್ದವು. ಆಗಮಶಾಸ್ತ್ರಗಳು, ಮತ ಸಂಸ್ಕಾರಗಳು ವಿಸ್ತರಿಸಿದಂತೆಲ್ಲ ದೇವಾಲಯಗಳು ವಿಸ್ತರಿಸಿದವು. ಅರ್ಧಮಂಟಪ, ನವರಂಗ ಮಂಟಪ, ಮುಖಮಂಟಪ, ಅಗ್ರಮಂಟಪ, ಉತ್ಸವಮಂಟಪ, ಸ್ನಪನಮಂಟಪ, ಅಲಂಕಾರ ಮಂಟಪ ಮುಂತಾದವು ನಿರ್ಮಾಣಗೊಂಡವು. ದಕ್ಷಿಣ ಭಾರತ ದೇವಾಲಯಗಳಲ್ಲಿಯ ಈ ಮಂಟಪಗಳು ಚಪ್ಪಟೆಯಾದ ಚಾವಣಿಯನ್ನು ಹೊಂದಿದೆ. ಗುಜರಾತ್, ಒರಿಸ್ಸಾ, ಮಧ್ಯ ಪ್ರದೇಶಗಳಲ್ಲಿಯ ದೇವಾಲಯಗಳಲ್ಲಿ ಈ ಮಂಟಪ ರಚನೆಗಳೂ ಸಹ ಗರ್ಭಗೃಹಕ್ಕೆ

ಇರುವಂತೆ ಮೇಲ್ಕಟ್ಟಡವನ್ನು ಹೊಂದಿವೆ. ಮಂಟಪಗಳು ಕಂಬಗಳ ಆಧಾರದ ಮೇಲೆ ನಿಂತಿರುತ್ತವೆ. ಮಂಟಪ ವಿಸ್ತಾರವಾದಂತೆ ಕಂಬಗಳ ಸಂಖ್ಯೆಯೂ ಹೆಚ್ಚುತ್ತದೆ. ಶಿಲ್ಪಶಾಸ್ತ್ರಗ್ರಂಥಗಳು ಕಂಬಗಳ ಸಂಖ್ಯೆಯನ್ನು ಆಧರಿಸಿ ಹಿಮಜ, ನಿಶ್ಚದಜ, ವಿಜಯ, ಮಾಲ್ಯಜ, ಪಾರಿಯಾತ್ರ, ಗಂಧಮಾದನ ಮತ್ತು ಹೇಮಕೂಟಗಳೆಂಬ ಏಳು ಬಗೆಗಳನ್ನು ಗುರುತಿಸುತ್ತವೆ. ಈ ಮಂಟಪಗಳು ತೆರೆದವೂ, ಮುಚ್ಚಿದವೂ ಆಗಿರಬಹುದು. ಮಂಟಪಗಳಲ್ಲಿ ದೇವಾಲಯದ ಉತ್ಸವಗಳಿಗೆ ಸಂಬಂಧಿಸಿದ ಸಭೆಯೊ, ಲಲಿತಕಲೆಗಳ ಕಾರ್ಯಕ್ರಮಗಳೂ ನಡೆಯುತ್ತಿದ್ದವು. ಇಂತಹ ಸಂದರ್ಭಗಳಿಗೆ ಅನುಕೂಲವಾಗಲೆಂದು ಕಕ್ಷಾಸನಗಳನ್ನು ಸುತ್ತಲೂ ಅಳವಡಿಸಲಾಗಿದೆ. ದೇವಾಲಯ ಕೇವಲ ಪೂಜಾಗೃಹವಾಗದೆ ಸಾಂಸ್ಕೃತಿಕ ಕೇಂದ್ರವಾಗಿಯೂ ಧರ್ಮ ಪ್ರಸಾರದ ಕೇಂದ್ರವಾಗಿಯೂ ಮಾರ್ಪಟ್ಟು ದೇವಾಲಯದ ಪೂಜಾವಿಧಿಗಳಲ್ಲೂ ಹೊಸ ಹೊಸ ಉತ್ಸವಗಳನ್ನು ಅಳವಡಿಸಿಕೊಂಡವು. ಉತ್ಸವಕ್ಕೆ ಬಳಸಲಾಗುವ ವಾಹನಗಳನ್ನು ರಕ್ಷಿಸಲು ವಾಹನ ಮಂಟಪ, ಸಭೆ ಸಮಾರಂಭಗಳಿಗಾಗಿ ಸಭಾ ಮಂಟಪ, ಭೋಜನಶಾಲೆ, ಕಲ್ಯಾಣಮಂಟಪ, ನೃತ್ಯಮಂಟಪ ಇತ್ಯಾದಿಗಳು ದೇವಾಲಯದ ಸುತ್ತಲೂ ರಚನೆಗೊಂಡವು. ಅಲ್ಲದೆ ಪರಿವಾರ ದೇವತೆಗಳಿಗಾಗಿ ಸಣ್ಣ ದೇವಾಲಯಗಳು ನಿರ್ಮಾಣಗೊಂಡವು. ಜೊತೆಗೆ ದೇವಾಲಯದ ಎದುರಿಗೆ ಬಲಿಪೀಠ, ಧ್ವಜಸ್ತಂಭ, ದೀಪಸ್ತಂಭಗಳು ಇರುತ್ತವೆ. ಇವೆಲ್ಲವುಗಳನ್ನು ಒಳಗೊಂಡಂತೆ ಸುತ್ತಲೂ ಪ್ರಾಕಾರದ ಗೋಡೆಯನ್ನು ಎಬ್ಬಿಸಲಾಯಿತು. ಆ ಪ್ರಾಕಾರಕ್ಕೊಂದು ಮಹಾದ್ವಾರ, ಅದರ ಮೇಲೆ ಗೋಪುರ ತಲೆ ಎತ್ತಿದವು. ಹೀಗೆ ಒಂದು ಪ್ರಾಕಾರ ಮಾತ್ರವಲ್ಲದೆ ಹಲವಾರು ಪ್ರಾಕಾರಗಳನ್ನು ಹೊಂದಿದ ದೇವಾಲಯಗಳಿವೆ. ಒಂದೊಂದು ಪ್ರಾಕಾರವನ್ನೂ ಬೇರೆ ಬೇರೆ ಹೆಸರಿನಿಂದ ಕರೆಯಲಾಗಿದೆ ಮೊದಲನೆಯ ಪ್ರಾಕಾರ 'ಅಂತರ್ಮಂಡಲ', ಎರಡನೆಯದು 'ಅಂತರ್ನಿಹಾರ', ಮೂರನೆಯದು 'ಮಧ್ಯಮಹಾರ', ನಾಲ್ಕನೆಯದು 'ಪ್ರಾಕಾರ' ಐದನೆಯ ಹಾಗು ಕೊನೆಯದು 'ಮಹಾಮರ್ಯಾದಾ' ಅದರಂತೆ ಪ್ರತಿಯೊಂದು ಪ್ರಾಕಾರಕ್ಕೂ ಮಹಾದ್ವಾರ ಗೋಪುರಗಳಿರುತ್ತವೆ. ಆ ಗೋಪುರಗಳನ್ನು ಕ್ರಮವಾಗಿ 'ದ್ವಾರಶೋಭಾ', 'ದ್ವಾರಶಾಲಾ', 'ದ್ವಾರಪ್ರಸಾದಾ', 'ದ್ವಾರಹರ್ಮ್ಯ' ಮತ್ತು ಕೊನೆಯದು 'ಮಹಾಗೋಪುರ' ಎಂದು ಶಾಸ್ತ್ರ ಗ್ರಂಥಗಳಲ್ಲಿ ಗುರುತಿಸಲಾಗಿದೆ.

**ಕರ್ನಾಟಕ ವಾಸ್ತುಶಿಲ್ಪ :** ಕರ್ನಾಟಕದ ವಾಸ್ತುಶಿಲ್ಪವನ್ನು ವಿದ್ವಾಂಸರು ಪ್ರಧಾನವಾಗಿ ನಾಲ್ಕು ಘಟ್ಟಗಳಲ್ಲಿ ವಿಭಾಗಿಸಿದ್ದಾರೆ.

೧. ಚಾಲುಕ್ಯ ಪೂರ್ವಯುಗ - ಕ್ರಿ.ಶ.ಸು.೫ನೇ ಶತಮಾನದವರೆಗಿನ ಕಾಲ

೨. ಚಾಲುಕ್ಯ ಯುಗ - ಕ್ರಿ.ಶ.೬ ರಿಂದ ೧೦ನೇ ಶತಮಾನದವರೆಗೆ

೩. ಹೊಯ್ಸಳ ಯುಗ - ೧೧ನೇ ಶತಮಾನದಿಂದ ೧೩ನೇ ಶತಮಾನದವರೆಗೆ

೪. ವಿಜಯನಗರ ಕಾಲ - ೧೪ನೇ ಶತಮಾನದಿಂದ ಈಚಿನ ಕಾಲ

ಮೊರೆಸ್‌ರವರು 'ಕರ್ನಾಟಕದಲ್ಲಿ ಚಾಲುಕ್ಯರಿಗಿಂತಲೂ ಹಿಂದೆ ನಿರ್ಮಿತವಾದ ಪ್ರಾಚೀನ ದೇವಾಲಯ ಗಳೆಲ್ಲವನ್ನೂ 'ಕದಂಬ ಶೈಲಿ' ಎಂದು ಕರೆಯಬಹುದೆಂದು ಅಭಿಪ್ರಾಯಪಟ್ಟಿದ್ದಾರೆ.[೨೪] ಕದಂಬ ಶೈಲಿಯ ಅತಿ ಪ್ರಾಚೀನ ದೇವಾಲಯವೆಂದರೆ ಹಲಸಿಯ ಜೈನ ಬಸದಿ. ಕದಂಬ ಶಾಂತಿವರ್ಮನ ಮಗ ಮೃಗೇಶ

ವರ್ಮ(ಕ್ರಿ.ಶ.೪೫೫-೪೮೦)ನು ಇದನ್ನು ನಿರ್ಮಿಸಿದನು.[೨೫] ಈ ಬಸದಿಯು ಗರ್ಭಗೃಹ ಮತ್ತು ಶುಕನಾಸಿಗಳನ್ನು ಮಾತ್ರ ಒಳಗೊಂಡಿರುವ ಸಾಧಾರಣ ಕಟ್ಟಡ. ಇದರ ಗೋಡೆಗಳು ದೊಡ್ಡ ಗಾತ್ರದ ಕಲ್ಲುಗಳಿಂದ ನಿರ್ಮಾಣಗೊಂಡಿವೆ. ಇಂತಹ ದೊಡ್ಡ ಕಲ್ಲುಗಳಿಂದ ಗೋಡೆಗಳನ್ನು ನಿರ್ಮಿಸುವ ಸಂಪ್ರದಾಯ ಬಾದಾಮಿಯ ಚಾಲುಕ್ಯರ ಕಾಲದ ಕೊನೆಯವರೆಗೂ ಮುಂದುವರೆಯಿತು. ಇಲ್ಲಿಯ ಗೋಡೆಗಳು ಅಲಂಕಾರರಹಿತವಾಗಿವೆ. ಶಿಥಿಲಗೊಂಡಿರುವ ಈ ಬಸದಿ ಕದಂಬರ ಕಾಲದ ವಾಸ್ತು ಶಿಲ್ಪ ಅಧ್ಯಯನ ದೃಷ್ಟಿಯಿಂದ ಮಹತ್ವದ್ದಾಗಿದೆ.[೨೬]

ಉತ್ತರ ಭಾರತದಲ್ಲಿ ಗುಪ್ತರ ಪೋಷಣೆಯಲ್ಲಿ ದೇವಾಲಯಗಳ ನಿರ್ಮಾಣ ನಡೆಯುತ್ತಿದ್ದ ಕಾಲದಲ್ಲಿಯೇ ದಕ್ಷಿಣದಲ್ಲಿ ಚಾಲುಕ್ಯರ ನೇತೃತ್ವದಲ್ಲಿ ಆ ಕಾರ್ಯ ಮುನ್ನಡೆಯಿತು. ಐಹೊಳೆ, ಬಾದಾಮಿ ಮತ್ತು ಪಟ್ಟದಕಲ್ಲುಗಳಲ್ಲಿ ನಿರ್ಮಿತವಾದ ದೇವಾಲಯಗಳು ಚಾಲುಕ್ಯ ಶೈಲಿಯ ವಿಕಾಸವನ್ನು ತೋರಿಸುತ್ತವೆ. ಅದರಲ್ಲಿಯೂ ಐಹೊಳೆಯಲ್ಲಿ ಚಾಲುಕ್ಯ ದೇವಾಲಯಗಳ ಪ್ರಾರಂಭದ ದೆಸೆಯನ್ನೂ ಮತ್ತು ದೇವಾಲಯಗಳ ನಿರ್ಮಾಣದಲ್ಲಿ ಅವರು ಮಾಡಿದ ವಿವಿಧ ಪ್ರಯೋಗಗಳನ್ನೂ ಸ್ಪಷ್ಟವಾಗಿ ಗುರುತಿಸಬಹುದಾಗಿದೆ. ಕೇವಲ ಒಂದು ಗರ್ಭಗೃಹದಿಂದ ಕೂಡಿರುವ ಗುಡಿಗಳಿಂದ ಹಿಡಿದು, ಸಂಕೀರ್ಣವಾದ ರಚನೆಯನ್ನೊಳಗೊಂಡ ದುರ್ಗಾ ದೇವಾಲಯದವರೆಗೂ ಹಲವು ಹಂತಗಳಲ್ಲಿ ಆ ಕಲೆಯ ಬೆಳವಣಿಗೆ ಕಂಡುಬರುತ್ತದೆ.[೨೭] ಸಿಂದಗಿ ರಾಜಶೇಖರ ಅವರು ಬಾದಾಮಿ ಚಾಲುಕ್ಯರ ದೇವಾಲಯಗಳ ಅಧ್ಯಯನ ಮಾಡಿ ಐದು ಪ್ರಮುಖ ದೇವಾಲಯ ತಲ ವಿನ್ಯಾಸಗಳನ್ನು ಗುರುತಿಸಿದ್ದಾರೆ.[೨೮]

೧. ಸಾದಾ ಮತ್ತು ಚಿಕ್ಕದಾಗಿದ್ದು ಮೂಲಭೂತ ಪೂಜೆಗೆ ಅವಶ್ಯಕವೆನಿಸಿದ ಭಾಗಗಳನ್ನು ಮಾತ್ರ ಹೊಂದಿವೆ. ಚೌಕ ಗರ್ಭಗೃಹ, ಸಭಾಮಂಟಪ ಮತ್ತು ಚಿಕ್ಕ ಮುಖಮಂಟಪ

೨. ಸಾಂಧಾರ ದೇವಾಲಯಗಳು

೩. ದೇವಾಲಯವು ನಿರಂಧಾರವಾಗಿದ್ದು, ಇಲ್ಲಿ ಗರ್ಭಗುಡಿ ಅನೇಕ ಕಂಬಗಳುಳ್ಳ ಮಂಟಪದ ಹಿಂದಿನ ಗೋಡೆಗೆ ಹತ್ತಿಕೊಂಡು ಒಳಭಾಗದಲ್ಲಿರುತ್ತದೆ.

೪. ಗಜಪೃಷ್ಠಾಕಾರ ದೇವಾಲಯಗಳು

೫. ತ್ರಿಕೂಟ ದೇವಾಲಯಗಳು

ಕರ್ನಾಟಕದಲ್ಲಿ ದೇವಾಲಯಗಳ ಪ್ರಾಚೀನತೆ ಶಾತವಾಹನರ ಕಾಲದಷ್ಟು ಹಿಂದೆ ಹೋದರೂ ದೇವಾಲಯಗಳಲ್ಲಿ ಅದರಲ್ಲೂ ತ್ರಿಕೂಟ ದೇವಾಲಯಗಳ ಬಗ್ಗೆ ಸ್ಪಷ್ಟತೆ ದೊರೆಯುವುದು ಬಾದಾಮಿ ಚಾಲುಕ್ಯರ ಕಾಲದಿಂದಲೇ.

ಕರ್ನಾಟಕದ ಮೊಟ್ಟಮೊದಲ ತ್ರಿಕೂಟ ದೇವಾಲಯ ಎಂಬ ಕೀರ್ತಿಗೆ ಒಳಗಾದ ಬಾದಾಮಿಯ ಜಂಬುಲಿಂಗೇಶ್ವರ ದೇವಾಲಯವು ಇಲ್ಲಿ ಗಮನಿಸಬೇಕಾದ ಬಹುಮುಖ್ಯ ದೇವಾಲಯ. ಈ ದೇವಾಲಯವು ಕ್ರಿ.ಶ.೬೯೯ರಲ್ಲಿ ರಚನೆಗೊಂಡಿದ್ದು ಚಾಲುಕ್ಯ ಶೈಲಿಯ ಪರಿಪೂರ್ಣತೆಯನ್ನು ಹೊಂದಿರುವುದರಿಂದ ಚಾಲುಕ್ಯ ಕಟ್ಟಡಗಳ ಕಾಲಾನುಕ್ರಮಣಿಕೆಯನ್ನು ರಚಿಸಲು ತುಂಬ ಸಹಾಯಕವಾಗಿದೆ.[೨೯]

ದೇವಾಲಯದ ಮುಖಮಂಟಪದ ಕಂಬದ ಮೇಲಿನ ಶಾಸನವು ವಿನಯಾದಿತ್ಯನ ತಾಯಿ ವಿನಯವತಿಯು ಕ್ರಿ.ಶ.೬೯೯ರಲ್ಲಿ ಈ ದೇವಾಲಯವನ್ನು ನಿರ್ಮಿಸಿದಳೆಂದು, ಈ ತ್ರಿಕೂಟ ದೇವಾಲಯವು ತ್ರೈಪುರುಷ ದೇವರ ಪ್ರತಿಷ್ಠಾಪನೆಗಾಗಿ ರಚಿತಗೊಂಡಿತೆಂದೂ ತಿಳಿಸುತ್ತದೆ.[೮೦] ದೇವಾಲಯವು ಆಯತಾಕಾರದ ಗೂಢಮಂಟಪವನ್ನು ಮೂರು ಗರ್ಭಗೃಹಗಳು ಹಂಚಿಕೊಂಡಂತೆ ರಚನೆಗೊಂಡಿದೆ. ಮೂರು ಗರ್ಭಗೃಹಗಳು ದಕ್ಷಿಣ, ಪಶ್ಚಿಮ ಮತ್ತು ಉತ್ತರ ದಿಕ್ಕುಗಳಲ್ಲಿವೆ. ಗೂಢಮಂಟಪದ ಪೂರ್ವದಿಕ್ಕಿಗೆ ಆಯತಾಕಾರದ ಮುಖಮಂಟಪದ ರಚನೆ ಇದೆ. (ತಳವಿನ್ಯಾಸ-೧) ದೇವಾಲಯದ ಅಧಿಷ್ಠಾನವು ಪ್ರತಿಬಂಧ ಮಾದರಿಗೆ ಸೇರಿದ್ದಾಗಿದ್ದು, ಉಪಾನ, ಖುರ, ಕುಂಭಕ, ಧಾರಾವೃತ್ತ ಕುಮುದ, ಪ್ರತಿವಾಜನ ಮಹಾವಾಜನದ ಮೇಲೆ ಸಣ್ಣ ಕಂಪಗಳೆಂಬ ಭಾಗಗಳನ್ನು ಒಳಗೊಂಡಿದೆ. ಪ್ರತಿವಾಜನದ ಮೇಲೆ ವ್ಯಾಳಗಳನ್ನು ಕಾಣಬಹುದು. ಬ್ರಹ್ಮ, ವಿಷ್ಣು, ಮಹೇಶ್ವರರಿಗಾಗಿ ಮೀಸಲಾದ ಮೂರೂ ಗರ್ಭಗೃಹಗಳು ಭಿತ್ತಿ ಭಾಗದಲ್ಲಿ ಮುಂಚಾಚಿದ ಭದ್ರಭಾಗವನ್ನು, ಗೂಡುಗಳನ್ನು, ಶೂರಸೇನ ರಚನೆಗಳನ್ನು ಹೊಂದಿವೆ. ಬ್ರಹ್ಮಕಾಂತಮಾದರಿಯ ಗೋಡೆಕಂಬಗಳು ಗರ್ಭಗೃಹ ಮತ್ತು ಗೂಢಮಂಟಪದ ಭಿತ್ತಿಯಲ್ಲಿ ಕಂಡುಬರುತ್ತವೆ. ಪ್ರಸ್ತರ ಭಾಗದ ಕಪೋತದ ಕೆಳಗೆ ಹಂಸಮಾಲಾ, ಮೇಲಿನ ಭಾಗದಲ್ಲಿ ವ್ಯಾಳಮಾಲಾ ರಚನೆ ಇದೆ. ಕಪೋತದ ಮೇಲೆ ಕಪೋತನಾಸಿಗಳಿವೆ.

ಮುಖಮಂಟಪವು ಚೌಕಾಕಾರದ ರುಚಕ ಮಾದರಿಯ ಕಂಬಗಳನ್ನು ಹೊಂದಿದೆ. ಈ ಕಂಬಗಳು ಅರ್ಧ ಪದಕಗಳು, ಮಧ್ಯ ಪಟ್ಟಿಕೆ ಮತ್ತು ತರಂಗ ಬೋದಿಗೆಗಳಿಂದ ಕೂಡಿವೆ. ಅಡ್ಡ ತೊಲೆಗಳ ಮೇಲೆ ವಿದ್ಯಾಧರ ಉಬ್ಬುಶಿಲ್ಪಗಳಿವೆ. ಈ ತೊಲೆಗಳು ಸಮತಲ ವಿತಾನಕ್ಕೆ ಆಧಾರವಾಗಿವೆ. ಎರಡು ವಿತಾನಗಳು ಅಲಂಕೃತ ವಾಗಿದ್ದು ಒಂದರಲ್ಲಿ ನಾಗ್ಪ ಇನ್ನೊಂದರಲ್ಲಿ ಕಮಲಗಳು ಹಾಗೂ ಯಕ್ಷರ ಉಬ್ಬುಶಿಲ್ಪಗಳಿವೆ.

ಗೂಢಮಂಟಪದ ಮಧ್ಯ ಕಂಬಗಳೂ ಸಹ ರುಚಕ ಮಾದರಿಯಲ್ಲಿದ್ದು, ಇವು ಒಂದಕ್ಕೊಂದು ಸಂಬಂಧ ಪಡೆಯುವಂತೆ ಕಮಲ ಪದಕದಿಂದ ಅಲಂಕೃತಗೊಂಡ ಉತ್ತರಾ ರಚನೆ ಇದೆ. ಇದರ ಒಳಮುಖವು ಅಲ್ಪನಾಸಿ, ಹಂಸ, ಚಕ್ರವಾಕ, ಮಯೂರ, ಆನೆ ಮುಂತಾದವುಗಳಿಂದ ಅಲಂಕೃತಗೊಂಡಿದೆ. ಮೂರು ಗರ್ಭಗೃಹಗಳ ಬಾಗಿಲುವಾಡಗಳು ಪಂಚಶಾಖೆಯಿಂದ ಕೂಡಿದ್ದು ಪಾದಫಲಕದಲ್ಲಿ ಗಂಗೆ ಯಮುನೆಯರು ಚಾಮರಧಾರಿಣಿ ಯರೊಂದಿಗೆ ಚಿತ್ರಿತಗೊಂಡಿದ್ದಾರೆ. ಬಾಗಿಲುವಾಡದ ಮೇಲೆ ಹಾರಗಳಲ್ಲಿ ಕಂಡುಬರುವ ಕೂಟ ಮತ್ತು ಶಾಲಾ ರಚನೆಗಳಿವೆ. ಅವುಗಳ ಕೆಳಗೆ ಮಿಥುನ ಶಿಲ್ಪಗಳಿವೆ.

ದೇವಾಲಯದ ಮೇಲಿನ ಕಟ್ಟಡವು ನಾಶವಾಗಿದೆ. ಉತ್ತರದಿಕ್ಕಿನ ಗರ್ಭಗೃಹದ ಮೇಲೆ ಹಾರದ ಭಾಗಗಳನ್ನು ಕಾಣಬಹುದು. ಬಾದಾಮಿ ಚಾಲುಕ್ಯರ ಕಾಲದಲ್ಲಿ ತ್ರೈಪುರುಷರಿಗಾಗಿ ಕಟ್ಟಿದ ಈ ತ್ರಿಕೂಟ ಮಾದರಿಯ ದೇವಾಲಯ ಶೈಲಿಯನ್ನೇ ೧೧-೧೨ನೇ ಶತಮಾನದಲ್ಲಿ ರಚನೆಗೊಂಡ ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯ ಗಳಲ್ಲೂ ಕಾಣುತ್ತೇವೆ. ಬಾದಾಮಿ ಚಾಲುಕ್ಯರ ನಂತರದ ಅರಸರಾದ ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಹೊಯ್ಸಳರು, ವಿಜಯನಗರದ ಅರಸರು ತಮ್ಮ ತ್ರಿಕೂಟ ದೇವಾಲಯ ರಚನೆಯಲ್ಲಿ ಇದೇ ಮಾದರಿಯನ್ನು ಅನುಸರಿಸಿದರು.[೮೧]




ತಳವಿನ್ಯಾಸ ರೇಖಾ ಚಿತ್ರ : ೧, ಜಂಬುಲಿಂಗೇಶ್ವರ ದೇವಾಲಯ, ಬದಾಮಿ. (ಜಿ. ಬಾಗಲಕೋಟ).
೧) ಗರ್ಭಗೃಹ ೨) ನವರಂಗ ೩) ಮುಖಮಂಟಪ

ಕೃಪೆ : ಎನ್‌ಸೈಕ್ಲೋಪಿಡಿಯಾ ಅಫ್ ಇಂಡಿಯನ್ ಟೆಂಪಲ್ ಆರ್ಕಿಟೆಕ್ಚರ್ ಸೌತ್ ಇಂಡಿಯ
ಅಪ್ಪರ್ ದ್ರಾವಿಡ ದೇಶ.

## ೩.೩. ಕರ್ನಾಟಕದಲ್ಲಿ ತ್ರಿಕೂಟ ದೇವಾಲಯಗಳ ಬೆಳವಣಿಗೆ

ದೇವಾಲಯ ವಾಸ್ತುಶಿಲ್ಪದಲ್ಲಿ ಅನೇಕ ಪ್ರಯೋಗಗಳನ್ನು ಮಾಡಿ ನೋಡಿದ ಬಾದಾಮಿ ಚಾಲುಕ್ಯರಿಗೆ, ಕರ್ನಾಟಕದ ಮೊತ್ತಮೊದಲ ತ್ರಿಕೂಟ ದೇವಾಲಯ ನಿರ್ಮಾಣದ ಕೀರ್ತಿಯೂ ಸಲ್ಲುತ್ತದೆ. ಕ್ರಿ.ಶ.೬೯೯ರಲ್ಲಿ ವಿಜಯಾದಿತ್ಯನ ತಾಯಿ ವಿನಯವತಿಯು ನಿರ್ಮಿಸಿದ ಜಂಬುಲಿಂಗ ದೇವಾಲಯವು ಬ್ರಹ್ಮ, ವಿಷ್ಣು, ಮಹೇಶ್ವರರಿಗಾಗಿ ನಿರ್ಮಿಸಿದ ಕರ್ನಾಟಕದ ಮೊದಲ ತ್ರಿಕೂಟ ದೇವಾಲಯವಾಗಿದೆ.[೮೨] ಈ ದೇವಾಲಯವು ಚಾಲುಕ್ಯ ಶೈಲಿಯ ಪರಿಪೂರ್ಣತೆಯನ್ನು ಹೊಂದಿರುವುದರಿಂದ ಚಾಲುಕ್ಯರ ದೇವಾಲಯಗಳ ಕಾಲಾನುಕ್ರಮಣಿಕೆಯನ್ನು ಮಾಡಲು ಅನುಕೂಲವಾಗಿದೆ.[೮೩] ಮೂರು ದಿಕ್ಕುಗಳಿಗೆ ಮುಖ ಮಾಡಿದ ಮೂರು ಗರ್ಭಗೃಹಗಳು, ಒಂದು ದೊಡ್ಡ ಸಭಾಮಂಟಪ, ಪೂರ್ವದಿಕ್ಕಿನಲ್ಲಿ ಆಯತಾಕಾರದ ಕೈಸಾಲೆ ಮತ್ತು ಪ್ರವೇಶವನ್ನು ಈ ದೇವಾಲಯವು ಹೊಂದಿದೆ. 'ಚಾಲುಕ್ಯ ಕಾಲದ ಜಂಬುಲಿಂಗ ತ್ರಿಕೂಟ ದೇವಾಲಯವು ಮುಂದೆ ಕರ್ನಾಟಕದಲ್ಲಿ ನಿರ್ಮಿಸಿದ ತ್ರಿಕೂಟಗಳಿಗೆ ಮಾದರಿಯಾಗಿ ಪರಿಣಮಿಸಿತು. ಅಷ್ಟೇಕೆ, ಇಡೀ ದಕ್ಷಿಣ ಭಾರತದಲ್ಲೇ ನಿರ್ಮಿತ ರೂಪದ ಏಕೈಕ ಪ್ರಾಚೀನ ತ್ರಿಕೂಟ ದೇವಾಲಯ ಇದಾಗಿದೆ' ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[೮೪] ಇದು ತ್ರಿಕೂಟಗಳಿಗೆ ಮಾತ್ರವಲ್ಲ ಚತುಷ್ಕೂಟ, ಪಂಚಕೂಟಗಳಿಗೂ ಮೂಲವಾಯಿತು ಎಂದು ಹೇಳಬಹುದು. ಸಭಾಮಂಟಪದ ಚಾವಣಿಯ ತುಂಬ ಬ್ರಹ್ಮ, ವಿಷ್ಣು, ಮಹೇಶ್ವರರ ಶಿಲ್ಪಗಳು ತುಂಬಿವೆ.

ಬಾದಾಮಿ ಚಾಲುಕ್ಯರ ವಾಸ್ತುಶಿಲ್ಪದಿಂದ ಪ್ರಭಾವಿತರಾದ ರಾಷ್ಟ್ರಕೂಟರು ಜನತೆಯ ಬದಲಾದ ಸೌಂದರ್ಯಾಭಿರುಚಿ ಮತ್ತು ಉದ್ದೇಶಗಳಿಗೆ ತಕ್ಕಂತೆ ಬದಲಾವಣೆಗಳನ್ನು ಮಾಡಿಕೊಂಡರು. ಬದಲಾದ ಧಾರ್ಮಿಕ ಪರಿಗಣನೆಗಳಿಗೆ ತಕ್ಕಂತೆ ದ್ವಿಕೂಟ, ತ್ರಿಕೂಟ ದೇವಾಲಯಗಳು ಹೆಚ್ಚು ಬಳಕೆಗೆ ಬಂದವು. ಇವರ ಕಾಲದಲ್ಲಿ ವಾಸ್ತುಶಿಲ್ಪದಲ್ಲಿ ಸ್ವಾರಸ್ಯವಾದ ಬೆಳವಣಿಗೆ ಕಂಡುಬಂದಿತು. ತ್ರಿಕೂಟ ವಾಸ್ತು ರಚನೆಯಲ್ಲಿ ಜೈನಧರ್ಮೀಯರ ಕೊಡುಗೆಯು ಗಣನೀಯವಾಗಿದೆ.[೮೫] ಅಂತಸ್ತುಗಳಿರುವ ಬಸದಿಗಳು, ತ್ರಿಕೂಟ ಮಾದರಿಯ ಬಸದಿಗಳು ಈ ಕಾಲದಲ್ಲಿ ನಿರ್ಮಾಣಗೊಂಡವು. ಕೃಷ್ಣರಾವ್ ಮತ್ತು ಕೇಶವಭಟ್ಟ ಅವರು "ತೀರ್ಥಂಕರರ ಮತ್ತು ಅವರ ಅನುಚರರಾದ ಯಕ್ಷಯಕ್ಷಿಣಿಯರ ವಿಗ್ರಹಗಳಿಗೆ ಜೈನರು ತ್ರಿಕೂಟಾಚಲಗಳನ್ನು ನಿರ್ಮಿಸುತ್ತಿದ್ದರು. ಕದಂಬರೂ, ಚಾಲುಕ್ಯರೂ ಬಳಸಿದ ಈ ವಾಸ್ತು ರೀತಿಗೆ ಅವರ ಜೈನ ಧರ್ಮಾನುಸರಣವೇ ಮೂಲ. ಚಾಲುಕ್ಯರಂತೆ ಹೊಯಿಸಳರೂ ಜೈನ ಶೈಲಿಯ ಮಾದರಿಗಳನ್ನು ಅಳವಡಿಸಿಕೊಂಡು 'ತ್ರಿಕೂಟಾಚಲ' ಮತ್ತು 'ಪಂಚಕೂಟಾಚಲ' ದೇವಾಲಯಗಳನ್ನು ಕಟ್ಟಿಸಿದರು..." ಎಂದು ಅಭಿಪ್ರಾಯಪಡುತ್ತಾರೆ.[೮೬] ಇದಕ್ಕೆ ಉದಾಹರಣೆಯಾಗಿ ಐಹೊಳೆಯ ಸೆಟ್ಟವ್ವ ಬಸದಿಯನ್ನು ಹೇಳಬಹುದು. ಮೂರು ಗರ್ಭಗೃಹಗಳು, ಮೂರು ಅರ್ಧಮಂಟಪಗಳು ಮತ್ತು ಒಂದು ನವರಂಗವಿದೆ. ಮಧ್ಯದ ಗರ್ಭಗೃಹದ ಮೇಲೆ ಇರುವ ಶಿಖರದಲ್ಲಿ ಮೇಲಂತಸ್ತಿನ ಗರ್ಭಗೃಹವಿದೆ. ಅದಕ್ಕೆ ತಾಗಿಕೊಂಡ ಒಂದು ಮುಖಮಂಟಪವಿದೆ. ಇದರಂತೆ ಗಂಗವಂಶದ ಎರಡನೇ ಭೂತುಗನ ರಾಣಿ ಪದ್ಮಬ್ಬರಸಿಯು ಕ್ರಿ.ಶ.೯೫೦ರಲ್ಲಿ ನರೇಗಲ್ಲಿನಲ್ಲಿ ಕಟ್ಟಿಸಿದ ತ್ರಿಕೂಟ ಬಸದಿಯು ಕರ್ನಾಟಕದಲ್ಲಿ ಅತ್ಯಂತ ದೊಡ್ಡದಾದ ರಾಷ್ಟ್ರಕೂಟ ದೇವಾಲಯಗಳಲ್ಲಿ ಒಂದು. ಸಾಮಾನ್ಯವಾಗಿ ತ್ರಿಕೂಟ ರಚನೆಯಲ್ಲಿ ಗರ್ಭಗೃಹಗಳನ್ನು ಮೂರು ದಿಕ್ಕುಗಳಿಗೆ ಮುಖವಾಗಿರುವಂತೆಯೂ ಇಲ್ಲವೆ ಒಂದರ ಪಕ್ಕದ

ಲ್ಲೊಂದರಂತೆಯೂ ನಿರ್ಮಿಸಿ ಅದರ ಮುಂದೆ ಒಂದೇ ನವರಂಗವಿರುತ್ತದೆ. ಆದರೆ ನರೇಗಲ್ಲಿನ ತ್ರಿಕೂಟ ರಚನೆಯು ಭಿನ್ನವಾಗಿದೆ. ಮುಖ್ಯ ಗರ್ಭಗೃಹಕ್ಕೆ ಮಾತ್ರ ನವರಂಗವಿದೆ. ಇನ್ನೆರಡು ಗರ್ಭಗೃಹಗಳನ್ನು ನವರಂಗದ ವ್ಯಾಪ್ತಿಯ ಹೊರಗೆ ಮುಖಮುಂಟಪವನ್ನು ಹಂಚಿಕೊಳ್ಳುವ ರೀತಿಯಲ್ಲಿ ನಿರ್ಮಿಸಲಾಗಿದೆ. ಮುಖ್ಯ ಗರ್ಭಗೃಹದಲ್ಲಿ ಒಬ್ಬ ಜಿನನ ಮೂರ್ತಿ ಇದ್ದರೆ; ಪರಸ್ಪರ ಅಭಿಮುಖವಾಗಿ ಆಯತಾಕಾರದಲ್ಲಿರುವ ಇನ್ನೆರಡು ಗೃಹಗಳಲ್ಲಿ ಚತುರ್ವಿಂಶತಿ ಜಿನರ ವಿಗ್ರಹಗಳಿವೆ. ಆಯತಾಕಾರದ ಪೀಠಗಳಿದ್ದು ಅವುಗಳಲ್ಲಿ ನಡುವೆ ೨೪ ಜಿನವಿಗ್ರಹಗಳನ್ನು ಕೂಡಿಸಲು ೨೪ ರಂಧ್ರಗಳನ್ನು ಮಾಡಲಾಗಿದೆ. ಹೀಗೆ ಚತುರ್ವಿಂಶತಿ ಜಿನವಿಗ್ರಹಗಳ ಎರಡು ತಂಡವನ್ನು ಈ ಎರಡು ಗರ್ಭಗೃಹಗಳಲ್ಲಿ ಪ್ರತಿಷ್ಠಾಪಿಸಿರುವುದು ಈ ಬಸದಿಯ ವೈಶಿಷ್ಟ್ಯವಾಗಿದೆ.[೮೭]

ರಾಷ್ಟ್ರಕೂಟರ ಕಾಲದಲ್ಲಿ ತ್ರೈಪುರುಷರ ಕಲ್ಪನೆಯು ಹೆಚ್ಚು ಜನಪ್ರಿಯವಾಗಿದ್ದುದರಿಂದ ತ್ರಿಮೂರ್ತಿಗಳನ್ನು ಒಂದೇ ಕೋಷ್ಠದಲ್ಲಿ ಅಥವಾ ಬೇರೆ ಬೇರೆ ಕೋಷ್ಠಗಳಲ್ಲಿ ಪ್ರತಿಷ್ಠಾಪಿಸಿದರು. ಬಾದಾಮಿ ಬಳಿಯ ಜಾಲಿಹಾಳ ಬೇಲೂರಿನ ತ್ರಿಮೂರ್ತಿ ದೇವಾಲಯದಲ್ಲಿ, ದೀರ್ಘ ಆಯತಾಕಾರದ ಏಕ ಗರ್ಭಗೃಹದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರ ಮೂರ್ತಿಗಳನ್ನು ಕಾಣಬಹುದು. ಇವರ ಕಾಲದಲ್ಲಿ ಗಮನಾರ್ಹವಾದ ಒಂದು ಅಂಶವೆಂದರೆ, ಐಹೊಳೆಯಲ್ಲಿ ಬಹುಸಂಖ್ಯೆಯಲ್ಲಿ ತ್ರಿಕೂಟ ರಚನೆಗಳು ನಿರ್ಮಾಣಗೊಂಡವು. ಕುಂದರಗಿ ದೇವಾಲಯ ಸಮೂಹ ಎಂದು ಸಾಮಾನ್ಯವಾಗಿ ಉಲ್ಲೇಖಗೊಳ್ಳುವ ಈ ದೇವಾಲಯಗಳು ತ್ರಿಕೂಟ ರಚನೆಯಲ್ಲಿವೆ. ಕೆಂಪು ಮರಳು ಕಲ್ಲಿನಿಂದ ನಿರ್ಮಾಣಗೊಂಡ ಈ ದೇವಾಲಯಗಳು ಒಂದೇ ನವರಂಗವನ್ನು ಹಂಚಿಕೊಳ್ಳುವ ಮೂರು ಗರ್ಭಗೃಹಗಳನ್ನು ಹೊಂದಿವೆ. ಮೇಲ್ಕಟ್ಟಡವಾಗಿ ಕದಂಬನಾಗರ ಶಿಖರಗಳಿವೆ. ಪ್ರಧಾನ ಗೃಹದ ಎದುರಿಗಿರುವ ಏಕೈಕ ಪ್ರವೇಶದ್ವಾರಕ್ಕೆ ಒಂದು ಸಣ್ಣ ಕೈಸಾಲೆಯನ್ನು ಕಾಣಬಹುದು. ಇವೆಲ್ಲವೂ ರಾಷ್ಟ್ರಕೂಟರ ಆಳ್ವಿಕೆಯ ಕೊನೆಯ ವರ್ಷಗಳಿಗೆ ಸೇರುತ್ತವೆ.[೮೮]

ಕ್ರಿ.ಶ.೯೭೩ರಿಂದ ಈಚೆಗೆ ಆಳ್ವಿಕೆ ನಡೆಸಿದ ಕಲ್ಯಾಣದ ಚಾಲುಕ್ಯ ದೊರೆಗಳು, ಶೈವಧರ್ಮೀಯರಾದ್ದರಿಂದ ಶೈವಧರ್ಮಕ್ಕೆ ಹೆಚ್ಚಿನ ಪ್ರೋತ್ಸಾಹ ದೊರೆತು, ಸಹಜವಾಗಿ ಪಾಶುಪತ, ಕಾಳಾಮುಖ, ಕಾಪಾಲಿಕ ಪಂಥೀಯರು ಬಹುಸಂಖ್ಯೆಯಲ್ಲಿ ಅನುಯಾಯಿಗಳನ್ನು ಪಡೆಯುವಂತಾಯಿತು. ಅದರಿಂದಾಗಿ ಆಗ ಸಾಕಷ್ಟು ಶಿವ ದೇವಾಲಯಗಳು ನಿರ್ಮಾಣಗೊಂಡವು. ತ್ರಿಕೂಟ ರಚನೆಗಳ ಸಂಖ್ಯೆಯು ಹೆಚ್ಚಿತು. ರಾಜಮನೆತನದವರು, ಸೇನಾನಾಯಕರು, ಸಚಿವರು, ವರ್ತಕ ಸಮುದಾಯ ಹಾಗೂ ಜನಸಾಮಾನ್ಯರು ಕೂಡ ಶಿವದೇವಾಲಯಗಳನ್ನು ಕಟ್ಟಿಸಿದರು. ಮಾತ್ರವಲ್ಲ ಅವುಗಳಿಗೆ ಉದಾರವಾಗಿ ದಾನಧರ್ಮಾದಿಗಳನ್ನು ಕೊಟ್ಟರು. ಶಾಸನದಲ್ಲಿ ಅಕ್ಕೇಶ್ವರ ದೇವಾಲಯವೆಂದು ಗುರುತಿಸಿದ ಸೂಡಿಯ ಮಲ್ಲಿಕಾರ್ಜುನ ದೇವಾಲಯವು ಕಲ್ಯಾಣ ಚಾಲುಕ್ಯರ ಕಾಲದ ದೊಡ್ಡ ತ್ರಿಕೂಟ ದೇವಾಲಯವಾಗಿದೆ. ೧೧ನೇ ಶತಮಾನದ ಮೊದಲ ಭಾಗದಲ್ಲಿ ನಿರ್ಮಾಣಗೊಂಡಿರ ಬಹುದಾದ ಬೇವೂರಿನ ಸೋಮೇಶ್ವರ, ಲಕ್ಕುಂಡಿಯ ಮಾಣಿಕೇಶ್ವರ ಮತ್ತು ಕುಂಬೇಶ್ವರ, ಲಕ್ಷ್ಮೇಶ್ವರದ ಲಕ್ಷ್ಮಣೇಶ್ವರ ದೇವಾಲಯಗಳು ಗಮನಾರ್ಹ. ೧೩ನೇ ಶತಮಾನದ ಪ್ರಾರಂಭದಲ್ಲಿ ನಿರ್ಮಿಸಲಾಯಿತು ಎನ್ನಲಾದ ಮಾಗಳದ ವೇಣುಗೋಪಾಲ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯ ಸುಂದರ ತ್ರಿಕೂಟ

ರಚನೆಯಾಗಿದೆ. ದೇಗಾವೆಯಲ್ಲಿ ಕಂದನಾರಾಯಣ ದೇವಾಲಯ ಸಾಮಾನ್ಯ ತ್ರಿಕೂಟ ರಚನೆಗಿಂತ ಭಿನ್ನವಾಗಿದೆ. ಇಲ್ಲಿ ಎಲ್ಲಾ ಗರ್ಭಗೃಹಗಳು ಒಂದೇ ದಿಕ್ಕಿಗೆ ಮುಖಮಾಡಿಕೊಂಡಿವೆ. ಆಚೀಚಿನ ಗರ್ಭಗೃಹಗಳಿಗೂ ಅಂತರಾಳಗಳಿದ್ದು, ಸಭಾಮಂಟಪಕ್ಕೆ ತೆರೆದುಕೊಳ್ಳುತ್ತವೆ. ಈ ದೇವಾಲಯದಲ್ಲಿ ಲಕ್ಷ್ಮಿ, ಸರಸ್ವತಿ, ಕಾಳಿಯರನ್ನು ಪ್ರತಿಷ್ಠೆ ಮಾಡಲಾಗಿತ್ತು ಎಂಬುದು ಮೂರು ಗರ್ಭಗೃಹ ದ್ವಾರಗಳ ಮಂಗಳ ಫಲಕಗಳಲ್ಲಿನ ಶಾಸನಗಳಿಂದ ತಿಳಿದುಬರುತ್ತದೆ.

ಬಾದಾಮಿ ಚಾಲುಕ್ಯರ ಕಾಲದಲ್ಲಿ ಮೊಟ್ಟಮೊದಲ ತ್ರಿಕೂಟ ದೇವಾಲಯ ನಿರ್ಮಾಣವಾಯಿತಾದರೂ ತ್ರಿಕೂಟ ರಚನೆಗಳು ಹೆಚ್ಚು ಜನಪ್ರಿಯವಾಗತೊಡಗಿದುದು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಮತ್ತು ಹೊಯ್ಸಳರ ಕಾಲವನ್ನು ತ್ರಿಕೂಟ ರಚನೆಗಳ ಪರ್ವಕಾಲವೆಂದೇ ಹೇಳಬಹುದು.[೫೯] ಶೈವರು, ವೈಷ್ಣವರು ಮತ್ತು ಜೈನರು ಅನೇಕ ತ್ರಿಕೂಟ ದೇವಾಲಯಗಳನ್ನು ಬಸದಿಗಳನ್ನು ಕಟ್ಟಿದರು. ಇದು ಕರ್ನಾಟಕದಲ್ಲಿ ಅನೇಕ ಸುಪ್ರಸಿದ್ಧ ತ್ರಿಕೂಟ ರಚನೆಗಳು ಅಸ್ತಿತ್ವದಲ್ಲಿ ಬರಲು ಕಾರಣವಾಯಿತು. ಹೊಯ್ಸಳರ ಕಾಲದಲ್ಲಿ ನಿರ್ಮಾಣಗೊಂಡ ವೈಷ್ಣವ ತ್ರಿಕೂಟ ದೇವಾಲಯಗಳನ್ನು ಗಮನಿಸಿದಾಗ, ಶ್ರೀವೈಷ್ಣವ ಧರ್ಮದ ಅನುಯಾಯಿಗಳು ವಿಷ್ಣುವಿನ ಮೂರು ರೂಪಗಳನ್ನು ಪ್ರತಿಷ್ಠಾಪಿಸುವಲ್ಲಿ, ತ್ರಿಕೂಟ ಮಾದರಿಯನ್ನು ಬಹು ಮಾರ್ಮಿಕವಾಗಿ ಬಳಸಿಕೊಂಡಿರುವುದು ಕಂಡುಬರುತ್ತದೆ.[೬೦] ಸಾಮಾನ್ಯವಾಗಿ ದಕ್ಷಿಣ ಗರ್ಭಗೃಹದಲ್ಲಿ ವೇಣುಗೋಪಾಲನ ವಿಗ್ರಹವನ್ನು ಪ್ರತಿಷ್ಠೆ ಮಾಡಿ ಉಳಿದ ಎರಡರಲ್ಲಿ ವೈಷ್ಣವ ಇತರ ದೇವತೆಗಳನ್ನು ಪ್ರತಿಷ್ಠೆ ಮಾಡುತ್ತಿದ್ದುದು ಸಾಮಾನ್ಯವಾಗಿ ಕಂಡುಬರುತ್ತದೆ. ಜಾವಗಲ್ಲಿನ ಲಕ್ಷ್ಮಿನರಸಿಂಹ ದೇವಾಲಯದಲ್ಲಿ ವೇಣುಗೋಪಾಲ, ಶ್ರೀಧರ ಮತ್ತು ಲಕ್ಷ್ಮಿನರಸಿಂಹ ವಿಗ್ರಹಗಳಿವೆ. ೧೩ನೇ ಶತಮಾನದ ಆದಿಭಾಗದಲ್ಲಿ ನಿರ್ಮಿತವಾದ ಬೆಳವಾಡಿಯ ವೀರನಾರಾಯಣದಲ್ಲಿ ವೇಣುಗೋಪಾಲ, ನಾರಾಯಣ ಮತ್ತು ಯೋಗಾ ನರಸಿಂಹರ ಮೂರ್ತಿಗಳಿವೆ. ಇದೇ ರೀತಿ ಸೆಟ್ಟಿಕೆರೆಯ ಯೋಗಮಾಧವ, ಭದ್ರಾವತಿಯ ಲಕ್ಷ್ಮೀನರಸಿಂಹ, ಹಾರನಹಳ್ಳಿಯ ಲಕ್ಷ್ಮಿನರಸಿಂಹ, ನೊಣವಿನಕೆರೆಯ ಗೋಪಾಲಸ್ವಾಮಿ, ಹೊಸಹೊಳಲು, ನುಗ್ಗಿಹಳ್ಳಿಯ ಲಕ್ಷ್ಮಿನರಸಿಂಹ ದೇವಾಲಯಗಳಲ್ಲಿ ವೇಣುಗೋಪಾಲನ ಜೊತೆ ಇತರ ವೈಷ್ಣವ ದೇವತೆಗಳನ್ನು ಪ್ರತಿಷ್ಠಾಪಿಸಿದ್ದು ಕಂಡುಬರುತ್ತದೆ. ಕ್ರಿ.ಶ. ೧೨೬೮ರಲ್ಲಿ ದಂಡನಾಯಕ ಸೋಮನಾಥನು ಸೋಮನಾಥಪುರದಲ್ಲಿ ಕಟ್ಟಿಸಿದ ತ್ರಿಕೂಟ ಮಾದರಿಯ ಕೇಶವ ದೇವಾಲಯವು ಹೊಯ್ಸಳ ಯುಗದ ಕೊನೆಯ ದೊಡ್ಡ ದೇವಾಲಯವಾಗಿದ್ದು ಇಡೀ ಕರ್ನಾಟಕದಲ್ಲಿಯೇ ಅತ್ಯಂತ ಪರಿಪೂರ್ಣ ತ್ರಿಕೂಟ ದೇವಾಲಯ ಎಂಬ ಖ್ಯಾತಿಗೆ ಪಾತ್ರವಾಗಿದೆ. ಮೂರೂ ಗರ್ಭಗೃಹಗಳ ಶಿಖರಗಳು ಸೌಂದರ್ಯದಲ್ಲಿ ಹೆಚ್ಚು ಪ್ರಖ್ಯಾತಿಯನ್ನು ಪಡೆದಿವೆ.[೬೧]

ಹಿಂದೂಗಳಂತೆ ಜೈನರೂ ಸಹ ಅನೇಕ ತ್ರಿಕೂಟ ಬಸದಿಗಳನ್ನು ನಿರ್ಮಿಸಿದ್ದಾರೆ. ಶ್ರವಣಬೆಳಗೊಳದ ಇಂದ್ರಗಿರಿ ಬೆಟ್ಟದ ಮೇಲಿರುವ ಒದೆಗಲ್ ಬಸದಿ ಬಹುಮುಖ್ಯವಾಗಿದೆ. ಮುಖ್ಯ ಗರ್ಭಗೃಹದಲ್ಲಿ ಆದಿನಾಥ ಶಿಲ್ಪವನ್ನು ಇನ್ನೆರಡರಲ್ಲಿ ನೇಮಿನಾಥ ಮತ್ತು ಶಾಂತಿನಾಥ ತೀರ್ಥಂಕರರ ಶಿಲ್ಪಗಳನ್ನು ಪ್ರತಿಷ್ಠೆ ಮಾಡಲಾಗಿದೆ. ಚಿಕ್ಕ ಹನಸೋಗೆಯ ಬಸದಿಯಲ್ಲಿ ಆದಿನಾಥ, ಶಾಂತಿನಾಥ ಮತ್ತು ಚಂದ್ರನಾಥ ತೀರ್ಥಂಕರರನ್ನು ಕಾಣುತ್ತೇವೆ. ಕಂಬದಹಳ್ಳಿಯ ಬಸದಿಯಲ್ಲಿ ಆದಿನಾಥ, ನೇಮಿನಾಥ ಮತ್ತು ಶಾಂತಿನಾಥ ತೀರ್ಥಂಕರರನ್ನು ಇಡಲಾಗಿದೆ.

ಹಿಂದೂ ತ್ರಿಕೂಟ ದೇವಾಲಯಗಳು ಹೊರಗೋಡೆಯ ಮೇಲೆ ಸಾಕಷ್ಟು ಮೂರ್ತಿಶಿಲ್ಪಗಳನ್ನು ಹೊಂದಿ ಸುಂದರವಾಗಿ ರೂಪಗೊಂಡರೆ ಬಸದಿಗಳ ಹೊರಗೋಡೆಯ ಮೇಲೆ ಯಾವುದೇ ರೀತಿಯ ಮೂರ್ತಿ ಶಿಲ್ಪಗಳು ಇಲ್ಲದಿರುವುದು ಗಮನಾರ್ಹ.

## ೩.೪. ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳು

ಹಾವೇರಿ ಜಿಲ್ಲೆಯು ಏಳು ತಾಲೂಕುಗಳನ್ನು ಒಳಗೊಂಡಂತೆ ನದಿ, ಹಳ್ಳ, ತಟಾಕ, ಗುಡ್ಡ, ಬೆಟ್ಟಗಳಿಂದ ಕೂಡಿದ್ದು ರಮ್ಯವಾದ ವಾತಾವರಣವನ್ನು ಹೊಂದಿದೆ. ದೇವಾಲಯಗಳು ಮೈತಳೆಯಲು, ದೇವತೆಗಳು ವಾಸಮಾಡಲು ಯೋಗ್ಯವಾದ ಪರಿಸರವನ್ನು, ಅನುಕೂಲತೆಗಳನ್ನು ಪಡೆದಿರುವುದರಿಂದ ಮೂರು ನೂರಕ್ಕೂ ಹೆಚ್ಚು ಮಧ್ಯಯುಗೀನ ದೇವಾಲಯಗಳನ್ನು ಜಿಲ್ಲೆಯು ಹೊಂದಿದೆ.[೬೨] ಈಗ ಕಾಲನ ಹೊಡೆತಕ್ಕೆ ಸಿಕ್ಕು ಕೆಲವು ನೆಲಕಚ್ಚಿದರೆ, ಕೆಲವು ಕನಿಷ್ಠ ಸ್ಥಿತಿಯಲ್ಲಿವೆ. ಕೆಲವು ಉತ್ತಮ ಸ್ಥಿತಿಯಲ್ಲಿಯೂ ಇವೆ. ಇನ್ನು ಕೆಲವು ದುರಸ್ತಿಯಲ್ಲಿ ಆಧುನೀಕರಣಕ್ಕೆ ಒಳಗಾಗಿ ಗುರುತು ಕಳೆದುಕೊಂಡಿವೆ. ಈ ದೇವಾಲಯಗಳಲ್ಲಿ ಏಕಕೂಟ (ಒಂದು ಗರ್ಭಗೃಹ), ದ್ವಿಕೂಟ(ಎರಡು ಗರ್ಭಗೃಹಗಳು), ತ್ರಿಕೂಟ(ಮೂರು ಗರ್ಭಗೃಹಗಳು), ಚತುಷ್ಕೂಟ (ನಾಲ್ಕು ಗರ್ಭಗೃಹಗಳು) ಮತ್ತು ಪಂಚಕೂಟ(ಐದು ಗರ್ಭಗೃಹಗಳು) ದೇವಾಲಯಗಳನ್ನು ಕಾಣಬಹುದಾಗಿದೆ. ಸಂಖ್ಯಾದೃಷ್ಟಿಯಿಂದ ಏಕಕೂಟ ದೇವಾಲಯಗಳ ನಂತರ ತ್ರಿಕೂಟ ದೇವಾಲಯಗಳ ಸಂಖ್ಯೆಯೇ ಹೆಚ್ಚಾಗಿದೆ. ದ್ವಿಕೂಟ, ಚತುಷ್ಕೂಟಗಳು ಮತ್ತು ಪಂಚಕೂಟಗಳು ಬೆರಳೆಣಿಕೆಯಷ್ಟು ಮಾತ್ರ ಕಂಡುಬರುತ್ತವೆ.

ಜಿಲ್ಲೆಯಲ್ಲಿ ಒಟ್ಟು ಮೂವತ್ತೊಂದು ತ್ರಿಕೂಟ ದೇವಾಲಯಗಳನ್ನು ಗುರುತಿಸಲಾಗಿದೆ. ಬ್ಯಾಡಗಿ ತಾಲೂಕಿನಲ್ಲಿ ಎರಡು, ರಾಣೆಬೆನ್ನೂರು ತಾಲೂಕಿನಲ್ಲಿ ಆರು, ಸವಣೂರು ತಾಲೂಕಿನಲ್ಲಿ ಒಂದು, ಹಾನಗಲ್ಲು ತಾಲೂಕಿನಲ್ಲಿ ಐದು, ಹಾವೇರಿ ತಾಲೂಕಿನಲ್ಲಿ ಮೂರು, ಹಿರೇಕೆರೂರು ತಾಲೂಕಿನಲ್ಲಿ ಹದಿನಾಲ್ಕು ಮತ್ತು ಶಿಗ್ಗಾವಿ ತಾಲೂಕಿನಲ್ಲಿ ತ್ರಿಕೂಟ ದೇವಾಲಯಗಳು ಕಂಡುಬರುವುದಿಲ್ಲ(ನಕ್ಷೆ-೨). ಇದರಿಂದ ಜಿಲ್ಲೆಯ ನೈರುತ್ಯ ಭಾಗದಲ್ಲಿ ದೇವಾಲಯಗಳು ಹೆಚ್ಚಾಗಿರುವುದು ಕಂಡುಬರುತ್ತದೆ. ತುಂಗಭದ್ರಾ, ಕುಮದ್ವತಿ ನದಿಗಳ ಫಲವತ್ತಾದ ಭೂಮಿ, ಇಲ್ಲಿಯ ಜನರ ಉತ್ತಮ ಆರ್ಥಿಕಸ್ಥಿತಿ, ಅನುಕೂಲವಾದ ಭೌಗೋಳಿಕ ಸ್ಥಿತಿಗತಿಗಳು, ಇಲ್ಲಿ ದೇವಾಲಯಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಕೊಳ್ಳಲು ಕಾರಣವಾದುವು. ಅಲ್ಲದೆ ಇದಕ್ಕಿಂತಲೂ ಮುಖ್ಯವಾಗಿ ಹಾವೇರಿ ಜಿಲ್ಲೆಯ ನೈರುತ್ಯ ದಿಕ್ಕಿನಲ್ಲಿರುವ, ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನ ಬಳ್ಳಿಗಾವೆಯು ಜಿಲ್ಲೆಯ ಈ ಭಾಗದ ಮೇಲೆ ಧಾರ್ಮಿಕವಾಗಿ ಹೆಚ್ಚು ಪ್ರಭಾವವನ್ನು ಬೀರಿತ್ತು. ಹಾವೇರಿ ಜಿಲ್ಲೆಯ ಕೆಲವು ತ್ರಿಕೂಟ ದೇವಾಲಯ ಮಠಗಳು, ಬಳ್ಳಿಗಾವೆಯ ಕೇದಾರೇಶ್ವರ ದೇವಾಲಯ ಮಠದ ಸ್ಥಾನಾಚಾರ್ಯರಾದ ಕಾಳಾಮುಖ ಯತಿಗಳಿಂದ ನೇರವಾದ ಉಸ್ತುವಾರಿಗೆ ಒಳಪಟ್ಟಿದ್ದವು.[೬೩] ಕ್ರಿ.ಶ.೧೧-೧೨ನೇ ಶತಮಾನದಲ್ಲಿ ಬಳ್ಳಿಗಾವೆಯ ಕೇದಾರೇಶ್ವರ ಮಠವು ಶೈವಪಂಥದ ಪ್ರಮುಖ ನೆಲೆಯಾಗಿತ್ತು. ಬಳ್ಳಿಗಾವೆಯ ಸುತ್ತಲೂ ಸು. ೩೦ ಕೀ.ಮಿ. ವ್ಯಾಪ್ತಿಯಲ್ಲಿ ಇದರ ಪ್ರಭಾವ ಬಹು ಗಾಢವಾಗಿತ್ತು ಎಂದು ಹೇಳಬಹುದು.[೬೪] ಈ ಕಾರಣದಿಂದ ಬಳ್ಳಿಗಾವೆಗೆ ಹತ್ತಿರದ ಭೂ ಪ್ರದೇಶಗಳಾದ ಹಿರೇಕೆರೂರು, ರಾಣೆಬೆನ್ನೂರು ಮತ್ತು ಹಾನಗಲ್ಲ ತಾಲೂಕುಗಳಲ್ಲಿ ಅದರ ಪ್ರಭಾವ ಹೆಚ್ಚಾಗಿತ್ತು ಎಂದು ಸ್ಪಷ್ಟವಾಗುತ್ತದೆ. ಅಲ್ಲದೆ ಈ




## ನಕ್ಷೆ ೨

## ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳಿರುವ ಸ್ಥಳಗಳು

ಕಾರಡಗಿ
ಶಿಗ್ಗಾಂವ
ಸವಣೂರು
ಗುಂಡೂರು
ನರಸಿಂಹಪುರ
ಹರಳಹಳ್ಳಿ
ದಶರಥಕೊಪ್ಪ
ಕರಗುದರಿ
ಧರ್ಮಾ ನದಿ
ಹಾನಗಲ್ಲ
ಅಕ್ಕಿಆಲೂರು
ಕುಳೇನೂರು
ಹಾವೇರಿ
ಉಪ್ಪುಣಸಿ
ವರದಾ ನದಿ
ಕಲಕೇರಿ
ಗುಡಗೂರು
ಬ್ಯಾಡಗಿ
ಮತ್ತೂರು
ಹೊನ್ನತ್ತಿ (೨)
ಶಿಡೇನೂರು
ಗುಡ್ಡದ ಆನವೇರಿ
ರಾಣೆಬೆನ್ನೂರು
ಹಿರೇಕೊಣತಿ
ಮತ್ತಿಹಳ್ಳಿ
ಹಿರೇಮಾಗನೂರು
ಅಂತರವಳ್ಳಿ
ಅಬ್ಬಲೂರು(೨)
ಆಲದಗೇರಿ
ಹಿರೇಕೆರೂರು
ಕುಂಚೂರು
ಕುಡುಪಲಿ
ಕುಮದ್ವತಿ ನದಿ
ರಟ್ಟಿಹಳ್ಳಿ
ತುಂಗಭದ್ರಾ ನದಿ
ಮೆದೂರು
ನಾಗವಂದ
ಪುರದಗೇರಿ
ಕಿರಗೇರಿ

೨೦ ೧೦ ೦ ೧೦ ೨೦ ಕಿ.ಮೀ.

ತಾಲೂಕುಗಳಲ್ಲಿಯ ಹಲವು ಹಳ್ಳಿಗಳನ್ನು ಬಳ್ಳಿಗಾವೆಯ ಕೇದಾರೇಶ್ವರ ದೇವಾಲಯಕ್ಕೆ ದಾನವಾಗಿ ಕೊಟ್ಟಿರುವುದಾಗಿ ಶಾಸನ ಉಲ್ಲೇಖಿಸುತ್ತದೆ. ಈ ಶಾಸನವು[೯೫] ಕ್ರಿ.ಶ.೧೧೬೨ರ ಕಾಲಮಾನಕ್ಕೆ ಸೇರಿದ್ದಾಗಿದ್ದು, ಕಲಚೂರಿ ಬಿಜ್ಜಳನ ಆಡಳಿತವನ್ನು ಸೂಚಿಸುತ್ತದೆ. 'ನೂರುಂಬಾಡದೊಳಗಣ ಕಿಱುಗೇರಿಯಂ.... ಗುತ್ತೊಳಲ ಕಂಪಣದೊಳು ಅಯಿರಣೆಯುಮಂ.... ಸತ್ತಳಿಗೆಯ ಕಂಪಣದೊಳು ಸಿಡಿಯನೂರು ದೀವಿಗೆಯುಮಂ.... ಬಾಸೂರ ಕಂಪಣದೊಳು ಚಂಗೂರು ಮತ್ತಿಯಹಳ್ಳಿಯುಮಂ ನಾಗರಖಂಡೆಯದೊಳಗಣ ಜಾವಳಿಯುಮಂ... ಶ್ರೀಮದ್ರಾಜಗುರುವಾಮಶಕ್ತಿದೇವರ ಕಾಲಂ ಕರ್ಚ್ಚಿ ಧಾರಾಪೂರ್ವ್ವಕಂ ಮಾಡಿಕೊಟ್ಟಿರುವರು.' ಶಾಸನವು ಇನ್ನೂ ಮುಂದುವರೆದು 'ಕೋಡಿಯ ಮಠದ ಶ್ರೀಮತುದಕ್ಷಿಣಕೇದಾರೇಶ್ವರ ದೇವರಂಗಭೋಗಕ್ಕಂ ಶ್ರೀಸೋಮನಾಥದೇವರಂಗ ಭೋಗಕ್ಕಂ ಅಬ್ಬಲೂರ ಬ್ರಹ್ಮೇಶ್ವರ ದೇವರಂಗಭೋಗಕ್ಕಂ ನಾಗರಖಂಡೆಯದ ಕಂಪಣದೊಳು ಕರಿನೆಲೆ ಮರುವಸೆ ಮುತ್ತಿಗನಹಳ್ಳಿ ಕುಂದಗಿಯುಮಂ ಹಾನುಗಲ್ಲ ಕಂಪಣದೊಳು ಚಿಕ್ಕಕಣ್ಣುಗೆಯುಮಂ ತ್ರಿಭೋಗಾಭ್ಯಂತರಸಹಿತಂ ಸರ್ವ್ವನಮಸ್ಯವಾಗಿ ಕೊಟ್ಟರು' ಎಂದು ಶಾಸನ ವಿವರಿಸುತ್ತದೆ. ಇದು ಹಾವೇರಿ ಜಿಲ್ಲೆಯ ಭೂ ಪ್ರದೇಶಕ್ಕೂ ಬಳ್ಳಿಗಾವೆಗೂ ಇದ್ದ ಸಂಬಂಧವನ್ನು ಇನ್ನಷ್ಟು ಸ್ಪಷ್ಟಪಡಿಸುತ್ತದೆ. ಬಳ್ಳಿಗಾವೆಯ ಕೇದಾರೇಶ್ವರ ಮತ್ತು ತ್ರಿಪುರಾಂತಕೇಶ್ವರ ದೇವಾಲಯಗಳೂ ಸಹ ತ್ರಿಕೂಟ ಮಾದರಿಯಲ್ಲಿರುವ ದೇವಾಲಯಗಳು ಎಂಬುದು ಬಹು ಗಮನಾರ್ಹ ಅಂಶವಾಗಿದೆ. ಅಲ್ಲದೆ ತ್ರಿಕೂಟ ದೇವಾಲಯಗಳ ನಿರ್ಮಾಣದ ಹಿಂದಿನ ಉದ್ದೇಶದಲ್ಲಿಯೂ ಸಹ ಸಾಮ್ಯತೆ ಇದೆ. ಹೀಗಾಗಿ ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳನ್ನು ಸಮಗ್ರವಾಗಿ ಅಭ್ಯಸಿಸುವ ಮುನ್ನ ಬಳ್ಳಿಗಾವೆಯ ಬಗ್ಗೆ ಅಲ್ಲಿಯ ಧಾರ್ಮಿಕ ಸ್ಥಿತಿಗತಿಯ ಬಗ್ಗೆ ಗಮನಹರಿಸುವುದು ಸೂಕ್ತವೆಂದು ತೋರುತ್ತದೆ.

ಬಳ್ಳಿಗಾವೆ : ಬಳ್ಳಿಗಾವೆಯು ಹಾವೇರಿ ಜಿಲ್ಲೆಯ ದಕ್ಷಿಣಕ್ಕಿರುವ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನಲ್ಲಿದೆ. ಪ್ರಾಚೀನದಲ್ಲಿ ಬಳ್ಳಿಗಾವೆಯು ಬನವಾಸಿ ಪ್ರಾಂತದ ರಾಜಧಾನಿಯಾಗಿತ್ತು. ಈ ಪ್ರದೇಶದಲ್ಲಿ ಅಱಕ್ಕೂ ಹೆಚ್ಚು ಶಾಸನಗಳನ್ನು ವಿದ್ವಾಂಸರು ಬೆಳಕಿಗೆ ತಂದಿದ್ದಾರೆ. ಇವೆಲ್ಲವೂ ಬಹುತೇಕ ಹದಿಮೂರನೇ ಶತಮಾನದ ಹಿಂದಿನ ಕಾಲಕ್ಕೆ ಸೇರಿದವುಗಳಾಗಿವೆ. ಶಾಸನಗಳು ಬಳ್ಳಿಗಾವೆಯನ್ನು ಬಲಿಪುರ, ಬಳ್ಳಿಗಾಂವೆ, ಬಳ್ಳಿಗ್ರಾಮ, ಬೆಳಗಾಮೆ, ಕರವೂರು ಇತ್ಯಾದಿ ಹೆಸರುಗಳಿಂದ ಕರೆದಿವೆ. ಇದನ್ನು 'ಅನಾದಿಪಟ್ಟಣ' ಎಂದೂ ಉಲ್ಲೇಖಿಸಿವೆ. ಬಳ್ಳಿಗಾವೆ ಸಜ್ಜನ ನಿಧಿ, ಪಟ್ಟಣಂಗಳ ತವರ್ಮನೆ ಅಲ್ಲದೆ 'ವಿಭುದ್ಯೆಕವಾಸಮ್ ಅಮರಾವತಿಯನ್ತಿಭೋಗಿ ಸೇವ್ಯವನ್ತದು ಸೆಪೆರ್ವೆತ್ತು ರಂಜಿಸುವ ಭೋಗವತೀ ಪುರದಂತಿತ್ತು'[೯೬] ಎಂದು ಸ್ತುತಿಸಿವೆ. ಕ್ರಿ.ಶ.೧೧ನೇ ಶತಮಾನದಲ್ಲಿ ಬಳ್ಳಿಗಾವೆಯು ಪ್ರಸಿದ್ಧ ವಿದ್ಯಾಕೇಂದ್ರ ಹಾಗೂ ಸಾಂಸ್ಕೃತಿಕ ಕೇಂದ್ರವಾಗಿತ್ತು ಎಂಬುದಕ್ಕೆ ಆ ಕಾಲದ ಶಾಸನಗಳು ವಿಫುಲವಾಗಿ ಬಳ್ಳಿಗಾವೆಯಲ್ಲಿಯೇ ದೊರೆತಿರುವುದು ಬಲವಾದ ಸಾಕ್ಷಿಯಾಗಿದೆ. ಈ ಪಟ್ಟಣವು ಚತುಸ್ಸಮಯಗಳಿಗೆ ಆಗರವಾಗಿತ್ತು[೯೭] ಅಂದರೆ ಬೌದ್ಧ, ಜೈನ, ಶೈವ, ವೈಷ್ಣವ ಮತಗಳಿಗೆ ಆಶ್ರಯ ಕಲ್ಪಿಸಿತ್ತು. ಈ ಮಾತನ್ನು ಅಲ್ಲಲ್ಲಿ ದೊರೆಯುವ ಆ ಕಾಲದ ಅವಶೇಷಗಳು ಹಾಗೂ ಶಾಸನಗಳು ಪುಷ್ಟೀಕರಿಸುತ್ತವೆ. ಕ್ರಿ.ಶ.೧೦೫೪ರ ಶಾಸನ[೯೮] ಪ್ರಕಾರ ಬಳ್ಳಿಗಾವೆಯಲ್ಲಿ ಐದು ಮಠಗಳಿದ್ದು ಅವುಗಳ ಹೆಸರು ಕ್ರಮವಾಗಿ ಪಂಚಮಠ, ಹಿರಿಯಮಠ, ಭೇರುಂಡೇಶ್ವರ ಮಠ, ಪಂಚಲಿಂಗಮಠ, ತ್ರಿಪುರಾಂತಕ ಮಠಗಳಾಗಿವೆ. ಅಲ್ಲದೆ, ಚಂದ್ರಕೇಶ್ವರ, ಭೇರುಂಡೇಶ್ವರ, ನಂದಿಕೇಶ್ವರ, ಸಿದ್ದೇಶ್ವರ,

ನಖರೇಶ್ವರ, ಕೇದಾರೇಶ್ವರ, ಸರ್ವೇಶ್ವರ, ಕುಸುಮೇಶ್ವರ, ತ್ರಿಪುರಾಂತಕೇಶ್ವರ ಇತ್ಯಾದಿ ದೇವಸ್ಥಾನಗಳು ಬಳ್ಳಿಗಾವೆಯಲ್ಲಿದ್ದವು. ಈ ಎಲ್ಲ ದೇವಾಲಯಗಳು ಶೈವ ಶಾಖೆಯ ಕಾಳಾಮುಖ ಪಂಥದವರಿಗೆ ಸೇರಿದವು ಗಳಾಗಿದ್ದವು. ಈ ಪ್ರದೇಶದಲ್ಲಿ ಆಳವಾಗಿ ಬೇರೂರಿದ್ದ ಕಾಳಾಮುಖ ಪಂಥವನ್ನು ಮತ್ತು ಈ ಪಂಥದ ಯತಿಪರಂಪರೆಯ ಬಗ್ಗೆ, ಅವರ ವಿದ್ವತ್ತಿನ ಬಗ್ಗೆ ಮತ್ತು ದೇವಾಲಯಗಳ ಸಂಖ್ಯೆಗಳನ್ನು ಬೆಳೆಸುವುದಲ್ಲದೆ ಅವುಗಳ ನಿರ್ವಹಣೆಯಲ್ಲಿ ಅವರು ತೋರಿದ ದಕ್ಷತೆಯ ಬಗ್ಗೆ ಗಮನಹರಿಸುವುದು ಈ ಸಂದರ್ಭದಲ್ಲಿ ಬಹುಅವಶ್ಯ.

**ಕಾಳಾಮುಖರು :** ಲಾಕುಳ ಅಥವಾ ಪಾಶುಪತರಿಗೆ ಕಾಳಾಮುಖರೆಂಬ ಹೆಸರೂ ಇದೆ.[೯೯] ಕಾಳಾಮುಖರು ಮತ್ತು ಕಾಪಾಲಿಕರು ಒಂದೇ ಎಂದು ಕೆಲವು ವಿದ್ವಾಂಸರು ಹೇಳುತ್ತಾರೆ.[೧೦೦] ಆದರೆ ಇದಕ್ಕೆ ಯಾವ ಆಧಾರವೂ ಇಲ್ಲ. ಕಾಪಾಲಿಕರದು ಸಂಪೂರ್ಣವಾಗಿ ವಾಮಾಚಾರಗಳ ಪಂಥವಾದರೆ, ಕಾಳಾಮುಖರದು ಶುದ್ಧ ಸಾತ್ವಿಕ ಆಚರಣೆ[೧೦೧] ಇವರನ್ನು ಅಸಿತವಕ್ತ್ರರೆಂದು ಕರೆಯಲಾಗಿದೆ. ಮುಖದ ಮೇಲೆ ಕರಿಯ ಗೆರೆಗಳನ್ನು ಎಳೆದು ಕೊಳ್ಳುತ್ತಿದ್ದರಿಂದ ಇವರನ್ನು ಕಾಳಾಮುಖರೆಂದು ಕರೆಯುತ್ತಿರಬೇಕು ಎಂಬ ಅಭಿಪ್ರಾಯವಿದೆ.[೧೦೨] ಇದಕ್ಕಿಂತಲೂ ವಸುಂಧರಾ ಫಿಲಿಯೋಜಾ ಅವರು ಪಂಪಾಮಹಾತ್ಮೆಯ ಉತ್ತರ ಭಾಗವನ್ನು ಆಧಾರವಾಗಿ ಇಟ್ಟುಕೊಂಡು

> ಕಲಾ ಏವ ಸದಾ ಮುಖ್ಯಾ ಮಹತ್ಕಾಲಮುಖಂ ಮತಂ ।
> ಕಲಾಮುಖಂ ಮಹಾಪ್ರಾಜ್ಞಾ ಕಲಾ ಯತ್ರಪ್ರತಿಷ್ಠಿತಃ ॥
> ಕಲಾಮುಖೈಕ ಸಂಬಂಧೀ ಯತ್ತತ್ಕಾಲಮುಖಂ ಮತಂ ।
> ತದನುಷ್ಠಾನವಂತೋ ಯೇ ತೇಪಿ ಕಾಲಾಮುಖಾಃ ಸ್ಮೃತಾಃ ॥
> ಯಃ ಕಲಾಸು ನಿರೂಢಾತ್ಮಾಸ ಕಲಾಸ್ವಾತ್ಮಭಾವತಃ ।
> ತೇ ತಥಾ ಪಾಶುಪತಂ ತಂತ್ರಂ ಮುಖ್ಯಂ ತಸ್ಯಾಶಯಸ್ಥಿದಂ ॥

ಶಾಂತ್ಯತೀತ, ಶಾಂತಿ, ವಿದ್ಯಾ, ಪ್ರತಿಷ್ಠಾ ಹಾಗೂ ನಿವೃತ್ತಿ ಇವು ಕಲೆಗಳು. ಈ ಕಲೆಗಳು ಶಿವನ ಐದು ಮುಖಗಳಾದ ಈಶಾನ, ವಾಮ, ಸದ್ಯೋಜಾತ, ಅಘೋರ ಮತ್ತು ತತ್ಪುರುಷ ಎಂಬ ಮುಖಗಳಿಗೆ ಸಂಬಂಧಿಸಿದೆ. ಶಿವನ ಐದು ಮುಖಗಳು ಕಲಾಮುಖಗಳು. ಈ ಕಲಾಮುಖಗಳನ್ನು ಅನುಷ್ಠಾನ ಮಾಡುವವರೆ ಕಲಾಮುಖರು ಎಂದು ವಿವರಣೆಯನ್ನು ಕೊಟ್ಟಿರುವರು.[೧೦೩] ಇವರ ಅಭಿಪ್ರಾಯ ಸಮಂಜಸವಾಗಿದೆ.

ಕನ್ನಡ ನಾಡಿನಲ್ಲಿ ವೀರಶೈವಧರ್ಮ ಪ್ರವರ್ಧಮಾನಕ್ಕೆ ಬರುವ ಮುನ್ನ, ಜೈನರನ್ನು ಬಿಟ್ಟರೆ ಶೈವರೇ ಅತ್ಯಂತ ಪ್ರಭಾವಶಾಲಿಗಳಾಗಿದ್ದರು. ರಾಜಾಶ್ರಯವನ್ನು ಪಡೆದುಕೊಂಡು ಪ್ರಬಲವಾಗಿ ಬೇರೂರಿದ್ದರು. ತಮಿಳುನಾಡಿನಲ್ಲಿ ಮತ್ತು ಆಂಧ್ರಪ್ರದೇಶದಲ್ಲಿಯೂ ಇವರು ಪ್ರಬಲರಾಗಿದ್ದರೆಂದು ಅಲ್ಲಿಯ ಶಾಸನಗಳು ಸೂಚಿಸುತ್ತವೆ.[೧೦೪] ಆಂಧ್ರಪ್ರದೇಶದ ಶ್ರೀಶೈಲವು ಸಹ ಸುಪ್ರಸಿದ್ಧ ಕಾಳಾಮುಖ ಕೇಂದ್ರವಾಗಿತ್ತು. ಹೀಗೆ ಕಾಳಾಮುಖರು ಹೆಚ್ಚು ಕಡಿಮೆ ದಕ್ಷಿಣ ಭಾರತದಲ್ಲೆಲ್ಲ ಪ್ರಭಾವ ಶಾಲಿಗಳಾಗಿದ್ದರು.[೧೦೫]

ಕಾಳಾಮುಖ ಶೈವ ಪಂಥದವರ ಬಹು ಮುಖ್ಯ ಕೊಡುಗೆ ಎಂದರೆ ಹಳ್ಳಿಹಳ್ಳಿಗಳಲ್ಲಿಯೂ ದೇವಾಲಯಗಳ ನಿರ್ಮಾಣ ಮತ್ತು ದೇವಾಲಯಗಳನ್ನೇ ವಿದ್ಯಾಕೇಂದ್ರಗಳನ್ನಾಗಿ ಮಾಡಿಕೊಂಡು ವಿದ್ಯಾದಾನ ಕಾರ್ಯವನ್ನು ಕೈಗೊಂಡಿದ್ದು,[೧೦೬] ಕಾಳಾಮುಖರನ್ನು ಉಲ್ಲೇಖಿಸುವ ೬೫ಕ್ಕೂ ಹೆಚ್ಚು ಶಾಸನಗಳು ಬೆಳಕಿಗೆ ಬಂದಿದ್ದು, ಇವುಗಳಲ್ಲಿ ೫೦ಕ್ಕೂ ಹೆಚ್ಚು ಶಾಸನಗಳು ಬಳ್ಳಿಗಾವೆಯೊಂದರಲ್ಲೇ ದೊರಕಿವೆ ಎಂದು ಲೊರೆಂಜನ್‌ರವರು ತೋರಿಸಿದ್ದಾರೆ.[೧೦೭] ಬಳ್ಳಿಗಾವೆಗೆ ಅತೀ ಹತ್ತಿರದ ಪ್ರದೇಶವಾದ ಹಾವೇರಿ ಜಿಲ್ಲೆಯ ಎಲ್ಲ ತ್ರಿಕೂಟ ದೇವಾಲಯಗಳೂ ಸಹ ಕಾಳಾಮುಖ ಯತಿಗಳಿಗೆ ಸೇರಿವೆ. ದೇವಾಲಯಗಳಿಗೆ ಸಂಬಂಧಪಟ್ಟಂತೆ ದಾನ ದತ್ತಿಗಳನ್ನು ಕೊಡುವಾಗ ಬಹುತೇಕ ಕಾಳಾಮುಖ ಗುರುಗಳ 'ಕಾಲಂ ಕರ್ಚಿ' (ಕಾಲುತೊಳೆದು) ನೀಡಿರುವುದು ಕಂಡು ಬರುತ್ತದೆ. ದೇವಾಲಯಗಳ ಆಡಳಿತ ವ್ಯವಸ್ಥೆಯು ಕಾಳಾಮುಖ ಗುರುಗಳ ಅಧೀನದಲ್ಲೇ ಇತ್ತು. ಕಾಳಾಮುಖ ಗುರುಗಳ ಯೋಗ್ಯತೆಯನ್ನು ಕುರಿತು ಸಾಕಷ್ಟು ಶಾಸನಗಳು ಸ್ಪಷ್ಟತೆಯನ್ನು ಒದಗಿಸುತ್ತವೆ. ಕಲಕೇರಿ ಶಾಸನವು

> '..... ಜಿತೇಂದ್ರಿಯರೆಂದು ಯೋಗಪಂಕರುಹದಿನೇಶರೆಂದು ಸ
> ಕಳಾಗಮಕೋವಿದರೆಂದು.... ಇನ್ತೆನಿಸಿದ ಕಾಳಾಮುಖ ನೈಷ್ಟಿಕ
> ತಪೋಧನರ್ಗ್ಗವಲ್ಲಿಯ ....'[೧೦೮] ಎಂದು ಉಲಲಖಿಸಿದರೆ,

ಹರಳಹಳ್ಳಿಯ ಶಾಸನವು ಇವರನ್ನು ಕುರಿತು[೧೦೯]

> 'ಸಕಲ ಧರ್ಮಪ್ರತಿಳಾರುಂ ಸಕಳಬ್ರತನಿರತರಪ್ಪ ಶ್ರೀಮದ್ರಾಜಗುರು ಗೊಟ್ಟಗಡಿಯ
> ಸೋಮನಾಥ ದೇವರ ಸ್ಥಾನಾಚಾರ್ಯ...' ಎಂದು ಹೇಳಿದೆ.

ಇವರು ನೈಷ್ಟಿಕ ತಪೋಧನರು, ಜಿತೇಂದ್ರಿಯರು, ಲಾಕುಳಾಗಮಕೋವಿದರು, ಸ್ಥಾನಾಚಾರ್ಯರು, ಸಕಲ ಧರ್ಮಗಳನ್ನು ಪ್ರತಿಪಾಲಿಸುವವರು; ಶಾಸನವು ಇನ್ನೂ ಮುಂದುವರೆದು 'ಶ್ರೀಮದ್ರಾಜಗುರು' ಎಂದು ವರ್ಣಿಸಿದೆ. ಇದರಿಂದ ಕಾಳಾಮುಖ ಗುರುಗಳ ಪ್ರಭಾವ ದೇವಾಲಯಗಳಿಗೆ ಮಾತ್ರ ಸೀಮಿತವಾಗಿರದೆ ಇಲ್ಲಿಯ ರಾಜಕೀಯ ವಲಯದಲ್ಲೂ ಪ್ರಭಾವ ಬೀರಿದ್ದರೆಂದು ತಿಳಿಯಲು ಅಡ್ಡಿ ಇಲ್ಲ. ಈ ಸಂದರ್ಭದಲ್ಲಿ ಬಳ್ಳಿಗಾವೆ ಕೇದಾರೇಶ್ವರ ಯತಿ ಪರಂಪರೆಯ ವಾಮಶಕ್ತಿದೇವನನ್ನು ಸೆರೆ ಹಿಡಿಯಲಾಯಿತು ಎಂಬ ಪ್ರಸಂಗವನ್ನು ಉದಾಹರಿಸಬಹುದು.[೧೧೦] ಬಳ್ಳಿಗಾವೆಯ ದಾನ ಶಾಸನಗಳಲ್ಲಿ ಚಕ್ರವರ್ತಿಗಳೇ ನೇರವಾಗಿ ದಾನವನ್ನು ಕೊಟ್ಟಿರುವುದು ಇಲ್ಲಿ ಗಮನಿಸಬೇಕಾದ ಅಂಶ. ಕಲ್ಯಾಣ ಚಾಲುಕ್ಯ ಚಕ್ರವರ್ತಿಗಳಾದ ಜಯಸಿಂಹ, ಜಗದೇಕಮಲ್ಲ, ಎರಡನೇ ಸೋಮೇಶ್ವರ, ಭುವನೈಕಮಲ್ಲ, ಆರನೇ ವಿಕ್ರಮಾದಿತ್ಯ, ತ್ರಿಭುವನಮಲ್ಲ, ಮೂರನೇ ಸೋಮೇಶ್ವರ, ಕಳಚೂರಿ ದೊರೆಗಳಾದ ಬಿಜ್ಜಳ, ರಾಯ ಮುರಾರಿ, ಸೋಯಿದೇವ, ಸಂಕಮ, ಸೇವುಣರ ದೊರೆ ಸಿಂಘಣ, ಹೊಯ್ಸಳರ ದೊರೆ ಎರಡನೇ ಬಲ್ಲಾಳ ಇವರ ದಾನಶಾಸನಗಳನ್ನು ಕಾಣುತ್ತೇವೆ. ಅಲ್ಲದೆ ಸ್ಥಳೀಯ ಮಹಾಮಂಡಲೇಶ್ವರರು, ದಂಡನಾಯಕರು ಅನೇಕ ಶ್ರೀಮಂತ ವರ್ಗದವರ ಶಾಸನಗಳನ್ನು ಕಾಣುತ್ತೇವೆ. ಇದು ಬಳ್ಳಿಗಾವೆಯ ಕಾಳಾಮುಖ ಯತಿಗಳ ಪ್ರಭಾವವನ್ನು ಎತ್ತಿ ತೋರಿಸುತ್ತದೆ. ಈ ಯತಿಗಳ ದಕ್ಷ ನಿರ್ವಹಣೆಯಲ್ಲಿ ಬೆಳೆದುಬಂದ ಮಠಗಳಲ್ಲಿ ಬಳ್ಳಿಗಾವೆಯ ಕೇದಾರೇಶ್ವರ ಮಠವು (ಕೋಡಿಮಠ) ಪ್ರಮುಖವಾಗಿದೆ.

ಬಳ್ಳಿಗಾವೆ ಕೇದಾರೇಶ್ವರ ಕೋಡಿಮಠ ಕೇದಾರೇಶ್ವರ ತ್ರಿಕೂಟ ದೇವಾಲಯದ ಅಂಗವಾದ ಕೇದಾರೇಶ್ವರ ಮಠವು ಕ್ರಿ.ಶ.ಸು.೧೧೬೦ರಲ್ಲಿ ಸ್ಥಾಪಿತವಾಗಿರಬೇಕು ಎಂದು ಅಲ್ಲಿಯ ಶಾಸನಗಳನ್ನು ಆಧಾರವಾಗಿಟ್ಟು ಕೊಂಡು ಚಿದಾನಂದಮೂರ್ತಿ ಅವರು ಸೂಚಿಸಿದ್ದಾರೆ.[೧೧೧] ಈ ಮಠದ ಮೂಲಸ್ಥಾಪಕನಾದ ಕೇದಾರೇಶ್ವರನು ಶ್ರೀಶೈಲದಿಂದ ಬಂದು ಬಳ್ಳಿಗಾವೆಯಲ್ಲಿ ನೆಲೆಸಿರಬೇಕು. ಅಲ್ಲಿಯ ಶಾಸನವು[೧೧೨] ಅವನನ್ನು 'ಪರ್ವತಾವಳಿ ಯೊಳ್ಮೂವರ ಕೋಣೆಯ ಸಂತತಿಗಾಭರಣಂ' ಎಂದು ಕರೆದಿರುವುದು ಇದಕ್ಕೆ ಸಾಕ್ಷಿ. ಈ ಮಠದ ಪರಂಪರೆಯಲ್ಲಿ ಸ್ಥಾನಿಕರಾಗಿ ಆಗಿ ಹೋದವರು ಬಹಳ ವಿದ್ವತ್ತನ್ನು ಉಳ್ಳವರು. ಶಾಸನಗಳ ಪ್ರಕಾರ ಈ ಮಠದ ಸ್ಥಾನಿಕರ ವಿವರ ಈ ಕೆಳಗಿನಂತಿದೆ.




ಈ ಮುನಿಪರಂಪರೆಯನ್ನು ಶಾಸನಗಳು ಬಹುವಾಗಿ ವರ್ಣಿಸಿವೆ. ಕೇದಾರಶಕ್ತಿ ಶಿಷ್ಯನಾದ ಶ್ರೀಕಂಠಪಂಡಿತ ನನ್ನು ಶಾಸನವು 'ವಸುಧೆಯೊಳಿನ್ನೇ ಮಾತೋ ಲಕುಲೀಶರ್ತ್ತಾಮೆನೆ ಸರ್ವಜ್ಞ ಕಳ್ಪರೆಸೆದರ್' ಎಂದು ವರ್ಣಿಸಿದೆ.[೧೧೩] ಇವನು ಲಾಕುಳ ಸಿದ್ಧಾಂತದಲ್ಲಿ ಗಟ್ಟಿಗನಾಗಿರಬೇಕು. ಇವನ ಶಿಷ್ಯನಾದ ಸೋಮೇಶ್ವರನು ಬಹಳ ವಿದ್ವತ್ತನ್ನು ಪಡೆದಿದ್ದರಿಂದ ಇವನ ಕಾಲದಲ್ಲಿ ಮಠವು ಹೆಚ್ಚು ಜನಪ್ರಿಯಗೊಂಡು ಅನೇಕ ದಾನದತ್ತಿ ಗಳನ್ನು ಪಡೆದುಕೊಂಡಿತು. ಈತನ ವಿದ್ವತ್ತನ್ನು ಅನೇಕ ಶಾಸನಗಳು ವರ್ಣಿಸಿವೆ.

"ಯವನಿಯಮ ಸ್ವಾಧ್ಯಾಯ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನಧಾರಣ, ಮಾನಾನುಷ್ಠಾನ ಜಪಸಮಾಧಿ ಶೀಲ ಸಂಪನ್ನರ್ಸಿದ್ಧಾಂತಿ ತರ್ಕ ವ್ಯಾಕರಣ ಕಾವ್ಯ ನಾಟಕ ಭರತಾದ್ಯನೇಕ ಸಾಹಿತ್ಯ ವಿದ್ಯಾ

ಪ್ರವೀಣರುಮಪ್ಪ ಸೋಮೇಶ್ವರ ಪಂಡಿತ"[೧೧೪] ಎಂದೂ ನೈಯಾಯಿಕಾಗ್ರೇಸರ, ಸಾಂಖ್ಯಾಗಮ ಪ್ರವೀಣಂ ಸಾಹಿತ್ಯ ವಿದ್ಯಾ ಮಹಾನದೀ ಪ್ರವಾಹಕ್ಕೆ ಈಶ್ವರ ಎಂದೂ, ಕೇದಾರಕ್ಷೇತ್ರಕ್ಕೆ ವಿದ್ಯಾಬ್ಧಿಯೆನಿಸಿ ಕೇದಾರೇಶ್ವರ ಲಕ್ಷ್ಮೀ ಎಂಬ ಕಲ್ಪವಲ್ಲಿಯನ್ನು ಹುಟ್ಟುಹಾಕಿದವನು"[೧೧೫] ಎಂದು ಶಾಸನವು ಸ್ತುತಿಸುತ್ತವೆ. ಈ ಪರಂಪರೆಯಲ್ಲಿ ಬಂದ ಇನ್ನೊಬ್ಬ ಪ್ರಬಲ ವ್ಯಕ್ತಿ ಎಂದರೆ ಎರಡನೇ ವಾಮಶಕ್ತಿ ಪಂಡಿತ. ಈತನನ್ನು ವ್ಯಾಕರಣದಲ್ಲಿ ಸಾಕ್ಷಾತ್ ಪಾಣಿನಿ ಎಂದೂ, ದರ್ಶನದಲ್ಲಿ ಸಾಕ್ಷಾತ್ ಭೂಷರ್ಣಾಚಾರ್ಯನೆಂದೂ, ನಾಟಕ ಶಾಸ್ತ್ರದಲ್ಲಿ ಸಾಕ್ಷಾತ್ ಭರತನೆಂದೂ, ಕಾವ್ಯರಚನೆಯಲ್ಲಿ ಸುಬಂಧುವೆಂದೂ, ಶೈವ ಸಿದ್ಧಾಂತದಲ್ಲಿ ಸ್ವತಃ ಲಕುಲೀಶನೆಂದೂ ಸ್ತುತಿಸಲಾಗಿದೆ.[೧೧೬] ಇವನು ೪೦ ವರ್ಷಗಳ ಕಾಲ ಅಧಿಪತಿಯಾಗಿದ್ದನು. ಇವನ ನಂತರ ಶ್ರೀಕಂಠದೇವರು ಹಾಗೂ ೩ ನೇ ವಾಮಶಕ್ತಿ ಪಂಡಿತರು ಅಧಿಪತಿಗಳಾಗಿದ್ದಂತೆ ಕಾಣುತ್ತದೆ.

ಕೇದಾರೇಶ್ವರ ಮಠದ ಗುರುಗಳೆಲ್ಲರೂ ಬಹುದೊಡ್ಡ ವಿದ್ವಾಂಸರಾಗಿ ಇದ್ದುದರಿಂದ ಮಠವು ಅತ್ಯಂತ ಪ್ರಸಿದ್ಧವಾದ ವಿದ್ಯಾಕೇಂದ್ರವಾಗಿ ಪರಿಣಮಿಸಿದ್ದು ಆಶ್ಚರವೇನಲ್ಲ. ಇದು 'ಭವಾನೀ ಭವನದಂತೆ ಬ್ರಹ್ಮಚಾರಿ ಸದಾಚಾರ ಸಂಭಾವಿತಮುಂ ಕುರುಕ್ಷೇತ್ರದಂತೆ ಸರಸ್ವತೀ ವಿಳಸಿತಮುಂ ಖಚರ ಲೋಕದಂತೆ ವಿದ್ಯಾಧರಾಧೀಶ್ವರ ಪರಿವೃತ'ವೂ ಆಗಿತ್ತು. ಅಲ್ಲಿಯ ಗುರುಗಳ ಪಾಂಡಿತ್ಯ ಮತ್ತು ಪಾಠಕ್ರಮಗಳು ನಾನಾ ಭಾಗಗಳಿಂದ ವಿದ್ಯಾರ್ಥಿಗಳನ್ನು ಸೆಳೆದವು. ಋಗ್ವೇದ, ಯಜುರ್ವೇದ ಮುಂತಾದ ವೇದಗಳ, ಕೌಮಾರ ಪಾಣಿನೀಯ ಮುಂತಾದ ವ್ಯಾಕರಣಗಳ, ಷಡ್ದರ್ಶನಗಳ, ಲಾಕುಳ ಸಿದ್ಧಾಂತ, ಪಾತಂಜಳ ಯೋಗಶಾಸ್ತ್ರ ಮುಂತಾದ ಶಾಸ್ತ್ರಗಳ ಮತ್ತು ಪುರಾಣ, ಕಾವ್ಯ, ನಾಟಕಗಳ ಅಧ್ಯಯನ ನಡೆಯುತ್ತಿತ್ತು. ಜೊತೆಗೆ ದೇಶದ ಎಲ್ಲೆಡೆಗಳಿಂದ ಬಂದ ಸನ್ಯಾಸಿಗಳ, ಭಿಕ್ಷುಕರ, ರೋಗಿಗಳ, ಕಲಾವಿದರ ಆಶ್ರಯ ಸ್ಥಾನವಾಗಿತ್ತು[೧೧೭] ಎಂದು ಶಾಸನ ವಿವರಿಸುತ್ತದೆ. ನೈಯಾಯಿಕಾಗ್ರೇಸರರ ಮುಖ್ಯ ನೆಲೆಯಾಗಿದ್ದ ಕೇದಾರೇಶ್ವರ ದೇವಾಲಯವು ತ್ರಿಕೂಟ ಮಾದರಿಯಲ್ಲೇ ಇದೆ. ಮತ್ತು ಗರ್ಭಗೃಹಗಳಲ್ಲಿಯ ಶಿಲ್ಪಗಳು ಶಿವನ ಅನಿತ್ಯರೂಪಗಳನ್ನು ಸೂಚಿಸುತ್ತವೆ. ಇದೇ ಮಾದರಿಯಲ್ಲಿರುವ ಹದಿನಾರು ತ್ರಿಕೂಟ ದೇವಾಲಯಗಳನ್ನು ಹಾವೇರಿ ಜಿಲ್ಲೆಯಲ್ಲಿ ಕಾಣಬಹುದು.

ತ್ರಿಪುರಾಂತಕೇಶ್ವರ ದೇವಾಲಯ : ಈ ಮೊದಲೇ ಹೇಳಿದಂತೆ ಬಳ್ಳಿಗಾವೆಯಲ್ಲಿ ಪಂಚಮಠಗಳು ಇದ್ದುವೆಂದು ಶಾಸನ ಸೂಚಿಸುತ್ತದೆ. ಅವುಗಳಲ್ಲಿ ತ್ರಿಪುರಾಂತಕ ಮಠವೂ ಒಂದು. ಇದು ಬಹುಶಃ ತ್ರಿಪುರಾಂತಕೇಶ್ವರ ದೇವಾಲಯಕ್ಕೆ ಹೊಂದಿಕೊಂಡ ಮಠವಾಗಿರಬಹುದು. ಶಾಸನಾಧಾರದಿಂದ ತ್ರಿಪುರಾಂತಕ ಮಠವು ಕ್ರಿ.ಶ.೧೦೫೪ಕ್ಕೂ ಮುಂಚೆ ಇತ್ತು ಎಂದು ಸ್ಪಷ್ಟವಾಗುತ್ತದೆ.[೧೧೮] ತ್ರಿಪುರಾಂತಕ ಮಠವನ್ನು ಉಲ್ಲೇಖಿಸುವ ಆರು ಶಾಸನಗಳು ಲಭ್ಯವಾಗಿವೆ. ಇಲ್ಲಿಯ ಆಚಾರ್ಯರಾಗಿ ಜ್ಞಾನಶಕ್ತಿ(೧೦೫೪),[೧೧೯] ತ್ರಿಲೋಚನಾ ಪಂಡಿತದೇವ(೧೦೭೦),[೧೨೦] ಚತುರಾನನ ಪಂಡಿತದೇವ (೧೦೯೮),[೧೨೧] ಕ್ರಿಯಾಶಕ್ತಿ ಪಂಡಿತದೇವ(೧೧೧೩),[೧೨೨] ಜ್ಞಾನಶಕ್ತಿ (ಕ್ರಿ.ಶ.೧೧೫೮),[೧೨೩] ಎಂದು ಉಲ್ಲೆಖಗೊಂಡಿದ್ದಾರೆ. ಈ ಮುನಿ ಪರಂಪರೆಯ ಸಂಸ್ಥಾಪಕನು ಕಾಶ್ಮೀರದೇವನಾಗಿದ್ದು, ಇವನು ಕಾಳಾಮುಖ ಸಮಯ ಅನುಯಾಯಿಯೂ, ಶಕ್ತಿಪರ್ಷೆಯ ಭುಜಂಗಾವಳಿಗೆ ಸೇರಿದವನು ಎಂದು ಲೊರೆಂಜನ್ ಅವರು ಸೂಚಿಸುತ್ತಾರೆ.[೧೨೪] ಇಲ್ಲಿಯದೇ ಒಂದು ಶಾಸನದಲ್ಲಿ[೧೨೫] ಬಳ್ಳಿಗಾವೆಯ ಹರಿಹರಾದಿತ್ಯ ದೇವಾಲಯಕ್ಕೆ ಜೋಡಿಸಲಾಗಿದ್ದ ಮಠಕ್ಕೆ ಅದ್ವೈತ ಧರ್ಮದ ಜ್ಞಾನನಿಧಿಯಾಗಿದ್ದ

ಗುಣವುಳ್ಳ ಯೋಗಿಯು ಅಧಿಪತಿಯಾಗಿದ್ದನೆಂಬ ಉಲ್ಲೇಖವಿದೆ. ಈ ಹರಿಹರಾದಿತ್ಯ ದೇವಾಲಯವು ತ್ರಿಪುರಾಂತಕೇಶ್ವರ ದೇವಾಲಯ ಆಗಿರಬಹುದು. ಈ ದೇವಾಲಯ ವಾಸ್ತುಶಿಲ್ಪವು ತ್ರಿಕೂಟ ಮಾದರಿಯಲ್ಲಿದ್ದು ತ್ರೈಪುರುಷರಿಗಾಗಿ (ಶಿವ, ವಿಷ್ಣು, ಸೂರ್ಯ) ನಿರ್ಮಿಸಿದ ದೇವಾಲಯವಾಗಿದೆ. ದಕ್ಷಿಣ ದಿಕ್ಕಿನಲ್ಲಿ ಪ್ರವೇಶ ದ್ವಾರ ವಿದ್ದು, ದೇವಾಲಯದ ಆವರಣದಲ್ಲಿ, ದೇವಾಲಯದ ದಕ್ಷಿಣಕ್ಕೆ, ಉತ್ತರಾಭಿಮುಖವಾದ ಸರಸ್ವತಿ ಮಂಟಪದ ರಚನೆ ಇದೆ. ಈ ತ್ರಿಪುರಾಂತಕೇಶ್ವರ ತ್ರಿಕೂಟ ದೇವಾಲಯದ ಮಾದರಿಯಲ್ಲಿಯೇ, ಹಾವೇರಿ ಜಿಲ್ಲೆಯಲ್ಲಿ ಎಂಟು ತ್ರೈಪುರುಷ ದೇವಾಲಯಗಳನ್ನು, ಸರಸ್ವತಿ ಮಂಟಪಗಳನ್ನು ಕಾಣುತ್ತೇವೆ.

ಹಾವೇರಿ ಜಿಲ್ಲೆಯಲ್ಲಿ ಗುರುತಿಸಿದ ಮೂವತ್ತೊಂದು ತ್ರಿಕೂಟ ದೇವಾಲಯಗಳನ್ನು ಅಧ್ಯಯನಕ್ಕೆ ಒಳಪಡಿಸಿದಾಗ ಹಾವೇರಿ ತಾಲೂಕಿನ ನರಸಿಂಹಪುರದ(ಹಾಳೂರು) ನರಸಿಂಹ ದೇವಾಲಯವು ವೈಷ್ಣವ ಪಂಥದ ದೇವಾಲಯವಾಗಿದ್ದು ವಿಜಯನಗರ ಕಾಲಕ್ಕೆ (ಕ್ರಿ.ಶ.ಸು.೧೫-೧೬ನೇ ಶತಮಾನ) ಸೇರಿದುದಾಗಿದೆ. ಕಾಲಮಾನದ ದೃಷ್ಟಿಯಿಂದಲೂ ಮತ್ತು ಪಂಥದ ದೃಷ್ಟಿಯಿಂದಲೂ ಉಳಿದ ಮೂವತ್ತು ದೇವಾಲಯಗಳಿಂದ ಇದು ಭಿನ್ನವಾಗಿದೆ. ಈ ಕಾರಣದಿಂದ ನರಸಿಂಹ ದೇವಾಲಯವನ್ನು ಪ್ರತ್ಯೇಕವಾಗಿ ವಿವರಿಸಲಾಗಿದೆ. ಉಳಿದ ೩೦ ದೇವಾಲಯಗಳು ಶೈವಧರ್ಮಕ್ಕೆ ಸೇರಿದ ಕ್ರಿ.ಶ.೧೦-೧೩ನೇ ಶತಮಾನದ ಕಾಲಮಿತಿಯಲ್ಲಿಯ ಕಾಳಾಮುಖ ಶೈವಯತಿಗಳ ಮೇಲ್ವಿಚಾರಣೆಯಲ್ಲಿದ್ದ ದೇವಾಲಯಗಳು ಎಂದು ಶಾಸನಾಧಾರಗಳಿಂದ ಸ್ಪಷ್ಟವಾಗಿ ತಿಳಿದು ಬರುತ್ತದೆ. ಜೊತೆಗೆ ಈ ಎಲ್ಲ ತ್ರಿಕೂಟ ರಚನೆಗಳು ಒಂದೇ ಮಾದರಿಯಲ್ಲಿ ನಿರ್ಮಾಣಗೊಂಡಿಲ್ಲವೆಂದೂ ದೇವಾಲಯ ನಿರ್ಮಾಣದ ಹಿಂದಿನ ಉದ್ದೇಶವೂ ಸಹ ಒಂದೇ ಆಗಿಲ್ಲ ಎಂಬ ಕುತೂಹಲ ಹುಟ್ಟಿಸುವ ವಿಷಯವೂ ಕಂಡುಬರುತ್ತದೆ. ಆದ್ದರಿಂದ ಜಿಲ್ಲೆಯ ಮೂವತ್ತು ದೇವಾಲಯಗಳನ್ನು ಒಂದೇ ಶೀರ್ಷಿಕೆಯಲ್ಲಿ ಅವಲೋಕಿಸುವುದರ ಬದಲು, ವಾಸ್ತು ಮತ್ತು ಉದ್ದೇಶಗಳ ಮೇಲಿಂದ ಮೂರು ಭಾಗಗಳನ್ನು ಮಾಡಿ ನೋಡಿದರೆ ಹೆಚ್ಚು ಸಮಂಜಸ ಎಂದು ತೋರುತ್ತದೆ. ಹೀಗಾಗಿ ಒಟ್ಟು ತ್ರಿಕೂಟ ದೇವಾಲಯಗಳನ್ನು ಈ ಕೆಳಗಿನಂತೆ ವಿಂಗಡಿಸಲಾಗಿದೆ.

೧. ವ್ಯಕ್ತಿನಾಮ/ಪರೋಕ್ಷವಿನಯ ದೇವಾಲಯಗಳು

೨. ತ್ರೈಪುರುಷ ದೇವಾಲಯಗಳು

೩. ನ್ಯಾಯದರ್ಶನ ದೇವಾಲಯಗಳು

೧. ವ್ಯಕ್ತಿನಾಮ/ಪರೋಕ್ಷ ವಿನಯ ದೇವಾಲಯಗಳು : ಈ ಗುಂಪಿಗೆ ಸೇರಿದ ದೇವಾಲಯಗಳು ವ್ಯಕ್ತಿಯ ಹೆಸರಿನಲ್ಲಿ ಲಿಂಗಗಳನ್ನು ಇರಿಸುವುದಕ್ಕಾಗಿ ನಿರ್ಮಾಣಗೊಂಡಿವೆ. ಈ ದೇವಾಲಯಗಳ ವಾಸ್ತುಶಿಲ್ಪವನ್ನು ಗಮನಿಸಿದರೆ, ಪಶ್ಚಿಮ, ಉತ್ತರ ಮತ್ತು ದಕ್ಷಿಣ ದಿಕ್ಕುಗಳಲ್ಲಿ ಮೂರು ಗರ್ಭಗೃಹಗಳನ್ನು ಕಾಣುತ್ತೇವೆ. ಮೂರೂ ಗರ್ಭಗೃಹಗಳು ಅರ್ಧಮಂಟಪಗಳನ್ನು ಹೊಂದಿವೆ. ಮಧ್ಯದಲ್ಲಿ ಒಂದು ನವರಂಗವಿದ್ದು ಪೂರ್ವ ದಿಕ್ಕಿನಲ್ಲಿ ಪ್ರವೇಶದ್ವಾರವನ್ನು ಒಳಗೊಂಡಿವೆ. ನವರಂಗದ ಪೂರ್ವದಿಕ್ಕಿನಲ್ಲಿ ಹೆಚ್ಚಿನ ವಾಸ್ತುರಚನೆಗಳಾದ ಮುಖಚತುಷ್ಕಿ ಮುಖಮಂಟಪಗಳಂತಹ ರಚನೆಗಳನ್ನು ಹೊಂದಿರುವುದು ಈ ದೇವಾಲಯಗಳ ವಿಶೇಷತೆ. ಇಲ್ಲಿಯ ಮೂರೂ ಗರ್ಭಗೃಹಗಳಲ್ಲಿ ಲಿಂಗಗಳನ್ನು ಕಾಣುತ್ತೇವೆ.

ನಕ್ಷೆ



**ತ್ರೈಪುರುಷ ದೇವಾಲಯಗಳು :** ಈ ಗುಂಪಿಗೆ ಸೇರಿದ ತ್ರಿಕೂಟ ದೇವಾಲಯಗಳು ತ್ರೈಪುರುಷರಾದ ಬ್ರಹ್ಮ(ಸೂರ್ಯ), ವಿಷ್ಣು, ಮಹೇಶ್ವರರಿಗಾಗಿ ನಿರ್ಮಾಣಗೊಂಡಿವೆ. ತ್ರೈಪುರುಷ ದೇವಾಲಯಗಳ ವಾಸ್ತು-ಶಿಲ್ಪವು ವ್ಯಕ್ತಿನಾಮ (ಪರೋಕ್ಷವಿನಯ) ದೇವಾಲಯ ವಾಸ್ತು-ಶಿಲ್ಪದಿಂದ ಭಿನ್ನವಾಗಿ ರೂಪಗೊಂಡಿದೆ. ಇಲ್ಲಿ ಪೂರ್ವ, ಪಶ್ಚಿಮ ಮತ್ತು ಉತ್ತರ ದಿಕ್ಕುಗಳಲ್ಲಿ ಗರ್ಭಗೃಹಗಳನ್ನುಕಾಣುತ್ತೇವೆ. ಮೂರೂ ಗರ್ಭಗೃಹಗಳು ಅರ್ಧಮಂಟಪವನ್ನು ಹೊಂದಿವೆ. ಮಧ್ಯದ ನವರಂಗವು ದಕ್ಷಿಣದಿಕ್ಕಿನಲ್ಲಿ ಪ್ರವೇಶ ದ್ವಾರವನ್ನು ಒಳಗೊಂಡಿದೆ. ದೇವಾಲಯಕ್ಕೆ ಹೊಂದಿದಂತೆ ಹೆಚ್ಚಿನ ವಾಸ್ತು ರಚನೆಗಳು ಇಲ್ಲಿ ಕಂಡುಬರುವುದಿಲ್ಲ. ಮೂರೂ ಗರ್ಭಗೃಹಗಳಲ್ಲಿ ಕ್ರಮವಾಗಿ ಸೂರ್ಯ, ಲಿಂಗ ಮತ್ತು ವಿಷ್ಣು ಶಿಲ್ಪಗಳನ್ನು ಇರಿಸಲಾಗಿದೆ.

ನಕ್ಷೆ



**ನ್ಯಾಯದರ್ಶನ/ತ್ರಿಮೂರ್ತಿ ದೇವಾಲಯಗಳು :** ಈ ಗುಂಪಿಗೆ ಸೇರಿದ ತ್ರಿಕೂಟ ದೇವಾಲಯಗಳು ಶಿವನ ಮೂರೂ ರೂಪಗಳಾದ ಬ್ರಹ್ಮ, ವಿಷ್ಣು, ಮಹೇಶ್ವರ ತ್ರಿಮೂರ್ತಿಗಳಿಗಾಗಿ ನಿರ್ಮಾಣಗೊಂಡಿವೆ. ಈ ದೇವಾಲಯಗಳ ವಾಸ್ತು-ಶಿಲ್ಪವು ಮೇಲೆ ಹೇಳಿದ ವ್ಯಕ್ತಿನಾಮ ಮತ್ತು ತ್ರೈಪುರುಷ ದೇವಾಲಯ ವಾಸ್ತುಶಿಲ್ಪದಿಂದ ಭಿನ್ನವಾಗಿದೆ. ಇಲ್ಲಿ ಪಶ್ಚಿಮ, ದಕ್ಷಿಣ ಮತ್ತು ಉತ್ತರ ದಿಕ್ಕುಗಳಲ್ಲಿ ಗರ್ಭಗೃಹಗಳಿದ್ದು ಮುಖ್ಯಗರ್ಭಗೃಹವಾದ ಪಶ್ಚಿಮದಿಕ್ಕಿನ ಗರ್ಭಗೃಹವು ಮಾತ್ರ ಅರ್ಧಮಂಟಪವನ್ನು ಹೊಂದಿದೆ. ಉಳಿದ ಗರ್ಭಗೃಹಗಳು ನೇರವಾಗಿ ಮಧ್ಯದಲ್ಲಿರುವ ನವರಂಗಕ್ಕೆ ಜೋಡಣೆಗೊಂಡಿವೆ. ನವರಂಗವು ಪೂರ್ವದಿಕ್ಕಿನಲ್ಲಿ ಪ್ರವೇಶದ್ವಾರವನ್ನು ಒಳಗೊಂಡಿದೆ. ದೇವಾಲಯಕ್ಕೆ ಹೊಂದಿಕೊಂಡಂತೆ ಹೆಚ್ಚಿನ ವಾಸ್ತು ರಚನೆಗಳು ಕಂಡುಬರುವುದಿಲ್ಲ. ಇಲ್ಲಿಯ

ಪಶ್ಚಿಮ ಮತ್ತು ದಕ್ಷಿಣ ಗರ್ಭಗೃಹಗಳಲ್ಲಿ ಲಿಂಗವನ್ನು, ಉತ್ತರ ದಿಕ್ಕಿನ ಗರ್ಭಗೃಹದಲ್ಲಿ ವಿಷ್ಣು ಶಿಲ್ಪವನ್ನು ಇರಿಸಲಾಗಿದೆ.



ಮೇಲಿನ ವರ್ಗೀಕರಣವು ಈ ಕೆಳಗಿನ ಪಟ್ಟಿ ೧ ರಿಂದ ಇನ್ನೂ ಸ್ಪಷ್ಟವಾಗುತ್ತದೆ.

ಪಟ್ಟಿ ೧

| ಅ. | ದೇವಾಲಯ ವರ್ಗೀಕರಣ | | ದೇವಾಲಯಗಳ | ಗರ್ಭಗೃಹಗಳಲ್ಲಿಯ |
|---|---|---|---|---|
| ನಂ. | ವಾಸ್ತು ಹಿನ್ನೆಲೆ | ಶಾಸನ ಹಿನ್ನೆಲೆ | ಸಂಖ್ಯೆ | ಶಿಲ್ಪಗಳು |
| ೧. | ಮೂರೂ ಗರ್ಭಗೃಹಗಳಿಗೆ ಅರ್ಧಮಂಟಪಗಳು, ಪೂರ್ವ ದಿಕ್ಕಿನಲ್ಲಿ ಪ್ರವೇಶದ್ವಾರ, ಹೆಚ್ಚಿನ ವಾಸ್ತುರಚನೆಗಳು | ವ್ಯಕ್ತಿನಾಮ/ಪರೋಕ್ಷವಿನಯ ದೇವಾಲಯಗಳು | ೬ | ಮೂರೂ ಲಿಂಗಗಳು |
| ೨. | ಮೂರೂ ಗರ್ಭಗೃಹಗಳಿಗೆ ಅರ್ಧಮಂಟಪಗಳು, ದಕ್ಷಿಣ ದಿಕ್ಕಿನಲ್ಲಿ ಪ್ರವೇಶದ್ವಾರ, ದೇವಾಲಯದ ಆವರಣದಲ್ಲಿ ಸರಸ್ವತಿ ಮಂದಿರ | ತ್ರೈಪುರುಷ ದೇವಾಲಯಗಳು | ೮ | ಲಿಂಗ, ವಿಷ್ಣು, ಸೂರ್ಯ |
| ೩. | ಮುಖ್ಯಗರ್ಭಗೃಹಕ್ಕೆ ಮಾತ್ರ ಅರ್ಧಮಂಟಪ ಪೂರ್ವ ದಿಕ್ಕಿನಲ್ಲಿ ಪ್ರವೇಶ ದ್ವಾರ, ಹೆಚ್ಚಿನ ವಾಸ್ತು ರಚನೆಗಳು ಇಲ್ಲ. | ನ್ಯಾಯದರ್ಶನ ತ್ರಿಮೂರ್ತಿ ದೇವಾಲಯಗಳು | ೧೬ | ಲಿಂಗ, ಲಿಂಗ, ವಿಷ್ಣು |

## I. ವ್ಯಕ್ತಿನಾಮ/ಪರೋಕ್ಷವಿನಯ ತ್ರಿಕೂಟ ದೇವಾಲಯಗಳು

ಈ ದೇವಾಲಯಗಳಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ ಇಲ್ಲಿಯ ಮೂರು ಗರ್ಭಗೃಹಗಳಲ್ಲಿರುವ ಮೂರು ಲಿಂಗಗಳು ವ್ಯಕ್ತಿನಾಮದ ಮೇಲೆಯೇ ಪ್ರತಿಷ್ಠೆಗೊಂಡ ಲಿಂಗಗಳಾಗಿರುವುದಿಲ್ಲ. ಪೂರ್ವಾಭಿಮುಖವಾದ ಮುಖ್ಯಗರ್ಭಗೃಹದ ಲಿಂಗವು ಪ್ರತಿರೂಪ ಲಿಂಗವಾಗಿದೆ. ಉತ್ತರ ಮತ್ತು ದಕ್ಷಿಣ ಗರ್ಭಗೃಹಗಳಲ್ಲಿ ವ್ಯಕ್ತಿನಾಮ ಲಿಂಗಗಳಿವೆ.

**ಪ್ರತಿರೂಪ ಲಿಂಗಗಳು :** ಸ್ಥಳೀಯ ದೇವತೆಗಳು ತುಂಬ ಪ್ರಸಿದ್ಧಿಗೆ ಬರುತ್ತಲೇ ಅವುಗಳ ಪ್ರತಿರೂಪಗಳು ಶಾಖೋಪಶಾಖೆಗಳಲ್ಲಿ ಅಸ್ತಿತ್ವಕ್ಕೆ ಬಂದವು. ಇವು ಪ್ರತಿರೂಪ ದೇವಾಲಯಗಳು.[೧೨೬] ಶ್ರೀಶೈಲ ಮಲ್ಲಿಕಾರ್ಜುನ ದೇವಾಲಯದ ಪ್ರತಿರೂಪದ ದೇವಾಲಯಗಳು, ಲಾಕುಳಶೈವ ಪರ್ವತಾವಳಿ ಆಚಾರ್ಯರ ನೇತ್ರತ್ವದಲ್ಲಿ ಮಲ್ಲಿಕಾರ್ಜುನ, ಅಭಿನವ ಮಲ್ಲಿಕಾರ್ಜುನ, ಕಪಿಲಸಿದ್ಧ ಮಲ್ಲಿಕಾರ್ಜುನೆಂದು ಕರ್ನಾಟಕದಲ್ಲಿ ನೂರಾರು ಹುಟ್ಟಿಕೊಂಡಿವೆ. ಸೌರಾಷ್ಟ್ರದ ಪ್ರಭಾಸ ಪಾಟಣದ ಸೋಮೇಶ್ವರ ಮೂಲದ ಅನೇಕ ಶಾಖೆಗಳು ಕರ್ನಾಟಕದಲ್ಲಿ ಹಬ್ಬಿವೆ.[೧೨೭] ಇವು 'ಮಹಾವೃತಿ' ಅಥವಾ 'ಸೋಮ' ಸಿದ್ಧಾಂತಗಳ ದೇವಸ್ಥಾನಗಳು. ಸಾಮಾನ್ಯವಾಗಿ ಈ ದೇವಾಲಯದಲ್ಲಿ ಲಿಂಗರೂಪದಲ್ಲಿ ಮತ್ತು ಉಮಾಸಹಿತ ಶಿವನ ವಿಗ್ರಹ ರೂಪದಲ್ಲಿ ಸೋಮೇಶ್ವರ ದೇವರನ್ನು ಕಾಣಲಾಗಿದೆ.[೧೨೮] ಉಮಾಸಹಿತ ಶಿವನ ವಿಗ್ರಹಗಳು ಗರ್ಭಗೃಹದಲ್ಲಿ ಇರುವುದು ಅಪರೂಪ. ಗದಗ ಜಿಲ್ಲೆಯ ಲಕ್ಷ್ಮೇಶ್ವರ ಮತ್ತು ಹಾವೇರಿ ತಾಲೂಕಿನ ಕಳ್ಳಿಹಾಳ ದೇವಾಲಯಗಳನ್ನು ಉದಾಹರಿಸಬಹುದು. ಸೌರಾಷ್ಟ್ರ ಸೋಮೇಶ್ವರನ ಪ್ರತಿರೂಪ ದೇವಾಲಯಗಳನ್ನು ಇಲ್ಲಿಯ ತ್ರಿಕೂಟಾಚಲದ ಮುಖ್ಯಗರ್ಭಗೃಹದಲ್ಲಿಯೂ ಗುರುತಿಸಬಹುದಾಗಿದೆ. ಈ ಪ್ರತಿರೂಪ ದೇವಾಲಯಗಳು ಸಹ ಮೂಲ ಕ್ಷೇತ್ರದಂತೆ ಪವಿತ್ರವೆಂದು ಪರಿಗಣಿಸಿ ಶಾಸನಗಳು ಈ ಕ್ಷೇತ್ರಗಳ ವರ್ಣನೆಯನ್ನು ಮಾಡಿವೆ. ತುಂಗಭದ್ರೆಯ ದಂಡೆಯ ಮೇಲೆ ಪ್ರತಿಷ್ಠೆಗೊಂಡ ಹರಳಹಳ್ಳಿ ಸ್ವಯಂಭೂ ಸೋಮನಾಥ ಕ್ಷೇತ್ರವು ಮುಕ್ತಿ ಕ್ಷೇತ್ರವೆಂದು ವರ್ಣನೆಗೊಂಡಿದೆ.[೧೨೯] ಶಾಸನವು ಮುಂದುವರಿದು 'ತುಂಗಭದ್ರಾ ನದಿಯೊಳೆ ಶಿವಗಂಗಾಭಿದ ನಸ್ಥಳಂ ಸನುತತೀರ್ತ್ಥಂ ರಂಜಿಕುಂ ಬ(ಂ)ಣಿಸುವುದದಱ ಪೆಂಪಂ ಪೊದಳ್ದಾಗಮಂಗಳು|| ಕುಡಿಯೆ ಜಳಮ .....ಗೊಟ್ಟಂಗಡಿಯೆನೆ ಪಾಪಾಪಹಾರಮಂ ಮಾಳ್ಕುಮೆನಲ್ಪಡಿಯುಂಟೆ ಪೇಳ್ಗೊಟ್ಟಂಡಗಿವೆಸರಿಂ ತಡಿಯೊಳಿಪ್ಪುದಲ್ತೆಗ್ರಾಮಂ|| ಅಂಗಜಹರಂ ಷ್ವ(ಸ್ವ)ಯಂ ಭೂಲಿಂಗಾಕಾರದೊಳೆ ನೆಲಸಿದಂ ಪೂಜಿಸು ವರ್ಪ್ಪಿಂಗಿರದಿರುಳುಂ ಪಗಲುಮದೇಂ ಗ(ಡದೇ)ವರ್ಮ್ಮ ನುಷ್ಯರಿನ್ನಿದನರುಯ||' ಪಾಪಾಪಹಾರಿಯಾದ ತುಂಗಭದ್ರೆಯ ದಂಡೆಯ ಮೇಲಿನ ಸ್ವಯಂಭೂ ಲಿಂಗವನ್ನು ಪೂಜಿಸುವವರಿಗೆ ಕತ್ತಲೆ ಎಂಬುದು ಇರದು ಎಂದು ವರ್ಣಿಸಿದೆ.

ರಟ್ಟಿಹಳ್ಳಿಯ ತ್ರಿಕೂಟ ದೇವಾಲಯವು ಮುಖ್ಯ ಗರ್ಭಗೃಹದಲ್ಲಿ ಕಡಂಬೇಶ್ವರ ಲಿಂಗವನ್ನು ಹೊಂದಿದೆ. ಇದು ವ್ಯಕ್ತಿನಾಮದ ಲಿಂಗವಾಗಿರದೆ ಕುಲನಾಮ ಲಿಂಗವಾಗಿದೆ. ಶಾತವಾಹನರ ನಂತರ ಬನವಾಸಿಯನ್ನು ಕೇಂದ್ರವಾಗಿಟ್ಟುಕೊಂಡು ಆಳ್ವಿಕೆ ನಡೆಸಿದ ಆದಿಕದಂಬರ ಒಂದು ಶಾಖೆ ಎಂದು ಗುರುತಿಸಿ ಕೊಂಡ ನೂರುಂಬಾಡದ ಕಡಂಬರ ಕುಲದೈವ ಇದಾಗಿದೆ. ಈ ಕಡಂಬೇಶ್ವರನನ್ನು ಅಲ್ಲಿಯ ಶಾಸನಗಳು[೧೩೦] "ಕಡಂಬರಾಜ್ಯ ಲಕ್ಷ್ಮೀ ಭವನಕ್ಕಧಿಷ್ಠಾನವಾಗಿರ್ದ ಕಡಂಬೇಶ್ವರ ದೇವರ....." ಎಂದು ವರ್ಣಿಸಿವೆ.

**ವ್ಯಕ್ತಿನಾಮ/ಪರೋಕ್ಷವಿನಯ ಲಿಂಗಗಳು :** ವ್ಯಕ್ತಿನಾಮ ಲಿಂಗಗಳನ್ನು ಪ್ರತಿಷ್ಠಾಪಿಸುವ ಪದ್ಧತಿಯು ಬಹು ಪ್ರಾಚೀನವಾದುದು.[೧೩೧] ಬಾದಾಮಿ ಚಾಲುಕ್ಯರ ಕಾಲದಲ್ಲಿ ವಿಜಯಾದಿತ್ಯ ಸತ್ಯಾಶ್ರಯನು ಪ್ರತಿಷ್ಠಾಪಿಸಿದ ದೇವರು ವಿಜಯಾದಿತ್ಯಭಟ್ಟಾರಕ.[೧೩೨] ಲೋಕಮಹಾದೇವಿಯು ಕಟ್ಟಿಸಿದ ದೇವಸ್ಥಾನ ಲೋಕೇಶ್ವರ ಭಟ್ಟಾರಕ ದೇವಸ್ಥಾನ[೧೩೩] ಎಂಬುದನ್ನು ಇಲ್ಲಿ ನೆನೆಯಬಹುದು. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಇಂಥ ದೇವಾಲಯ ಗಳನ್ನು ಸಾಕಷ್ಟು ನೋಡುತ್ತೇವೆ. ಹಾವೇರಿ ಜಿಲ್ಲೆ ಹಾಗೂ ಅದರ ದಕ್ಷಿಣ ದಿಕ್ಕಿನಲ್ಲಿರುವ ಬಳ್ಳಿಗಾವೆಯ

ಪ್ರದೇಶದಲ್ಲಿ, ದೇವಾಲಯ ಸಂಸ್ಕೃತಿಯನ್ನು ಮುಖ್ಯವಾಗಿಸಿಕೊಂಡು, ಶೈವ ಮತಾವಲಂಬಿಗಳಾಗಿದ್ದ ಕಾಳಾಮುಖ ಯತಿಗಳು, ದೇವಾಲಯಗಳು ದೊಡ್ಡ ಸಂಖ್ಯೆಯಲ್ಲಿ ಬೆಳೆಯಲು ವ್ಯಕ್ತಿನಾಮಲಿಂಗಗಳ ಪ್ರತಿಷ್ಠೆಗೆ ಧರ್ಮಸಮ್ಮತವಾದ ಒಪ್ಪಿಗೆ ಕೊಟ್ಟರು. ಜೊತೆಗೆ "ತನ್ನ ಹೆಸರಿನಲ್ಲಿ ಶಿವಲಿಂಗವನ್ನು ಸ್ಥಾಪಿಸಿದ ವ್ಯಕ್ತಿ ದೇವರೇ ಆಗುತ್ತಾನೆ" ಎಂಬ ಭಾವನೆಯನ್ನು ಜನರಲ್ಲಿ ಬಿತ್ತಿದರು. ಇದಕ್ಕೆ ಉತ್ತಮ ಉದಾಹರಣೆ ಎಂದರೆ ಶಿರಸಂಗಿ ಶಾಸನವು[೧೩೪] "ಎಲ್ಲಾ ಸಂಪತ್ತುಗಳ್ಗ(ಳ್ಗೆ) ಪುಣ್ಯಮೆ ಮೊದಲಾ ಪುಣ್ಯಕ್ಕೆಲ್ಲವೀಶ್ವರ ಪ್ರತಿಷ್ಠೆಯೆ ಮೊತ್ತಮೊದಲೆಂತೆನಲಾ ಪುಣ್ಯದ ಬಳಿವಿಡಿದೆಲ್ಲಾ ಪುಣ್ಯಂಗಳುಂ ದೊರಕೊಳ್ಗುಂ ಮತ್ತವೆಲ್ಲಾ ಪ್ರತಿಮೆಗಳಂ ಪ್ರತಿಷ್ಠೆ ಮಾಡಿದೊಡವಾ ದೇವರ್ಕಳ ಪೆಸರೆಯಕ್ಕುಮೀಶ್ವರ ಪ್ರತಿಷ್ಠೆಯಂ ಮಾಡಿದ ವನೀಶ್ವರನೆಯಕ್ಕು ವೆಂಬುದನಾ ದೇವರ ಪೆಸರಾತನ ಪೆಸರಕ್ಕುವೆಂದರಿದು...."

ಹೀಗೆ ಈಶ್ವರನ ಜೊತೆ ಸೇರಿಕೊಂಡ ವ್ಯಕ್ತಿಯು ದೇವರಾಗುತ್ತಾನೆ. ಮದ್ಯಕಾಲೀನ ಶೈವ ಸಂಪ್ರದಾಯದ ಗಟ್ಟಿಬೇರುಗಳ ಬಗ್ಗೆ ಚರ್ಚಿಸುತ್ತ ರಾಜಾರಾಮ ಹೆಗಡೆ ಅವರು "....ಶಿವಲಿಂಗವು ಅಮೂರ್ತ ರೂಪವನ್ನು ಹೊಂದಿರುವುದು ಕೂಡ ಶೈವ ಸಂಪ್ರದಾಯಗಳ ಸ್ಥಿತಿಸ್ಥಾಪಕ ಶಕ್ತಿಯನ್ನು ವರ್ಧಿಸಿತು. ಅಂದರೆ ದೇವರ ಹೆಸರನ್ನು ಎಷ್ಟೇ ಅಶಾಸ್ತ್ರೀಯ ಮೂಲದಿಂದಾದರೂ ತೆಗೆದುಕೊಳ್ಳಬಹುದು. ಆ ಹೆಸರಿಗೆ ಒಂದು ಮೂರ್ತ ವಿವರ ಬೇಕಿಲ್ಲ....."[೧೩೫] ಎನ್ನುತ್ತಾರೆ.

ಇದರಿಂದ ಸಾಮಾನ್ಯರ ದೃಷ್ಟಿಯಲ್ಲಿ ಎಲ್ಲೋ ಒಂದೆಡೆ ಇದ್ದ ದೇವರು ಈಗ ಅವರ ಕೈಗೆ ಎಟಕುವಂತಾದ. ತಾವು ಗಳಿಸಿದ ಸಂಪತ್ತು ಸದ್ವಿನಿಯೋಗವಾಗಬೇಕು, ಪುಣ್ಯಪ್ರಾಪ್ತಿಯಾಗಬೇಕು, ಜೊತೆಗೆ ತಮ್ಮ ಹೆಸರಿನಲ್ಲಿ ಲಿಂಗವನ್ನು ಪ್ರತಿಷ್ಠಾಪಿಸಿ ತಾವೂ ಶಿವನೇ ಆಗಿಬಿಡಬೇಕು ಎಂಬ ಸದುದ್ದೇಶದಿಂದ, ಅರಸರು, ಧನಿಕರು, ಆಡಳಿತವರ್ಗದವರು, ಶ್ರೀಸಾಮಾನ್ಯರು, ಹೆಂಗಸರು, ಗಂಡಸರು, ತಮ್ಮತಮ್ಮ ಆರ್ಥಿಕ ಸ್ಥಿತಿಗೆ ಅನುಗುಣ ವಾಗಿ ದೇವಾಲಯಗಳನ್ನು ನಿರ್ಮಿಸಿದರು. ಇದು ಮಧ್ಯಯುಗೀನ ಕಾಲದಲ್ಲಿ ಬಹುಸಂಖ್ಯೆಯಲ್ಲಿ ದೇವಾಲಯ ನಿರ್ಮಾಣಕ್ಕೆ ಪ್ರಮುಖ ಕಾರಣವಾಯಿತು.

ಇಲ್ಲಿ ಅಧ್ಯಯನಕ್ಕೆ ಒಳಪಡಿಸಿದ ತ್ರಿಕೂಟ ದೇವಾಲಯಗಳಲ್ಲಿ ಸ್ಥಾಪಿತಗೊಂಡ ವ್ಯಕ್ತಿನಾಮಲಿಂಗಗಳು, ಸ್ಥಾಪನೆಗೆ ಕಾರಣನಾದ ವ್ಯಕ್ತಿಯ ಹೆಸರಿನಲ್ಲಿ ಇರದೆ ಬೇರೆಯವರ ಹೆಸರಲ್ಲಿ ಸ್ಥಾಪಿತಗೊಂಡಿವೆ. ಅಂದರೆ 'ಪರೋಕ್ಷವಿನಯ'ಕ್ಕಾಗಿ ರೂಪಗೊಂಡ ದೇವಾಲಯಗಳು ಎಂದು ಹೇಳಬಹುದು. 'ಪರೋಕ್ಷವಿನಯ' ಎಂಬ ಪದ ಸಮುಚ್ಚಯಕ್ಕೆ ಯಾವ ಅರ್ಥಕೋಶದಲ್ಲೂ ಅರ್ಥ ದೊರೆತಿಲ್ಲ. 'ಪರೋಕ್ಷ' ಮತ್ತು 'ವಿನಯ' ಪದಗಳಿಗೆ ಅರ್ಥವಿದೆ. 'ಪರೋಕ್ಷ'ದ ಸ್ಥೂಲಾರ್ಥ 'ಕಣ್ಣಿಗೆ ಕಾಣದಿರುವುದು' invisible ಎಂದೂ, 'ವಿನಯ'ಕ್ಕೆ leading, leading away, guidance, discipline, good behaviour, decorum, reverence, obeisance, courtesy, ನಮ್ರತೆ, ಸೌಜನ್ಯ, ಮಾರ್ಗದರ್ಶನ- ಇತ್ಯಾದಿ ಅರ್ಥಗಳು ದೊರೆಯುತ್ತವೆ. ಒಟ್ಟು 'ಪರೋಕ್ಷ ವಿನಯ'ಕ್ಕೆ ಕಣ್ಣಿಗೆ ಕಾಣದಿರುವ ವಸ್ತು ಅಥವಾ ವ್ಯಕ್ತಿಗೆ ಸಲ್ಲುವ ಸೌಜನ್ಯ ಅಥವಾ ನಮ್ರತೆಯ ಕೃತಜ್ಞತೆ ಎಂದು ಅರ್ಥೈಸಬಹುದು.[೧೩೬]

ಆರ್.ಶೇಷಶಾಸ್ತ್ರಿ ಅವರು ಈ ಪದಪ್ರಯೋಗದ ಓನ್ನೆಲೆಯ ಬಗ್ಗೆ ಅಭ್ಯಸಿಸಿ 'ಪರೋಕ್ಷವಿನಯ' ಎಂದರೆ ವ್ಯಕ್ತಿಯೊಬ್ಬನು ಯಾವುದೇ ಕಾರಣಕ್ಕಾಗಿ ಮಡಿದಿರಲಿ, ಅವನು ತಮ್ಮ ಎದುರಿಗಿಲ್ಲವೆಂದು ಅಲಕ್ಷ್ಯದಿಂದ ಕಾಣದೆ, ಆತನ ಪರೋಕ್ಷದಲ್ಲಿ ಆತನ ಮರಣೋತ್ತರ ಜೀವನದ ಶ್ರೇಯಸ್ಸಿಗೆ, ಆತನಿಂದ ಉಪಕೃತರಾದವರು ಮಾಡುವ ಕೃತಜ್ಞತಾಪೂರ್ವಕ ಕ್ರಿಯೆಗಳು ಎಂಬುದಾಗಿ ಅರ್ಥಮಾಡಬಹುದೆಂದು ತೋರುತ್ತದೆ ಎನ್ನುತ್ತಾರೆ.[೧೩೭] 'ವ್ಯಕ್ತಿಯ ಸಾವಿನ ನಂತರ ಅವನಿಗೆ ಸದ್ಗತಿ ದೊರೆಯಲೆಂಬ ಉದ್ದೇಶದಿಂದ ಮಾಡುವ ದಾನ 'ಪರೋಕ್ಷ ವಿನಯದಾನ' ಎಂದು ಎಂ.ಚಿದಾನಂದಮೂರ್ತಿಯವರು ಸೂಚಿಸುತ್ತಾರೆ.[೧೩೮] ಇವರ ಈ ಅಭಿಪ್ರಾಯಗಳು ವ್ಯಕ್ತಿಯ ಸಾವಿನ ನಂತರದ ಬದುಕನ್ನು ಕುರಿತ ಹಾಗಿವೆ, 'ಪರೋಕ್ಷ ವಿನಯವು ಸಾವಿನ ನಂತರದ ಬದುಕಿನ ಜೊತೆಗೆ ಸಾವಿನ ಮೊದಲಿನ ಬದುಕಿಗೂ ವ್ಯಕ್ತಿಯ ಪರೋಕ್ಷದಲ್ಲಿ ಸಲ್ಲಿಸುವ ವಿನಯ ಎಂದು ತಿಳಿಯುವುದು ಸೂಕ್ತ' ಎಂಬ ಅಭಿಪ್ರಾಯವೂ ಇದೆ.[೧೩೯] ಅದು ಏನೇ ಇದ್ದರೂ ಸತ್ತ ಒಳ್ಳೆಯ ವ್ಯಕ್ತಿಯ ಪರೋಕ್ಷದಲ್ಲಿ ಅವನ ಮರಣಪೂರ್ವ ಬದುಕಿನ ಹೆಸರು ಚಿರಕಾಲ ಉಳಿಯಲಿ, ಯಶಸ್ಸು, ಶ್ರೇಯಸ್ಸು ಅಮರವಾಗಲಿ, ಮರಣೋತ್ತರದಲ್ಲಿ ಅವನಿಗೆ ಸದ್ಗತಿ ದೊರೆಯುವುದರ ಜೊತೆಗೆ ಅವನ ಹೆಸರು ಬದುಕಿದ್ದ ಸಮಯದಲ್ಲಿ ಪ್ರಖ್ಯಾತವಾಗಿದ್ದಂತೆ ಅನಂತರವೂ ಇರಲಿ, ಎಂಬ ಸದುದ್ದೇಶವು ಈ ಪರೋಕ್ಷವಿನಯ ಕ್ರಿಯೆಯಲ್ಲಿ ಇದೆ. ಹರಳಹಳ್ಳಿ ಸ್ವಯಂಭು ಸೋಮನಾಥ ದೇವಾಲಯ ನಿರ್ಮಾಣಕ್ಕೆ ಕಾರಣನಾದವನು ಗುತ್ತವಂಶದ ಜೋಯಿದೇವ. ಆದರೆ ಪ್ರತಿಷ್ಠಾಪನೆಗೊಂಡ ಲಿಂಗಗಳು 'ಗುತ್ತೇಶ್ವರ' ಮತ್ತು 'ವಿಕ್ರಮೇಶ್ವರ'[೧೪೦]. ರಟ್ಟಿಹಳ್ಳಿ ಕಡಂಬೇಶ್ವರ ದೇವಾಲಯ ತ್ರಿಕೂಟವಾಗಿ ಮಾರ್ಪಡಲು ಕಾರಣನಾದವನು ಹೊನ್ನಬೊಮ್ಮಿಶೆಟ್ಟಿ. ಆದರೆ ಒಳಗಿರುವ ಲಿಂಗಗಳು 'ಮಲ್ಲೇಶ್ವರ' ಮತ್ತು 'ರಾಜೇಶ್ವರ' ಎಂಬ ಹೆಸರಿನ ಮೇಲೆ ಸ್ಥಾಪಿತ ಗೊಂಡಿವೆ.[೧೪೧] ಅಬ್ಬಲೂರಿನ ವೀರಸೋಮನಾಥ ದೇವಾಲಯದ ಕರ್ತೃ ಏಕಾಂತರಾಮಯ್ಯ ಸ್ಥಾಪಿಸಿದ ಲಿಂಗಗಳಲ್ಲಿ ಒಂದು ಅವನ ಗುರುವಾದ ಅಗ್ನಿಹೊನ್ನಯ್ಯನ ಹೆಸರಲ್ಲಿದೆ.[೧೪೨] ಹೊನ್ನತ್ತಿಯ ಶಾಸನಗಳು ಅಲ್ಲಿಯ ದೇವಾಲಯವನ್ನು ನಿರ್ಮಿಸಿದ ವ್ಯಕ್ತಿಯನ್ನು ಹೆಸರಿಸುತ್ತವೆ. ಆದರೆ ಆ ವ್ಯಕ್ತಿಗೂ ಅಲ್ಲಿ ಪ್ರತಿಷ್ಠೆಗೊಂಡ ದೇವರ ಹೆಸರಿಗೂ ಹೊಂದಾಣಿಕೆ ಇಲ್ಲ. ಹೀಗಾಗಿ ಈ ವ್ಯಕ್ತಿನಾಮ ಲಿಂಗಗಳು ಬೇರೆಯವರ ಹೆಸರಿನಲ್ಲಿ ಅವರ ಪರೋಕ್ಷ ವಿನಯಕ್ಕಾಗಿ ನಿರ್ಮಾಣಗೊಂಡಿವೆ ಎಂದು ಹೇಳಬಹುದು.

ಪರೋಕ್ಷವಿನಯವು ಇಲ್ಲಿಯ ತ್ರಿಕೂಟಗಳ ನಿರ್ಮಾಣಕ್ಕೆ ಕಾರಣವಾದಂತೆ, ಅಂದಿನ ಜನರ ಪ್ರಮುಖ ಕರ್ತವ್ಯಗಳಲ್ಲಿ ಒಂದಾದ ಧರ್ಮರಕ್ಷಣೆ, ಧರ್ಮಊರ್ಜ್ಜಿತ ಮಾಡುವ ಮನೋಭಾವವೂ ಅಷ್ಟೇ ಕಾರಣ ವಾಯಿತೆಂದು ಈ ದೇವಾಲಯಗಳಿಗೆ ಸಂಬಂಧಿಸಿದ ಶಾಸನ ಅಧ್ಯಯನದಿಂದ ತಿಳಿದುಬರುತ್ತದೆ. ಧರ್ಮ ಊರ್ಜಿತಕ್ಕಾಗಿ ಆಗಾಗ 'ಧರ್ಮಕಥಾಪ್ರಸಂಗ'ಗಳನ್ನು ಏರ್ಪಡಿಸಲಾಗುತ್ತಿತ್ತು ಎಂಬುದೂ ತಿಳಿದುಬರುತ್ತದೆ. ರಟ್ಟಿಹಳ್ಳಿ ಕಡಂಬೇಶ್ವರ ದೇವಾಲಯದ ಶಾಸನದಲ್ಲಿ ಹೊನ್ನಬೊಮ್ಮಸೆಟ್ಟಿಯು ತ್ರಿಕೂಟ ದೇವಾಲಯವನ್ನು ನಿರ್ಮಿಸುವ ಸಂದರ್ಭದಲ್ಲಿಯೂ ಇಂಥದೆ ಧರ್ಮಕಥಾಪ್ರಸಂಗವು ಏರ್ಪಟಿತ್ತು.[೧೪೩]

.......ಶ್ರೀ ಹೊಂನಬಂಮಿ

ಸೆಟಿಯರು ಅಖಿಳಪ್ರಧಾನಪರಿಜನಪರಿವ್ರಿತರಾಗಿದ್ದೊಂದು ದಿವಸಂ

ಧರ್ಮಕಥಾಪ್ರಸಂಗದೊಳು ವಿಜಯವನಿತಾಕರುಷಣಸಮು

(ದೃತ)ರಂತು ಧರ್ಮಮಂ ಬಲುವಿಡಿವಿಡಿವ

ಬಗೆಯಿಂ ಕಡಂಬರಾಜ್ಯ ಲಕ್ಷ್ಮೀಭವನಕ್ಕಧಿಷ್ಠಾನವಾಗಿರ್ದ ಕಡಂಬೇಶ್ವರ

ದೇವರ ಪ್ರವಿಷ್ಟದಲ್ಲಿ ಮಲ್ಲೇಶ್ವರ ರಾಜೇಶ್ವರದೇವರ ಪ್ರತಿಷ್ಠೆಯಂ

ಮಾಡಿ ಧರ್ಮ ಊರ್ಜ್ಜಿತಂ ಮಾಡಿಕೊಡ

ಬೇಳ್ಕೆಂದು....

ದೇವಾಲಯಕ್ಕೆ ದಾನ ನೀಡಿದ ಹೊಂನಬಂಮಿಸೆಟ್ಟಿಯು ತನ್ನ ಅಧಿಕಾರಿಗಳ ಜೊತೆ, ಪರಿವಾರಜನರ ಜೊತೆ ಧರ್ಮಪ್ರಸಂಗ ಮಾಡಿದನೆಂದು ತಿಳಿಯುತ್ತದೆ. ಹೀಗೆ ತಮ್ಮ ಪರಿವಾರ, ಪಂಡಿತರು, ಅಧಿಕಾರಿಗಳ ಜೊತೆಗೆ ಧರ್ಮವನ್ನು ಚರ್ಚಿಸುವ ಮತ್ತು ತಿಳಿಯುವ ಪದ್ಧತಿಯೂ ಇತ್ತೆಂದು ಇದರಿಂದ ವ್ಯಕ್ತವಾಗುತ್ತದೆ. ಧರ್ಮವನ್ನು ಕುರಿತ ಅಂತಹ ಚರ್ಚೆಗಳೇ 'ಧರ್ಮಪ್ರಸಂಗ'ಗಳು. ಹರಳಹಳ್ಳಿಯ ಸೋಮನಾಥ ತ್ರಿಕೂಟ ದೇವಾಲಯ ನಿರ್ಮಾಣಕ್ಕೂ ಧರ್ಮಪ್ರಸಂಗವೇ ಕಾರಣ.

.....[ಏ]ದಂ ಸುಸಂಗನವರರೊಳ್ಸಂ ...ದಿ

ದಾನುವಜೆವನೆಂದವನೀಶಂ ಬಂದಾ ಯತಿಪತಿಗತ್ಯಾ

ನಂದದೆ ಪೊಡವಟ್ಟು ಧರ್ಮ್ಮದ ಕಥನಂ ಬಡೆದಂ||

ವೃತಧರ್ಮ್ಮೋದ್ಯೋಗದಿಂದಿರ್ದ್ದುದು ಮನಮ..... ಮೆಂದಾ

ಕ್ಷಿತೀಸಂಗಾ ಜೋಮದೇವಂಗೆಸೆಯೆ ಬೆಸಸಿದಂ .....

ಸುಪ್ರಸಿದ್ಧರಾದ ಕಲ್ಯಾಣಶಕ್ತಿಯತಿಗಳಿಂದ ಜೋಯಿದೇವರಸನು ಧರ್ಮ ಕಥನವನ್ನು ಪಡೆದು ತ್ರಿಕೂಟ ನಿರ್ಮಾಣಕ್ಕೆ ದಾನ ಕೊಡುತ್ತಾನೆ. ಅಬ್ಬಲೂರಿನಲ್ಲಿಏಕಾಂತ ರಾಮಯ್ಯನು ಶಿರಸ್‌ಪವಾಡವನ್ನು ಮೆರೆದು ತ್ರಿಕೂಟವನ್ನು ನಿರ್ಮಿಸಿದನೆಂದು ಕೇಳಿ ತಿಳಿದ ಅರಸರು ವಿಸ್ಮಯಪಟ್ಟು ದಾನ ಕೊಡುವಲ್ಲಿಯೂ ಈ ಧರ್ಮ ಕಥಾಪ್ರಸಂಗಗಳು, ಧರ್ಮಊರ್ಜಿತಗೊಳ್ಳಬೇಕೆಂಬ ಉದ್ದೇಶವು ಕಂಡುಬರುತ್ತದೆ.[೧೪]

......ಸಲೆಯ ಹಳ್ಳಿಯ ಕೊಪ್ಪದೊಳು ಸುಖಸಂಖ(ಕ)ಥಾ

ವಿನೋದದಿನಿರ್ದ್ದೊಂದು ದೆವಸಂ ಧರ್ಮ್ಮಗೋಷ್ಠಿ

ಯೊಳಿರ್ದು ಪುರಾತ[ನ]ನೂತ[ನ]ರಪ್ಪ ಶಿವಭಕ್ತರ

ಗುಣಸ್ತವನಂ ಮಾಡುತ್ತಮಿರ್ದೇಕಾನ್ತದ ರಾಮಯ್ಯಂಗಳ....

ಧರ್ಮಗೋಷ್ಠಿಯಲ್ಲಿ ಪುರಾತನ, ನೂತನ ಶಿವಭಕ್ತರ ಗುಣಸ್ತವನ, ಚರ್ಚೆಗಳು ನಡೆಯುತ್ತಿದ್ದವೆಂದು ಈ ಶಾಸನದಿಂದ ತಿಳಿದುಬರುತ್ತದೆ.

ಅಬ್ಬಲೂರಿನಲ್ಲಿ ಏಕಾಂತರಾಮಯ್ಯನು ವೀರಸೋಮನಾಥ ತ್ರಿಕೂಟ ದೇವಾಲಯವನ್ನು ನಿರ್ಮಿಸಲು ಕಾರಣವಾಗಿದ್ದು ರಾಮಯ್ಯನ ಶ್ರೇಷ್ಠ ಭಕ್ತಿ, ಶಿವಪಾರಮ್ಯವನ್ನು ನಿರೂಪಿಸುವ ಹಟಗಳು ಕಾರಣವಾದುವು. ಆ ಕಾರ್ಯವನ್ನು ಅವನು ವೀರವ್ರತದಂತೆ ಸ್ವೀಕರಿಸಿದನು.

ದೇವಾಲಯ ನಿರ್ಮಾಣ ಕಾರ್ಯದಲ್ಲಿ

......ದೇಗುಲಕೆಂದು ಭಕ್ತಜನವಾದರದಿಂದಿದಿರೆರ್ದು ಕೊಟ್ಟಡಾ
ಹಾಗವನಾದಡಂ ಕಳದುಕೊಳ್ಳದೆ ಬೇಡದೆ ನಾಡೆ ದೈನ್ಯದಿಂ
ಪೋಗಿ ನೃಪಾಲರಂ ಶಿವನನುಗ್ರಹವಕ್ಷಯವಾಗೆ ಮಾಡಿದಂ
ದೇಗುಲವಂ ಹರಾದ್ರಿಗೆಣೆಯಾಗಿರೆ ರಾಮನಿದೇಂ ಕೃತಾರ್ಥನೋ[೨೫]

ದೇವರಿಗಾಗಿ ಭಕ್ತಿಯಿಂದ ಯಾರೇ ಕೊಟ್ಟ ಒಂದು ಹಾಗವನ್ನು (ಹಣವನ್ನು) ಅವನು ಕಳೆದುಕೊಳ್ಳುತ್ತಿರಲಿಲ್ಲ. ಹಣಕ್ಕಾಗಿ ಯಾವ ರಾಜರಲ್ಲಿಯೂ ಯಾಚಿಸುತ್ತಿರಲಿಲ್ಲ ಎಂದು ಶಾಸನವು ವರ್ಣಿಸಿದೆ.

ಬಾದಾಮಿ ಚಾಲುಕ್ಯರ ಕಾಲದಲ್ಲೇ ತ್ರಿಕೂಟ ದೇವಾಲಯ ರಚನೆಗೊಂಡಿದ್ದನ್ನು ಈಗಾಗಲೇ ಗಮನಿಸಿದ್ದಾಗಿದೆ. ಅದು ತ್ರೈಪುರುಷರಿಗಾಗಿ ಮೀಸಲಾಗಿದ್ದ ತ್ರಿಕೂಟವಾಗಿದೆ. ಹೆಚ್ಚು ಕಡಿಮೆ ಅದೇ ತಲ ವಿನ್ಯಾಸದಲ್ಲಿ ನಿರ್ಮಾಣಗೊಂಡ ಈ ತ್ರಿಕೂಟಗಳು ವ್ಯಕ್ತಿನಾಮ/ಪರೋಕ್ಷವಿನಯದ ಹೆಸರಲ್ಲಿ ಹುಟ್ಟಿಕೊಂಡಿವೆ. ಒಂದೇ ಕುಟುಂಬಕ್ಕೆ ಸೇರಿದ ಇಬ್ಬರು ವ್ಯಕ್ತಿಗಳ ಪರೋಕ್ಷವಿನಯಕ್ಕೆಂದು ಬೇರೆ ಬೇರೆ ಸ್ಥಳದಲ್ಲಿ ದೇವಾಲಯ ರಚಿಸುವುದಕ್ಕಿಂತ, ಮುಖ್ಯ ದೇವರ ಸನ್ನಿಧಿಯಲ್ಲಿ ಅಕ್ಕಪಕ್ಕ ಎರಡು ದೇವಾಲಯಗಳನ್ನು ಒಂದೇ ಅಧಿಷ್ಠಾನದ ಮೇಲೆ ರಚಿಸುವುದರಿಂದ, ಒಟ್ಟಾರೆ ದೇವಾಲಯದ ಸೌಂದರ್ಯ ಹೆಚ್ಚುತ್ತದೆ. ಅಲ್ಲದೆ ಪ್ರತಿರೂಪಲಿಂಗದ ಪೂಜೆಯ ಜೊತೆಗೆ ಅಕ್ಕಪಕ್ಕದ ವ್ಯಕ್ತಿನಾಮಲಿಂಗಗಳ ಪೂಜೆಯೂ ಸದಾಕಾಲ ನಡೆದುಕೊಂಡು ಬರಲು ಅನುಕೂಲವಾಗುತ್ತದೆ. ದಾನದತ್ತಿಗಳ ಸಂಖ್ಯೆಯು ಹೆಚ್ಚಾಗಿ ದೇವಾಲಯವು ವೈಭವಗೊಳ್ಳುತ್ತದೆ. ಮುಖ್ಯ ದೇವರ ಜೊತೆ ವ್ಯಕ್ತಿಗಳ ಹೆಸರು ಸಹ ಜನರ ನೆನಪಲ್ಲಿ ಬಹುಕಾಲದವರೆಗೂ ಉಳಿದುಕೊಂಡು ಬರಲಿ ಎಂಬ ಸದುದ್ದೇಶ ಈ ತ್ರಿಕೂಟ ದೇವಾಲಯಗಳಲ್ಲಿ ಇದ್ದದ್ದು ಸ್ಪಷ್ಟವಾಗುತ್ತದೆ. ಹಾವೇರಿ ಜಿಲ್ಲೆಯಲ್ಲಿ ಈ ಗುಂಪಿಗೆ ಸೇರಿದ ಆರು ತ್ರಿಕೂಟ ದೇವಾಲಯಗಳನ್ನು ಗುರುತಿಸಲಾಗಿದೆ(ನಕ್ಷೆ-೩).

೧. ಹರಳಹಳ್ಳಿ ಸೋಮನಾಥ (ಕ್ರಿ.ಶ.೧೧೮೧)
೨. ಹೊನ್ನತ್ತಿ ರಾಮಲಿಂಗೇಶ್ವರ (ಕ್ರಿ.ಶ.೧೧೮೭)
೩. ದಶರಥಕೊಪ್ಪ ಸೋಮನಾಥ (ಕ್ರಿ.ಶ.೧೨ನೇ ಶತಮಾನ)
೪. ಅಬ್ಬಲೂರು ಸೋಮನಾಥ (ಕ್ರಿ.ಶ.ಸು.೧೨೦೦)
೫. ರಟ್ಟಿಹಳ್ಳಿ ಕದಂಬೇಶ್ವರ (ಕ್ರಿ.ಶ.೧೨೩೮)
೬. ಕಾರಡಗಿ ಡೊಳ್ಳೇಶ್ವರ (ಕ್ರಿ.ಶ.ಸು.೧೨ನೇ ಶತಮಾನ)

**ಹರಳಹಳ್ಳಿ ಸೋಮನಾಥ ದೇವಾಲಯ**

ಊರು : ಹರಳಹಳ್ಳಿ (ತಾ.ಹಾವೇರಿ)
ಸ್ಥಳ : ಊರ ನಡುವೆ
ಹೆಸರು : ಸ್ವಯಂಭೂ ಸೋಮನಾಥ




ನಕ್ಷೆ ೩

## ವ್ಯಕ್ತಿನಾಮ/ಪರೋಕ್ಷವಿನಯ ದೇವಾಲಯಗಳು ಇರುವ ಸ್ಥಳಗಳು

ಶಿಗ್ಗಾಂವ
ಸವಣೂರು
ಹಾನಗಲ್ಲ
ಧರ್ಮಾ ನದಿ
ವರದಾ ನದಿ
ಹಾವೇರಿ
ಬ್ಯಾಡಗಿ
ರಾಣೆಬೆನ್ನೂರು
ಹಿರೇಕೆರೂರು
ಕುಮುದ್ವತಿ ನದಿ
ತುಂಗಭದ್ರಾ ನದಿ

ತಾಲೂಕು ಸ್ಥಳ
ದೇವಾಲಯ
ಜಿಲ್ಲಾ ಗಡಿರೇಖೆ
ತಾಲೂಕು ಗಡಿರೇಖೆ
ನದಿ

೧. ಅಬ್ಬಲೂರು
೨. ಕಾರಡಗಿ
೩. ದಶರಥಕೊಪ್ಪ
೪. ರಟ್ಟಿಹಳ್ಳಿ
೫. ಹರಳಹಳ್ಳಿ
೬. ಹೊನ್ನತ್ತಿ

೨೦ ೧೦ ೦ ೧೦ ೨೦ ಕಿ.ಮೀ.

ಅಭಿಮುಖ : ಪೂರ್ವ

ನಿವೇದನೆ : ಈಶ್ವರ (ಮೂರು ಗರ್ಭಗೃಹಗಳಲ್ಲಿ)

ಕಾಲ : ಕ್ರಿ.ಶ.೧೧೮೧

ಶೈಲಿ : ಕಲ್ಯಾಣ ಚಾಲುಕ್ಯ

ಬಳಸಿದ ವಸ್ತು : ಕಪ್ಪು ಮಿಶ್ರಿತ ನೀಲಿಛಾಯೆಯ ಕಲ್ಲು (ಕ್ಲೋರೈಟಿಕ್ ಸಿಸ್ಟ್)

## ದೇವಾಲಯದ ವಾಸ್ತುಶೈಲಿ

**ತಳವಿನ್ಯಾಸ :** (ತಳವಿನ್ಯಾಸ ರೇಖಾಚಿತ್ರ-೨) ಮೂರುಗರ್ಭಗೃಹಗಳು, ಮೂರು ಅರ್ಧಮಂಟಪಗಳು, ನವರಂಗ, ಒಂದು ಮುಖ ಚತುಷ್ಕಿ (ಎರಡು ಕಂಬಗಳನ್ನು ಬಳಸಿ ರೂಪಗೊಂಡ ಒಂದು ಅಂಕಣದ ವಾಸ್ತು ರಚನೆ).

**ಊರ್ಧ್ವಮುಖ ರಚನೆ :** ಹಾವೇರಿಯಿಂದ ಈಶಾನ್ಯಕ್ಕೆ ೨೭ ಕಿ.ಮೀ. ದೂರದಲ್ಲಿ ತುಂಗಭದ್ರಾ ನದಿ ದಂಡೆಯ ಮೇಲಿರುವ ಈ ದೇವಾಲಯವು ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದೆ. ದೇವಾಲಯದ ಅಧಿಷ್ಠಾನವು ಮೂರು ಅಡಿ ಎತ್ತರವಾಗಿದ್ದು ಉಪಾನ, ಪದ್ಮ, ತ್ರಿಪಟ್ಟ ಕುಮುದಗಳಿಂದ ಕೂಡಿದ ಪಾದಬಂಧ ಪ್ರಭೇದಕ್ಕೆ ಸೇರಿದ್ದಾಗಿದೆ(ರೇಖಾಚಿತ್ರ-೧). ಅಧಿಷ್ಠಾನದ ಮೇಲೆ ಸುಂದರವಾಗಿ ಚಿತ್ರಿಸಿದ ವ್ಯಾಳಮಾಲೆಯು ಅಧಿಷ್ಠಾನ ಮತ್ತು ಭಿತ್ತಿಯ ಹಿಂಚಾಚು ಮುಂಚಾಚುಗಳಿಗೆ ತಕ್ಕಂತೆ ಪೂರ್ತಿ ದೇವಾಲಯವನ್ನು ಸುತ್ತುವರೆದಿದೆ. ವ್ಯಾಳಮಾಲೆಯ ಮಧ್ಯದಲ್ಲಿ ಅಲ್ಲಲ್ಲಿ ಹಾರವನ್ನು ಹಿಡಿದ ಪುರುಷನ ಉಬ್ಬುಶಿಲ್ಪಗಳು, ಯೋಗಾಸನದಲ್ಲಿ ಕುಳಿತ ಶಿವನ ಉಬ್ಬುಶಿಲ್ಪಗಳನ್ನು ಕಂಡರಿಸಲಾಗಿದೆ. ವ್ಯಾಳಮಾಲಾ ಭಾಗದ ಮೇಲೆ ಮೇಜಿನ ರೀತಿಯ ವೇದಿಕೆ ಇದ್ದು, ಕೆಳಭಾಗವು ನಿಮ್ನರೀತಿಯಲ್ಲಿದೆ. ವೇದಿಕೆಯ ಮೇಲೆ ಭಿತ್ತಿಯನ್ನು ದಪ್ಪಗಾತ್ರದ ಗೋಡೆಗಂಬಗಳಿಂದ ರಚಿಸಲಾಗಿದೆ. ಈ ಕಂಬಗಳು ಪಾದದಲ್ಲಿ ಚೌಕಾಕಾರ, ಮಧ್ಯದಲ್ಲಿ ಗಂಟಾಕಾರವನ್ನು ಹೊಂದಿದ್ದು, ಪೀಠಭಾಗದಿಂದ ಸ್ತಂಭಾಗ್ರದವರೆಗೂ ಆರು ಲಂಬರೇಖೆಗಳನ್ನು ಹೊಂದಿವೆ. ಒಳಮುಖ ಮತ್ತು ಹೊರಮುಖದಲ್ಲಿ ನಯಗೊಳಿಸಿದ ಕಲ್ಲುಗಳನ್ನು ಹೊಂದಿಸಿ ಮಧ್ಯದ ಸ್ಥಳವನ್ನು ಮಣ್ಣು, ಬೆಣಚುಕಲ್ಲುಗಳಿಂದ ತುಂಬಿ ನಾಲ್ಕು ಅಡಿ ದಪ್ಪ ಭಿತ್ತಿಯನ್ನು ನಿರ್ಮಿಸಲಾಗಿದೆ. ಭಿತ್ತಿಯ ಕರ್ಣಭಾಗದಲ್ಲಿ ಚೌಕಾಕಾರದ ಮುಂಚಾಚು ಕಂಡರೆ, ಭಿತ್ತಿಯ ಮಧ್ಯದ ಭಾಗವಾದ ಭದ್ರವು ಎರಡು ಹಂತದಲ್ಲಿ ಮುಂಚಾಚನ್ನು ಹೊಂದಿ, ನಕ್ಷತ್ರಾಕಾರದಂತೆ ಕಾಣುತ್ತದೆ. ಮುಖ್ಯಗರ್ಭಗೃಹದ ಭದ್ರಭಾಗಗಳು ಮೂರುಜೊತೆ ತೆಳು ಕಂಬಗಳಿಂದ ರಚನೆಗೊಂಡ ಆಳವಾದ ಕೋಷ್ಟಗಳನ್ನು ಹೊಂದಿವೆ. ಈ ಕೋಷ್ಟಗಳು ಅಲಂಕೃತ ಸಣ್ಣ ದೇವಾಲಯಗಳಂತೆ ತೋರುತ್ತವೆ. ಇವುಗಳ ದ್ವಾರಬಂಧವು ಪಂಚಶಾಖೆಗಳಿಂದ ಕೂಡಿದ್ದು, ಕ್ರಮವಾಗಿ ವಜ್ರಾಕೃತಿ, ಬಳ್ಳಿಗಳಲ್ಲಿ ಹೂವಿನ ಅಲಂಕರಣ, ಸ್ತಂಭ, ಬಳ್ಳಿಗಳಲ್ಲಿ ಪ್ರಾಣಿಗಳು, ಕಮಲದಳ ಅಲಂಕರಣದಿಂದ ಕೂಡಿವೆ. ಒಳಭಾಗದ ಮೊದಲ ಎರಡು ಶಾಖೆಗಳು ದ್ವಾರದ ಹಣೆಪಟ್ಟಿಯಲ್ಲಿಯೂ ಮುಂದುವರೆದು ಚೌಕಾಕಾರದ ಲಲಾಟಫಲಕದ ಪಕ್ಕದಲ್ಲಿ ಸೇರುತ್ತವೆ. ಸ್ತಂಭ ಶಾಖೆಯು ಲಂಬವಾಗಿ ಮುಂದುವರೆದು ಗಜಲಕ್ಷ್ಮಿಯನ್ನು ಹೊಂದಿದ ಲಲಾಟಫಲಕದ ಸಮಾನಾಂತರದಲ್ಲಿ ನಿಂತು, ಅಧೋಮುಖ ಕಮಲ ದಳದಂತಿರುವ ಕಪೋತ ಭಿತ್ತಿಗೆ




ತಳವಿನ್ಯಾಸ ರೇಖಾ ಚಿತ್ರ – ೨, ಸೋಮೇಶ್ವರ ದೇವಾಲಯ, ಹರಳಹಳ್ಳಿ (ತಾ. ಹಾವೇರಿ)
೧) ಗರ್ಭಗೃಹ ೨) ಅರ್ಧಮಂಟಪ ೩) ನವರಂಗ ೪) ಮುಖಮಂಟಪ

ಕೃಪೆ : ದ ಚಾಲುಕ್ಯನ್ ಆರ್ಕಿಟೆಕ್ಚರ್ ಆಫ್ ದ ಕನರೇಸಾ ಡಿಸ್ಟ್ರಿಕ್ಟ್

ಆಸರೆಯಾಗಿವೆ. ಕೋಷ್ಠಗಳ ಮೇಲಿನಭಾಗವು ವೇಸರಶೈಲಿಯ ಶಿಖರವನ್ನು ಹೊಂದಿವೆ. ಮಕರತೋರಣವು ಶಿಖರವನ್ನು ಎರಡೂ ಮಗ್ಗಲುಗಳಿಂದ ಆವರಿಸಿ ಅದರ ತುದಿಯು ಪ್ರಸ್ತರದ ಭಾಗವನ್ನು ಮುಟ್ಟುವಷ್ಟು ಮೇಲೇರಿದೆ. ಕೋಷ್ಠದ ದ್ವಾರಶಾಖೆಗಳ ಕೆಳಫಲಕಗಳಲ್ಲಿ ದ್ವಾರಪಾಲಕರ ಬದಲು ಆನೆಯ ಶಿಲ್ಪಗಳಿವೆ. ಈ ಆನೆಗಳು ಮತ್ತು ಕೋಷ್ಠಭಿತ್ತಿನಿಂದ ಇಳಿಬಿದ್ದ ಮುತ್ತಿನ ಸರಗಳಂತಹ ರಚನೆಗಳು ಕೋಷ್ಠದ ಸೌಂದರ್ಯವನ್ನು ಹೆಚ್ಚಿಸಿವೆ. ಮುಖ್ಯ ಗರ್ಭಗೃಹದ ಮೂರು ಭದ್ರಕೋಷ್ಠಗಳಲ್ಲಿ ಎರಡು ಕೋಷ್ಠಗಳು ಬರಿದಾಗಿವೆ. ದಕ್ಷಿಣಾಭಿಮುಖವಾಗಿರುವ ಕೋಷ್ಠದಲ್ಲಿ ಅಘೋರೇಶ್ವರ ಶಿಲ್ಪವಿದೆ[೧೪೬] (ಛಾಯಾಚಿತ್ರ-೬).

ಅಕ್ಕಪಕ್ಕದ ಗರ್ಭಗೃಹಗಳ ಭದ್ರಭಾಗಗಳು ಎರಡು ಜೊತೆ ತೆಳುಕಂಬಗಳಿಂದ ರಚನೆಗೊಂಡಿವೆ. ಮಧ್ಯದಲ್ಲಿ ಕೋಷ್ಠವಿರದೆ ಜೋಡಿ ಕಂಬಗಳ ಮೇಲೆ ವೇಸರ ಶೈಲಿಯ ಶಿಖರವಿದೆ. ಯಾವುದೇ ತೋರಣಾಲಂಕಾರವಿಲ್ಲದೆ ಭಿತ್ತಿಯು ಖಾಲಿಯಾಗಿದೆ. ಮೂರೂ ಗರ್ಭಗೃಹಗಳ ಕರ್ಣಭಾಗವು ತೆಳುವಾದ ಒಂದು ಜೊತೆ ಗೋಡೆಕಂಬಗಳಿಂದ ರಚನೆಗೊಂಡು, ಮಧ್ಯಭಾಗದಲ್ಲಿ ಜೋಡಿ ಕಂಬಗಳ ಮೇಲೆ ವೇಸರ ಶೈಲಿಯ ಶಿಖರದ ಅಲಂಕರಣವನ್ನು ಹೊಂದಿದೆ. ಇದು ಭಿತ್ತಿಯ ಮುಂಚಾಚು ಭಾಗದ ಅಲಂಕರಣವಾದರೆ, ಒಳಸರಿದ ಭಿತ್ತಿ ಭಾಗದಲ್ಲಿ ಒಂಟಿ ಕಂಬಗಳ ಮೇಲೆ ನಾಗರಶೈಲಿಯ ಶಿಖರಗಳ ಅಲಂಕರಣಗಳಿವೆ. ಈ ಶಿಖರಗಳ ಮೇಲಿನ ಭಿತ್ತಿಭಾಗದಲ್ಲಿ ತೋರಣಾಲಂಕಾರದಿಂತ ಕೂಡಿದ ಮುಕ್ಕಾಲು ಅಡಿ ಎತ್ತರವಿರುವ ಮದನಿಕಾ ಸ್ತ್ರೀಯರ ಉಬ್ಬುಶಿಲ್ಪಗಳಿರುವುದು ಈ ದೇವಾಲಯದ ಒಂದು ವಿಶೇಷ. ನೃತ್ಯ, ಗಾಯನ, ವಾದನಗಳಲ್ಲಿ ನಿರತರಾದ ಮತ್ತು ಶಾಸನ ಬರೆಯುತ್ತಿರುವ ಮದನಿಕಾ ಸ್ತ್ರೀಯರ ಈ ಉಬ್ಬುಶಿಲ್ಪಗಳು ಬೇಲೂರು ಶಿಲ್ಪಗಳನ್ನು ನೆನಪಿಸುತ್ತವೆ.

ದೇವಾಲಯದ ಪ್ರಸ್ತರ ಭಾಗದಲ್ಲಿಯ ವ್ಯಾಳಮಾಲೆಯು ದೇವಾಲಯದ ಸುತ್ತಲೂ ಸುತ್ತುವರೆದು ದೇವಾಲಯಕ್ಕೆ ಹಣೆಪಟ್ಟಿಯಂತೆ ಶೋಭಿಸುತ್ತದೆ. ಇದರ ಮೇಲಿನ ಭಾಗವಾಗಿ ಕರ್ಣಕೂಟ, ಪಂಜರ, ಶಾಲಾಗಳಿಂದ ರಚನೆಗೊಂಡ ತಲರಚನೆಗಳಿವೆ. ಹಾರಾಂತರ ಭಾಗದಲ್ಲಿ ನಾಸಿಕೊಷ್ಠಗಳಿವೆ. ಮುಖ್ಯಗರ್ಭಗೃಹದ ಮೇಲಿನ ಕಟ್ಟಡವು ದ್ವಿಶಾಲಾದಿಂದ ಕೂಡಿದ (ರೇಖಾಚಿತ್ರ-೨) ಹಾರಗಳನ್ನು ಒಳಗೊಂಡಂತೆ ನಾಲ್ಕು ತಲಗಳಿಂದ ಹಂತಹಂತವಾಗಿ ಕಿರಿದಾಗುತ್ತ ಅಧೋಮುಖ ದೊಡ್ಡಕಮಲದಂತೆ ತೋರುವ ಚೌಕಾಕಾರದ ಶಿಖರಭಾಗವನ್ನು, ಅದರ ಶಿರೋಭಾಗದಲ್ಲಿಯ ಮಹಾಪದ್ಮದ ಕೇಂದ್ರ ಬಿಂದುವಿನಲ್ಲಿ ನೆಟ್ಟ ಸ್ತೂಪಿ ಭಾಗದಲ್ಲಿ ಕೊನೆಗೊಳ್ಳುತ್ತದೆ. ಭದ್ರಭಾಗದ ಮೇಲ್ಕಟ್ಟಡವು ವ್ಯಾಳಮಾಲಾ ಭಾಗದಲ್ಲಿಯ ಒಂದು ಫಲಕ, ಶಾಲಾ ರಚನೆಯಲ್ಲಿಯ ಒಂದು ಫಲಕ ಹೀಗೆ ಒಂದರ ಮೇಲೊಂದು ಫಲಕಗಳಿಂದ ಹಂತಹಂತವಾಗಿ ಮೇಲೇರುತ್ತ, ಚಿಕ್ಕದಾಗುತ್ತ ಶಿಖರ ಭಾಗದಲ್ಲಿ ಕೊನೆಗೊಳ್ಳುತ್ತವೆ. ಈ ಭಾಗವು ಬೈತಲಮಣಿಯಂತೆ ದೇವಾಲಯದ ಮೇಲ್‌ಕಟ್ಟಡಕ್ಕೆ ಶೋಭೆ ತಂದಿದೆ. ಅಕ್ಕಪಕ್ಕದ ಗೃಹಗಳ ಮೇಲ್ಕಟ್ಟಡಗಳು ಏಕಶಾಲಾ ರಚನೆಯಿಂದ ಕೂಡಿದ್ದು, ತ್ರಿತಲಗಳಿಂದ ಹಂತಹಂತವಾಗಿ ಮೇಲೇರುತ್ತ, ಕಿರಿದಾಗುತ್ತ, ಅಧೋಮುಖ ಕಮಲದಂತಿರುವ ಚೌಕಾಕಾರದ ಶಿಖರಭಾಗವನ್ನು, ಅದರ ಮೇಲೆ ಮಹಾಪದ್ಮದ ಮಧ್ಯಬಿಂದುವಲ್ಲಿ ಸ್ತೂಪಿ ರಚನೆಗಳನ್ನು ಒಳಗೊಂಡಿವೆ (ಛಾಯಾಚಿತ್ರ-೨). ಮೂರೂ ಶಿಖರಗಳು ಶುಕನಾಸಿಯನ್ನು ಹೊಂದಿವೆ. ದಪ್ಪಗಾತ್ರದ ಗೋಡೆ ಕಂಬಗಳು




ರೇಖಾಚಿತ್ರ-೧, ಸೋಮೇಶ್ವರ ದೇವಾಲಯದ ಅಧಿಷ್ಠಾನ, ಹರಳಹಳ್ಳಿ (ತಾ.ಹಾವೇರಿ)
೧ ಉಪಾನ, ೨. ಜಗತಿ, ೩. ಪದ್ಮ, ೪. ಕಂಪ, ೫. ಕುಮುದ, ೬. ಕಪೋತ, ೭. ಕಂಟಕ



ರೇಖಾಚಿತ್ರ-೨, ಸೋಮೇಶ್ವರ ದೇವಾಲಯದ ಶಾಲಾ ರಚನೆ, ಹರಳಹಳ್ಳಿ (ತಾ.ಹಾವೇರಿ)

ಅರ್ಧಮಂಟಪ ಮತ್ತು ನವರಂಗದ ಭಿತ್ತಿಭಾಗದಲ್ಲಿಯೂ ಮುಂದುವರೆದು, ಮುಂಚಾಚು ಹಿಂಚಾಚುಗಳನ್ನು ಏರ್ಪಡಿಸಿವೆ. ಈ ಭಾಗಗಳು ಸಹ ನಾಗರ ಶೈಲಿ ಶಿಖರವನ್ನು ಹೊತ್ತ ಒಂಟಿ ಕಂಬಗಳಿಂದ, ಮದನಿಕಾ ಸ್ತ್ರೀಯರಿಂದ ಅಲಂಕೃತಗೊಂಡಿವೆ. ಒಟ್ಟಾರೆ ದೇವಾಲಯದ ಭಿತ್ತಿಯನ್ನು ವೀಕ್ಷಿಸಿದರೆ ಕೂಟರಚನೆ, ಪಂಜರ ಸ್ಥಂಬ, ಶಾಲಾ ಕೋಷ್ಠ, ಪಂಜರ ಸ್ಥಂಬ, ಕೂಟರಚನೆ, ಪಂಜರ ಸ್ಥಂಬ ಹೀಗೆ ಅದೇ ಭಾಗಗಳು ಪುನರಾವರ್ತನೆ ಗೊಂಡು ಭಿತ್ತಿಯು ಆಕರ್ಷಕವಾಗಿದೆ.

ಮುಖಚತುಷ್ಕಿಯ ಅಧಿಷ್ಠಾನವು ೨.೪ ಅಡಿ ಎತ್ತರವಾಗಿದ್ದು, ತ್ರಿಪಟ್ಟಕುಮುದವನ್ನು ಹೊಂದಿದೆ. ಇದರ ಮೇಲೆ ಕಕ್ಷಾಸನವಿದೆ. ಕಕ್ಷಾಸನದ ಹಿಂಭಾಗವನ್ನು ಮೂರು ಹಂತಗಳಲ್ಲಿ ಅಲಂಕರಿಸಲಾಗಿದೆ. ಮೊದಲ ಹಂತದಲ್ಲಿ ದಪ್ಪ ಮಾದರಿಯ ಕಂಬಗಳನ್ನು ಸಾಲಾಗಿ ಕೆತ್ತಿದ್ದು, ಅವುಗಳ ಮಧ್ಯದಲ್ಲಿ ಮಿಥುನಶಿಲ್ಪಗಳನ್ನು ಬಿಡಿಸಲಾಗಿದೆ. ಎರಡನೇ ಹಂತದಲ್ಲಿ ಕೆಳಭಾಗದ ಸ್ಥಂಬಗಳು ನಾಗರಶೈಲಿಯ ಶಿಖರವನ್ನು ಹೊತ್ತಂತೆ ಸಾಲಾಗಿ ಹೊಂದಿಸಲಾಗಿದೆ. ಇವು ಒಂದಕ್ಕೊಂದು ಬೇರ್ಪಡುವಂತೆ ಮಧ್ಯದಲ್ಲಿ ಉಬ್ಬುಶಿಲ್ಪಗಳಿವೆ. ಮೂರನೇ ಹಂತದಲ್ಲಿ ನೃತ್ಯ, ವಾದ್ಯಮೇಳಗಳ ಫಲಕವನ್ನು ಅದರ ಮೇಲೆ ಲತಾಸುರುಳಿಯಪಟ್ಟಿ ಅಂಚು ಕಟ್ಟಿದಂತೆ ರಚನೆಗೊಂಡಿದೆ(ಛಾಯಾಚಿತ್ರ-೩). ಮುಖಚತುಷ್ಕಿಯು ತೆರೆದ ಕಕ್ಷಾಸನವನ್ನು ಹೊಂದಿದ್ದರಿಂದ ಕಕ್ಷಾಸನದ ಎತ್ತರದಷ್ಟೇ ಅರ್ಧಮಟ್ಟದಲ್ಲಿ ದ್ವಾರ ರಚನೆ ಇದೆ. ಈ ದ್ವಾರವು ತ್ರಿಶಾಖೆಯಿಂದ ಕೂಡಿದ್ದು, ಕ್ರಮವಾಗಿ ಅಗಲವಾದ ಪಟ್ಟಿಕೆಯಲ್ಲಿ, ಲತಾಸುರುಳಿಯಲ್ಲಿ, ಆನೆ, ಕುದುರೆಗಳ ಸಣ್ಣಶಿಲ್ಪಗಳಿವೆ. ಇನ್ನೆರಡು ಸಣ್ಣಪಟ್ಟಿಕೆಗಳಲ್ಲಿ ಬಳ್ಳಿ ಅಲಂಕಾರವನ್ನು ಸೆರೆಹಿಡಿಯಲಾಗಿದೆ. ಅಗಲಪಟ್ಟಿಯ ಶಾಖೆಯ ಕೆಳಗೆ ದ್ವಾರಪಾಲಕರ ಉಬ್ಬುಶಿಲ್ಪಗಳಿವೆ. ಮುಖಚತುಷ್ಕಿಯ ದ್ವಾರಕ್ಕೆ ಪ್ರವೇಶದಂತೆ ಅಕ್ಕಪಕ್ಕದಲ್ಲಿ ಚತುಷ್ಕಿಯ ಅಧಿಷ್ಠಾನದ ಮುಂದುವರೆದ ಭಾಗವಿದೆ. ಕಕ್ಷಾಸನದ ಮೇಲೆ ನಿಂತ ಗಿಡ್ಡಕಂಬಗಳ ಆಸರೆಯಿಂದ ಚತುಷ್ಕಿಯ ಇಳಿಜಾರು ಛತ್ತು ನಿಂತಿದೆ. ಗರ್ಭಗೃಹಗಳ ಮೇಲ್ಕಟ್ಟಡದ ಮೊದಲನೇ ತಲದ ಕೂಟ, ಪಂಜರ, ಶಾಲಾರಚನೆಗಳು ನವರಂಗ ಮತ್ತು ಮುಖಚತುಷ್ಕಿಯ ಛತ್ತಿನ ಮೇಲೆಯೂ ಮುದುವರೆದಿವೆ.

ತಿರ್ಯಙ್ಮುಖ ರಚನೆಗಳು : ಪೂರ್ವಾಭಿಮುಖವಾದ ಮುಖ್ಯಗರ್ಭಗೃಹವು ೮x೮ ಅಡಿ ವಿಸ್ತೀರ್ಣದಲ್ಲಿದ್ದು, ಭಿತ್ತಿಯನ್ನು ನಾಲ್ಕು ಮೂಲೆಕಂಬಗಳಿಂದ ಮತ್ತು ೧/೨ x ೪-೫ ಅಡಿ ಕಲ್ಲು ಫಲಕಗಳನ್ನು ಒಂದರ ಮೇಲೊಂದು ಹೊಂದಿಸಿ ರಚಿಸಲಾಗಿದೆ. ದಕ್ಷಿಣದಿಕ್ಕಿನ ಗೋಡೆಯಲ್ಲಿ ಒಂದು ಗೂಡು, ಪಶ್ಚಿಮ ದಿಕ್ಕಿನ ಗೋಡೆಯಲ್ಲಿ ಹಲಗೆಯಂತಹ ರಚನೆಗಳಿವೆ. ಗರ್ಭಗೃಹದ ಮಧ್ಯದಲ್ಲಿ ಸ್ಥಯಂಭೂ ಸೋಮೇಶ್ವರ ಲಿಂಗವಿದೆ. ಛತ್ತಿನಲ್ಲಿ, ಹದಿನಾರು ಮೂಲೆಗಳನ್ನು ಹೊಂದಿದ ನಕ್ಷತ್ರ ಮಾದರಿಯ ಅಲಂಕರಣವಿದೆ. ಗರ್ಭಗೃಹದ ದ್ವಾರಬಂಧವು ೧ ಅಡಿ ಎತ್ತರದ ಹೊಸ್ತಿಲ ಮೇಲೆ ಪಂಚಶಾಖೆಗಳನ್ನು ಹೊಂದಿದಂತೆ ರಚನೆಗೊಂಡಿದೆ. ಶಾಖೆಗಳಲ್ಲಿ ಕ್ರಮವಾಗಿ ವಜ್ರಾಕೃತಿ, ವಲ್ಲಿಬಂಧದಲ್ಲಿ ಪುಷ್ಪಗಳು, ಅಲಂಕೃತ ಸ್ತಂಭ, ವಲ್ಲಿಬಂಧದಲ್ಲಿ ಪ್ರಾಣಿಗಳು ಮತ್ತು ಪದ್ಮದಳಗಳ ಅಲಂಕರಣವಿದೆ. ಪ್ರತಿಶಾಖೆಯ ಕೆಳಗೂ ಉಬ್ಬುಶಿಲ್ಪಗಳಿದ್ದು ದ್ವಾರಪಾಲಕರನ್ನು, ಚಾಮರಧಾರಿಣಿಯರನ್ನು ತ್ರಿಭಂಗಿಯಲ್ಲಿ ಕಂಡರಿಸಲಾಗಿದೆ(ಛಾಯಾಚಿತ್ರ-೪). ಅರ್ಧಮಂಟಪವು ಪೂರ್ವಪಶ್ಚಿಮ ಮತ್ತು ದಕ್ಷಿಣೋತ್ತರವಾಗಿ ೮x೧೦ ಅಡಿ ವಿಸ್ತೀರ್ಣದಲ್ಲಿದೆ. ಇಲ್ಲಿಯ ತೊಲೆಗಳ ಮೇಲೆ

ವಜ್ರಾಕೃತಿಯಲ್ಲಿ ಹೂವಿನ ಅಲಂಕರಣವನ್ನು ಸಾಲಾಗಿ ಬಿಡಿಸಲಾಗಿದೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಅರ್ಧಮಂಟಪದ ದ್ವಾರಬಂಧವು ತೆಳುವಾದ ಮೂರು ಶಾಖೆಗಳಿಂದ ಕೂಡಿದ್ದು, ಇಕ್ಕೆಲಗಳಲ್ಲಿ ಪುಷ್ಪಬಂಧ ಜಾಲಂಧ್ರಗಳಿವೆ. ದ್ವಾರಬಂಧದ ಮೊದಲ ಎರಡು ಶಾಖೆಗಳು ದ್ವಾರದ ಹಣೆಪಟ್ಟಿಯಲ್ಲಿ ಗಜಲಕ್ಷ್ಮಿಯನ್ನು ಹೊಂದಿದ ಲಲಾಟಫಲಕದವರೆಗೂ ಮುಂದುವರೆದಿವೆ. ದ್ವಾರದ ಮೇಲಿನ ಫಲಕದಲ್ಲಿ ಗಣಪತಿ, ಬ್ರಹ್ಮ, ಮಹೇಶ್ವರ, ವಿಷ್ಣು, ಮಹಿಷಮರ್ದಿನಿ ಮತ್ತು ಚಾಮರಧಾರಿಣಿಯರ ಉಬ್ಬುಶಿಲ್ಪಗಳನ್ನು ಫಲಕದ ತುಂಬ ಹಬ್ಬಿರುವ ಮಕರತೋರಣದಲ್ಲಿ ಕಂಡರಿಸಲಾಗಿದೆ. ಮಕರಗಳು ಸವಾರನನ್ನು ಹೊತ್ತಿವೆ.

ಉತ್ತರ ಮತ್ತು ದಕ್ಷಿಣ ಗರ್ಭಗೃಹಗಳೂ ವಿಸ್ತೀರ್ಣದಲ್ಲಿ ಮತ್ತು ರಚನೆಯಲ್ಲಿ ಮುಖ್ಯಗೃಹವನ್ನು ಹೋಲುತ್ತವೆ. ಛತ್ತಿನಲ್ಲಿಯೂ ಸಹ ಹದಿನಾರು ಮೂಲೆಗಳುಳ್ಳ ನಕ್ಷತ್ರ ಮಾದರಿಯ ಅಲಂಕರಣವನ್ನೇ ಹೊಂದಿವೆ. ಆದರೆ ಮುಖ್ಯಗೃಹಕ್ಕೆ ಇರುವ ಕೋಷ್ಠರಚನೆಯನ್ನು ಇಲ್ಲಿ ಕಾಣುವುದಿಲ್ಲ. ಗರ್ಭಗೃಹಗಳಲ್ಲಿ ನಾಲ್ಕು ಅಡಿ ಎತ್ತರವಾದ ಲಿಂಗಗಳನ್ನು ಕಾಣುತ್ತೇವೆ(ಛಾಯಾಚಿತ್ರ-೧೩). ಗರ್ಭಗೃಹಗಳ ದ್ವಾರಬಂಧವು ಅಲಂಕಾರದಲ್ಲಿ ಮುಖ್ಯಗರ್ಭಗೃಹವನ್ನೇ ಹೋಲುತ್ತವೆ. ಅರ್ಧಮಂಟಪಗಳು ಸಹ ವಿಸ್ತೀರ್ಣದಲ್ಲಿ, ಛತ್ತಿನ ಅಲಂಕರಣದಲ್ಲಿ, ದ್ವಾರವಿನ್ಯಾಸ, ಜಾಲಂಧ್ರಗಳ ಜೋಡಣೆಯಲ್ಲಿಯೂ ಮುಖ್ಯಗರ್ಭಗೃಹದ ಅರ್ಧಮಂಟಪ ವನ್ನು ಹೋಲುತ್ತವೆ. ಆದರೆ ಕಲಾತ್ಮಕವಾದ ಚಂದ್ರಶಿಲಾ ರಚನೆಯನ್ನು ಈ ಎರಡೂ ಅರ್ಧಮಂಟಪಗಳಲ್ಲಿ ಕಾಣುತ್ತೇವೆ.

ಮೂರೂ ಅರ್ಧಮಂಟಪಗಳು ಒಂದೇ ನವರಂಗಕ್ಕೆ ಜೋಡಣೆಗೊಂಡಿವೆ. ನವರಂಗದ ಮಧ್ಯದಲ್ಲಿ ಚೌಕಾಕಾರದ ವೇದಿಕೆ ಇದ್ದು, ಅದರ ಮೂಲೆಗಳಲ್ಲಿ ನಯಗೊಳಿಸಿದ ನಾಲ್ಕು ಸ್ವತಂತ್ರ ಕಂಬಗಳಿವೆ. ಈ ಕಂಬಗಳು ಕೀರ್ತಿಮುಖಗಳ ಅಲಂಕರಣವನ್ನು ನಾಲ್ಕು ಮಗ್ಗಲುಗಳಲ್ಲಿ ಹೊಂದಿದ ಪೀಠದ ಮೇಲೆ, ಚೌಕಾಕಾರದ ಪಾದ ಭಾಗವನ್ನು ಅದರ ಮೇಲೆ ಗಂಟಾಕಾರ ರಚನೆಯನ್ನು ಬಳೆಗಳ ಅಲಂಕರಣವನ್ನು ಹೊಂದಿವೆ. ದಂಡಾಗ್ರದಲ್ಲಿ ಕಳಶ, ಘಟ, ಫಲಕಗಳನ್ನು ಹೊಂದಿವೆ. ಕೊನೆಯಲ್ಲಿ ಬೊದಿಗೆ ಇದೆ. ನಾಲ್ಕುಮುಖದ ಬೊದಿಗೆಗಳು ೧ ಅಡಿ ದಪ್ಪ ೧.೫ ಅಡಿ ಅಗಲದ ಕಲ್ಲು ತೊಲೆಗಳಿಂದ ಗೋಡೆ ಕಂಬಗಳೊಂದಿಗೆ ಸಂಪರ್ಕವನ್ನು ಪಡೆದುಕೊಂಡು ಒಂಬತ್ತು ಅಂಕಣಗಳನ್ನು ರಚಿಸಿವೆ. ಪ್ರತಿ ತೊಲೆಯೂ ಮಧ್ಯದಲ್ಲಿ ಮೂರು ಸುತ್ತಿನ ಕಮಲದ ಅಲಂಕರಣವನ್ನು ಹೊಂದಿವೆ. ಎಲ್ಲ ಅಂಕಣದ ಛತ್ತುಗಳೂ ಸಮತಲದಲ್ಲಿ ಅರಳಿದ ಕಮಲಗಳ ಅಲಂಕರಣದಿಂದ ಆಕರ್ಷಕವಾಗಿವೆ. ಮಧ್ಯದ ವಿತಾನವನ್ನು ವಿಶೇಷವಾಗಿ ಅಲಂಕರಿಸಲಾಗಿದೆ. ವಿತಾನದ ಒಳಚೌಕವನ್ನು ಪುಷ್ಪ ಪಟ್ಟಿಕೆ, ಹಗ್ಗ ಮಾದರಿಯ ಅಲಂಕೃತ ಪಟ್ಟಿಯಿಂದ ಕಟ್ಟುಕಟ್ಟಿ ಒಳಭಾಗವನ್ನು ಒಂಭತ್ತು ಭಾಗಗಳನ್ನಾಗಿ ವಿಂಗಡಿಸಿ, ಪ್ರತಿ ಚೌಕದಲ್ಲೂ ಕಮಲಗಳನ್ನು ಬಿಡಿಸಲಾಗಿದೆ. ಚೌಕದ ಮೂಲೆಗಳಲ್ಲಿ ಸಿಂಹಮುಖಗಳಿವೆ. ಮಧ್ಯದ ಅಡ್ಡ ಮತ್ತು ಉದ್ದ ಪಟ್ಟಿಗಳು ಕಟ್ಟಿಗೆ ತೊಲೆಗಳಲ್ಲಿ ಕೆತ್ತಿದಂತೆ ತೋರುತ್ತವೆ. ನವರಂಗದ ಭಿತ್ತಿಭಾಗದಲ್ಲಿ ಎಂಟು ಕೋಷ್ಠಗಳಿರುವುದು ಇಲ್ಲಿಯ ವಿಶೇಷತೆ. ಮುಖ್ಯ ಅರ್ಧಮಂಟಪದ ಎಡಪಾರ್ಶ್ವದ ಕೋಷ್ಠವು ಎತ್ತರವಾದ ದ್ವಾರವನ್ನು ಹೊಂದಿದೆ. ಎಲ್ಲಾ ಕೋಷ್ಠಗಳು ಅಲಂಕಾರ ರಹಿತವಾಗಿ ಸಾದಾ ಮಾದರಿಯಲ್ಲಿವೆ. ಸಪ್ತಮಾತೃಕಾ ಫಲಕದ ಕೋಷ್ಠ

ಒಂದನ್ನು ಬಿಟ್ಟು ಉಳಿದೆಲ್ಲವು ಬರಿದಾಗಿವೆ. ವೇದಿಕೆಯ ಮಧ್ಯದಲ್ಲಿ ಮುಖ್ಯಕ್ಕೆ ಎದುರಾಗಿ ನಂದಿ ಶಿಲ್ಪವಿದೆ. ನವರಂಗದ ದ್ವಾರಬಂಧವು ಒಂದು ಅಡಿ ಎತ್ತರದ ಹೊಸ್ತಿಲ ಮೇಲೆ ಏಳು ಶಾಖೆಗಳಿಂದ ಅಲಂಕೃತಗೊಂಡಿದೆ. ಶಾಖೆಗಳು ಕ್ರಮವಾಗಿ ವಜ್ರಪಟ್ಟಿ ಕುಸುರಿ ಕಲೆ, ಸ್ತಂಭ, ಕುಸುರಿ ಕಲೆ, ಸ್ತಂಭ, ವಲ್ಲಿಬಂಧ ಮತ್ತು ಕಮಲದಳ ಹೀಗೆ ಸೂಕ್ಷ್ಮಕೆತ್ತನೆಗಳನ್ನು ಒಳಗೊಂಡಿವೆ. ಮೊದಲ ಎರಡು ಶಾಖೆಗಳು ಲಲಾಟಫಲಕದವರೆಗೂ ಮುಂದುವರೆದಿವೆ. ಲಲಾಟಫಲಕವು ಒಂದು ಅಡಿ ಮುಂದೆ ಚಾಚಿದ್ದು ಮಧ್ಯದಲ್ಲಿ ಗಜಲಕ್ಷ್ಮಿಯ ಉಬ್ಬು ಶಿಲ್ಪವಿದೆ. ಅಕ್ಕಪಕ್ಕದಲ್ಲಿ ಬಾಳೆಹೂವಿನ ಗೊಂಚಲದ ಅಲಂಕರಣವಿದೆ. ಪ್ರತಿಶಾಖೆಯ ಕೆಳಗೂ ಚಾಮರಧಾರಿಣಿಯರು, ದ್ವಾರಪಾಲಕರು, ಶಿವಗಣಗಳ ಉಬ್ಬುಶಿಲ್ಪಗಳನ್ನು ತ್ರಿಭಂಗಿಯಲ್ಲಿ, ತೋರಣಗಳೊಂದಿಗೆ ಕೆತ್ತಲಾಗಿದೆ.

ನವರಂಗದ ಪೂರ್ವದಿಕ್ಕಿಗೆ ೧೨x೧೨ ಅಡಿ ವಿಸ್ತೀರ್ಣದ, ತೆರೆದ ಮುಖಚತುಷ್ಕಿಯ ರಚನೆ ಇದೆ. ಇಲ್ಲಿ ಕಕ್ಷಾಸನವಿದ್ದು ಆಸನದ ತುದಿಗಳಲ್ಲಿಯ ವೃತ್ತಾಕಾರದ ಎರಡು ಗಿಡ್ಡ ಕಂಬಗಳಿವೆ. ಇವು ಗಂಟಾ ಮಾದರಿ ಮತ್ತು ಬಳೆಗಳ ಅಲಂಕರಣಗಳಿಂದ ಕೂಡಿದ್ದು ನುಣುಪಾಗಿವೆ. ಇವುಗಳ ನಾಲ್ಕು ಮುಖ ಬೋದಿಗೆಗಳು ಮುಖಚತುಷ್ಕಿಯ ಇಳಿಜಾರು ಛತ್ತನ್ನು ಎತ್ತಿ ಹಿಡಿದಿವೆ. ಬೋದಿಗೆಯ ಹೊರಚಾಚಿದ ಎರಡು ಮುಖಗಳು ಇನ್ನೆರಡಕ್ಕಿಂತ ಹೆಚ್ಚು ಉದ್ದವಾಗಿವೆ. ಈ ರಚನೆಯು ಇಳಿಜಾರು ಛತ್ತಿಗೆ ಅನುಕೂಲವಾಗಿದೆ. ಇಳಿಜಾರು ಛತ್ತಿನ ಒಳಮುಖವು ಅಲಂಕೃತ ಉದ್ದ ಅಡ್ಡ ಪಟ್ಟಿಕೆಗಳ ಹೆಣಿಕೆಯಿಂದ ಬಹು ಆಕರ್ಷಕವಾಗಿದೆ. ಮರಗೆಲಸವನ್ನು ನೆನಪಿಸುತ್ತದೆ.

ಶಾಸನಗಳಿಂದ ಹೆಚ್ಚಿನ ವಿವರ : ಹರಳಹಳ್ಳಿಯನ್ನು ಶಾಸನಗಳು ವಿಕ್ರಮಪುರವೆಂದು ಉಲ್ಲೇಖಿಸಿವೆ.[೧೪೭] ಇದು ಗುತ್ತರ ರಾಜಧಾನಿಯಾದ ಗುತ್ತಲದ ಒಂದು ಭಾಗವಾಗಿತ್ತು. ಇಲ್ಲಿಯ ಸ್ವಯಂಭೂ ಸೋಮನಾಥ ದೇವರು ಗುತ್ತರ ಕುಲದೇವರಾಗಿತ್ತು. ಕ್ರಿ.ಶ.೧೧೮೮ರ ಶಾಸನದಲ್ಲಿ ಹರಳಹಳ್ಳಿಯು ಸೋಮೇಶ್ವರಪುರವೆಂದು ಉಲ್ಲೇಖಗೊಂಡಿದೆ. "ಧಾತ್ರಿಯೊಳಿ ... ಲ್ಮುಕ್ತಿಕ್ಷೇತ್ರ" ಎಂದೂ, ದಕ್ಷಿಣವಾರಣಾಸಿ ಎಂದೂ, ಎದುರಿಗೆ ಹರಿಯುವ ತುಂಗಭದ್ರೆಯನ್ನು ಶಿವಗಂಗೆ ಎಂದೂ ವರ್ಣಿಸಲಾಗಿದೆ.[೧೪೮] ಇದೇ ಶಾಸನವು ದೇವಾಲಯ ನಿರ್ಮಾಣದ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ. ೧೨೦ ಸಾಲುಗಳನ್ನು ಹೊಂದಿದ ಈ ಸುದೀರ್ಘ ಶಾಸನವು ಕಾವ್ಯದಂತೆ ತೋರುತ್ತದೆ. ಶಾಸನದ ೯೫ನೆಯ ಸಾಲಿನಲ್ಲಿ

> '.... ಶ್ರೀಮದ್ರಾಜಗುರು
> ಕಲ್ಯಾಣಶಕ್ತಿದೇವರ ಶ್ರೀಪಾ(ದಪ)ದ್ಮಂಗಳ ಪೂಜಿಸಿ
> ಧಾರಾಪೂರ್ವಕವಾಗಿ ಶ್ರೀಸ್ವಯಂಭು ಸೋಮನಾಥ
> ದೇವರ ವಿಕ್ರಮೇಶ್ವರ ಗುತ್ತೇಶ್ವರ ದೇವತಾಪ್ರತಿಷ್ಠಾ
> ತಿಶಯದ ತ್ರಿಕೂಟಮಂ
> ಖಂಡಸ್ಫುಟಿತಜೀರ್ಣೋದ್ಧಾರಕ್ಕಂ ದೇವರಂಗಭೋಗ'
> .... (ದಾನಬಿಟ್ಟ ಬಗ್ಗೆ ವಿವರಿಸಿದೆ)

## ಪಟ್ಟಿ ೨

| ಅ. ಸಂ. | ಊರು | ದೇವಾಲಯ ಹೆಸರು | ದಾನ ನೀಡಿದವರು | ದಾನ ಸ್ವೀಕರಿಸಿದವರು | ಆಸ್ತಿ ವಿವರ | ಕ್ರಿ.ಶ. | ದಾನದ ವಿನಿಯೋಗ | ದಾನ ನೀಡಿದ ಸಂದರ್ಭ | ಉಲ್ಲೇಖ |
| --- | --- | --- | --- | --- | --- | --- | --- | --- | --- |
| ೧. | ಹರಳಹಳ್ಳಿ | ಸೋಮನಾಥ | ಗುತ್ತ ಜೋಯಿದೇವ | ಕಿಟ್ಟಗಾವಿ ಸಂತತಿಯ ಕಲ್ಯಾಣಶಕ್ತಿ ದೇವರು | ಗೊಟ್ಟಂಗಡಿ ಗ್ರಾಮ | ೧೧೮೧ | ಶ್ರೀ ಸ್ವಯಂಭೂ ಸೋಮನಾಥ ದೇವರ ವಿಕ್ರಮೇಶ್ವರ ಗುತ್ತೇಶ್ವರ ದೇವತಾ ಪ್ರತಿಷ್ಠಾತಿಶಯದ ತ್ರಿಕೂಟ ಮಾಟಕ್ಕೆ, ಖಂಡ ಸ್ಫುಟಿತ ಜೀರ್ಣೋದ್ಧಾರಕಂ, ರಂಗಭೋಗ ಚೈತ್ರಪವಿತ್ರಾದಿ ನಿತ್ಯ ನೈಮಿತ್ತಿಕ ಪೂಜೆಗಂ | ಧರ್ಮಕಥಾ ಸಂದರ್ಭದಲ್ಲಿ ಧರ್ಮ ಊರ್ಜಿತಕ್ಕಾಗಿ ಪ್ಲವ ಸಂವತ್ಸರ ಉತ್ತರಾಯಣ ಸಂಕ್ರಮಣ ಶಿವತಿಥಿಯೊಳ್ | ಸೌ.ಇಂ.ಇನ್. ಸಂ. XVIII ಸಂ. ೨೯೬ |
| ೨. | „ | „ | ಗುತ್ತ ವೀರವಿಕ್ರಮಾದಿತ್ಯ ದೇವ ಮತ್ತು ಪ್ರಧಾನ ಸುಸಂಗ | „ | ಹೂದೋಟ, ಅಡಕೆ ತೋಟ, ಭೂಮಿ, ಗದ್ದೆಗಳು, ಬೆಳಹುಗೆ, ಹುಲ್ಲುಣಿ, ಹಾವನೂರು, ವಹಾಯೂರಲೂರ, ಹಡುಗಲಿ, ಆನೇವರಿ, ಗುತ್ತವೊಳಲ್, ಕೆರೆಯೂರುಗಳಲ್ಲಿ ಇಪ್ಪತ್ತು ಮತ್ತರು ಭೂಮಿ | ೧೧೮೮ | ದೇವರಂಗಭೋಗ, ಅಂಗಭೋಗ, ದಾನ, ಸನ್ಮಾನ ವ್ಯಯಕ್ಕೆ | ತನ್ನ ತಾಯಿ ಪದುಮಲದೇವಿಗೆ ಪುಣ್ಯವಾಗಲೆಂದು ಪ್ಲವಂಗ ಸಂವತ್ಸರ ಫಾಲ್ಗುಣ ಶುದ್ಧ ೧೩. ಬೃಹಸ್ಪತಿವಾರ | ಸೌ.ಇಂ.ಇನ್. ಸಂ. XVIII ಸಂ. ೨೯೫ |
| ೩. | „ | „ | ಶ್ರೀ ಮನ್ಮಹಾಪ್ರಧಾನ ದಾಸಿರಾಜ ದಂಡನಾಯಕ | „ | | ೧೧೮೮ | ಪಠ್ಯ ಹಾಳಾಗಿದೆ | ಶಕ ೧೧೧೦ನೇಯ ಪ್ಲವಂಗ ಸಂವತ್ಸರ ಫಾಲ್ಗುಣ ಶುದ್ಧ ೧೩. ಬೃಹಸ್ಪತಿವಾರ | ಅದೇ |

ಶ್ರೀಮದ್‌ರಾಜಗುರು ಕಲ್ಯಾಣಶಕ್ತಿ ಮುನಿಯ ಆದೇಶದ ಮೇರೆಗೆ, ಜೋಯಿದೇವರಸನು ತುಂಗಭದ್ರಾ ತೀರದಲ್ಲಿ ವಿಕ್ರಮಪುರ ಗ್ರಾಮವನ್ನು ನಿರ್ಮಿಸಿ, ಸ್ವಯಂಭೂ ಸೋಮನಾಥನ ಇಕ್ಕೆಲಗಳಲ್ಲಿ, ವಿಕ್ರಮೇಶ್ವರ, ಗುತ್ತೇಶ್ವರ ಲಿಂಗಗಳನ್ನು ಸ್ಥಾಪಿಸಿ, ತ್ರಿಕೂಟಾಚಲವನ್ನು ನಿರ್ಮಿಸಿ, ದಾನಬಿಟ್ಟದ್ದನ್ನು ವಿವರಿಸುತ್ತದೆ. ಅಲ್ಲದೆ ಈ ಶಾಸನದಲ್ಲಿ ಕಿಟ್ಟಗಾವಿ ಸಂತತಿಗೆ ಸೇರಿದ ಮುನಿಪರಂಪರೆಯನ್ನು ದಾಖಲಿಸಲಾಗಿದೆ. ಈ ಸಂತತಿಯ ಮೂಲ ಪುರುಷನಾದ ಶಿವಲಿಂಗ ಬ್ರತಿಪತಿಯು ಅಸಾಮಾನ್ಯ ಮುನಿಯಾಗಿದ್ದನು. ಒಂದು ದಿನ ಪ್ರತಿನಿತ್ಯ ನೂರು ಯತಿಗಳಿಗೆ ಅನ್ನ ಸಂತರ್ಪಣೆ ಮಾಡುತ್ತಿದ್ದ ಭಕ್ತನೊಬ್ಬನು ಅಷ್ಟು ಸಂಖ್ಯೆಯಲ್ಲಿ (ಅನಿಬರ) ಯತಿಗಳನ್ನು ಪಡೆಯದೆ ಚಿಂತಾತುರನಾಗಿ ಶಿವಲಿಂಗ ಬ್ರತಿಪತಿಯಲ್ಲಿ ಬರಲು, ಶಿವಲಿಂಗ ಬ್ರತಿಪತಿಯು ತನ್ನ ತಪಃಪ್ರಭಾವದಿಂದ ಆಹ್ವಾನ ಸ್ಥಿತಿಯಲ್ಲಿ ಯತಿಗಳನ್ನು ತಂದು ತೋರಿದನು ಎಂದು ಶಾಸನವು ಕಿಟ್ಟಗಾವಿ ಸಂತತಿಯ ಮೂಲಪುರುಷನನ್ನು ಬಣ್ಣಿಸಿದೆ.

ಕರ್ನಾಟಕ ದೇವಾಲಯ ಕೋಶ ಹಾವೇರಿ ಜಿಲ್ಲೆ[೧೪೯]ಯಲ್ಲಿ ಜೋಯಿದೇವ ನಿರ್ಮಿಸಿದ 'ವಿಕ್ರಮಪುರ' ಮತ್ತು 'ವಿಕ್ರಮೇಶ್ವರ' ದೇವಾಲಯಗಳು ಕಲ್ಯಾಣ ಚಾಲುಕ್ಯ ಆರನೆಯ ವಿಕ್ರಮಾದಿತ್ಯನು ಮರಣ ಹೊಂದಿದ ನಂತರ ಆತನ ಹೆಸರಲ್ಲಿ ಕಟ್ಟಿರುವುದು ಎಂದಿದ್ದಾರೆ. ಇವರ ಹೇಳಿಕೆ ಸರಿ ಎಂದು ತೋರುವುದಿಲ್ಲ. ಆರನೇ ವಿಕ್ರಮಾದಿತ್ಯನ ಆಡಳಿತಾವಧಿಯು ಕ್ರಿ.ಶ.೧೦೭೬ ರಿಂದ ೧೧೨೬ಕ್ಕೆ ಮುಗಿಯುತ್ತದೆ. ಈ ದೇವಾಲಯ ನಿರ್ಮಾಣವಾದದ್ದು ಕ್ರಿ.ಶ.೧೧೮೧ರಲ್ಲಿ ಅಂದರೆ ಮಧ್ಯದಲ್ಲಿ ೫೫ ವರ್ಷಗಳ ಅಂತರ ಬರುತ್ತದೆ. ಹರಳಹಳ್ಳಿಯ ಸೋಮೇಶ್ವರನನ್ನು ಕುಲದೇವತೆಯನ್ನಾಗಿ ಮಾಡಿಕೊಂಡಿದ್ದ ಗುತ್ತರ ವಂಶದಲ್ಲೂ ವಿಕ್ರಮಾದಿತ್ಯ ಎಂಬ ಹೆಸರು ಪ್ರಖ್ಯಾತವಾಗಿದೆ. ಕ್ರಿ.ಶ.೧೧೯೩ರಲ್ಲಿ ಮಲ್ಲಿದೇವನ ಮಗ ವಿಕ್ರಮಾದಿತ್ಯ[೧೫೦] ಕ್ರಿ.ಶ.೧೧೮೩-೧೨೩೩ರವರೆಗೆ ರಾಜ್ಯವಾಳಿದ ಎರಡನೇ ವಿಕ್ರಮಾದಿತ್ಯ[೧೫೧] ಮುಂದೆ ಕ್ರಿ.ಶ.೧೨೫೮ರ ಸುಮಾರಿಗೆ ಸೇವುಣ ಕನ್ನರನ ಸಾಮಂತನಾಗಿ ಕಂಡುಕೊಳ್ಳುವ ಮೂರನೇ ವಿಕ್ರಮಾದಿತ್ಯ[೧೫೨] ಇವರೆಲ್ಲ ಗುತ್ತವಂಶದಲ್ಲಿ ಬರುವ ವ್ಯಕ್ತಿಗಳು. ಆದ್ದರಿಂದ ಗುತ್ತರ ಮೊದಲನೇ ವಿಕ್ರಮಾದಿತ್ಯನ ರಾಜ್ಯಾಡಳಿತದ ಕಾಲಮಾನದಿಂದ ೧೮ ವರ್ಷ ಅಂತರವನ್ನು ಹೊಂದಿದ ಈ ವಿಕ್ರಮೇಶ್ವರ ಗುತ್ತವಂಶದ ವಿಕ್ರಮಾದಿತ್ಯನ ಹೆಸರಿನಲ್ಲಿ ಸ್ಥಾಪಿತಗೊಂಡಿದ್ದು ಎಂದುಕೊಂಡರೆ ಹೆಚ್ಚು ಸಮಂಜಸವಾಗುತ್ತದೆ.

ಗುತ್ತವಂಶದ ಆರಾಧ್ಯದೈವ ಸೋಮೇಶ್ವರ ಮತ್ತು ಇಕ್ಕೆಲಗಳಲ್ಲಿ ತಮ್ಮ ವಂಶದ ಪೂರ್ವಜರ ಹೆಸರಿನ ಮೇಲೆ ಸ್ಥಾಪಿತಗೊಂಡ ಲಿಂಗಗಳನ್ನು ಹೊಂದಿದ ಸ್ವಯಂಭೂ ಸೋಮನಾಥ ತ್ರಿಕೂಟಾಚಲಕ್ಕೆ ಈ ವಂಶಜರಿಂದಲೇ ಸಾಕಷ್ಟು ದಾನದತ್ತಿಗಳು ದೊರೆತಿವೆ. ಇದಕ್ಕೆ ಸಂಬಂಧಿಸಿದಂತೆ ವಿವರವನ್ನು ಪಟ್ಟಿ ೨ರಲ್ಲಿ ಕೊಡಲಾಗಿದೆ.

ಊರು : ಹೊನ್ನತ್ತಿ (ತಾ.ರಾಣೆಬೆನ್ನೂರು)

ಸ್ಥಳ : ಗುತ್ತಲ ರಸ್ತೆ

ಹೆಸರು : ರಾಮಲಿಂಗೇಶ್ವರ

ಅಭಿಮುಖ : ಪೂರ್ವ

ನಿವೇದನೆ : ಈಶ್ವರ (ಎರಡು ಗರ್ಭಗೃಹಗಳಲ್ಲಿ ಲಿಂಗಗಳಿವೆ ಒಂದು ಬರಿದಾಗಿದೆ)

ಕಾಲ : ಕ್ರಿ.ಶ.೧೧೨೪ ಮತ್ತು ಕ್ರಿ.ಶ.೧೧೮೬

ಶೈಲಿ : ಕಲ್ಯಾಣ ಚಾಲುಕ್ಯ

ಬಳಸಿದ ವಸ್ತು : ಕಪ್ಪು ಮಿಶ್ರಿತ ನೀಲಿಛಾಯೆಯ ಕಲ್ಲು

## ದೇವಾಲಯ ವಾಸ್ತುಶೈಲಿ

**ತಳವಿನ್ಯಾಸ :** (ತಳವಿನ್ಯಾಸ ಚಿತ್ರ ಸಂಖ್ಯೆ-೩) ಮೂರು ಗರ್ಭಗೃಹಗಳು, ಮೂರೂ ಗೃಹಗಳಿಗೆ ಅರ್ಧ ಮಂಟಪಗಳು, ನವರಂಗ, ಪ್ರವೇಶ.

**ಊರ್ಧ್ವಮುಖ ರಚನೆಗಳು :** ರಾಣೆಬೆನ್ನೂರಿನಿಂದ ಉತ್ತರಕ್ಕೆ ೧೪ಕಿ.ಮೀ. ದೂರದಲ್ಲಿರುವ ಈ ದೇವಾಲಯವು ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದೆ. ದೇವಾಲಯದ ಅಧಿಷ್ಠಾನವು ಮೂರು ಅಡಿ ಎತ್ತರವಾಗಿದ್ದು ಉಪಾನ, ಜಗತಿ, ಪದ್ಮ, ತ್ರಿಪಟ್ಟಕುಮುದವನ್ನು ಹೊಂದಿದ್ದು, ಪಾದಬಂಧ ಪ್ರಬೇಧಕ್ಕೆ ಸೇರುತ್ತದೆ(ರೇಖಾಚಿತ್ರ-೩). ಅಧಿಷ್ಠಾನವು ಕರ್ಣಭಾಗದಲ್ಲಿ ಚೌಕಾಕಾರವಾಗಿ ಒಂದು ಹಂತದಲ್ಲಿ ಮುಂಚಾಚಿದ್ದು ಭದ್ರಭಾಗದಲ್ಲಿ ಎರಡು ಹಂತದಲ್ಲಿ ಮುಂಚಾಚನ್ನು ಹೊಂದಿ ನಕ್ಷತ್ರ ಮಾದರಿಯಲ್ಲಿದೆ. ಇವೆರಡರ ಮಧ್ಯ ಒಂದು ಹಿಂಚಾಚು ಏರ್ಪಟ್ಟಿದೆ. ಸಣ್ಣ ದಂತಪಂಕ್ತಿಗಳ ಅಲಂಕರಣ ಹೊಂದಿದ ಮೇಜಿನ ರೀತಿಯ ರಚನೆಯ ಮೇಲಿಂದ ಭಿತ್ತಿಯು ಆರಂಭಗೊಂಡಿದೆ(ಛಾಯಾಚಿತ್ರ-೫). ಒಳಮುಖದಲ್ಲಿ ಮತ್ತು ಹೊರಮುಖದಲ್ಲಿ ನಯಗೊಳಿಸಿದ ಕಲ್ಲುಗಳನ್ನು ಹೊಂದಿಸಿ, ಮಧ್ಯದ ಖಾಲಿ ಭಾಗವನ್ನು ಮಣ್ಣು ಕಲ್ಲುಗಳಿಂದ ತುಂಬಿದ ನಾಲ್ಕು ಅಡಿ ದಪ್ಪ ಭಿತ್ತಿಯನ್ನು ರಚಿಸಲಾಗಿದೆ. ಭದ್ರಭಾಗವು ತೆಳುವಾದ ನಾಲ್ಕು ಕಂಬಗಳಿಂದ ನಿರ್ಮಾಣಗೊಂಡು, ಮಧ್ಯಭಾಗದಲ್ಲಿ ಎರಡು ಗಿಡ್ಡಕಂಬಗಳ ಮೇಲೆ ತ್ರಿತಲ ವೇಸರ ಶೈಲಿಯ ಶಿಖರದ ಅಲಂಕರಣ ಹೊಂದಿದೆ. ಕೋಷ್ಟ ರಚನೆಗಳಿಲ್ಲ. ಕರ್ಣಭಾಗವು ತೆಳುವಾದ ಎರಡು ಕಂಬಗಳಿಂದ ರಚನೆಗೊಂಡು, ಮಧ್ಯದಲ್ಲಿ ಜೋಡಿ ಕಂಬಗಳ ಮೇಲೆ ತ್ರಿತಲ ವೇಸರ ಶೈಲಿಯ ಶಿಖರಾಲಂಕರಣವಿದೆ. ಭಿತ್ತಿಯ ಹಿಂಚಾಚಿನ ಭಾಗದಲ್ಲೂ ಒಂಟಿ ಕಂಬದ ಮೇಲೆ ವೇಸರ ಶೈಲಿ ಶಿಖರದ ಅಲಂಕರಣವಿದ್ದು, ಅದರ ಮೇಲೆ ಕೀರ್ತಿಮುಖದಿಂದ ಇಳಿಬಿದ್ದ ತೋರಣವು ಶಿಖರದ ಎರಡೂ ಬದಿಗಳನ್ನು ಆವರಿಸಿದೆ(ಛಾಯಾಚಿತ್ರ-೬). ಉಳಿದಂತೆ ಭಿತ್ತಿಭಾಗವು ಖಾಲಿಯಾಗಿದೆ. ದೇವಾಲಯ ಮೇಲ್ಕಟ್ಟಡವು ಪೂರ್ತಿ ಹಾಳಾಗಿದೆ. ಪ್ರಸ್ತರದ ಭಾಗಗಳು ಅಲ್ಲಲ್ಲಿ ಕಾಣಿಸಿಕೊಳ್ಳುತ್ತವೆ.

ಅಕ್ಕಪಕ್ಕದ ಗರ್ಭಗೃಹಗಳ ಅಧಿಷ್ಠಾನ ಭಾಗವು ಮಣ್ಣಿನಲ್ಲಿ ಮುಚ್ಚಿದೆ. ಹೊರಭಾಗದ ಭಿತ್ತಿಯೂ ಸಹ ಪೂರ್ತಿ ಹಾಳಾಗಿದ್ದು ಭಿತ್ತಿಯ ಒಳಮುಖದ ಛಪ್ಪಡಿ ಕಲ್ಲುಗಳು ಮಾತ್ರ ಉಳಿದುಕೊಂಡಿವೆ. ಈ ಬಿದ್ದ ಭಾಗದಿಂದ ಭಿತ್ತಿ ರಚನೆಯನ್ನು ಅರಿಯಬಹುದು. ದೇವಾಲಯಕ್ಕೆ ಪ್ರವೇಶದಂತೆ ಇರುವ ಒಂದಕಣದ ವಾಸ್ತುರಚನೆಯ ಅಧಿಷ್ಠಾನ ಮತ್ತು ಭಿತ್ತಿ ಭಾಗಗಳು ಹಾಳಾಗಿವೆ.

**ತಿರ್ಯಙ್ಮುಖ ರಚನೆಗಳು :** ಪೂರ್ವಾಭಿಮುಖವಾದ ಮುಖ್ಯ ಗರ್ಭಗೃಹವು ಪೂರ್ವ-ಪಶ್ಚಿಮ ಮತ್ತು ದಕ್ಷಿಣೋತ್ತರವಾಗಿ ೮x೭ ಅಡಿ ವಿಸ್ತೀರ್ಣವನ್ನು ಹೊಂದಿದೆ. ಭಿತ್ತಿಯನ್ನು ನಾಲ್ಕು ಮೂಲೆ ಕಂಬಗಳಿಂದ




ತಳವಿನ್ಯಾಸ ರೇಖಾಚಿತ್ರ-೩, ರಾಮಲಿಂಗೇಶ್ವರ ದೇವಾಲಯ, ಹೊನ್ನತ್ತಿ (ತಾ.ರಾಣೆಬೆನ್ನೂರು)
೧. ಗರ್ಭಗೃಹ, ೨. ಅರ್ಧಮಂಟಪ, ೩. ನವರಂಗ, ೪. ಪ್ರವೇಶಮಂಟಪ




ರೇಖಾಚಿತ್ರ-೩, ರಾಮಲಿಂಗೇಶ್ವರ ದೇವಾಲಯ, ಹೊನ್ನತ್ತಿ (ತಾ.ರಾಣೆಬೆನ್ನೂರು)

೧ ಉಪಾನ, ೨. ಜಗತಿ, ೩. ಪದ್ಮ, ೪. ಕುಮುದ, ೫. ಕಪೋತ

ಮತ್ತು ಮಧ್ಯದಲ್ಲಿ ೧/೨ x ೪-೫ ಉದ್ದಗಲದ ಕಲ್ಲುಫಲಕಗಳನ್ನು ಬಳಸಿ ಒಂದರ ಮೇಲೊಂದು ಹೊಂದಿಸಿ ರಚಿಸಲಾಗಿದೆ. ಪಶ್ಚಿಮ ದಿಕ್ಕಿನ ಭಿತ್ತಿಯ ಮಧ್ಯದಲ್ಲಿ ಮುಂಚಾಚಿದ ಕಲ್ಲುಹಲಗೆ ಇದೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಗರ್ಭಗೃಹದ ದ್ವಾರವು ಅರ್ಧ ಅಡಿ ಎತ್ತರದ ಹೊಸ್ತಿಲ ಮೇಲೆ ಪಂಚಶಾಖೆಗಳಿಂದ ಕೂಡಿದೆ. ಶಾಖೆಗಳಲ್ಲಿ ಯಾವುದೇ ಅಲಂಕರಣವಿಲ್ಲ. ಪಂಚಶಾಖೆಗಳಲ್ಲಿ ಮಧ್ಯದ ಶಾಖೆಯು ಪ್ರಧಾನ ವಾಗಿದ್ದು, ಉಳಿದವುಗಳಿಗಿಂತ ಹೆಚ್ಚು ಮುಂಚಾಚಿದೆ. ಆ ಶಾಖೆಯ ಶಿರೋಭಾಗದಲ್ಲಿ ಸ್ತಂಭಾಗ್ರದ ಅಲಂಕರಣ ವಿದೆ. ಅಕ್ಕಪಕ್ಕಗಳಲ್ಲಿಯ ಎರಡು ಶಾಖೆಗಳು ಹಂತಹಂತವಾಗಿ ಹಿಂದೆ ಸರಿದಂತೆ ರಚನೆಗೊಂಡಿದೆ. ಒಳಮುಖದ ಮೊದಲ ಎರಡು ಶಾಖೆಗಳು ದ್ವಾರದ ಹಣೆಪಟ್ಟಿಯಲ್ಲಿಯೂ ಮುಂದುವರೆದು ಲಲಾಟಫಲಕದಲ್ಲಿ ಸಂಧಿಸಿವೆ. ಫಲಕದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ದ್ವಾರಬಂಧದ ಮೇಲಿನ ಉತ್ತರಾಂಗವು ಬರಿದಾಗಿದೆ. ಗರ್ಭಗೃಹದ ಮುಂದಿನ ರಚನೆಯಾದ ಅರ್ಧಮಂಟಪದ ಭಿತ್ತಿಯು ಗರ್ಭಗೃಹದಂತೆ ರಚನೆಗೊಂಡಿದೆ. ಛತ್ತಿನಲ್ಲಿ ಕಮಲ ಅಲಂಕರಣವಿದೆ. ಅರ್ಧಮಂಟಪದ ದ್ವಾರಬಂಧವು ಬಿದ್ದಿದೆ. ಮೂರು ಮುಂಚಾಚುಗಳನ್ನು ಹೊಂದಿದ ಅರ್ಧಅಡಿ ಎತ್ತರದ ಹೊಸ್ತಿಲ ಭಾಗಗಳು ಮಾತ್ರ ಉಳಿದಪಕೊಂಡಿವೆ. ಅರ್ಧಮಂಟಪವನ್ನು ನವರಂಗಕ್ಕೆ ಸೇರಿಸುವ ಮೂಲೆ ಕಂಬಗಳು ಕಲಾತ್ಮಕವಾಗಿವೆ. ಈ ಕಂಬಗಳನ್ನು ನಾಲ್ಕು ಅಡ್ಡಗೆರೆಗಳು ವಿಭಾಗಿಸಿವೆ. ಎರಡು ಮತ್ತು ನಾಲ್ಕನೇ ಭಾಗದಲ್ಲಿ ಮೋದಕ ಮಾದರಿ ಪದಕಗಳಿದ್ದು, ಕೆಳಪದಕದ ಹೊರ ಭಾಗದಲ್ಲಿ ಲಂಬಗೆರೆಗಳ ಅಲಂಕರಣವಿದೆ. ಮೂರನೇ ಭಾಗವು ನಿಮ್ನ ರೀತಿಯಲ್ಲಿದೆ.

ದಕ್ಷಿಣ ದಿಕ್ಕಿನ ಗರ್ಭಗೃಹವು ೮x೭ ಅಡಿ ವಿಸ್ತೀರ್ಣವಾಗಿದೆ. ಶಾಸನಗಳ ಆಧಾರದಿಂದ ಈ ಎರಡು ಗರ್ಭಗೃಹಗಳ ನಿರ್ಮಾಣದಲ್ಲಿ ೯೩ ವರ್ಷಗಳ ಅಂತರವಿದೆ ಎಂದು ಗಮನಿಸಬಹುದಾಗಿದೆ. ವಾಸ್ತುಶೈಲಿ ಅಲಂಕಾರಿಕ ವಿನ್ಯಾಸಗಳಲ್ಲಿಯೂ ಇವೆರಡರಲ್ಲಿ ಭಿನ್ನತೆಯನ್ನು ಗುರುತಿಸಬಹುದು. ಗರ್ಭಗೃಹದ ಭಿತ್ತಿಯನ್ನು ನಾಲ್ಕು ಮೂಲೆ ಕಂಬಗಳ ಆಧಾರದಿಂದ ೩ ಅಡಿ ಅಗಲ ೫-೬ ಅಡಿ ಉದ್ದದ ಕಲ್ಲು ಫಲಕಗಳನ್ನು ಉಪಯೋಗಿಸಿ ರಚಿಸಲಾಗಿದೆ. ಗರ್ಭಗೃಹದ ಛತ್ತು ಮತ್ತು ಪಶ್ಚಿಮ ದಿಕ್ಕಿನ ಭಿತ್ತಿ ಭಾಗವು ಹಾಳಾಗಿದೆ. ಇದರ ದ್ವಾರಬಂಧವು ಪಂಚಶಾಖೆಗಳಿಂದ ಕೂಡಿದ್ದು, ಮಧ್ಯಶಾಖೆಯು ಪ್ರಧಾನವಾಗಿದ್ದು ಹೆಚ್ಚು ಮುಂಚಾಚಿದೆ. ಅಕ್ಕಪಕ್ಕದ ಶಾಖೆಗಳು ಹಂತಹಂತವಾಗಿ ಹಿಂದೆ ಸರಿದಿವೆ. ಒಳಮಗ್ಗುಲದ ಎರಡು ಶಾಖೆಗಳು ದ್ವಾರದ ಹಣೆಪಟ್ಟಿಯಲ್ಲಿ ಮುಂದುವರೆದು, ಗಜಲಕ್ಷ್ಮಿಯ ಉಬ್ಬುಶಿಲ್ಪವನ್ನು ಹೊಂದಿದ ಲಲಾಟಫಲಕದಲ್ಲಿ ಸಂಧಿಸಿವೆ. ಅರ್ಧಮಂಟಪ ೭x೭ ಅಡಿ ವಿಸ್ತೀರ್ಣದಲ್ಲಿದ್ದು, ಭಿತ್ತಿಯು ಮೂರು ದೊಡ್ಡ ಛಪ್ಪಡಿ ಕಲ್ಲುಗಳಿಂದ ರಚನೆಗೊಂಡಿದೆ. ಛತ್ತಿನಲ್ಲಿ ಸಮತಲದಲ್ಲಿ ಕಮಲದ ಅಲಂಕರಣವಿದೆ. ಅರ್ಧಮಂಟಪದ ದ್ವಾರವನ್ನು ಅಕ್ಕಪಕ್ಕದಲ್ಲಿ ೨x೬ ಅಡಿ ಅಗಲದ ಎರಡು ಫಲಕಗಳನ್ನು ಉಪಯೋಗಿಸಿ, ಮೇಲಿನ ಭಾಗದಲ್ಲಿ ೭ ಅಡಿ ಉದ್ದ ೧ ಅಡಿ ಅಗಲದ ಉದ್ದನೆಯ ಫಲಕವನ್ನು ಹೊಂದಿಸಿ ರಚಿಸಲಾಗಿದೆ. ಅಕ್ಕಪಕ್ಕದ ಫಲಕಗಳು ತಳಭಾಗದಲ್ಲಿ ಅಲಂಕಾರರಹಿತವಾಗಿದ್ದು, ಮೇಲಿನ ಭಾಗದಲ್ಲಿ ಕಂಬ ಮಾದರಿ ಮತ್ತು ಜಾಲಂಧ್ರಗಳನ್ನು ಹೊಂದಿವೆ. ದ್ವಾರದ ಹಣೆ ಫಲಕದಲ್ಲಿ ಸ್ತಂಭಾಗ್ರಗಳ ಅಲಂಕರಣೆ, ಲಲಾಟಫಲಕದಲ್ಲಿ ಗಜಲಕ್ಷ್ಮಿ ಅಕ್ಕಪಕ್ಕ ಗಳಲ್ಲಿ ಅಧೋಮುಖ ಕಮಲದ ಮೊಗ್ಗುಗಳ ಅಲಂಕರಣವಿದೆ. ದ್ವಾರದ ಮೇಲಿನ ಫಲಕದಲ್ಲಿ ಮೂರು ನಾಗರ ಶೈಲಿಯ ಶಿಖರಗಳಿವೆ(ಛಾಯಾಚಿತ್ರ-೭). ಉತ್ತರ ದಿಕ್ಕಿನ ಗರ್ಭಗೃಹವು ಪೂರ್ತಿ ನಾಶವಾಗಿದೆ.




ರೇಖಾಚಿತ್ರ-೪, ರಾಮಲಿಂಗೇಶ್ವರ ದೇವಾಲಯದ ನವರಂಗದಲ್ಲಿರುವ ಕಂಬ, ಹೊನ್ನತ್ತಿ
(ತಾ.ರಾಣೆಬೆನ್ನೂರು)

೧. ಪೀಠ, ೨. ಪಾದ, ೩. ದಂಡ, ೪. ಘಟ, ೫. ಮಂಡಿ, ೬. ಫಲಕ, ೭. ಬೋದಿಗೆ

ಗರ್ಭಗೃಹದ ಹಿಂಬದಿಯಲ್ಲಿ ಭಿತ್ತಿಗೆ ಸಂಬಂಧಿಸಿದ ಒಂದು ಫಲಕ ಮಾತ್ರ ಉಳಿದುಕೊಂಡಿದೆ. ದ್ವಾರಬಂಧದ ಸ್ಥಳದಲ್ಲಿ ಹೊಸ್ತಿಲ ಭಾಗವನ್ನು ಕಾಣಬಹುದು.

ಮೂರು ದಿಕ್ಕಿನ ವಾಸ್ತು ರಚನೆಗಳನ್ನು ಒಂದೆಡೆ ಸೇರಿಸುವ ನವರಂಗವು ೧೭.೪x೧೭.೮ ಅಡಿ ವಿಸ್ತೀರ್ಣದಲ್ಲಿದೆ. ಮಧ್ಯಭಾಗದಲ್ಲಿ ಚೌಕಾಕಾರದ ವೇದಿಕೆ ಇದ್ದು, ಅದರ ಮೂಲೆಗಳಲ್ಲಿ ತಿರುಗಣಿ ಯಂತ್ರದಿಂದ ರಚನೆಗೊಂಡ ನಾಲ್ಕು ಕಂಬಗಳಿವೆ. ಈ ಕಂಬಗಳು ಪೀಠಭಾಗದಲ್ಲಿ ಸಣ್ಣ ನಾಸಿಗಳಿಂದ, ದಂತಪಂಕ್ತಿಗಳಿಂದ ಕೂಡಿವೆ. ಮಧ್ಯ ಭಾಗದಲ್ಲಿ ಘಂಟಾ ರಚನೆ ಬಳೆಗಳ ಅಲಂಕರಣವಿದೆ. ದಂಡಾಗ್ರದಲ್ಲಿ ಘಟ, ಮಂಡಿ, ಫಲಕ ಭಾಗಗಳಿದ್ದು ಮೇಲೆ ತ್ರಿಕೋನ ಮಾದರಿಯಲ್ಲಿ ನಾಲ್ಕು ಮುಖದ ಬೋದಿಗೆ ಇದೆ(ರೇಖಾಚಿತ್ರ-೪). ಬೋದಿಗೆಗಳು ೧ ಅಡಿ ದಪ್ಪ ೧ x ೧/೨ ಅಡಿ ಅಗಲದ ಕಲ್ಲು ತೊಲೆಗಳನ್ನು ಹೊತ್ತಿವೆ. ಮಧ್ಯದ ವಿತಾನದಲ್ಲಿ ಕಮಲದ ಅಲಂಕರಣವಿದೆ. ನವರಂಗದ ಭಿತ್ತಿಯಲ್ಲಿ ಅಗಲವಾದ ನಾಲ್ಕು ಕೋಷ್ಠಗಳಿವೆ. ಕೆಳಭಾಗದಲ್ಲಿ ಕೆಲವು ಅಧಿಷ್ಠಾನ ಭಾಗಗಳು ಮತ್ತು ಮೇಲೆ ಕಪೋತ ಛತ್ತನ್ನು ಬಿಟ್ಟರೆ ಬೇರೆ ಅಲಂಕರಣ ಈ ಕೋಷ್ಠಗಳಿಗಿಲ್ಲ. ನವರಂಗದ ದಕ್ಷಿಣ ದಿಕ್ಕಿನ ಗೋಡೆ ಕಂಬದ ಮೇಲೆ ಶಾಸನ ಪಾಠವಿದೆ. ರಾಜೇಶ್ವರ ದೇವಾಲಯ ನಿರ್ಮಾಣಗೊಂಡ ಮಾಹಿತಿಯನ್ನು ಇದು ಒದಗಿಸುತ್ತದೆ. (ಛಾಯಾಚಿತ್ರ-೭) ನವರಂಗದ ಪೂರ್ವದಿಕ್ಕಿಗೆ ಪ್ರವೇಶವಿದ್ದು ಇಲ್ಲಿ ಯಾವುದೇ ಅಲಂಕರಣವಿಲ್ಲ.

ವ್ಹಿ.ಜಿ.ಸೊಟ್ಟಮ್ಮನವರ ಅವರು[೧೫೩] ಈ ದೇವಾಲಯದ ಬಗ್ಗೆ ಬರೆಯುವಾಗ ಇದು ತಕ್ಕಮಟ್ಟಿಗಾದರೂ ಸುಸ್ಥಿತಿಯಲ್ಲಿ ಇದ್ದದ್ದು ತಿಳಿದುಬರುತ್ತದೆ. ಅವರು ಇಲ್ಲಿಯ ವಾಸ್ತುಶಿಲ್ಪವನ್ನು ವಿವರಿಸುತ್ತ ಸಭಾ ಮಂಟಪದ ಬಾಗಿಲುಗಳಲ್ಲಿ ಸುಂದರವಾದ ಕೆತ್ತನೆಯ ಹಲವಾರು ಮೂರ್ತಿಗಳು, ಆನೆಗಳು, ಹಂಸಗಳು ನಮ್ಮನ್ನು ಆಕರ್ಷಿಸುತ್ತವೆ ಎಂದು ತಿಳಿಸಿರುವರು. ಆದರೆ ಈಗ ಅದ್ಯಾವುದೂ ಈ ದೇವಾಲಯದಲ್ಲಿ ಉಳಿದಿಲ್ಲ. ಈ ದೇವಾಲಯವು ಇತ್ತೀಚೆಗೆ ದುಶ್ಕರ್ಮಿಗಳಿಂದ ನಾಶ ಹೊಂದಿದೆ.

ಶಾಸನಗಳಿಂದ ಹೆಚ್ಚಿನ ವಿವರ : ರಾಷ್ಟ್ರಕೂಟ ಎರಡನೇ ಕೃಷ್ಣನ ಇಲ್ಲಿಯ ಶಾಸನವು[೧೫೪] ಈ ಊರನ್ನು 'ಪುನ್ನವನ್ತಿಪನ್ನೆರಡು' ಎಂದು ಉಲ್ಲೇಖಿಸಿದೆ. ಕಲ್ಯಾಣಚಾಲುಕ್ಯ ಆರನೇ ವಿಕ್ರಮಾದಿತ್ಯನ ಕಾಲದಲ್ಲಿ 'ಹೊನ್ನವರ್ತಿ' ಎಂದು ಬದಲಾದದ್ದು ಕಂಡುಬರುತ್ತದೆ.[೧೫೫] ಮುಂದಿನ ಶಾಸನಗಳು 'ಹೊನವತಿ'[೧೫೬] 'ಹೊಂನವತ್ತಿ' ಎಂದೆಲ್ಲ ಉಲ್ಲೇಖಿಸಿವೆ.

ಎರಡುನೂರು ಮಹಾಜನರನ್ನು ಒಳಗೊಂಡ 'ಶ್ರೀಮದನಾದಿ' ಅಗ್ರಹಾರವನ್ನು ಹೊಂದಿದ್ದ ಈ ಪೊನ್ನವರ್ತ್ತಿಯನ್ನು ಕ್ರಿ.ಶ.೧೧೨೪ರ ಶಾಸನವು

> .....ಕುಂತಳ ವಿಷಯವಧೂಟೀಕಾಂತಿಸಮೇತಾನನಕ್ಕೆ ಮೂಗಿನಪೊಲೆ
> ಚಲ್ವಂ ತಳೆದು ತೋರ್ಪ್ಪುದಖಿ-
> ಳಾಸ್ತಾನಾವೃತಕೀರ್ತಿ ಪೊನ್ನವರ್ತಿಗ್ರಾಮ|| ಸುರಪುರಮಂ ಪಳಂಚಲೆದು
> ಭೋಗವತೀಪುರಮಂ ತಗುಳ್ದಿಧಿಕ್ಕರಿಸಿ ಕುಬೇರನಿ-

ಪಟ್ಟಿ ೩

| ಅ. ನಂ. | ಊರು | ದೇವಾಲಯ ಹೆಸರು | ದಾನ ನೀಡಿದವರು | ದಾನ ಸ್ವೀಕರಿಸಿದವರು | ದಾನ ವಿವರ | ಕ್ರಿ.ಶ. | ದಾನದ ವಿನಿಯೋಗ | ದಾನ ನೀಡಿದ ಸಂದರ್ಭ (ಶಾಸನದಲ್ಲಿ ಉಲ್ಲೇಖಿಸಿದಂತೆ) | ಉಲ್ಲೇಖ |
|---|---|---|---|---|---|---|---|---|---|
| ೧. | ಹೊನ್ನತ್ತಿ (ತಾ.ರಾಣೆ ಬೆನ್ನೂರು) | ಚಾಮೇಶ್ವರ | ಪ್ರಧಾನರಾದ ದೇಕಣ ಮತ್ತು ನಾಕಣ | ಬ್ರಹ್ಮರಾಸಿ ಜೀಯರು | ಗದ್ದೆ, ಹೂವಿನ ತೋಟ, ಮನೆ | ೧೧೨೪ | ಖಣ್ಡಸ್ಫುಟಿತ ಜೀರ್ಣೋದ್ಧಾರಕ್ಕೆ ಗಂಧಧೂಪ ದೀಪ ನೈವೇದ್ಯಕ್ಕೆ | ವಿಕ್ರಮಶಕ ೪೮ನೆಯ ಶೋಭಕೃತ್ಸಂವತ್ಸರದ ಮಾಘದಮವಾಸೆ ಆದಿತ್ಯವಾರ ಸಂಕ್ರಾಂತಿ ವ್ಯತಿಪಾತ ಸೂರ್ಯಗ್ರಹಣದಂದು | ಸೌ.ಇಂ.ಇನ್. ಸಂ. XVIII ನಂ. ೨೨೪ |
| ೨. | ” | ರಾಜೇಶ್ವರ | ಹಿರಿಯ ಜೋಯಿದೇವ ಬಿಚೀಸೆಟ್ಟಿ ತಿಪ್ಪರಸ ಮತ್ತು ಭಾಸ್ಕರದೇವ, ಬೇಳಿಸೆಟಿ ಸಾವಿಸೆಟಿ ಮುಂತಾದ ಸಮಸ್ತ ವರ್ತಕರು | ವಿರೂಪಾಕ್ಷದೇವ ತ್ರಿಲೋಚನ ದೇವರು | ಭೂಮಿ, ನಿವೇಶನ ಕೆಲವು ಸುಂಕಗಳು | ೧೧೮೭ | | ಪ್ಲವಂಗ ಸಂವತ್ಸರದ ಕಾರ್ತಿಕ ಶುದ್ಧ ಪೌರ್ಣಿಮೆ ಸೋಮವಾರ ವಿತಿಪಾತದಲ್ಲಿ | ಅದೇ ನಂ. ೩೦೨ |

ಕೈಯ ಯಳಕಾಪುರಮಂ ಪಳಿದೆಯ್ದೆ ತನ್ನ ಬಿತ್ತರಮನೆ

ಲೋಕದೊಳ್ಮೆರದು ರಂಜಿಸುವಗ್ಗದ ಪೊನ್ನವರ್ತಿಯಂ...

ಎಂದು ಬಣ್ಣಿಸಿದೆ. ಗುತ್ತಲದ ಗುತ್ತರ ಪ್ರಮುಖ ಪಟ್ಟಣವಾಗಿ ಮೆರೆದ ಈ ಹೊನ್ನತ್ತಿಯು ಸಂಪದ್ಭರಿತವಾಗಿತ್ತು ಎಂದು ತಿಳಿದುಬರುತ್ತದೆ.

ರಾಮಲಿಂಗೇಶ್ವರ ತ್ರಿಕೂಟಕ್ಕೆ ಸಂಬಂಧಪಟ್ಟಂತೆ ಆರನೇ ವಿಕ್ರಮಾದಿತ್ಯನ ಕ್ರಿ.ಶ.೧೧೨೪ರ ಶಾಸನ ಮತ್ತು ಕ್ರಿ.ಶ.೧೧೮೭ರ ಶಾಸನಗಳು ಉಪಯುಕ್ತ ಮಾಹಿತಿಯನ್ನು ಒದಗಿಸುತ್ತವೆ. ಕ್ರಿ.ಶ.೧೧೨೪ರ ಶಾಸನದಲ್ಲಿ

..... ಚೋಮದೇವನ ಪ್ರಧಾನರಪ್ಪ ದೇಕಣ್ಣಮಂ

ನಾಕಣ್ಣನುಂ ಮಾಡಿಸಿದ ಚಾಮೇಶ್ವರ ದೇವರ

ದೇಗುಲದ ಖಣ್ಡಸ್ಫುಟಿತ ಜೀರ್ಣೋದ್ಧಾರಕ್ಕ ಗನ್ದ

ಪುಷ್ಪ .....

ಬ್ರಹ್ಮರಾಸಿ ಜೀಯರ ಕಾಲಂ ಕರ್ಚಿ...

ಎಂದು ದಾಖಲಿಸಿದೆ. ವಿಕ್ರಮಾಂಕದಂಡಾಧಿಪ ಚೋಮದೇವನ ಪ್ರಧಾನರಾದ, ದೇಕಣ್ಣ ಮತ್ತು ನಾಕಣ್ಣ ಸಹೋದರರು ಚಾಮೇಶ್ವರ ದೇವಾಲಯವನ್ನು ನಿರ್ಮಿಸಿದರು ಎಂದು ತಿಳಿದುಬರುತ್ತದೆ. ಈ ಶಾಸನವು ದೇವಾಲಯದ ಆವರಣದಲ್ಲಿದೆ. ಕ್ರಿ.ಶ.೧೧೮೭ರ ಶಾಸನವು ದೇವಾಲಯದ ಒಳಭಾಗದ ಗೋಡೆಕಂಬದ ಮೇಲಿದೆ. ಈ ಶಾಸನವು

..... ಶ್ರೀಮನ್ಮಹಾ ಪ್ರಧಾನಂ ಸರ್ವ್ವಾಧಿಕಾರಿ ಬೀಚಿಸೆಟಿಯ-

ರ ಹೇಳಿಕೆಯಿಂ ಸರ್ವ್ವಪ್ರಧಾನ ತಿಪ್ಪರಸರು ಹೊನವತಿ

ಯ ಚಾಮೇಶ್ವರ ದೇವರ ಸಮೀಪದಲು ರಾಜೇಶ್ವರದೇ

ವರ ಪ್ರತಿಷ್ಠೆಯ ಮಾಡಿದನು...

ಎಂದು ಉಲ್ಲೇಖಿಸಿದೆ. ಸರ್ವಾಧಿಕಾರಿ ಬೀಚಿಸೆಟ್ಟಿಯ ಅಪೇಕ್ಷೆಯಂತೆ ತಿಪ್ಪರಸನು ಚಾಮೇಶ್ವರ ದೇವರ ಬಳಿ ರಾಜೇಶ್ವರ ದೇವರ ಪ್ರತಿಷ್ಠೆಯನ್ನು ಮಾಡಿಸಿದನು. ಈ ಎರಡು ಶಾಸನಗಳು 'ಚಾಮೇಶ್ವರ' ಮತ್ತು 'ರಾಜೇಶ್ವರ'ದ ಬಗ್ಗೆ ಮಾಹಿತಿ ಒದಗಿಸುತ್ತವೆ. ಆದರೆ ಇವುಗಳ ಕಾಲಮಾನದ ಬಗ್ಗೆ ಗಮನಿಸಿದರೆ ಚಾಮೇಶ್ವರವು ಕ್ರಿ.ಶ.೧೧೨೪ರಲ್ಲಿ ನಿರ್ಮಾಣಗೊಂಡರೆ ರಾಜೇಶ್ವರವು ಕ್ರಿ.ಶ.೧೧೮೭ರಲ್ಲಿ ನಿರ್ಮಾಣ ಗೊಂಡಿದೆ. ಇವುಗಳ ಮಧ್ಯ ೬೩ ವರ್ಷಗಳ ಅಂತರ ಕಂಡುಬರುತ್ತದೆ. ಇದರ ಮೇಲಿಂದ ಏಕಕೂಟವಾಗಿದ್ದ ಚಾಮೇಶ್ವರ ದೇವಾಲಯವು ೬೩ ವರ್ಷಗಳ ನಂತರ ತ್ರಿಕೂಟವಾಗಿ ಪರಿವರ್ತಿತಗೊಂಡಿತು ಎಂದು ತಿಳಿಯ ಬಹುದು.

ಊರು : ದಶರಥಕೊಪ್ಪ (ತಾ.ಹಾನಗಲ್ಲ)

ಸ್ಥಳ : ಗುಡಗುಡಿ ರಸ್ತೆ

| | | |
|---|---|---|
| ಹೆಸರು | : | ಗುರುಭಕ್ತರ ಗುಡಿ (ಸೋಮನಾಥ) |
| ಅಭಿಮುಖ | : | ಪೂರ್ವ |
| ನಿವೇದನೆ | : | ಈಶ್ವರ (ಮೂರು ಗರ್ಭಗೃಹಗಳಲ್ಲಿ ಲಿಂಗಗಳು) |
| ಕಾಲ | : | ಕ್ರಿ.ಶ.ಸು.೧೨ನೆಯ ಶತಮಾನ |
| ಶೈಲಿ | : | ಕಲ್ಯಾಣ ಚಾಲುಕ್ಯ |
| ಬಳಸಿದ ವಸ್ತು | : | ಕಪ್ಪು ಮಿಶ್ರಿತ ನೀಲಿ ಛಾಯೆಯ ಕಲ್ಲು |

## ದೇವಾಲಯ ವಾಸ್ತುಶೈಲಿ

**ತಳವಿನ್ಯಾಸ** (ತಳವಿನ್ಯಾಸ ರೇಖಾಚಿತ್ರ-೪) ಮೂರು ಗರ್ಭಗೃಹಗಳು, ಮೂರು ಅರ್ಧಮಂಟಪಗಳು, ನವರಂಗ.

**ಊರ್ಧ್ವಮುಖ ರಚನೆ :** ಹಾನಗಲ್ಲಿನಿಂದ ಪಶ್ಚಿಮಕ್ಕೆ ೧೫ ಕಿ.ಮೀ. ದೂರದಲ್ಲಿರುವ ಈ ದೇವಾಲಯದ ಮೂರು ಗರ್ಭಗೃಹಗಳ ಅಧಿಷ್ಠಾನವು ನಾಲ್ಕು ಅಡಿ ಎತ್ತರವಾಗಿದ್ದು, ಉಪಾನ, ಜಗತಿ, ಪದ್ಮ ಮತ್ತು ದಂತ ಮಾದರಿಯ ಸಾಲುಗಳನ್ನು ಹೊಂದಿದ ಕಪೋತ ಭಾಗಗಳಿವೆ(ರೇಖಾಚಿತ್ರ-೫). ಅಧಿಷ್ಠಾನವು ಭದ್ರಭಾಗದಲ್ಲಿ ಒಂದು ಹಂತದಿಂದ ಮುಂಚಾಚನ್ನು ಹೊಂದಿದೆ. ದೇವಾಲಯವು ಹಾಳಾಗಿದ್ದು ಅಧಿಷ್ಠಾನ ಭಾಗವು ಮಾತ್ರ ಸುಸ್ಥಿತಿಯಲ್ಲಿದೆ. ಭಿತ್ತಿಯ ಅವಶೇಷಗಳು ಅಲ್ಲಲ್ಲಿ ಕಂಡುಬರುತ್ತದೆ. ಒಳಮುಖದಲ್ಲಿ ನಯಗೊಳಿಸಿದ ಕಲ್ಲು ಫಲಕಗಳನ್ನು ಮತ್ತು ಹೊರಮುಖದಲ್ಲಿ ೧x೪ ಅಡಿ ಉದ್ದದ ಚೌಕ ಕಲ್ಲುಗಳನ್ನು ಬಳಸಿ, ಮಧ್ಯದ ಖಾಲಿ ಸ್ಥಳವನ್ನು ಕಲ್ಲು, ಮಣ್ಣುಗಳಿಂದ ತುಂಬಿ ನಾಲ್ಕು ಅಡಿ ದಪ್ಪದ ಭಿತ್ತಿಯನ್ನು ರಚಿಸಲಾಗಿದೆ. ಭಿತ್ತಿಯ ಪಾದ ಭಾಗದಲ್ಲಿ ಒಂದು ಅಡಿ ಅಗಲದ ಪುಷ್ಪಬಂಧ ಪಟ್ಟಿಕೆಯನ್ನು ಮಧ್ಯಭಾಗದಲ್ಲಿ ಒಂದು ಅಡಿ ಅಗಲದ ವಲ್ಲಿಬಂಧ ಪಟ್ಟಿಕೆಯನ್ನು ಮತ್ತು ಅಗ್ರಭಾಗದಲ್ಲಿ ಒಂದು ಅಡಿ ಅಗಲದ ಪುಷ್ಪಬಂಧ ಪಟ್ಟಿಕೆಯನ್ನು ಕಾಣಬಹುದು. ಈ ಪಟ್ಟಿಕೆಗಳು ದೇವಾಲಯವನ್ನು ಪೂರ್ತಿ ಸುತ್ತುವರೆದಿರಬೇಕು. ಅಂತೆಯೇ ಅಲ್ಲಲ್ಲಿ ಈ ಪಟ್ಟಿಕೆಗಳನ್ನು ಕಾಣುತ್ತೇವೆ. ದೇವಾಲಯದ ಮೇಲ್ಕಟ್ಟಡವು ಪೂರ್ತಿ ನಾಶವಾಗಿದೆ.

**ತಿರ್ಯಙ್ಮುಖ ರಚನೆಗಳು :** ಪೂರ್ವಾಭಿಮುಖವಾದ ಮುಖ್ಯ ಗರ್ಭಗೃಹವು ಪೂರ್ವ-ಪಶ್ಚಿಮ, ಉತ್ತರ-ದಕ್ಷಿಣದಲ್ಲಿ ಕ್ರಮವಾಗಿ ೯.೨ x ೭.೬ ಅಡಿ ವಿಸ್ತೀರ್ಣದಲ್ಲಿದೆ. ಭಿತ್ತಿಯು ನಾಲ್ಕು ಮೂಲೆ ಕಂಬಗಳಿಂದ ಮತ್ತು ಮಧ್ಯದಲ್ಲಿ ೨ ೧/೨ x ೮ ಅಡಿ ಉದ್ದ ಅಗಲವಿರುವ ಕಲ್ಲು ಫಲಕಗಳನ್ನು ಅವುಗಳ ಮಧ್ಯದಲ್ಲಿ ೧ ಅಡಿ ಅಗಲದ ಫಲಕಗಳನ್ನು ಒಂದರ ಮೇಲೊಂದು ಜೋಡಿಸಿ ರಚನೆಗೊಂಡಿದೆ. ಪಶ್ಚಿಮ ದಿಕ್ಕಿನ ಭಿತ್ತಿಯಲ್ಲಿ ಮುಂಚಾಚಿದ ಕಲ್ಲು ಹಲಗೆ ಇದೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಗರ್ಭಗೃಹದ ಮಧ್ಯಭಾಗದಲ್ಲಿ ನೆಲಮಟ್ಟದಲ್ಲಿ ಲಿಂಗವಿದೆ. ಗರ್ಭಗೃಹದ ದ್ವಾರಬಂಧವು ತ್ರಿಶಾಖೆಗಳಿಂದ ಕೂಡಿದೆ. ದ್ವಾರಶಾಖೆಗಳಲ್ಲಿ ಯಾವುದೇ ಅಲಂಕರಣವಿಲ್ಲ. ಲಲಾಟಫಲಕದಲ್ಲಿಯೂ ಶಿಲ್ಪವಿಲ್ಲ. ಗರ್ಭಗೃಹದ ಮುಂದಿನ ರಚನೆಯಾದ ಅರ್ಧಮಂಟಪವು, ಪೂರ್ವ-ಪಶ್ಚಿಮ, ಉತ್ತರ-ದಕ್ಷಿಣವಾಗಿ ೯.೨ x ೭.೬ ವಿಸ್ತೀರ್ಣವನ್ನು ಹೊಂದಿದೆ. ಇದರ ಭಿತ್ತಿ ರಚನೆಯು ಮುಖ್ಯದಂತೆ ಇದೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಇಲ್ಲಿ ಲಿಂಗಕ್ಕೆ ಎದುರಾಗಿ ನಂದಿಶಿಲ್ಪವಿದೆ. ಅರ್ಧಮಂಟಪದ ದ್ವಾರವು ಬಿದ್ದಿದೆ.




ತಳವಿನ್ಯಾಸ ರೇಖಾಚಿತ್ರ-೪, ಗುರಭಕ್ತರಗುಡಿ (ಶಾಸನೋಕ್ತ ಸೋಮೇಶ್ವರ), ದಶರಥಕೊಪ್ಪ
(ತಾ.ಹಾನಗಲ್ಲ)
೧. ಗರ್ಭಗೃಹ, ೨. ಅರ್ಧಮಂಟಪ, ೩. ನವರಂಗ, ೪. ಭಿತ್ತಿಭಾಗ




ರೇಖಾಚಿತ್ರ-೫, ಗುರುಭಕ್ತರಗುಡಿ ದೇವಾಲಯದ ಅಧಿಷ್ಠಾನ, ದಶರಥಕೊಪ್ಪ (ತಾ.ಹಾನಗಲ್ಲ)
೧ ಉಪಾನ, ೨. ಜಗತಿ, ೩. ಪದ್ಮ, ೪. ಕುಮುದ, ೫. ಕಪೋತ

ಉತ್ತರ ಮತ್ತು ದಕ್ಷಿಣ ಗರ್ಭಗೃಹಗಳು ವಿಸ್ತೀರ್ಣದಲ್ಲಿ ಮುಖ್ಯದಷ್ಟೇ ಇವೆ. ಛತ್ತಿನಲ್ಲಿ ಕಮಲದ ಅಲಂಕರಣವನ್ನು ಹೊಂದಿವೆ. ಎರಡೂ ಗರ್ಭಗೃಹಗಳಲ್ಲಿ ಭಗ್ನಗೊಂಡ ಶಿವಲಿಂಗಗಳಿವೆ. ಭಿತ್ತಿಯ ಮಧ್ಯಭಾಗದಲ್ಲಿ ಮುಂಚಾಚಿದ ಕಲ್ಲು ಹಲಗೆಗಳಿವೆ. ಈ ಗರ್ಭಗೃಹಗಳ ದ್ವಾರಬಂಧವು ಪಂಚ ಶಾಖೆಗಳಿಂದ ಕೂಡಿವೆ. ಮಧ್ಯದ ಸ್ತಂಭ ಶಾಖೆಯು ಪ್ರಧಾನವಾಗಿದ್ದು ಹೆಚ್ಚು ಮುಂಚಾಚಿದೆ. ಅಕ್ಕಪಕ್ಕದ ಎರಡು ಶಾಖೆಗಳು ಕ್ರಮವಾಗಿ ಹಿಂದೆ ಸರಿದಿವೆ. ಒಳಮುಖದ ಮೊದಲ ಎರಡು ಶಾಖೆಗಳು ಲಲಾಟಫಲಕದವರೆಗೂ ಮುಂದುವರೆದಿವೆ. ಲಲಾಟದಲ್ಲಿ ಯಾವ ಬಿಂಬವೂ ಇಲ್ಲ. ಸ್ತಂಭ ಶಾಖೆಯನ್ನು ಲಂಬರೇಖೆಗಳಿಂದ ಅಲಂಕರಿಸಲಾಗಿದೆ. ಮೂರು ಮುಂಚಾಚುಗಳನ್ನು ಹೊಂದಿದ ಹೊಸ್ತಿಲ ಭಾಗವು ಕಲಾತ್ಮಕವಾಗಿದೆ. (ಛಾಯಾಚಿತ್ರ-೮) ಎರಡೂ ಗರ್ಭಗೃಹಗಳ ಅರ್ಧಮಂಟಪಗಳು ವಿಸ್ತೀರ್ಣದಲ್ಲಿ ಗರ್ಭಗೃಹಗಳಿಗೆ ಸಮಾನವಾಗಿವೆ. ಛತ್ತಿನ ಅಲಂಕರಣದಲ್ಲಿಯೂ ಗರ್ಭಗೃಹಗಳ ಛತ್ತನ್ನು ಹೋಲುತ್ತವೆ. ದಕ್ಷಿಣ ದಿಕ್ಕಿನ ಅರ್ಧಮಂಟಪದ ದ್ವಾರ ಬಂಧವು ಪೂರ್ತಿ ಹಾಳಾಗಿದೆ. ಉತ್ತರ ದಿಕ್ಕಿನ ಅರ್ಧಮಂಟಪದ ದ್ವಾರಬಂಧವು ಸಾದಾ ಮಾದರಿಯಲ್ಲಿದೆ.

ಮೂರು ದಿಕ್ಕಿನ ವಾಸ್ತು ರಚನೆಗಳನ್ನು ಒಂದೆಡೆ ಸೇರಿಸುವ ನವರಂಗವು ಪೂರ್ವ-ಪಶ್ಚಿಮ, ಉತ್ತರ-ದಕ್ಷಿಣವಾಗಿ ೧೮ x ೧೬ ಅಡಿ ವಿಸ್ತೀರ್ಣದಲ್ಲಿ ಇದೆ. ಮಧ್ಯದಲ್ಲಿ ಚೌಕಾಕಾರದ ವೇದಿಕೆ ಇದೆ. ಆದರೆ ಇಲ್ಲಿಯ ನಾಲ್ಕು ಕಂಬಗಳು ಭಿತ್ತಿ ಭಾಗ ಹಾಗೂ ಛತ್ತು ಎಲ್ಲವೂ ಕಾಣದಂತಾಗಿವೆ. ನವರಂಗಕ್ಕೆ ಸಂಬಂಧಪಟ್ಟ ಭಿತ್ತಿ ಕೋಷ್ಠಗಳು ಕಲಾತ್ಮಕವಾಗಿದ್ದು, ಈ ದೇವಾಲಯದ ವೈಭವವನ್ನು ಹೇಳುವಂತೆ ನಿಂತಿವೆ. ಈ ಕೋಷ್ಠಗಳ ದ್ವಾರವು ತ್ರಿಶಾಖೆಯಿಂದ ಕೂಡಿದ್ದು ಕ್ರಮವಾಗಿ ವಜ್ರಪಟ್ಟಿ, ಸ್ತಂಭ, ಕಮಲದಳಗಳ ಅಲಂಕರಣವನ್ನು ಹೊಂದಿವೆ. ಒಳಮುಖದ ಮೊದಲ ಶಾಖೆಗಳು ಲಲಾಟಫಲಕದವರೆಗೂ ಮುಂದುವರೆದಿವೆ. ಫಲಕವು ಅರ್ಧ ಅಡಿ ಮುಂಚಾಚಿ ಪ್ರಧಾನವಾಗಿ ಕಂಡರೂ ಯಾವ ಶಿಲ್ಪವನ್ನು ಹೊಂದದೆ ಬರಿದಾಗಿದೆ. ಕೋಷ್ಠವು ಕಪೋತ ಛತ್ತನ್ನು ಮೇಲೆ ವೇಸರ ಶೈಲಿಯ ಶಿಖರವನ್ನು ಹೊಂದಿದ್ದು, ಸಣ್ಣ ದೇವಾಲಯದಂತೆ ಗೋಚರಿಸುತ್ತವೆ(ಛಾಯಾಚಿತ್ರ-೯). ಈಗ ಕಂಡುಬರುವ ಎರಡು ಕೋಷ್ಠಗಳೂ ಬರಿದಾಗಿವೆ. ಬೇರೆಡೆಯಿಂದ ತಂದ ನಾಗಶಿಲ್ಪಗಳನ್ನು ಇಲ್ಲಿ ಕಾಣಬಹುದು.

**ಶಾಸನಗಳಿಂದ ಹೆಚ್ಚಿನ ವಿವರ :** ದೇವಾಲಯಕ್ಕೆ ಸಂಬಂಧಪಟ್ಟಂತೆ ಹೆಚ್ಚಿನ ಶಾಸನಗಳು ಲಭ್ಯವಿಲ್ಲ. ಇದೇ ಊರಿನ ಶಾಸನವೊಂದು ಸುಮಾರು ಹನ್ನೆರಡನೇ ಶತಮಾನಕ್ಕೆ ಸೇರಿದ್ದು, ಸೋಮನಾಥ ದೇವರಿಗೆ ನೀಡಿದ ದಾನವನ್ನು ಉಲ್ಲೇಖಿಸುತ್ತದೆ.[೧೯೭] ಬಹುಶಃ ಸ್ಥಳೀಯರು ಕರೆಯುವ ಈ ಗುರುಭಕ್ತರಗುಡಿ ದೇವಾಲಯವು ಸೋಮನಾಥ ದೇವಾಲಯ ಆಗಿರಬಹುದು. ಮುಖ್ಯ ಗರ್ಭಗೃಹದ ಲಿಂಗವು ಸೋಮನಾಥ ಲಿಂಗವಾಗಿದ್ದು ಅಕ್ಕಪಕ್ಕದ ಗರ್ಭಗೃಹಗಳಲ್ಲಿಯ ಲಿಂಗಗಳು ಗುರುಭಕ್ತರ ಹೆಸರಲ್ಲಿ ಪ್ರತಿಷ್ಠಾಪಿಸಿದ ಲಿಂಗಗಳೆಂದು ಊಹಿಸಲು ಅವಕಾಶವಿದೆ.

ಊರು : ಅಬ್ಬಲೂರು (ತಾ.ಹಿರೇಕೆರೂರು)

ಸ್ಥಳ : ಊರ ನಡುವಿನ ಹೊಂಡದ ಮೇಲೆ

ಹೆಸರು : ವೀರಸೋಮೇಶ್ವರ

ಅಭಿಮುಖ : ಪೂರ್ವ

ನಿವೇದನೆ : ಈಶ್ವರ (ಮೂರು ಗರ್ಭಗೃಹಗಳಲ್ಲಿ ಲಿಂಗಗಳಿವೆ)

ಕಾಲ : ಕ್ರಿ.ಶ.೧೨೦೦

ಶೈಲಿ : ಕಲ್ಯಾಣ ಚಾಲುಕ್ಯ

ಬಳಸಿದ ವಸ್ತು : ಕಪ್ಪು ಮಿಶ್ರಿಯ ನೀಲಿಛಾಯೆಯ ಕಲ್ಲು

## ದೇವಾಲಯದ ವಾಸ್ತುಶಿಲ್ಪ

**ತಳವಿನ್ಯಾಸ :** (ತಳವಿನ್ಯಾಸ ರೇಖಾಚಿತ್ರ-೫) ಮೂರು ಗರ್ಭಗೃಹಗಳು, ಮೂರು ಅರ್ಧಮಂಟಪಗಳು, ನವರಂಗ, ಮಹಾಮಂಟಪ.

**ಊರ್ಧ್ವಮುಖ ರಚನೆ :** ಹಿರೇಕೆರೂರಿನಿಂದ ದಕ್ಷಿಣಕ್ಕೆ ೫ ಕಿ.ಮೀ. ದೂರದಲ್ಲಿರುವ ಈ ದೇವಾಲಯವು ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದೆ. ಮೂರು ಗರ್ಭಗೃಹಗಳ ಅಧಿಷ್ಠಾನವು ನಾಲ್ಕು ಅಡಿ ಎತ್ತರವಾಗಿದ್ದು, ಉಪಾನ, ಜಗತಿ, ಪದ್ಮ, ತ್ರಿಪಟ್ಟಕುಮುದ ಮತ್ತು ಒಳಸರಿದ ಕಪೋತ ಭಾಗದಲ್ಲಿ ದಂತಪಂಕ್ತಿಯ ಅಲಂಕರಣ ವಿದೆ. ಪ್ರಧಾನ ಅಂಗಗಳ ಮಧ್ಯ ಕಂಪ ಮತ್ತು ಗಳ ರಚನೆಗಳಿವೆ. ಇದು ಪಾದಬಂಧ ಪ್ರಬೇದಕ್ಕೆ ಸೇರಿದ ಅಧಿಷ್ಠಾನವಾಗಿದೆ(ರೇಖಾಚಿತ್ರ-೬). ಅಧಿಷ್ಠಾನವು ಭದ್ರಭಾಗದಲ್ಲಿ ಒಂದು ಹಂತದಿಂದ ಮುಂಚಾಚಿದ್ದು, ಉಳಿದಂತೆ ನೇರವಾಗಿ ರಂಚನೆಗೊಂಡಿದೆ. ಪೂರ್ವದಿಕ್ಕಿನಲ್ಲಿರುವ ತೆರೆದ ಮಹಾಮಂಟಪದ ಅಧಿಷ್ಠಾನವು ಐದು ಅಡಿ ಎತ್ತರವಾಗಿದ್ದು, ಮಂಚಕ ರೀತಿಗೆ ಸೇರಿದೆ. ಈ ಅಧಿಷ್ಠಾನವು ಎರಡು ಹಂತದಲ್ಲಿ ನಿರ್ಮಾಣ ಗೊಂಡಿದೆ. ಉಪಾನ, ಜಗತಿ ಪದ್ಮಭಾಗಗಳ ಮೇಲಿನ 'ಗಳ' ಭಾಗವು ಒಂದು ಅಡಿ ಅಗಲವಾಗಿದ್ದು 'ಗಳಪಟ್ಟಿಕಾ' ಮತ್ತು 'ಗಳಪಾದ'ಗಳಿಂದ ಕೂಡಿದೆ. ಇಲ್ಲಿ ಪುಷ್ಪಗಳ ಅಂಲಂಕರಣವನ್ನು ಕಾಣಬಹುದು. ಇದರ ಮೇಲಿನ ರಚನೆಯಾದ ಪಟ್ಟಿಕೆಯು ಕೆಳಮುಖದಲ್ಲಿ ನಿಮ್ನ ಅಲಂಕಾರದಿಂದಲೂ, ಪಟ್ಟಿಕಾ ಭಾಗದಲ್ಲಿ ಬಳ್ಳಿಗಳನ್ನು ಅರ್ಧವೃತ್ತಾಕಾರದ ಊರ್ಧ್ವಮುಖ ಪದಕಗಳ ಅಲಂಕರಣವನ್ನು ಒಳಗೊಂಡಿದೆ. ಇದರ ಮೇಲೆ ಎರಡನೇ ಹಂತದಲ್ಲಿ 'ಗಳ'ದ ರಚನೆ ಇದ್ದು, 'ಗಳಪಟ್ಟಿಕಾ' ಮತ್ತು 'ಗಳಪಾದ'ಗಳಿಂದ ಕೂಡಿದೆ. ಇಲ್ಲಿಯೂ ಪುಷ್ಪಗಳ ಅಲಂಕರಣವನ್ನು ಕಾಣಬಹುದು. ಇದರ ಮೇಲಿನ ರಚನೆಯಾಗಿ ಪಟ್ಟಿಕೆಯು ಪುನರಾವರ್ತನೆ ಗೊಂಡಿದೆ. ಈ ಪಟ್ಟಿಕೆಯು ಕೆಳಮುಖ ಅಲಂಕರಣವಾಗಿ ನಿಮ್ನ ರೀತಿಯನ್ನು ಮತ್ತು ಅಧೋಮುಖವಾಗಿ ಅರ್ಧವೃತ್ತಾಕಾರದ ಪದಕಗಳನ್ನು ಹೊಂದಿದೆ. ಇದರ ಮೇಲೆ ಕಕ್ಷಾಸನ ರಚನೆಗೊಂಡಿದೆ. ಕಕ್ಷಾಸನದ ಬೆನ್ನಿನಲ್ಲಿ ಏಕಾಂತ ರಾಮಯ್ಯನ ಶಿರಸ್‌ಪವಾಡವನ್ನು ಚಿತ್ರಿಸಲಾಗಿದೆ. ಕೆಳಭಾಗದಲ್ಲಿ ಮತ್ತು ಮೇಲ್ಭಾಗದಲ್ಲಿ ಬಳ್ಳಿಗಳ ಅಲಂಕರಣ ಪಟ್ಟಿಯಿದ್ದು, ಮಧ್ಯಭಾಗದಲ್ಲಿ ಏಕಾಂತ ರಾಮಯ್ಯ ರುಂಡವನ್ನು ಕತ್ತರಿಸಿ ಲಿಂಗಕ್ಕೆ ಅರ್ಪಿಸಿದ ಮತ್ತು ಜೈನ, ಶೈವ ಮತೀಯರ ನಡುವಿನ ಹೋರಾಟ, ಜೈನಮುನಿಗಳು, ಜಿನಮೂರ್ತಿಯನ್ನು ಒಡೆಯು ತ್ತಿರುವ ಸನ್ನಿವೇಶಗಳನ್ನು ಚಿತ್ರಿಸಲಾಗಿದೆ. ಮೇಲೆ ಸನ್ನಿವೇಶಕ್ಕೆ ತಕ್ಕಂತೆ ಶಾಸನ ಪಾಠವಿದೆ(ಛಾಯಾಚಿತ್ರ-೧೦). ಇಂಥದೇ ಇನ್ನೊಂದು ಕಕ್ಷಾಸನದ ಬೆನ್ನಿನಲ್ಲಿ ಶಿವಶರಣ-ಶರಣೆಯರ ಉಬ್ಬುಶಿಲ್ಪಗಳಿವೆ. ಜೇಡರ ದಾಸಿಮಯ್ಯ ದೇವರಿಗೆ ಮಗನನ್ನು ಅರ್ಪಿಸುವ ದೃಶ್ಯಗಳ ಉಬ್ಬುಶಿಲ್ಪಗಳನ್ನು ಕೊರೆಯಲಾಗಿದೆ. ಇವುಗಳ




ತಳವಿನ್ಯಾಸ ರೇಖಾಚಿತ್ರ-೫, ಸೋಮೇಶ್ವರ ದೇವಾಲಯ, ಅಬ್ಬಲೂರು (ತಾ.ಹಿರೇಕೆರೂರು)

೧. ಗರ್ಭಗೃಹ, ೨. ಅರ್ಧಮಂಟಪ, ೩. ನವರಂಗ, ೪. ಮುಖಮಂಟಪ




ರೇಖಾಚಿತ್ರ-೬, ಸೋಮೇಶ್ವರ ದೇವಾಲಯದ ಅಧಿಷ್ಠಾನ, ಅಬ್ಬಲೂರು (ತಾ.ಹಿರೇಕೆರೂರು)
೧ ಉಪಾನ, ೨. ಜಗತಿ, ೩. ಪದ್ಮ, ೪. ಕುಮುದ, ೫. ಕಪೋತ

ಮೇಲೆಯೂ ಶಾಸನದ ಪಾಠವಿದೆ. ಈ ತೆರೆದ ಮಹಾಮಂಟಪವು ಪೂರ್ವ, ಉತ್ತರ, ದಕ್ಷಿಣ ದಿಕ್ಕುಗಳಲ್ಲಿ ಪ್ರವೇಶವನ್ನು ಹೊಂದಿವೆ. ಪ್ರವೇಶಗಳ ಇಕ್ಕೆಲಗಳಲ್ಲಿ 'ಮಂಚಕ' ರೀತಿಯ ಅಧಿಷ್ಠಾನವು ಮುಂದುವರೆದಿದೆ(ಛಾಯಾಚಿತ್ರ-೧೧).

ಅಧಿಷ್ಠಾನದ ಮೇಲೆ ನಿರ್ಮಾಣಗೊಂಡ ಭಿತ್ತಿಯನ್ನು ಒಳಮುಖದಲ್ಲಿ ಮತ್ತು ಹೊರಮುಖದಲ್ಲಿ ೧/೨ x ೫ ಅಡಿ ಉದ್ದನೆಯ ಕಲ್ಲು ಫಲಕಗಳನ್ನು ಬಳಸಿ ಮಧ್ಯದ ಖಾಲಿ ಸ್ಥಳದಲ್ಲಿ ಕಲ್ಲು, ಮಣ್ಣುಗಳನ್ನು ತುಂಬಿ ಐದು ಅಡಿ ದಪ್ಪವಾಗಿ ರಚಿಸಲಾಗಿದೆ. ಒಂದು ಅಡಿ ಅಗಲದ ಪುಷ್ಪಪಟ್ಟಿಕೆಯು ಭಿತ್ತಿಯನ್ನು ಮಟ್ಟಸವಾಗಿ (Horizontal) ಇಬ್ಭಾಗಿಸಿದೆ. ಮುಖ್ಯಗರ್ಭಗೃಹದ ಪಶ್ಚಿಮ ಮತ್ತು ಉತ್ತರ ದಿಕ್ಕಿನ ಭದ್ರಭಾಗಗಳು ಮಾತ್ರ ದೇವಕೋಷ್ಟಕಗಳನ್ನು ಹೊಂದಿವೆ.

ಸದ್ಯದಲ್ಲಿ ಮುಖ್ಯಗರ್ಭಗೃಹದ ಮೇಲ್ಕಟ್ಟಡವು ಮಾತ್ರ ಕಂಡುಬರುತ್ತಿದ್ದು ಕದಂಬ ನಾಗರ ಶೈಲಿಯಲ್ಲಿದೆ. ಎಂಟು ಹಂತಗಳಲ್ಲಿ ಮೇಲೇರುತ್ತ, ಹಂತಹಂತವಾಗಿ ಕಿರಿದಾಗುತ್ತ ಸಾಗಿ, ಕೊನೆಯಲ್ಲಿ ಚೌಕಾಕಾರದ ಮುಗುಚಿದ ಬೋಗುಣಿ ಆಕಾರದ ಶಿಖರ ಭಾಗವನ್ನು ಹೊಂದಿದೆ. ಶಿಖರದ ನಾಲ್ಕು ಮುಖಗಳಲ್ಲೂ ನಾಸಿ ಫಲಕಗಳಿವೆ. ಶಿಖರದ ಮೇಲ್ಭಾಗದಲ್ಲಿ ಸ್ತೂಪಿ ಭಾಗವನ್ನು ಕಾಣುತ್ತೇವೆ(ಛಾಯಾಚಿತ್ರ-೧೨). ಈಗ ದೇವಾಲಯದ ದುರಸ್ತಿ ಕಾರ್ಯವು ನಡೆದಿದ್ದು, ದೇವಾಲಯದ ಮೇಲ್ಕಟ್ಟಡದ ಭಾಗಗಳನ್ನು ಬಿಚ್ಚಲಾಗಿದೆ.

ತಿರ್ಯಙ್ಮುಖ ರಚನೆಗಳು : ಪೂರ್ವಾಭಿಮುಖವಾದ ಮುಖ್ಯಗರ್ಭಗೃಹವು ಪೂರ್ವ-ಪಶ್ಚಿಮ ಮತ್ತು ಉತ್ತರ-ದಕ್ಷಿಣವಾಗಿ ೧೦.೫ x ೮.೧೦ ಅಡಿ ವಿಸ್ತಾರವನ್ನು ಹೊಂದಿದೆ. ಭಿತ್ತಿಯು ನಾಲ್ಕು ಮೂಲೆ ಕಂಬಗಳಿಂದ ಮತ್ತು ೧/೨x೫ ಅಡಿ ಉದ್ದದ ಕಲ್ಲು ಫಲಕಗಳನ್ನು ಹೊಂದಿಸಿ ರಚನೆಗೊಂಡಿದೆ. ಪಶ್ಚಿಮ ಮತ್ತು ಉತ್ತರ ದಿಕ್ಕಿನ ಭಿತ್ತಿಯ ಮಧ್ಯದಲ್ಲಿ ಒಂದು ಅಡಿ ಅಗಲದ ಕಲ್ಲು ಫಳಿಗಳು ಮುಂಚಾಚಿವೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಗರ್ಭಗೃಹದ ಮಧ್ಯದಲ್ಲಿ ನಾಲ್ಕು ಅಡಿ ಎತ್ತರದ ಸೋಮೇಶ್ವರ ಲಿಂಗವಿದೆ. ಲಿಂಗದ ಎದುರಿಗೆ ಶುಕನಾಸಿಯ ಭಾಗದಲ್ಲಿ ನಂದಿ ಶಿಲ್ಪವನ್ನು ಇಡಲಾಗಿದೆ. ಗರ್ಭಗೃಹದ ದ್ವಾರಬಂಧವು ಅರ್ಧ ಅಡಿ ಎತ್ತರದ ಹೊಸ್ತಿಲ ಮೇಲೆ ತ್ರಿಶಾಖೆಯಿಂದ ಕೂಡಿದ್ದು ಸಾದಾ ಮಾದರಿಯಲ್ಲಿ ನಿರ್ಮಾಣಗೊಂಡಿದೆ. ಮಧ್ಯ ಶಾಖೆಯು ಹೆಚ್ಚು ಮುಂಚಾಚಿದ್ದು, ಶಾಖೆಗಳ ಪಾದಭಾಗವು ಫಲಕದಂತೆ ಅಲಂಕಾರ ರಹಿತವಾಗಿದೆ. ಎರಡೂ ಒಳಮುಖ ಶಾಖೆಗಳು ದ್ವಾರದ ಮೇಲಿನ ಭಾಗದಲ್ಲೂ ಮುಂದುವರೆದು ಲಲಾಟಫಲಕದಲ್ಲಿ ಸಂಧಿಸಿವೆ. ಗರ್ಭಗೃಹದ ಮುಂದಿನ ಅರ್ಧಮಂಟಪವು ಪೂರ್ವ-ಪಶ್ಚಿಮ, ಉತ್ತರ-ದಕ್ಷಿಣದಲ್ಲಿ ೮.೮ x ೭.೩ ಅಡಿ ವಿಸ್ತೀರ್ಣದಲ್ಲಿದ್ದು ಗರ್ಭಗೃಹಕ್ಕಿಂತ ಚಿಕ್ಕದಾಗಿದೆ. ಗರ್ಭಗೃಹದ ಹೊಸ್ತಿಲಿಗೆ ಹೊಂದಿಕೊಂಡಂತೆ ಸುಂದರವಾದ ಚಂದ್ರಶಿಲಾ ರಚನೆಯು ಇದೆ. ಇದು ೫ ಅಡಿ ಅಗಲ ೩.೫ ಅಡಿ ಉದ್ದವಾಗಿದ್ದು ಮೋದಕದ ಆಕೃತಿಯಲ್ಲಿದೆ. ಅಕ್ಕಪಕ್ಕದಲ್ಲಿ ಶಂಕ, ಗೋಡಂಬಿಕಾಯಿ, ಸುತ್ತಿಕೊಂಡ ಬಳ್ಳಿ ಅಲಂಕರಣವನ್ನು ಹೊಂದಿದೆ. ಮಧ್ಯಭಾಗದಲ್ಲೂ ವೃತ್ತಾಕಾರದ ಪದಕವಿದೆ. ಅರ್ಧಮಂಟಪದ ದ್ವಾರಬಂಧವು ಒಂದು ಅಡಿ ಎತ್ತರದ ಮೂರು ಮುಂಚಾಚುಗಳನ್ನು ಹೊಂದಿನ ಹೊಸ್ತಿಲದ ಮೇಲೆ ತ್ರಿಶಾಖೆಯಿಂದ ಕೂಡಿದೆ. ಮೊದಲ ಎರಡು ಶಾಖೆಗಳು ಬಹು ತೆಳುವಾಗಿದ್ದು ವಜ್ರಪಟ್ಟಿ ಮತ್ತು ಸುರುಳಿಗಳ ಅಲಂಕರಣವನ್ನು ಹೊಂದಿವೆ. ಸ್ತಂಭ

ಶಾಖೆಯು ಪ್ರಧಾನವಾಗಿದ್ದು ಅಡ್ಡಗೆರೆಗಳಿಂದ ಅಲಂಕೃತಗೊಂಡಿದೆ. ಮೊದಲ ಎರಡು ತೆಳು ಶಾಖೆಗಳು ದ್ವಾರದ ಹಣೆಪಟ್ಟಿಯಲ್ಲಿಯೂ ಮುಂದುವರೆದು ಲಲಾಟಫಲಕದಲ್ಲಿ ಸಂಧಿಸಿವೆ. ಲಲಾಟಫಲಕವು ಅರ್ಧ ಅಡಿ ಮುಂಚಾಚಿದ್ದು ಅಕ್ಕಪಕ್ಕಗಳಲ್ಲಿ ಅಧೋಮುಖ ಕಮಲಮೊಗ್ಗುಗಳನ್ನು ಹೊಂದಿದೆ. ಫಲಕದಲ್ಲಿ ಯಾವ ಬಿಂಬವೂ ಇಲ್ಲ. ದ್ವಾರಬಂಧದ ಇಕ್ಕೆಲಗಳಲ್ಲಿ ೧ ೧/೨ ಅಡಿ ಅಗಲ ೬.೫ ಅಡಿ ಎತ್ತರದ ಜಾಲಂಧ್ರಗಳಿವೆ. ಇವು ೧೪ ಅಡ್ಡ ಪಟ್ಟಿಕೆಗಳು ೨ ಉದ್ದ ಪಟ್ಟಿಕೆಗಳಿಂದ ಕೂಡಿದ್ದು ಪುಷ್ಪ ಅಲಂಕರಣ ಹೊಂದಿವೆ.

ಅಕ್ಕಪಕ್ಕದ ಗರ್ಭಗೃಹಗಳು ಮುಖ್ಯ ಗರ್ಭಗೃಹಕ್ಕಿಂತ ಚಿಕ್ಕದಾಗಿದ್ದು, ೭.೫ x ೭.೫ ಅಡಿ ವಿಸ್ತೀರ್ಣವನ್ನು ಹೊಂದಿವೆ. ಭಿತ್ತಿ ರಚನೆಯು ಮತ್ತು ಛತ್ತಿನ ಅಲಂಕರಣವು ಮುಖ್ಯ ಗರ್ಭಗೃಹವನ್ನು ಹೋಲುತ್ತವೆ. ಇಲ್ಲಿಯೂ ಎತ್ತರದ ಶಿವಲಿಂಗಗಳಿದ್ದು ಎದುರಿಗೆ ನಂದಿ ಶಿಲ್ಪವನ್ನು ಹೊಂದಿವೆ. ಮೂರೂ ಲಿಂಗಗಳ ಎದುರಿಗೆ ಮೂರು ನಂದಿ ಶಿಲ್ಪಗಳು ಇರುವುದು ಇಲ್ಲಿಯ ವಿಶೇಷವಾಗಿದೆ. ಅಕ್ಕಪಕ್ಕದ ಗರ್ಭಗೃಹಗಳ ದ್ವಾರಬಂಧವು ತೆಳುವಾದ ಹೊಸ್ತಿಲಿನ ಮೇಲೆ, ತ್ರಿಶಾಖೆಗಳನ್ನು ಹೊಂದಿದ್ದು, ಮುಖ್ಯದಂತೆ ಸಾದಾ ಮಾದರಿಯಲ್ಲಿ ರಚನೆಗೊಂಡಿವೆ. ಶಾಖೆಗಳ ಪಾದಭಾಗದಲ್ಲಾಗಲಿ, ಲಲಾಟಫಲಕದಲ್ಲಾಗಲಿ ಯಾವುದೇ ಅಲಂಕರಣಗಳಿಲ್ಲ. ಇವುಗಳ ಅರ್ಧಮಂಟಪಗಳು ಉತ್ತರ-ದಕ್ಷಿಣ ಮತ್ತು ಪೂರ್ವ-ಪಶ್ಚಿಮವಾಗಿ ೬.೨ x ೮.೫ ಅಡಿ ವಿಸ್ತೀರ್ಣದಲ್ಲಿದ್ದು, ಗರ್ಭಗೃಹಗಳಿಗಿಂತ ಚಿಕ್ಕದಾಗಿವೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಮುಖ್ಯದ ಅರ್ಧಮಂಟಪದಲ್ಲಿ ಇರುವಂತೆ ಚಂದ್ರಶಿಲಾ ಅಲಂಕರಣವು ಇಲ್ಲಿ ಕಾಣುವುದಿಲ್ಲ. ಎರಡೂ ಅರ್ಧಮಂಟಪಗಳ ದ್ವಾರಬಂಧವು ಮೂರು ಮುಂಚಾಚುಗಳಿಂದ ಕೂಡಿದ ಒಂದು ಅಡಿ ಎತ್ತರದ ಅಲಂಕೃತ ಹೊಸ್ತಿಲ ಮೇಲೆ ಮುಖ್ಯ ಅರ್ಧಮಂಟಪದ ದ್ವಾರಬಂಧದಂತೆ ನಿರ್ಮಾಣಗೊಂಡಿವೆ.

ಮೂರೂ ಅರ್ಧಮಂಟಪಗಳನ್ನು ಒಂದೆಡೆ ಸೇರಿಸುವ ನವರಂಗವು, ವಿಶಾಲವಾಗಿದ್ದು ೨೧x೨೧ ಅಡಿ ವಿಸ್ತೀರ್ಣ ಹೊಂದಿದೆ. ಮಧ್ಯದಲ್ಲಿ ಅರ್ಧ ಅಡಿ ಎತ್ತರದ ಚೌಕಾಕಾರದ ವೇದಿಕೆ ಇದೆ. ವೇದಿಕೆಯ ನಾಲ್ಕು ಮೂಲೆಗಳಲ್ಲಿ ಅಲಂಕೃತ ಕಂಬಗಳಿವೆ. ಇವು ನಾಲ್ಕು ಪಾರ್ಶ್ವಗಳಲ್ಲಿ ಅಲಂಕರಣಗಳನ್ನು ಹೊಂದಿದ ಪೀಠವನ್ನು, ದಂಡಭಾಗದಲ್ಲಿ ಎರಡು ಚೌಕಗಳ ಮಧ್ಯದಲ್ಲಿ ಮೂರು ವೃತ್ತಾಕಾರದ ಪಟ್ಟಿಗಳ ಅಲಂಕರಣ ಹೊಂದಿವೆ. ಈ ಪಟ್ಟಿಗಳು ಕ್ರಮವಾಗಿ ಊರ್ಧ್ವಮುಖ ಕಮಲದಳಗಳಿಂದ, ವಜ್ರಾಕೃತಿಗಳಿಂದ, ಅಧೋಮುಖ ಕಮಲದಳಗಳಿಂದ ಕೂಡಿವೆ. ಪ್ರಧಾನವಾದ ಎರಡು ಚೌಕಗಳಲ್ಲಿ ಯಾವ ಅಲಂಕರಣವೂ ಇಲ್ಲ. ದಂಡಾಗ್ರ ಭಾಗದಲ್ಲಿ ಕಲಶ, ತಾಟಿಕಾ, ಘಟ, ಮಂಡಿ, ಫಲಕ ಭಾಗಗಳಿವೆ. ಕಂಬಗಳು ತ್ರಿಕೋನ ಮಾದರಿಯ ನಾಲ್ಕು ಮುಖ ಬೋದಿಗೆಯನ್ನು ಹೊಂದಿವೆ(ರೇಖಾಚಿತ್ರ-೭). ಬೋದಿಗೆಗಳು ೧ ಅಡಿ ದಪ್ಪ ೧ ೧/೨ ಅಡಿ ಅಗಲದ ಕಲ್ಲು ತೊಲೆಗಳನ್ನು ಹೊತ್ತಿವೆ. ತೊಲೆಗಳು ಮಧ್ಯಭಾಗದಲ್ಲಿ ಕಮಲಗಳನ್ನು, ಪಾರ್ಶ್ವಭಾಗದಲ್ಲಿ ಗೆರೆಗಳ ಅಲಂಕರಣವನ್ನು ಹೊಂದಿವೆ. ನವರಂಗದ ವಿತಾನದಲ್ಲಿ ಕಮಲವನ್ನು ಬಿಡಿಸಲಾಗಿದೆ. ನವರಂಗದ ದ್ವಾರಬಂಧವು ವಿಶೇಷವಾಗಿ ಅಲಂಕರಿಸಲ್ಪಟ್ಟಿದೆ. ಒಂದು ಅಡಿ ಎತ್ತರದ, ಕಲಾತ್ಮಕವಾದ ಮೂರು ಮುಂಚಾಚುಗಳನ್ನು ಹೊಂದಿದ ಹೊಸ್ತಿಲ ಮೇಲೆ, ಆರು ಶಾಖೆಗಳಿಂದ ಕೂಡಿದ ದ್ವಾರಬಂಧವಿದೆ. ಶಾಖೆಗಳಲ್ಲಿ ಪ್ರಧಾನವಾದ ಎರಡು ಕಂಬ ಶಾಖೆಗಳು ಅಡ್ಡಗೆರೆಗಳ ಅಲಂಕರಣದಿಂದ ಕೂಡಿವೆ. ಉಳಿದವುಗಳನ್ನು




ರೇಖಾಚಿತ್ರ-೭, ಸೋಮೇಶ್ವರ ದೇವಾಲಯದ ನವರಂಗದಲ್ಲಿರುವ ಕಂಬ, ಅಬ್ಬಲೂರು
(ತಾ.ಹಿರೇಕೆರೂರು)

೧. ಪೀಠ, ೨. ಪಾದ, ೩. ದಂಡ, ೪. ಘಟ, ೫. ಫಲಕ, ೬. ಬೋದಿಗೆ

ವಜ್ರಾಕೃತಿ, ಬಳ್ಳಿಗಳು ಮತ್ತು ಕಮಲದಳಗಳ ವಿನ್ಯಾಸದಲ್ಲಿ ಕೊರೆಯಲಾಗಿದೆ. ಮೂರು ಮತ್ತು ಐದನೇ ಶಾಖೆಗಳು ಪ್ರಧಾನವಾಗಿದ್ದು, ಹೆಚ್ಚು ಮುಂಚಾಚಿವೆ. ಎರಡು, ನಾಲ್ಕು, ಆರನೇ ಶಾಖೆಗಳು ಒಂದು ಹಂತದಿಂದ ಹಿಂದೆ ಸರಿದರೆ, ಮೊದಲ ಶಾಖೆಯು ಎರಡು ಹಂತದಲ್ಲಿ ಹಿಂದೆ ಸರಿದಿವೆ. ಪ್ರತಿ ಶಾಖೆಯ ಕೆಳಗೂ ಕೀರ್ತಿಮುಖದಿಂದ ಇಳಿಬಿದ್ದ ತೋರಣದ ಕೆಳಗೆ ದ್ವಾರಪಾಲಕರ, ಶಿವಗಣಗಳ ಉಬ್ಬುಶಿಲ್ಪಗಳಿವೆ. ಒಳಮುಖದ ಮೊದಲ ಎರಡು ಶಾಖೆಗಳು ಲಲಾಟದಲ್ಲೂ ಮುಂದುವರೆದು ಫಲಕದಲ್ಲಿ ಸಂಧಿಸಿವೆ. ಲಲಾಟಫಲಕವು ಬರಿದಾಗಿದ್ದು ಅರ್ಧ ಅಡಿ ಮುಂಚಾಚಿದ್ದು, ಅಕ್ಕಪಕ್ಕದಲ್ಲಿ ಅಧೋಮುಖ ಕಮಲದ ಮೊಗ್ಗುಗಳನ್ನು ಹೊಂದಿದೆ(ಛಾಯಾಚಿತ್ರ-೧೩). ದ್ವಾರಬಂಧದ ಇಕ್ಕೆಲಗಳಲ್ಲಿ ದಪ್ಪ ಗಾತ್ರದ ಭಿತ್ತಿಸ್ತಂಭಗಳು ಮತ್ತು ನಾಲ್ಕು ಅಡಿ ಅಗಲ ಆರು ಅಡಿ ಎತ್ತರದ ಕಲಾತ್ಮಕ ಜಾಲಂದ್ರಗಳಿರುವುದು ಇಲ್ಲಿಯ ಪ್ರಮುಖ ಆಕರ್ಷಣೆ. ಜಾಲಂದ್ರಗಳು ಒಂಭತ್ತು ಅಡ್ಡ ಪಟ್ಟಿಕೆಗಳನ್ನು, ಆರು ಉದ್ದ ಪಟ್ಟಿಕೆಗಳನ್ನು ಹೊಂದಿದ್ದು, ಬಳ್ಳಿಗಳಿಂದ ಅಲಂಕೃತಗೊಂಡಿವೆ. ಮಧ್ಯದ ಚೌಕಗಳಲ್ಲಿ ವಿವಿಧ ಮಾದರಿಯ ಪುಷ್ಪಗಳನ್ನು ಕೊರೆಯಲಾಗಿದೆ. ಜಾಲಂದ್ರದ ಕೆಳಫಲಕದಲ್ಲಿ ಏಕಾಂತರಾಮಯ್ಯನ ಶಿರಸ್ ಪವಾಡಕ್ಕೆ ಸಂಬಂಧಿಸಿದ ಉಬ್ಬು ಶಿಲ್ಪಗಳನ್ನು ಬಿಡಿಸಲಾಗಿದೆ.

ನವರಂಗಕ್ಕೆ ಹೊಂದಿಕೊಂಡಂತೆ ಪೂರ್ವದಿಕ್ಕಿನಲ್ಲಿ ವಿಶಾಲವಾದ ಮುಖಮಂಟಪ ರಚನೆ ಇದೆ. ಆರು ಮಧ್ಯ ಕಂಬಗಳಿಂದ ೧೪ ಕಕ್ಷಾಸನ ಕಂಬಗಳಿಂದ ರಚನೆಗೊಂಡ ಈ ಮುಖಮಂಟಪವು ತೆರೆದ ರಚನೆಯಾಗಿದ್ದು, ಸುತ್ತಲೂ ಕಕ್ಷಾಸನವನ್ನು, ಪೂರ್ವ, ಉತ್ತರ ಮತ್ತು ದಕ್ಷಿಣ ದಿಕ್ಕುಗಳಲ್ಲಿ ಪ್ರವೇಶವನ್ನು ಹೊಂದಿದೆ. ಆಯತಾಕಾರದ ಮಧ್ಯ ವೇದಿಕೆಯ ಅಂಚಿನಲ್ಲಿರುವ ಕಂಬಗಳು ನವರಂಗದಲ್ಲಿರುವ ಕಂಬಗಳನ್ನು ಹೋಲುತ್ತವೆ. ಕಕ್ಷಾಸನದ ಮೇಲೆ ನಿಂತ ಗಿಡ್ಡ ಕಂಬಗಳು ವಿವಿಧ ಮಾದರಿಯಲ್ಲಿವೆ (ಛಾಯಾಚಿತ್ರ-೧೪). ಮೂರೂ ದಿಕ್ಕಿನ ಪ್ರವೇಶಗಳಲ್ಲಿ ಐದು ಮೆಟ್ಟಿಲುಗಳ ಸೋಪಾನ ರಚನೆ ಇದೆ. ದೇವಾಲಯವು ಶಿಥಿಲವಾಗಿದ್ದು ಕಕ್ಷಾಸನದ ಒರಗು ಆಸನಗಳು ಬಿದ್ದಿವೆ. ದೇವಾಲಯದ ದುರಸ್ಥಿಕಾರ್ಯವು ನಡೆದಿದೆ.

**ಶಾಸನಗಳಿಂದ ಹೆಚ್ಚಿನ ವಿವರ :** ಶಾಸನಗಳು ಈ ಊರನ್ನು 'ಅಬ್ಬಲೂರು' ಎಂದೇ ಉಲ್ಲೇಖಿಸಿವೆ. ಈ ದೇವಾಲಯಕ್ಕೆ ಸಂಬಂಧಿಸಿದ ಶಾಸನವು ೧೦೪ ಪಂಕ್ತಿಗಳನ್ನು ಉಳ್ಳದಾಗಿದ್ದು ದೇವಾಲಯದ ಬಗ್ಗೆ ಸಮಗ್ರ ಮಾಹಿತಿಯನ್ನು ಒದಗಿಸುತ್ತದೆ.[೧೫೮] ಈ ಸೋಮನಾಥ ದೇವಾಲಯವು ಹನ್ನೆರಡನೇ ಶತಮಾನದಲ್ಲಿ ನಡೆದ ಒಂದು ಐತಿಹಾಸಿಕ ಘಟನೆಯ ಸ್ಮಾರಕವಾಗಿ ರೂಪಗೊಂಡಿದೆ. ಜೈನ ಮತ್ತು ಶೈವ ಮತಗಳ ನಡುವೆ ನಡೆದ ಸಂಘರ್ಷದಲ್ಲಿ ಶೈವ ಮತದ ಕೈ ಮೇಲಾದದ್ದನ್ನು ಈ ದೇವಾಲಯ ಸಾರುತ್ತದೆ. ಇವೆರಡೂ ಮತಗಳ ನಡುವೆ ವಿದ್ವತ್ತಿನ ಮಟ್ಟದಲ್ಲಿ ಸಂಘರ್ಷ ನಡೆಯುತ್ತ ಬಂದಿದ್ದರೂ[೧೬೦] ಆ ಸಂಘರ್ಷ ಭೌತಿಕವಾಗಿ ಭುಗಿಲೆದ್ದದ್ದು ಈ ಅಬ್ಬಲೂರಿನಲ್ಲಿ. ಉಚ್ಛ್ರಾಯ ಸ್ಥಿತಿಯಲ್ಲಿದ್ದ ಒಂದು ಮತವು ಭದ್ರತೆಯನ್ನು ಕಳೆದು ಕೊಂಡಾಗ, ಮತ್ತೊಂದು ಮತವು ಪ್ರಬುದ್ಧಮಾನಕ್ಕೆ ಬರಲು ಪ್ರಯತ್ನಿಸುತ್ತದೆ. ಇಳಿಮುಖದತ್ತ ಪಯಣಿಸುತ್ತಿರುವ ಅನ್ಯ ಮತದೊಂದಿಗೆ ತೀವ್ರವಾದ ಘರ್ಷಣೆಗೆ ತೊಡಗುವುದು ಅನಿವಾರ್ಯವಾಗುತ್ತದೆ. ಹನ್ನೊಂದನೇ ಶತಮಾನದ ಕೊನೆಯ ಭಾಗಕ್ಕಾಗಲೆ ಇಳಿಮುಖಗೊಳ್ಳುತ್ತಿದ್ದ ಜೈನಮತ ಮತ್ತು ಪ್ರಬುದ್ಧ

ಮಾನಕ್ಕೆ ಬರಲು ಪ್ರಯತ್ನಿಸುತ್ತಿದ್ದ ವೀರಶೈವಮತ ಇವೆರಡರ ನಡುವೆ ಅಸ್ತಿತ್ವದ ಸಲುವಾಗಿ ಧಾರ್ಮಿಕ ಸಂಘರ್ಷವು ನಡೆದಿರುವುದಕ್ಕೆ ಶಾಸನ,[೧೫೯] ಕಾವ್ಯ,[೧೬೦] ಪುರಾಣಗಳ ಆಧಾರಗಳಿವೆ.[೧೬೧] ಅದಕ್ಕೆ ಅಬ್ಬಲೂರು ಮುಖ್ಯ ಉದಾಹರಣೆ ಆಗಿದೆ.

ಮಧ್ಯಕಾಲೀನ ಶೈವ ಸಂಪ್ರದಾಯದ ಅನುಯಾಯಿಗಳಿಗೆ ಶಿವಪಾರಮ್ಯದ ಜೊತೆ ಜೈನಮತಿಯರನ್ನು ಹತ್ತಿಕ್ಕುವುದು ಅವರ ಉದ್ದೇಶಗಳಲ್ಲಿ ಒಂದಾಗಿತ್ತು.[೧೬೨] ಜೈನರನ್ನು ಹತ್ತಿಕ್ಕುವ ಪ್ರಕ್ರಿಯೆಯಲ್ಲಿ ತೊಡಗಿದವರಲ್ಲಿ ಮೂರು ರೀತಿಯ ಶೈವಗುಂಪುಗಳನ್ನು ಕಾಣುತ್ತೇವೆ. ಜೈನರ ಜೊತೆ ತಮ್ಮ ತಮ್ಮ ತಾತ್ವಿಕ ದೃಷ್ಟಿ ಹಾಗೂ ವ್ಯವಹಾರಿಕ ಅಗತ್ಯಗಳಿಗೆ ಅನುಗುಣವಾಗಿ ಸಂಘರ್ಷ, ನಿರಾಸಕ್ತಿ ಹಾಗೂ ಹೊಂದಾಣಿಕೆಯ ದಾರಿಯನ್ನು ಹಿಡಿದು ಜೈನರೊಂದಿಗೆ ವಿರೋಧ ವ್ಯಕ್ತಪಡಿಸಿದರು.[೧೬೩] ಒಂದು ಗುಂಪಿನ ಶೈವರು ಶಿವಪಾರಮ್ಯದ ಪ್ರತಿಪಾದನೆಯಲ್ಲಿ ಸಮಾಜ ಸುಧಾರಕರಾಗಿ ಮಹತ್ವ ಪಡೆಯುತ್ತಾರೆ. ಇವರು ನಿರ್ದಿಷ್ಟವಾಗಿ ಜೈನ ದೇವಾಲಯ ಸಂಸ್ಕೃತಿಯನ್ನು ಕುರಿತು ಮತ್ತು ಜೈನ ಧರ್ಮ ಕುರಿತು ತಮ್ಮ ವಿರೋಧವನ್ನು ಪ್ರಕಟಿಸದೆ ಜೈನರ ಕುರಿತು ದಿವ್ಯ ಉಪೇಕ್ಷೆ ತೋರುತ್ತಾರೆ. ಇನ್ನೊಂದು ಗುಂಪಿನವರು ರಾಜಾಶ್ರಯವನ್ನು ಪಡೆದು, ಆಸ್ತಿಪಾಸ್ತಿಗಳನ್ನು ಗಳಿಸಿ ಜೈನಮತ ದೇವಾಲಯ ಸಂಸ್ಕೃತಿಯೊಂದಿಗೆ ಹೊಂದಾಣಿಕೆ ಮಾಡಿಕೊಂಡು ತಮ್ಮ ಜಗತ್ತನ್ನು ರೂಪಿಸಿಕೊಂಡರು. ಮಗದೊಂದು ಗುಂಪಿನವರು ಉಪೇಕ್ಷೆಯನ್ನು ತೋರದೆ ಹೊಂದಾಣಿಕೆಯನ್ನು ತೋರದೆ ಜೈನರೊಂದಿಗೆ ಭೌತಿಕವಾಗಿ ಸಂಘರ್ಷಕ್ಕೆ ಇಳಿದರು. ಜೈನರು ಶಿವಪಾರಮ್ಯವನ್ನು ಅಲ್ಲಗಳೆದದ್ದನ್ನು ಸಹಿಸದ ಇವರನ್ನು ವೀರಶೈವ ಸಂಪ್ರದಾಯದ 'ಗಣಾಚಾರ' ನಿರತರೆಂದು ಗುರುತಿಸಬಹುದಾಗಿದೆ. ಇಂತಹ ಶಿವಪರ ಉಗ್ರಭಕ್ತಿಯನ್ನು ಮಧ್ಯಕಾಲೀನ ಕೆಲವು ಶಾಸನಗಳು ಎತ್ತಿ ತೋರಿಸುತ್ತವೆ.[೧೬೪] ಅವುಗಳಲ್ಲಿ ಅತ್ಯಂತ ಮುಖ್ಯವಾದದ್ದು ಅಬ್ಬಲೂರಿನ ವೀರಶೈವ ಧರ್ಮದ ಏಕಾಂತ ರಾಮಯ್ಯನ ಶೌರ್ಯ ಸಾಹಸವನ್ನು ವಿವರಿಸುವ ಕ್ರಿ.ಶ.ಸು.೧೨೦೦ರ ಶಾಸನವಾಗಿದೆ.[೧೬೫] ಇವನ ಸಾಹಸವನ್ನು ಪವಾಡವನ್ನು ಶಾಸನಗಳಲ್ಲಿ ಮಾತ್ರವಲ್ಲ ಕಾವ್ಯಗಳಲ್ಲಿಯೂ ಕಾಣುತ್ತೇವೆ.[೧೬೬]

ಕ್ರಿ.ಶ.ಸು.೧೨೦೦ರ ಶಾಸನವು ಏಕಾಂತರಾಮಯ್ಯನ ಪೂರ್ತಿ ವಿವರವನ್ನು ಒದಗಿಸುತ್ತದೆ. ಅದರ ಸಂಕ್ಷಿಪ್ತ ರೂಪವೆಂದರೆ, ಅಳಂದೆಯಲ್ಲಿ ಸೋಮನಾಥನ ಅನುಗ್ರಹದಿಂದ ಪುರುಷೋತ್ತಮ ಭಟ್ಟ ಮತ್ತು ಸೀತಾದೇವಿ (ಪದ್ಮಾಂಬಿಕೆ)ಯರಿಗೆ ಮಗನಾಗಿ ಜನಿಸಿದ ರಾಮಯ್ಯನು ಶಿವಕ್ಷೇತ್ರಗಳನ್ನೂ, ಶಿವಲಿಂಗಗಳನ್ನೂ ಸಂದರ್ಶಿಸುತ್ತಾ ಅಬ್ಬಲೂರಿಗೆ ಬರುತ್ತಾನೆ. ಇಲ್ಲಿಯ ಜೈನಪ್ರಮುಖನಾದ ಸಂಕಗಾವುಂಡನು, ರಾಮಯ್ಯನು ತಂಗಿದ್ದ ಬ್ರಹ್ಮೇಶ್ವರ ದೇವಾಲಯಕ್ಕೆ ಜೈನರೊಂದಿಗೆ ಬಂದು ಜಿನಪಾರಮ್ಯವನ್ನು ಘೋಷಿಸಿ, ಶಿವಪಾರಮ್ಯವನ್ನು ಘೋಷಿಸಲು ಪ್ರೇರೇಪಣೆ ನೀಡುತ್ತಾನೆ. ಶಿರಸ್ ಪವಾಡದಲ್ಲಿ ರಾಮಯ್ಯನು ವಿಜಯಿಯಾಗಿ ಶಿವಸಮಯವನ್ನು ಭಂಗಿಸಿದ ಜೈನರ ವಿರುದ್ಧ ಹೋರಾಡಿ, ಜೈನರನ್ನು ಸೋಲಿಸಿ, ಅಬ್ಬಲೂರಿನ ಜೈನ ಬಸದಿಯನ್ನು ಖಂಡಿಸಿ ವೀರಸೋಮನಾಥ ತ್ರಿಕೂಟ ದೇವಾಲಯವನ್ನು ಶಿವಾಗಮೋಕ್ತವಾಗಿ ಕಟ್ಟಿಸುತ್ತಾನೆ. ಮಾತ್ರವಲ್ಲ ತಾನು ನಡೆಸಿದ ಕಾರ್ಯಕ್ಕೆ ಕಲಚೂರಿ ದೊರೆಗಳಾದ ಬಿಜ್ಜಳ, ಕಲ್ಯಾಣ ಚಾಲುಕ್ಯ ದೊರೆ ನಾಲ್ವಡಿ ಸೋಮೇಶ್ವರ, ಹಾನಗಲ್ಲಿನ ಕದಂಬ ದೊರೆ ಕಾಮದೇವ ಮತ್ತು ಮಲ್ಲಿದೇವರಿಂದ ಗೋಗಾವೆ, ಅಬ್ಬಲೂರು, ಧೂಪದಹಳ್ಳಿ, ನೂಲಗೇರಿ, ಭೋಗಾವಿ ಮುಂತಾದ ಗ್ರಾಮಗಳನ್ನು ದಾನವಾಗಿ ಪಡೆಯುತ್ತಾನೆ.

ಪಿ.ಬಿ.ದೇಸಾಯಿ ಅವರು 'ಏಕಾಂತ' ಎಂಬ ವಿಶೇಷಣವು ರಾಮಯ್ಯನಿಗೆ ಜೈನಮತದ ಮೇಲಿನ ಅವನ ವಿಜಯದ ನಂತರ ಬಂದಿರಬಹುದೆಂದು ಊಹಿಸುತ್ತಾರೆ.[೧೬೭] ಜೊತೆಗೆ ಜೈನಮತದಲ್ಲಿನ ಅನೇಕಾಂತ ವಾದವನ್ನು ಗೆದ್ದುದಕ್ಕೆ ಸಂಕೇತವಾಗಿದೆ ಎಂದು ಅಭಿಪ್ರಾಯಪಡುತ್ತಾರೆ. ಈ ಹೇಳಿಕೆಯನ್ನು ಕೆಂಪನಪುರ ಶಾಸನವು ಸಮರ್ಥಿಸುತ್ತದೆ.[೧೬೮] ರಾಮಯ್ಯನನ್ನು ಸ್ತುತಿಸುತ್ತ 'ಅನೇಕಾಂತಾದಿ ವಿರುದ್ಧ ವಾಗ್ವಿಘಟನ ಪ್ರೌಢಪ್ರತಾಪೋಜ್ವಲ' ಎಂದು ಕೀರ್ತಿಸಿದೆ. ಆದರೆ ಏಕಾಂತ ಎಂಬ ವಿಶೇಷಣ ಬಂದುದರ ಬಗ್ಗೆ ಇಲ್ಲಿಯ ಶಾಸನದಲ್ಲಿ ಸ್ಪಷ್ಟವಾದ ಉಲ್ಲೇಖವಿದೆ.[೧೬೯]

..... 'ಏಕಾಗ್ರ ಭಕ್ತಿಯೋಗದಿ

ನೇಕಾಕಿಯೆನಲ್ಕೆ ಸಂದು ಶಿವನಂ ಪಿರಿದ

ಪ್ಪೇಕಾಂತದೊಳಾರಾಧಿಸಿ

ಯೇಕಾಂತದ ರಾಮನೆಂಬ ಪೆಸರ(ಂ)ಪಡೆದಂ ....

ಅವನ ಏಕಾಗ್ರತೆಯೇ ಏಕಾಂತ ಎಂಬ ವಿಶೇಷಣಕ್ಕೆ ಕಾರಣವಾಗಿದೆ.

ತನ್ನ ಶಿರವನ್ನು ಪಣವಾಗಿಟ್ಟು ಮೆರೆದ ಈ ಘಟನೆ ಧಾರ್ಮಿಕ ದೃಷ್ಟಿಯಿಂದ ಪವಾಡ ಎನಿಸಿಕೊಂಡರೂ ಪವಾಡದ ಮರೆಯಲ್ಲಿ ರಾಜರು, ರಾಜ್ಯ, ಜನಸಮೂಹ ಎಲ್ಲವೂ ಭೌತಿಕವಾಗಿ ಒಂದು ಮತದ ದೇವಾಲಯವನ್ನು ಹಾಳುಮಾಡಿ ಆ ಮತದವರನ್ನು ಹೊರದಬ್ಬುವ ಕ್ರಿಯೆಯನ್ನು ಒಪ್ಪಿಕೊಂಡವು ಹಾಗೂ ಬೆಂಬಲಿಸಿದವು. ಇದಕ್ಕೆ ಮಧ್ಯಯುಗೀನ ಶೈವಧರ್ಮದ ಪ್ರಭಾವ ಕಾರಣ ಎನ್ನದೆ ಬೇರೆ ಹೇಳಲು ಆಗದು.

ನೇರವಾಗಿ ದೇವಾಲಯದ ವಿಷಯಕ್ಕೆ ಬಂದರೆ, ಶಾಸನೋಕ್ತ ಪವಾಡ ಪುರುಷ ರಾಮಯ್ಯನಿಂದ ನಿರ್ಮಾಣಗೊಂಡ ವೀರಸೋಮೇಶ್ವರ ದೇವಾಲಯವು ತ್ರಿಕೂಟ ವಿನ್ಯಾಸದಲ್ಲಿ ರೂಪಗೊಂಡು ಮಧ್ಯ ಗರ್ಭಗೃಹದಲ್ಲಿ ಸೋಮನಾಥಲಿಂಗವು, ಅಕ್ಕಪಕ್ಕದಲ್ಲಿ ಏಕಾಂತರಾಮಯ್ಯ ಮತ್ತು ಅಗ್ನಿಹೊನ್ನಯ್ಯರ ಹೆಸರಲ್ಲಿ ಸ್ಥಾಪಿತಗೊಂಡ ಲಿಂಗಗಳನ್ನು ಹೊಂದಿವೆ. ಭೋಜರಾಜ ಪಾಟೀಲ ಅವರು[೧೭೦] ಏಕಾಂತ ರಾಮಯ್ಯ ನಿರ್ಮಿಸಿದ ತ್ರಿಕೂಟ ದೇವಾಲಯವು ಇದೇ ಊರಿನ ಇನ್ನೊಂದು ತ್ರಿಕೂಟವಾದ ಬ್ರಹ್ಮಲಿಂಗೇಶ್ವರವೆಂದು ಸೂಚಿಸುತ್ತಾರೆ. ಅದು ತಪ್ಪಾಗುತ್ತದೆ. ಅವರು ಇದೇ ಊರಿನ ಈ ವೀರಸೋಮನಾಥ ದೇವಾಲಯವನ್ನು ಗಮನಿಸಿದಂತೆ ಕಾಣುವುದಿಲ್ಲ. ಅವರು ಬ್ರಹ್ಮಲಿಂಗೇಶ್ವರದ ಮಾಹಿತಿಯನ್ನು ಒದಗಿಸುತ್ತ

"... ಇಂದು ಕಂಡುಬರುವ ಈ ದೇವಾಲಯ ಸಂಕೀರ್ಣ ಸ್ವರೂಪ ಗಮನಿಸಿದರೆ ಮೂಲ ದೇವಾಲಯವು ಪೂರ್ವಾಭಿಮುಖವಾಗಿದ್ದು ತೆರೆದ ಮುಖಮಂಟಪ, ಶುಕನಾಸಿ, ಗರ್ಭಗೃಹ ಮಾತ್ರ ಹೊಂದಿದಂತೆ ತೋರುತ್ತದೆ. ಏಕಾಂತ ರಾಮಯ್ಯನ ಕಾಲದವರೆಗೂ ಈ ದೇವಾಲಯ ಇದೇ ರೀತಿಯಲ್ಲಿರಬೇಕು. ಏಕಾಂತ ರಾಮಯ್ಯ ದೇವಾಲಯವನ್ನು ವೀರಸೋಮೇಶ್ವರ ತ್ರಿಕೂಟವಾಗಿ ಮಾಡಿಸಿದನೆಂದು ಹೇಳಲಾಗಿದೆ. ಬಹುಶಃ ಈ ಕಾಲದಲ್ಲಿಯೇ ಈ ದೇವಾಲಯವು ಮಾರ್ಪಾಡು ಹೊಂದಿರಬಹುದಾಗಿದೆ. ಏಕಾಂತ ರಾಮಯ್ಯನ ಕತೆಯಲ್ಲಿ ಸೂರ್ಯ ದೇವನದು ಬಹುಮುಖ್ಯಪಾತ್ರವೆಂಬುದು ತಿಳಿದ ಮಾತೇ ಆಗಿದೆ. ಆದ್ದರಿಂದ ಪೂರ್ವದ ಪ್ರವೇಶ ದ್ವಾರವನ್ನು ಬಳಸಿಕೊಂಡು ಅಲ್ಲಿ ಗರ್ಭಗೃಹವೊಂದನ್ನು ನಿರ್ಮಿಸಿ ವಿಷ್ಣು ವಿಗ್ರಹವನ್ನು ದಕ್ಷಿಣಾಭಿ

## ಪಟ್ಟಿ ೪

| ಅ. ನಂ. | ಊರು | ದೇವಾಲಯ ಹೆಸರು | ದಾನ ನೀಡಿದವರು | ದಾನ ಸ್ವೀಕರಿಸಿದವರು | ದಾನ ವಿವರ | ಕ್ರಿ.ಶ. | ದಾನದ ವಿನಿಯೋಗ | ದಾನ ನೀಡಿದ ಸಂದರ್ಭ | ಉಲ್ಲೇಖ |
|---|---|---|---|---|---|---|---|---|---|
| ೧. | ಅಬ್ಬಲೂರು (ತಾ.ಹಿರೇಕೆರೂರು) | ವೀರಸೋಮನಾಥ | ಕಳಚೂರ್ಯ ಬಿಜ್ಜಳ | ಏಕಾಂತರಾಮಯ್ಯ | ಸತ್ತಳಿಕೆಯೆಪ್ಪತ್ತರೊಳಗೆ ಮುಳುಗುಂದದಿಂ ತೆಂಕಣ ಗೋಗಾವೆ ಎಂಬ ಗ್ರಾಮ | ೧೨೦೦ | ದೇಗುಲದ ಮಾಟಕೂಟ ಪ್ರಾಕಾರ ಖಣ್ಡಸ್ಫುಟಿತ ಜೀರ್ಣೋದ್ಧಾರಕ್ಕೆ ದೇವರ ರಂಗಭೋಗ ನೈವೇದ್ಯಕಂ | – | ಎ.ಇಂ.ಸಂ. V ಪೃ. ೨೪೫ ಮತ್ತು ೨೫೨ |
| ೨. | ” | ” | ತ್ರಿಭುವನಮಲ್ಲ ಸೋಮೇಶ್ವರ ದೇವ | ” | ಬನವಸೆ ಪನ್ನಿಚ್ಛಾಸಿರದ ನಾಗರಖಂಡೆ ಪ್ಪತ್ತರ ಅಬ್ಬಲೂರು ಗ್ರಾಮ | ೧೨೦೦ | ಚೈತ್ರಪವಿತ್ರ ವಸಂತೋತ್ಸವಾದಿ ಪರ್ವಗಳಲ್ಲಿ ಅನ್ನದಾನ ವಿದ್ಯಾದಾನಕ್ಕೆ | – | ಅದೇ |
| ೩. | ” | ” | ಕದಂಬ ಕಾಮದೇವ | ” | ಪಾನುಂಗಲ್ಲೈನೂರರೊಳಗಣ ಕಂಪಣ ಹೊಸನಾಡೆಪ್ಪತ್ತರ ವುಙ್ಗಗೋಡ ಸಮೀಪದ ಜೋಗೇಸರದಿಂ ಬಡಗಣ ಮಲ್ಲವಳ್ಳಿ ಎಂಬ ಗ್ರಾಮ | ೧೨೦೦ | ಖಣ್ಡಸ್ಫುಟಿತ ಜೀರ್ಣೋದ್ಧಾರಕ್ಕೆ ದೇವರಂಗಭೋಗ ಅಂಗಭೋಗ ನೈವೇದ್ಯಕ್ಕೆ ಚೈತ್ರಪವಿತ್ರ ವಸಂತೋತ್ಸವಾದಿ ಪರ್ವಗಳ ಅನ್ನದಾನಕ್ಕೆಂದು | – | ಅದೇ |

ಮುಖವಾಗಿಯೂ ಸ್ಥಾಪಿಸಿದ್ದು ಕಂಡುಬರುತ್ತದೆ. ತ್ರೈಪುರುಷ ದೇವಾಲಯಗಳಲ್ಲಿರುವ ಕ್ರಮ ಇಲ್ಲಿ ತಪ್ಪಿ ಹೋಗಿದೆ..." ಎಂದಿದ್ದಾರೆ. ಪಾಟೀಲ ಅವರ ಅಭಿಪ್ರಾಯ ಇಲ್ಲಿ ಎಡವಿದಂತಿದೆ.

ಸೋಮೇಶ್ವರ ದೇವಾಲಯದ ಶಾಸನವು[೬೦]

... ಜಿನನನೊಡೆದು ಬಸದಿಯನಳಿದು ಬಿಸು

ಟು ನೆಲನಂ ಖ(ಂ)ಡಿಸಿ ವೀರಸೋಮನಾಥ ದೇವರಂ ಪ್ರತಿಷ್ಟೆ ಮಾಡಿ

ಶಿವಾಗಮೋಕ್ತವಾಗಿ ಪರ್ಬ್ಬ(ರ್ವ್ವ)ತ ಪ್ರ(ಮಾ)ಣದ ದೇಗುಲಮಂ ತ್ರಿ

ಕೂಟವಾಗಿ ಮಾಡಿಸಿದರೆಂಬುದು(ಕೇ)ಳ್ದು...

ಜಿನಮೂರ್ತಿಯನ್ನು ಒಡೆದು, ಬಸದಿಯನ್ನು ಬೀಳಿಸಿ, ನೆಲನಂ ಖಂಡಿಸಿ ಅಂದರೆ ಮೊದಲಿದ್ದ ಜಿನಾಲಯ ವನ್ನು ಪೂರ್ತಿ ಬೀಳಿಸಿ, ಹೊಸದಾಗಿಯೇ ವೀರಸೋಮನಾಥ ದೇಗುಲವನ್ನು ಮಾಡಿಸಿದನೆಂದು ಸ್ಪಷ್ಟವಾಗುತ್ತದೆ. ಅಲ್ಲದೆ ಶಿವಾಗಮೋಕ್ತವಾಗಿ ಇದು ನಿರ್ಮಾಣಗೊಂಡಿದೆ ಎಂದು ಶಾಸನವು ಸ್ಪಷ್ಟವಾಗಿ ಉಲ್ಲೇಖಿಸುತ್ತದೆ. ಇಲ್ಲಿ ಇನ್ನೊಂದು ಗಮನಿಸಬೇಕಾದ ಅಂಶವೆಂದರೆ 'ಪರ್ಬ್ಬ(ರ್ವ್ವ)ತ ಪ್ರಮಾಣ' ಎಂದು ವರ್ಣಿಸಿರುವುದು. ಈ ದೇವಾಲಯವು ಅಧ್ಯಯನಕ್ಕೆ ಒಳಪಡಿಸಿದ ಎಲ್ಲ ತ್ರಿಕೂಟ ದೇವಾಲಯಗಳಿಗಿಂತ ದೊಡ್ಡದಾಗಿದೆ. ಎತ್ತರದಲ್ಲೂ ಹಿರಿದಾಗಿದೆ ಎಂಬುದು ಗಮನಾರ್ಹ. ಅಲ್ಲದೆ ಈ ದೇವಾಲಯಕ್ಕೆ ಚಕ್ರವರ್ತಿಗಳಿಂದ ಮಹಾ ಮಂಡಳೇಶ್ವರರಿಂದ ದಾನಗಳು ಕೊಡಮಾಡಿವೆ. ಪಟ್ಟಿ-೪ರಲ್ಲಿ ಅದನ್ನು ಗಮನಿಸಬಹುದು.

| | | |
|---|---|---|
| ಊರು | : | ರಟ್ಟೀಹಳ್ಳಿ (ತಾ.ಹಿರೇಕೆರೂರು) |
| ಸ್ಥಳ | : | ಊರ ಪೂರ್ವಕ್ಕೆ ಕುಮದ್ವತಿ ನದಿ ಸಮೀಪ |
| ಹೆಸರು | : | ಕಡಂಬೇಶ್ವರ |
| ಅಭಿಮುಖ | : | ಪೂರ್ವ |
| ನಿವೇದನೆ | : | ಈಶ್ವರ (ಮೂರು ಗರ್ಭಗೃಹಗಳಲ್ಲಿ ಲಿಂಗಗಳು) |
| ಕಾಲ | : | ಕ್ರಿ.ಶ.೧೨೩೮ |
| ಶೈಲಿ | : | ಕಲ್ಯಾಣ ಚಾಲುಕ್ಯ |
| ಬಳಸಿದ ವಸ್ತು | : | ಕಪ್ಪು ಮಿಶ್ರಿತ ನೀಲಿ ಛಾಯೆಯ ಕಲ್ಲು |

**ದೇವಾಲಯದ ವಾಸ್ತುಶಿಲ್ಪ**

ತಳವಿನ್ಯಾಸ : (ತಳವಿನ್ಯಾಸ ರೇಖಾಚಿತ್ರ-೬) ಮೂರು ಗರ್ಭಗೃಹಗಳು, ಮೂರು ಅರ್ಧಮಂಟಪಗಳು ನವರಂಗ, ಮಹಾಮುಖಮಂಟಪ.

ಊರ್ಧ್ವಮುಖ ರಚನೆ : ಹಿರೇಕೆರೂರಿನಿಂದ ಆಗ್ನೇಯಕ್ಕೆ ೨೦ ಕಿ.ಮೀ. ದೂರದಲ್ಲಿರುವ ಈ ದೇವಾಲಯವು ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದೆ. ಗರ್ಭಗೃಹಗಳ ಅಧಿಷ್ಠಾನವು ನಾಲ್ಕು ಅಡಿ ಎತ್ತರವಾಗಿದ್ದು, ಜಗತಿ, ಪದ್ಮ, ತ್ರಿಪಟ್ಟಕುಮುದ, ಕಪೋತಭಾಗದಲ್ಲಿ ಸಣ್ಣ ದಂತಪಂಕ್ತಿಗಳ ಅಲಂಕರಣವಿದ್ದು, ಅದರ ಮೇಲೆ ಅಲಂಕಾರರಹಿತವಾದ ಕಂಟಕಗಳ ಮಾಲೆ, ಇದರ ಮೇಲೆ ತೆಳುವಾದ ವೇದಿಕೆಯಂತಹ ರಚನೆಯನ್ನು







ತಳವಿನ್ಯಾಸ ರೇಖಾಚಿತ್ರ-೬, ಕಡಂಬೇಶ್ವರ ದೇವಾಲಯ, ರಟ್ಟೆಹಳ್ಳಿ (ತಾ.ಹಿರೇಕೆರೂರು)
೧. ಗರ್ಭಗೃಹ, ೨. ಅರ್ಧಮಂಟಪ, ೩. ನವರಂಗ, ೪. ಮುಖಮಂಟಪ

ಹೊಂದಿದ್ದು ಪಾದಬಂಧ ಪ್ರಭೇದಕ್ಕೆ ಸೇರುತ್ತದೆ. ಉಪಾನವು ಮಣ್ಣಿನಲ್ಲಿ ಮುಚ್ಚಿದೆ. ಪ್ರಧಾನ ಅಂಗಗಳ ಮಧ್ಯದಲ್ಲಿ ಕಂಪ, ಗಳ ಕಂಪ ಭಾಗಗಳು ಪ್ರಮಾಣಬದ್ಧವಾಗಿದ್ದು, ಅಧಿಷ್ಠಾನವು ಆಕರ್ಷಕವಾಗಿದೆ (ರೇಖಾಚಿತ್ರ-೮). ವೇದಿಕೆಯ ಕೆಳಭಾಗದಲ್ಲಿ ನಿಮ್ನ ಅಲಂಕರಣವನ್ನು ಕಾಣಬಹುದು(ಛಾಯಾಚಿತ್ರ-೧೫). ಅಧಿಷ್ಠಾನವು ಮೂರು ಮುಂಚಾಚುಗಳನ್ನು ಹೊಂದಿದೆ. ಕರ್ಣಭಾಗವು ಒಂದು ಹಂತದಿಂದ ಮುಂಚಾಚಿದ್ದರೆ, ಭದ್ರಭಾಗವು ಮೂರು ಹಂತಗಳಲ್ಲಿ ಹೆಚ್ಚು ಮುಂಚಾಚಿದೆ. ಭದ್ರಕರ್ಣಗಳ ಮಧ್ಯೆ ಹಿಂಚಾಚನ್ನು ಕಾಣಬಹುದು. ವೇದಿಕೆಯ ಮೇಲೆ ರಚನೆಗೊಂಡ ಭಿತ್ತಿಯು ಒಳಮುಖದಲ್ಲಿ ಚೌಕ ಕಲ್ಲುಗಳಿಂದಲೂ, ಹೊರಮುಖದಲ್ಲಿ ತೆಳುಕಂಬಗಳನ್ನು ಮತ್ತು ಕಂಬದಿಂದ ಕಂಬಕ್ಕೆ ಜೋಡಣೆಯಾಗಿ ಆರು ಅಡಿ ಎತ್ತರದ ಕಲ್ಲುಚಪ್ಪಡಿಗಳನ್ನು ಲಂಬವಾಗಿ ನಿಲ್ಲಿಸಿ ರಚನೆಗೊಂಡಿದೆ. ಮಧ್ಯದ ಖಾಲಿಸ್ಥಳವನ್ನು ಕಲ್ಲು ಮಣ್ಣುಗಳಿಂದ ತುಂಬಿ ಐದು ಅಡಿ ದಪ್ಪದ ಭಿತ್ತಿಯು ನಿರ್ಮಾಣಗೊಂಡಿದೆ. ಕರ್ಣಭಾಗದ ಭಿತ್ತಿಯು ಎರಡು ತೆಳುಕಂಬಗಳಿಂದ ರಚನೆಗೊಂಡರೆ, ಭದ್ರಭಾಗವು ಮೂರು ಜೊತೆ ತೆಳು ಕಂಬಗಳಿಂದ ರಚನೆಗೊಂಡು ಮಧ್ಯದಲ್ಲಿ ಕೋಷ್ಟವಿದೆ. ಈ ಕೋಷ್ಟಗಳು ಆಳವಾಗಿದ್ದು, ದ್ವಾರಬಂಧದಲ್ಲಿ ಪಂಚಶಾಖೆಗಳಿವೆ. ಲಲಾಟದಲ್ಲಿ ಫಲಕವಿದೆ. ಪ್ರಸ್ತರ ಭಾಗದಲ್ಲಿ ಹೆಚ್ಚು ಮುಂಚಾಚಿದ ಕಪೋತ ಛತ್ತು ಇದೆ. ಮುಖ್ಯ ಗರ್ಭಗೃಹದ ಭದ್ರಕೋಷ್ಟಗಳು ಕಪೋತ ಛತ್ತಿನ ಮೇಲೆ ವೇಸರಶೈಲಿಯ ಶಿಖರವನ್ನು ಹೊಂದಿವೆ. (ಛಾಯಾಚಿತ್ರ-೧೭) ಅಕ್ಕಪಕ್ಕದ ಗೃಹಗಳ ಭದ್ರಕೋಷ್ಟಗಳು, ಕಪೋತಛತ್ತಿನ ಮೇಲೆ ರೇಖಾನಾಗರ ಶಿಖರ, ಆಮಲಕಗಳನ್ನು ಹೊಂದಿವೆ(ಛಾಯಾಚಿತ್ರ-೧೫). ಭಿತ್ತಿಭಾಗದ ತೆಳುಕಂಬಗಳು ಅಧಿಷ್ಠಾನದಿಂದ ಪ್ರಸ್ತರದವರೆಗೂ ಒಂದೇ ಗಾತ್ರದಲ್ಲಿದ್ದು ಮೇಲ್ಭಾಗದ ತೆಳು ಬೋದಿಗೆಗಳು ಪ್ರಸ್ತರಕ್ಕೆ ಆಧಾರವಾಗಿದೆ. ಚಾಚಿದ ಛತ್ತಿನ ಮೇಲೆ ಹಿಂದೆ ಸರಿದ ಕಪೋತಭಾಗವು, ಅದರ ಮೇಲೆ ಕಂಟಕಗಳ ಸಾಲು (ಮಾಲಾ) ಇದ್ದು, ದೇವಾಲಯಕ್ಕೆ ಹಣೆಪಟ್ಟಿಕಟ್ಟಿದಂತೆ ಆಕರ್ಷಕವಾಗಿ ಕಾಣುತ್ತವೆ. ಈ ಕಂಟಕಗಳ ಮೇಲೆ ತೆಳು ವೇದಿಕೆ ಇದ್ದು, ಮೇಲಿನ ಹಾರಗಳಿಗೆ ಆಸರೆಯಾಗಿದೆ. ಹಾರದಲ್ಲಿ ಕರ್ಣಕೂಟ, ದ್ವಿಶಾಲಾ, ಪಂಜರಗಳನ್ನು ಹೊಂದಿಸಲಾಗಿದೆ. ಇಂತಹ ಅಲಂಕೃತ ಹಾರಗಳನ್ನು ಒಳಗೊಂಡ ಮೂರು ತಲಗಳನ್ನು ಮೇಲ್ಕಟ್ಟಡಗಳು ಹೊಂದಿದೆ. ತಲಗಳು ಹಂತಹಂತವಾಗಿ ಕಿರಿದಾಗುತ್ತ ಹೋಗಿವೆ. ಗ್ರೀವ ಭಾಗದ ಮೇಲೆ ಚೌಕಾಕಾರದ ಮುಗುಚಿದ ಬೋಗುಣಿ ಆಕಾರದ ಶಿಖರ ಭಾಗವಿದೆ. ಮೂರೂ ಶಿಖರಗಳ ಸ್ತೂಪಿ ಭಾಗವು ಬಿದ್ದಿವೆ(ಛಾಯಾಚಿತ್ರ-೧೬). ಅಕ್ಕಪಕ್ಕದ ಮೇಲ್ಕಟ್ಟಡಗಳ ಶುಕನಾಸ ಭಾಗವು ಹಾಳಾಗಿವೆ. ಮಧ್ಯದ ಶುಕನಾಸವು ಸುಸ್ಥಿತಿಯಲ್ಲಿದ್ದು, ಅದರ ಮುಂಭಾಗದಲ್ಲಿ ಸಿಂಹದೊಂದಿಗೆ ಸೆಣಸಾಡುವ ಸಳನ ಶಿಲ್ಪವಿದೆ(ಛಾಯಾಚಿತ್ರ-೧೭). ಭದ್ರಭಾಗದಲ್ಲಿಯ ಮೇಲ್ಕಟ್ಟಡವು ಕಂಟಕಗಳ ಸಾಲಿನಲ್ಲಿ ಒಂದು ಫಲಕ; ಶಾಲಾಭಾಗದ ಮಧ್ಯದ ಫಲಕ, ಹೀಗೆ ಒಂದರ ಮೇಲೊಂದು ಆರು ಫಲಕಗಳಿಂದ ಕೂಡಿದ್ದು, ಇವುಗಳೂ ಸಹ ತಲಗಳಿಗೆ ತಕ್ಕಂತೆ ಕಿರಿದಾಗುತ್ತ ಗ್ರೀವಭಾಗದಲ್ಲಿ ಕೊನೆಗೊಳ್ಳುತ್ತವೆ. ಇವು ಚೈತಲಮಣಿಯಂತೆ ದೇವಾಲಯಕ್ಕೆ ಶೋಭೆ ತಂದಿವೆ. ಈ ಫಲಕಗಳಲ್ಲಿ ಭೈರವ (ಅಘೋರೇಶ್ವರ), ಶಿವ ಮುಂತಾದ ಉಬ್ಬು ಶಿಲ್ಪಗಳನ್ನು ತೋರಣಗಳೊಂದಿಗೆ, ಗಣಗಳೊಂದಿಗೆ ಬಿಡಿಸಲಾಗಿದೆ. ಮೇಲ್ಕಟ್ಟಡದ ಮೊದಲ ಹಾರಭಾಗಗಳು ಅರ್ಧಮಂಟಪ ಮತ್ತು ನವರಂಗದ ಛತ್ತಿನ ಮೇಲೆಯೂ ಮುಂದುವರೆದಿವೆ.




ರೇಖಾಚಿತ್ರ-೮, ಕಡಂಬೇಶ್ವರ ದೇವಾಲಯದ ಅಧಿಷ್ಠಾನ, ರಟ್ಟಿಹಳ್ಳಿ (ತಾ.ಹಿರೇಕೆರೂರು)
೧. ಜಗತಿ, ೨. ಪದ್ಮ, ೩. ಕುಮುದ, ೪. ಕಪೋತ, ೫. ಕಂಟಕ

**ತಿರ್ಯಙ್ಮುಖ ರಚನೆಗಳು :** ಪೂರ್ವಾಭಿಮುಖವಾದ ಮುಖ್ಯ ಗರ್ಭಗೃಹವು ೬.೫ x ೬.೫ ಅಡಿ ವಿಸ್ತೀರ್ಣದಲ್ಲಿದ್ದು, ಭಿತ್ತಿಯನ್ನು ನಾಲ್ಕು ಮೂಲೆ ಕಂಬಗಳು ಸೇರಿದಂತೆ ಮಧ್ಯದಲ್ಲಿ ಆರು ಕಂಬಗಳ ಸೇರ್ಪಡೆಯಿಂದ ಒಟ್ಟು ಹತ್ತು ಕಂಬಗಳನ್ನು ಬಳಸಿ ರಚಿಸಲಾಗಿದೆ. ಪಶ್ಚಿಮದಿಕ್ಕಿನ ಮತ್ತು ಉತ್ತರದಿಕ್ಕಿನ ಭಿತ್ತಿಭಾಗದಲ್ಲಿ ಮಧ್ಯ ಕಂಬಗಳ ನಡುವೆ ಎರಡು ಕಲ್ಲು ಫಳಿಗಳನ್ನು ಮುಂಚಾಚಿದಂತೆ ಇಡಲಾಗಿದೆ. ಗರ್ಭಗೃಹದ ಮಧ್ಯದಲ್ಲಿ ನಾಲ್ಕು ಅಡಿ ಎತ್ತರದ ಕಡಂಬೇಶ್ವರ ಲಿಂಗವಿದೆ. ಛತ್ತಿನ ಭಾಗದಲ್ಲಿ, ಕಮಲದ ಅಲಂಕರಣವಿದೆ. ಗರ್ಭಗೃಹದ ದ್ವಾರಬಂಧವು ಅಲಂಕೃತ ಮೂರು ಮುಂಚಾಚುಗಳಿಂದ ಕೂಡಿದ ಅರ್ಧ ಅಡಿ ಎತ್ತರದ ಹೊಸ್ತಿಲದ ಮೇಲೆ ರಚನೆಗೊಂಡಿದೆ. ಪಂಚಶಾಖೆಗಳಿಂದ ಕೂಡಿದೆ. ಶಾಖೆಗಳು ಕ್ರಮವಾಗಿ ವಜ್ರಾಲಂಕಾರ, ಬಳ್ಳಿ ಅಲಂಕರಣ, ಸ್ತಂಭ, ಬಳ್ಳಿಗಳಲ್ಲಿ ಪ್ರಾಣಿ ಚಿತ್ರಗಳು ಮತ್ತು ಕಮಲದಳ ಅಲಂಕರಣದಿಂದ ಕೂಡಿವೆ. ಮಧ್ಯದ ಸ್ತಂಭಶಾಖೆಯು ಪ್ರಧಾನವಾಗಿದ್ದು ಹೆಚ್ಚು ಮುಂಚಾಚಿದೆ. ಅಕ್ಕಪಕ್ಕದಲ್ಲಿಯ ಉಳಿದ ಶಾಖೆಗಳು ಹಂತಹಂತವಾಗಿ ಹಿಂದೆ ಸರಿದಿವೆ. ಪ್ರತಿ ಶಾಖೆಯ ಕೆಳಗೂ ಕೀರ್ತಿಮುಖದಿಂದ ಇಳಿಬಿದ್ದ ತೋರಣದೊಂದಿಗೆ, ತ್ರಿಭಂಗಿಯಲ್ಲಿ ನಿಂತ ದ್ವಾರಪಾಲಕರ, ಶಿವಗಣಗಳ ಪ್ರತಿಹಾರದ ಉಬ್ಬು ಶಿಲ್ಪಗಳಿವೆ. ಅದರ ಕೆಳಗೆ, ಅರ್ಧಅಡಿ ಎತ್ತರದ ಪಟ್ಟಿ ರಚನೆ ಇದ್ದು, ವಜ್ರಾಕೃತಿಯಲ್ಲಿ ಪುಷ್ಪಗಳ ಅಲಂಕರಣವಿದೆ. ಮೊದಲ ಎರಡು ಶಾಖೆಗಳು ಲಲಾಟದಲ್ಲೂ ಮುಂದುವರೆದು ಲಲಾಟಫಲಕದಲ್ಲಿ ಸೇರಿವೆ. ಫಲಕವು ಅರ್ಧಅಡಿ ಮುಂಚಾಚಿದ್ದು ಅಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಫಲಕದ ಕೆಳಮುಖದಲ್ಲಿ ಅರಳಿದ ಕಮಲ ಅಲಂಕರಣವಿದೆ. ಅಕ್ಕಪಕ್ಕದಲ್ಲಿ ಅಧೋಮುಖ ಕಮಲಮೊಗ್ಗುಗಳಿವೆ. ಸ್ತಂಭಶಾಖೆಯ ಬೋಧಿಗೆಗಳು ಉತ್ತರಾಂಗವನ್ನು ಹೊತ್ತಿವೆ. ಗರ್ಭಗೃಹದ ಮುಂದಿನ ರಚನೆಯಾದ ಅರ್ಧಮಂಟಪವು ಪೂರ್ವ-ಪಶ್ಚಿಮ, ಉತ್ತರ-ದಕ್ಷಿಣದವಾಗಿ ೭x ೮.೭ ಅಡಿ ವಿಸ್ತೀರ್ಣದಲ್ಲಿದೆ. ನಾಲ್ಕು ಮೂಲೆ ಕಂಬಗಳ ಜೊತೆಗೆ, ಉತ್ತರ ದಕ್ಷಿಣ ದಿಕ್ಕುಗಳ ಭಿತ್ತಿಯಲ್ಲಿ ಹೆಚ್ಚಿನ ಎರಡು ಗೋಡೆ ಕಂಬಗಳನ್ನು ಸೇರಿಸಿ ರಚನೆಗೊಂಡಿದೆ. (ತಳವಿನ್ಯಾಸ ರೇಖಾಚಿತ್ರ-೬) ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಅರ್ಧಮಂಟಪದ ದ್ವಾರಬಂಧವು ಅರ್ಧ ಅಡಿ ಎತ್ತರದ ಮೂರು ಅಲಂಕೃತ ಮುಂಚಾಚುಗಳಿಂದ ಕೂಡಿದ ಹೊಸ್ತಿಲ ಮೇಲೆ, ತೆಳುವಾದ ಎರಡು ಶಾಖೆಗಳಿಂದ ಮತ್ತು ೨x೬ ಅಡಿ ಎತ್ತರದ ಜಾಲಂಧ್ರಗಳಿಂದ ರಚನೆಗೊಂಡಿದೆ. ಜಾಲಂಧ್ರಗಳು ಹದಿನಾರು ಅಡ್ಡ ಪಟ್ಟಿಕೆಗಳಿಂದ ನಾಲ್ಕು ಉದ್ದ ಪಟ್ಟಿಕೆಗಳಿಂದ ಕೂಡಿದ್ದು, ಮಧ್ಯದಲ್ಲಿ ಚೌಕಾಕಾರದ ಪುಷ್ಪಗಳ ಅಲಂಕರಣ ಹೊಂದಿವೆ. ಲಲಾಟದಲ್ಲಿ ಗಜಲಕ್ಷ್ಮಿ ಫಲಕವಿದೆ. ದ್ವಾರಬಂಧದ ಮೇಲಿನ ಫಲಕದಲ್ಲಿ ಮಕರತೋರಣದ ಅಡಿಯಲ್ಲಿ ಗಣಪತಿ, ಬ್ರಹ್ಮ, ಶಿವ, ವಿಷ್ಣು ಮಹಿಷಮರ್ಧಿನಿಯರ ಉಬ್ಬುಶಿಲ್ಪಗಳಿವೆ. ಮಕರಗಳು ಸವಾರರನ್ನು ಹೊತ್ತಿವೆ.

ಅಕ್ಕಪಕ್ಕದ ಗರ್ಭಗೃಹಗಳು ವಿಸ್ತೀರ್ಣದಲ್ಲಿ ಮುಖ್ಯಗೃಹವನ್ನು ಹೋಲುತ್ತವೆ. ಆದರೆ ಭಿತ್ತಿ ರಚನೆಯಲ್ಲಿ ಭಿನ್ನತೆ ಇದೆ. ನಾಲ್ಕು ಮೂಲೆ ಕಂಬಗಳು ಮಾತ್ರ ಇದ್ದು, ಮಧ್ಯದಲ್ಲಿ ಹೆಚ್ಚಿನ ಗೋಡೆಕಂಬಗಳಿಲ್ಲ(ತಳವಿನ್ಯಾಸ ರೇಖಾಚಿತ್ರ-೬). ೩x೯ ಅಡಿ ಉದ್ದದ ಮೂರು ಕಲ್ಲು ಫಲಕಗಳನ್ನು ಒಂದರ ಮೇಲೊಂದರಂತೆ ಬಳಸಿ ಭಿತ್ತಿಯನ್ನು ರಚಿಸಲಾಗಿದೆ. ಭಿತ್ತಿಯ ಮಧ್ಯದಲ್ಲಿ ೧ ಅಡಿ ಮುಂಚಾಚಿದ ಫಲಕಗಳಿವೆ. ಗರ್ಭಗೃಹಗಳ ದ್ವಾರಬಂಧವು ಅರ್ಧಅಡಿ ಎತ್ತರದ, ಮೂರು ಅಲಂಕೃತ ಮುಂಚಾಚುಗಳಿದ್ದ ಹೊಸ್ತಿಲ ಮೇಲೆ,

ಪಂಚಶಾಖೆಗಳಿಂದ ಕೂಡಿವೆ. ಮಧ್ಯದ ಸ್ತಂಭ ಶಾಖೆಯು ಪ್ರಧಾನವಾಗಿದ್ದು, ಎಲ್ಲ ಶಾಖೆಗಳಿಂದ ಹೆಚ್ಚು ಮುಂಚಾಚಿದೆ. ಉಳಿದ ಶಾಖೆಗಳು ಹಂತಹಂತವಾಗಿ ಹಿಂದೆ ಸರಿದಿವೆ. ಇವು ಯಾವ ಅಲಂಕಾರವನ್ನೂ ಹೊಂದದೆ ಸಾದಾ ಮಾದರಿಯಲ್ಲಿವೆ. ಲಲಾಟದಲ್ಲಿ ಎರಡು ಅಧೋಮುಖ ಕಮಲಮೊಗ್ಗುಗಳ ಮಧ್ಯ ಲಲಾಟಫಲಕವಿದೆ. ಇಲ್ಲಿ ಯಾವ ಬಿಂಬವೂ ಇಲ್ಲ. ಗರ್ಭಗೃಹಗಳ ಮುಂದಿನ ರಚನೆಗಳಾದ ಅರ್ಧಮಂಟಪಗಳು ವಿಸ್ತಾರದಲ್ಲಿ ಮುಖ್ಯದ ಅರ್ಧಮಂಟಪವನ್ನು ಹೋಲುತ್ತವೆ. ಭಿತ್ತಿಯು ನಾಲ್ಕು ಮೂಲೆ ಕಂಬಗಳಿಂದ ೩x೭ ಅಡಿ ಉದ್ದದ ಕಲ್ಲು ಫಲಕಗಳನ್ನು ಉಪಯೋಗಿಸಿ ರಚನೆಗೊಂಡಿದೆ. ಛತ್ತಿನಲ್ಲಿ ಸಮತಲದಲ್ಲಿ ಕಮಲದ ಅಲಂಕರಣವಿದೆ. ಅರ್ಧಮಂಟಪಗಳ ದ್ವಾರಬಂಧವು ಅಲಂಕೃತಗೊಂಡ ಮೂರು ಮುಂಚಾಚುಗಳಿದ್ದ ಹೊಸ್ತಿಲ ಮೇಲೆ, ಎರಡು ತೆಳು ಶಾಖೆಗಳ ಜೊತೆ ಜಾಲಂದ್ರಗಳನ್ನು ಒಳಗೊಂಡಿದೆ. ಸಾದಾ ಮಾದರಿಯ ಎರಡು ಶಾಖೆಗಳು ಲಲಾಟದಲ್ಲೂ ಮುಂದುವರೆದು ಮಧ್ಯ ಫಲಕದಲ್ಲಿ ಸಂಧಿಸಿವೆ. ಫಲಕದಲ್ಲಿ ಯಾವ ಬಿಂಬವೂ ಇಲ್ಲ. ಜಾಲಂದ್ರಗಳ ಕೆಳಭಾಗವೂ ಫಲಕದಂತಿದೆ. ಹನ್ನೆರಡು ಅಡ್ಡ ಪಟ್ಟಿಗಳು ನಾಲ್ಕು ಉದ್ದು ಪಟ್ಟಿಗಳನ್ನು ಹೊಂದಿದ ಜಾಲಂದ್ರಗಳ ಮಧ್ಯದಲ್ಲಿ ಚೌಕಾಕಾರದ ಪುಷ್ಪಗಳ ಅಲಂಕರಣವಿದೆ.

ಪಶ್ಚಿಮದಿಕ್ಕಿನ ವಾಸ್ತುರಚನೆಗಳನ್ನು ಮಧ್ಯದ ನವರಂಗಕ್ಕೆ ಕೂಡಿಸುವ ಗೋಡೆ ಕಂಬಗಳು ಅಡ್ಡಗೆರೆಗಳಿಂದ, ನಿಮ್ನ ರೀತಿಯ ಅಲಂಕರಣಗಳಿಂದ ಕೂಡಿದ್ದು ಆಕರ್ಷಕವಾಗಿವೆ. ಆದರೆ ದಕ್ಷಿಣ ಮತ್ತು ಉತ್ತರ ದಿಕ್ಕಿನ ವಾಸ್ತು ರಚನೆಗಳನ್ನು ನವರಂಗಕ್ಕೆ ಕೂಡಿಸುವ ಗೋಡೆಕಂಬಗಳು ಕಲಾತ್ಮಕವಾಗಿಲ್ಲ. ಮಧ್ಯದ ನವರಂಗವು ೨೨x೨೨ ಅಡಿ ವಿಸ್ತೀರ್ಣದಲ್ಲಿದೆ. ಇದರ ಮಧ್ಯದಲ್ಲಿ ಅರ್ಧಅಡಿ ಎತ್ತರದ ವೇದಿಕೆ ಇದೆ. ವೇದಿಕೆಯ ಮೂಲೆಯಲ್ಲಿ ನಾಲ್ಕು ಕಂಬಗಳಿವೆ. ಈ ಕಂಬಗಳು ಒಂದು ಅಡಿ ಎತ್ತರದ ಚೌಕಾಕಾರದ ಪೀಠವನ್ನು ಹೊಂದಿವೆ. ದಂಡಭಾಗದಲ್ಲಿ ಎರಡು ಚೌಕಾಕಾರದ ರಚನೆಗಳ ಮಧ್ಯದಲ್ಲಿ ಕ್ರಮವಾಗಿ ಹದಿನಾರುಮುಖ, ಎಂಟುಮುಖ, ಹದಿನಾರುಮುಖದ ಪಟ್ಟಿಕೆಗಳಿವೆ. ಹದಿನಾರುಮುಖ ಪಟ್ಟಿಗಳಲ್ಲಿ ಕೀರ್ತಿಮುಖಗಳೊಂದಿಗೆ ಶಿವ, ನರಸಿಂಹ, ಲಜ್ಜಾಗೌರಿ ಮತ್ತು ಕುಬ್ಜರ ಉಬ್ಬುಶಿಲ್ಪಗಳಿವೆ. ಮಧ್ಯದ ಎಂಟುಮುಖದ ಪಟ್ಟಿಯು ವಜ್ರಾಕೃತಿಯಲ್ಲಿ ಕುಸುರಿ ಕೆಲಸದಿಂದ ಕೂಡಿದೆ. ಪ್ರಧಾನವಾದ ಚೌಕಾಕಾರದ ರಚನೆಗಳು ಅಲಂಕಾರರಹಿತವಾಗಿವೆ. ದಂಡಾಗ್ರಭಾಗದಲ್ಲಿ ಕಲಶ, ಘಟ, ಮಂಡಿ, ಫಲಕಗಳನ್ನು ಕಾಣುತ್ತೇವೆ. ಕಂಬದ ಮೇಲೆ ತ್ರಿಕೋನ ಮಾದರಿಯ ನಾಲ್ಕು ಮುಖ ಬೋದಿಗೆ ಇದೆ(ರೇಖಾಚಿತ್ರ-೯). ನಾಲ್ಕೂ ಬೋದಿಗೆಗಳು ಮತ್ತು ಒಂದು ಅಡಿ ದಪ್ಪ ೧ ೧/೨ ಅಡಿ ಅಗಲದ ಕಲ್ಲು ತೊಲೆಗಳನ್ನು ಹೊತ್ತಿವೆ. ಮಧ್ಯದ ವಿತಾನದಲ್ಲಿ ಎರಡು ಸುತ್ತಿನ ಕಮಲದ ಅಲಂಕರಣವಿದೆ. ನವರಂಗದ ಭಿತ್ತಿಯು ಮುಖ್ಯ ಅರ್ಧಮಂಟದ ಅಕ್ಕಪಕ್ಕದಲ್ಲಿ ಎರಡು ಕೋಷ್ಠಗಳನ್ನು ಹೊಂದಿದೆ. ಅಗಲವಾದ ಕೋಷ್ಠಗಳು ಸಣ್ಣ ದೇವಾಲಯದಂತೆ ತೋರುತ್ತವೆ. ಇವುಗಳ ದ್ವಾರಬಂಧವು ಪಂಚಶಾಖೆಗಳಿಂದ ಕೂಡಿವೆ. ಮಧ್ಯದ ಸ್ತಂಭ ಶಾಖೆಯು ಪ್ರಧಾನವಾಗಿದ್ದು ಹೆಚ್ಚು ಮುಂಚಾಚಿದೆ. ಮೊದಲ ಎರಡು ಶಾಖೆಗಳು ಲಲಾಟದಲ್ಲಿಯೂ ಮುಂದುವರೆದು, ಫಲಕದಲ್ಲಿ ಸಂಧಿಸುತ್ತವೆ. ಫಲಕವು ಬರಿದಾಗಿದ್ದು ಅಕ್ಕಪಕ್ಕದಲ್ಲಿ ಅಧೋಮುಖ ಕಮಲಮೊಗ್ಗುಗಳಿವೆ. ಸ್ತಂಭ ಶಾಖೆಯ ಬೋದಿಗೆಗಳು ಕಪೋತ ಛತ್ತಿಗೆ ಆಸರೆಯಾಗಿವೆ. ಕಪೋತದ ಮೇಲೆ ಕಂಟಕಗಳ ಸಾಲು ಇದೆ. ಇಲ್ಲಿಯ ಒಂದು ಕೋಷ್ಠದಲ್ಲಿ ಚತುರ್ಭುಜ ಗಣಪತಿಯ ಉಬ್ಬುಶಿಲ್ಪವನ್ನು ಕಾಣಬಹುದು(ಛಾಯಾಚಿತ್ರ-೧೯). ನವರಂಗದ ದ್ವಾರಬಂಧವು




ರೇಖಾಚಿತ್ರ-೯, ಕಡಂಬೇಶ್ವರ ದೇವಾಲಯದ ನವರಂಗದಲ್ಲಿರುವ ಕಂಬ, ರಟ್ಟೆಹಳ್ಳಿ (ತಾ.ಹಿರೇಕೆರೂರು)
೧. ಪೀಠ, ೨. ಪಾದ, ೩. ದಂಡ, ೪. ಘಟ, ೫. ಫಲಕ, ೬. ಬೋದಿಗೆ

ಪಂಚಶಾಖೆಗಳಿಂದಲೂ ಮತ್ತು ಪ್ರತಿ ಶಾಖೆಯ ಕೆಳಗೆ ದ್ವಾರಪಾಲಕರ ಮತ್ತು ಶಿವಗಣಗಳ ಉಬ್ಬುಶಿಲ್ಪಗಳಿಂದ ನಿರ್ಮಾಣಗೊಂಡಿದೆ. ಲಲಾಟದಲ್ಲಿ ಗಜಲಕ್ಷ್ಮಿಯ ಫಲಕವಿದೆ. ದ್ವಾರದ ಅಕ್ಕಪಕ್ಕದಲ್ಲಿ ಕಲಾತ್ಮಕವಾದ ಗೋಡೆ ಕಂಬಗಳು ಮತ್ತು ಆರು ಅಡಿ ಎತ್ತರದ ದ್ವಾರಪಾಲಕರ ಶಿಲ್ಪಗಳು ಇರುವುದು ಇಲ್ಲಿಯ ವಿಶೇಷವಾಗಿದೆ.

ನವರಂಗದ ಪೂರ್ವದಿಕ್ಕಿನಲ್ಲಿ ವಿಶಾಲವಾದ ಮುಖಮಂಟಪವಿದೆ. ಐದು ಜೊತೆ ವೇದಿಕೆ ಕಂಬಗಳಿಂದ, ಹನ್ನೊಂದು ಜೊತೆ ಸುತ್ತಲಿನ ಕಂಬಗಳಿಂದ ಈ ಮುಖಮಂಟಪವು ರಚನೆಗೊಂಡಿದೆ. ಇಲ್ಲಿ ತಿರುಗುಣಿಯಂತ್ರದಿಂದ ನಿರ್ಮಿಸಿದ ಕಂಬಗಳನ್ನೂ ಕಾಣಬಹುದು. ಮುಖಮಂಟಪವು ಮೊದಲು ತೆರೆದ ಮಂಟಪವಾಗಿರಬಹುದು. ಹೊರಭಾಗದ (ಈಗಿನ ಭಿತ್ತಿಯಲ್ಲಿ ಸಿಕ್ಕಿಕೊಂಡ) ಕಂಬಗಳ ಬೋದಿಗೆಯನ್ನು ಗಮನಿಸಿದರೆ ಇಲ್ಲಿ ಇಳಿಜಾರು ಕಪೋತಛತ್ತು ಇದ್ದಂತೆ ತೋರುತ್ತದೆ. ಇತ್ತೀಚೆಗೆ ಸುತ್ತಲೂ ಗೋಡೆಯನ್ನು ಕಟ್ಟಲಾಗಿದೆ. ಈ ಮುಖಮಂಟಪವು ಪೂರ್ವ, ಉತ್ತರ, ದಕ್ಷಿಣ ದಿಕ್ಕುಗಳಲ್ಲಿ ಪ್ರವೇಶವನ್ನು ಹೊಂದಿದೆ.

**ಶಾಸನಗಳಿಂದ ಹೆಚ್ಚಿನ ವಿವರ :** ಶಾಸನಗಳು ಈ ಊರನ್ನು 'ರಟ್ಟಪಳ್ಳಿ'[೧೭೨] 'ರಟ್ಟಹಳ್ಳಿ'[೧೭೩] ಎಂದು ಉಲ್ಲೇಖಿಸಿವೆ. ಇದು ಮೊದಲು 'ರಟ್ಟಹಳ್ಳಿ-೭೦' ಎಂದು ಗುರುತಿಸಿಕೊಳ್ಳುತ್ತಿತ್ತು. ಕಡಂಬ ವಂಶದ ಬೀರನಿಗೆ ಆತನ ಶೂರತನಕ್ಕೆ ಮೆಚ್ಚಿ ಚಾಲುಕ್ಯ ಅರಸು ರಟ್ಟಪಳ್ಳಿ-೭೦ಕ್ಕೆ, ಇಟ್ಟಿಗೆ-೩೦ನ್ನು ಸೇರಿಸಿ 'ರಟ್ಟಹಳ್ಳಿ ನೂರುಂಬಾಡ'ವೆಂದು 'ಮನ್ನೆಯ'ವನ್ನಾಗಿ ಮಾಡಿ ಬೀರದೇವನಿಗೆ ಬಳುವಳಿಯಾಗಿ[೧೭೪] ನೀಡಿದನು. 'ಕಡಂಬರಾಜ್ಯ ಲಕ್ಷ್ಮೀಭವನಕ್ಕಧಿಷ್ಠಾನವಾಗಿರ್ದ' ಕಡಂಬೇಶ್ವರ ದೇವರು ಕಡಂಬ ವಂಶದ ಕುಲದೇವತೆ ಎನಿಸಿಕೊಂಡಿತ್ತು. ಪರ್ವತಾವಳಿಯ, ಶಕ್ತಿಪರ್ಷೆಯ, ಕಿಟ್ಟಗಾವಿ ಸಂತತಿಯ ಯತಿಗಳು ಇಲ್ಲಿ ನೆಲೆಗೊಂಡಿದ್ದರು. ಈ ದೇವಾಲಯದ ಮತ್ತು ಇದಕ್ಕೆ ಸಂಬಂಧಿಸಿದ ಮಠದ ಆಡಳಿತವನ್ನು ನೋಡಿಕೊಳ್ಳುತ್ತಿದ್ದರೆಂದು ಶಾಸನಗಳಿಂದ ತಿಳಿದು ಬರುತ್ತದೆ. ಅಲ್ಲದೆ ಈ ಕಿಟ್ಟಗಾವಿ ವಂಶಾವಳಿಯಲ್ಲಿ ಬರುವ ಮೂರುಜಾವಿದೇವ ಅತ್ಯಂತ ಪ್ರಭಾವಿ ವ್ಯಕ್ತಿಯಾಗಿದ್ದು 'ಸಪ್ತಾಹತ್ತರಿಸ್ಥಾನಾಚಾರ್ಯರುಮಪ್ಪ ಶ್ರೀಮದ್ರಾಜಗುರು ಮಹಾವಾದಿ ಮೂರುಜಾವಿದೇವ....'[೧೭೫] ಎಪ್ಪತ್ತೇಳು ದೇವಾಲಯಗಳಿಗೆ ಸ್ಥಾನಾಚಾರ್ಯರಾಗಿದ್ದರು ಎಂದು ಶಾಸನ ವಿವರಿಸುತ್ತದೆ. ಕಡಂಬೇಶ್ವರ ಅವರ ಕೇಂದ್ರಸ್ಥಾನವಾಗಿದ್ದು, ಸುತ್ತಲಿನ ಸಣ್ಣಪುಟ್ಟ ದೇವಾಲಯಗಳ ಆಡಳಿತವನ್ನು ಇವರೇ ನೋಡಿಕೊಳ್ಳುತ್ತಿದ್ದರು ಎಂದು ಹೇಳಬಹುದು. ಮೂರುಜಾವಿದೇವ ಎಂಬ ಹೆಸರು ಕ್ರಿ.ಶ. ೧೦೪೫ ಹಿರೇಮಲಗೇರಿ[೧೭೬] ಶಾಸನದಿಂದ ಕ್ರಿ.ಶ.೧೨೮೮ರ ಕಡೂರು ಶಾಸನದವರೆಗೂ[೧೭೭] ಕಂಡುಕೊಳ್ಳುತ್ತದೆ. ಒಬ್ಬ ವ್ಯಕ್ತಿ ಇಷ್ಟು ದೀರ್ಘಕಾಲ ಬದುಕುವುದು ಅಸಾಧ್ಯದ ಮಾತು. ಈ ಎಲ್ಲ ಶಾಸನಗಳನ್ನು ಆಧರಿಸಿ ಎಂ.ಎಂ.ಕಲಬುರ್ಗಿ ಅವರು "ಇಲ್ಲಿ ಒಬ್ಬನ ಕಾಲ ಕ್ರಿ.ಶ.೧೩ನೇ ಶತಮಾನ, ಇನ್ನೊಬ್ಬನದು ೧೨ನೇ ಶತಮಾನ ಮೇಲೆ ಹೇಳಿದ ಹಿರೇಮಲಗೇರಿ ಶಾಸನೋಕ್ತ ಮೂರುಜಾವಿದೇವನ ಕಾಲವಾದರೂ ೧೧ನೇ ಶತಮಾನ. ಅದಕ್ಕಾಗಿ ಮೂರುಜಾವಿದೇವ ಹೆಸರಿನ ಈ ಮೂವರು ಬೇರೆ ಬೇರೆ" ಎಂದಿದ್ದಾರೆ.[೧೭೮] ಈ ವಿಷಯದಲ್ಲಿ ಭಿನ್ನ ಅಭಿಪ್ರಾಯಗಳಿವೆ. ಮೂರುಜಾವಿದೇವರ ಬಗ್ಗೆ ಇನ್ನಷ್ಟು ಮಾಹಿತಿ ದೊರೆಯುವವರೆಗೂ ಯಾವುದನ್ನೂ ಸ್ಪಷ್ಟವಾಗಿ ಹೇಳಲು ಆಗುವುದಿಲ್ಲ. ಅದೇನೇ ಇದ್ದರೂ ಕ್ರಿ.ಶ.೧೨೩೮ರ ರಟ್ಟಹಳ್ಳಿ ಶಾಸನದಲ್ಲಿ ಬರುವ ಮೂರುಜಾವಿದೇವರು ಅತ್ಯಂತ ಪ್ರಮುಖ ವ್ಯಕ್ತಿಗಳು. 'ರಾಜಗುರು' ಎಂದು

## ಪಟ್ಟಿ ೫

| ಅ. ನಂ. | ಊರು | ದೇವಾಲಯ ಹೆಸರು | ದಾನ ನೀಡಿದವರು | ದಾನ ಸ್ವೀಕರಿಸಿದವರು | ದಾನ ವಿವರ | ಕ್ರಿ.ಶ. | ದಾನದ ವಿನಿಯೋಗ | ದಾನ ನೀಡಿದ ಸಂದರ್ಭ (ಶಾಸನದಲ್ಲಿ ಉಲ್ಲೇಖಿಸಿದಂತೆ) | ಉಲ್ಲೇಖ |
|---|---|---|---|---|---|---|---|---|---|
| ೧. | ರಟ್ಟಿಹಳ್ಳಿ (ತಾ.ಹಿರೇಕೆರೂರು) | ಕಡಂಬೇಶ್ವರ | ಮಹಾಮಂಡಳೇಶ್ವರ ಪಾಂಡ್ಯದೇವರಸ ಮತ್ತು ಹಡವಳ ಚೌಂಡರಸ | ಕಲ್ಯಾಣಶಕ್ತಿ ಪಂಡಿತ ದೇವರು | ನೂರುಂಬಾಡದೊಳಗೆ ಸೇವಟಸಹಿತ ವೂರೂರಲು ಗದ್ಯಾಣ ವೊಂದು, ಒಂದು ಕೇರಿ, ಎರಡು ಗಾಣ, ಒಂದು ಹೂದೋಟ, ಸಾವಿರಮರದ ತೋಟದ ಸ್ಥಳ, ಗದ್ದೆ | ೧೧೭೪ | - | ಶಕವರ್ಷ ೧೦೯೬ನೆಯ ಜಯ ಸಂವತ್ಸರದ ಜೇಷ್ಠ ಬಹುಳದಮಾವಾಸ್ಯೆ ಆದಿತ್ಯವಾರ ವ್ಯತೀಪಾತ ಸೂರ್ಯ್ಯಗ್ರಹಣ | ಕ.ಇನ್ಸ್.ಸಂ.VI ನಂ. ೩೭ |
| ೨. | " | ಮಲ್ಲಿನಾಥನಿಗೆ (ಮಲ್ಲೇಶ್ವರ) | ಮಹಾಪ್ರಧಾನ ಕರಣದ ಕಲ್ಲರಸರು ಮಹದೇವ ದಂಡನಾಯಕರು | ಮೂರುಜಾವಿ ದೇವರು | ಗದ್ದೆ | ೧೨೩೭ | ದೇವರ ಶ್ರೀಕಾರ್ಯಕ್ಕೆ | ಹೇಮಳಂಬಿ ಸಂವತ್ಸರದ ಫಾಲ್ಗುಣ ಮಾಸದ ಅಮವಾಸೆ ಆದಿವಾರ ಸೂರ್ಯಗ್ರಹಣದಂದು | ಅದೇ ನಂ. ೪೩ |
| ೩. | " | ಕಡಂಬೇಶ್ವರ | ರಾಯಸೆಟ್ಟಿಬಿರುದಿನ ಗುಬ್ಬಿಯ ಕಲ್ಲೆಯ | ಮೂರುಜಾವಿ ದೇವರು | ಸುಂಕದಾನ | ೧೨೩೮ | ಶ್ರೀಗಂಧಕ್ಕೆ ಮತ್ತು ನಂದಾದೀಪಕ್ಕೆ | ವಿಳಂಬ ಸಂವತ್ಸರದ ಆಷಾಢ ಸು ೧೫ ಸೋಮಗ್ರಹಣ ಸಂಕ್ರಮಣ | ಅದೇ ನಂ. ೪೪ |
| ೪. | " | ಕಡಂಬೇಶ್ವರ | ಹೊನ್ನಬೊಮ್ಮಸೆಟ್ಟಿ | ಮೂರುಜಾವಿ ದೇವರು | ಕಡವೂರು ಗ್ರಾಮ ದಾನ | ೧೨೩೮ | ಕಡಂಬೇಶ್ವರ ದೇವರ ಪ್ರವಿಷ್ಟದಲ್ಲಿ ಮಲ್ಲೇಶ್ವರ ರಾಜೇಶ್ವರ ದೇವರ ಪ್ರತಿಷ್ಠೆ ಮಾಡಲು | ವಿಳಂಬಿ ಸಂವತ್ಸರ ಮಾರ್ಗಸಿರ ಮಾಸದ ಸೋಮವಾರ ವಿತೀಪಾತ ಅಮವಾಸೆ ಸೂರ್ಯ ಗ್ರಹಣದಂದು | ಅದೇ ನಂ. ೪೪ |

ಪ್ರಸಿದ್ಧಿ ಪಡೆದವರು ಎಂಬುದಂತೂ ಸತ್ಯ. 'ಮಾನಸ ವಾಚಕ ಕಾಯಕದೆ ನಸಮಪೊರ್ದ್ದಲೊಲ್ಲದಿಹಪರಸುಖದ ಜ್ಞಾನಮೆನೆ ಬಿಟ್ಟು ಸಿವನ ಧ್ಯಾನದಿ ನಲೆಗೊಂಡ ಮೂರುಜಾವಿಬ್ರತಿಪಂ' ಎಂದು ಹೊಗಳಿಸಿಕೊಂಡ ಮೂರುಜಾವಿದೇವರು, ಏಕಕೂಟವಾಗಿದ್ದ ರಟ್ಟಹಳ್ಳಿ ಕಡಂಬೇಶ್ವರವು ತ್ರಿಕೂಟ ದೇವಾಲಯವಾಗಿ ಮಾರ್ಪಾಡು ಹೊಂದಲು ಕಾರಣರಾಗಿದ್ದಾರೆ. ಕಡಂಬೇಶ್ವರ ದೇವಸ್ಥಾನ ನಿರ್ಮಾಣಗೊಂಡ ಸ್ಪಷ್ಟ ದಾಖಲೆ ಸಿಕ್ಕಿಲ್ಲ. ಆದರೆ ಇದೇ ತಾಲೂಕಿನ ಕಣವಿಸಿದ್ದಗೇರಿ ಶಾಸನ[೧೭೯] ಕ್ರಿ.ಶ.೧೧೭೪ಕ್ಕೆ ಸಂಬಂಧಿಸಿದ್ದಾಗಿದ್ದು ನೂರುಂಬಾಡದ ಕಡಂಬರು ತಾವು 'ಶಾಖಾಚರೇಂದ್ರ ಧ್ವಜ'ರೆಂದೂ 'ಕಡಂಬೇಶ್ವರದೇವ ಪಾದಾರಾಧಕ'ರೆಂದೂ ಇಲ್ಲಿ ಕರೆದು ಕೊಂಡಿದ್ದಾರೆ. ಈ ಆಧಾರದ ಮೇಲಿಂದ ಕಡಂಬೇಶ್ವರ ಕ್ರಿ.ಶ.೧೧೭೪ಕ್ಕೂ ಮುಂಚಿನ ದೇವಾಲಯವಾಗಿದೆ. ಕ್ರಿ.ಶ.೧೨೩೮ರ ಎರಡನೇ ಸಿಂಘಣನ ಕಾಲದ ಶಾಸನವು ತ್ರಿಕೂಟ ದೇವಾಲಯದ ಬಗ್ಗೆ ಸಮಗ್ರ ಮಾಹಿತಿಯನ್ನು ಒದಗಿಸುತ್ತದೆ.[೧೮೦]

..... ಶ್ರೀ ಹೊಂನಬಂಮಿ ಸೆಟ್ಟಿಯರು
ಅಖಿಳಪ್ರಧಾನ ಪರಿಜನ ಪರಿವ್ರಿತರಾಗಿದ್ದೊಂದು ದಿವಸಂ
ಧರ್ಮಕಥಾಪ್ರಸಂಗದೊಳು ವಿಜಯವನಿತಾಕರುಷಣಸಮು
(ದ್ಯತ)ರಂತು ಧರ್ಮಮಂ ಬಲುವಿಡಿವಿಡವ
ಬಗೆಯಿಂ ಕಡಂಬರಾಜ್ಯ ಲಕ್ಷ್ಮೀಭವನಕ್ಕಧಿಷ್ಠಾನವಾಗಿರ್ದ ಕಡಂಬೇಶ್ವರ
ದೇವರ ಪ್ರವಿಷ್ಟದಲ್ಲಿ ಮಲ್ಲೇಶ್ವರ ರಾಜೇಶ್ವರ ದೇವರ
ಪ್ರತಿಷ್ಟೆಯಂ ಮಾಡಿ ಧರ್ಮ ಊರ್ಜಿತಂ ಮಾಡಿ...

ಎಂದು ಶಾಸನವು ಉಲ್ಲೇಖಿಸುತ್ತದೆ. ಮೂರುಜಾವಿದೇವರು ಕಡಂಬೇಶ್ವರ ದೇವಾಲಯವನ್ನು ತ್ರಿಕೂಟಾಚಲ ವಾಗಿ ಮಾಡಲು ಮಂತ್ರಿ ಹೊನ್ನಬೊಮ್ಮಿಸೆಟ್ಟಿಗೆ ಉಪದೇಶಿಸಿದಾಗ, ಅವನು ತನ್ನ ತಂದೆ ಮಲ್ಲಿಸೆಟ್ಟಿ ಹಾಗೂ ತಾಯಿ ರಾಜಲೆಯ ಹೆಸರಿನಲ್ಲಿ ಮಲ್ಲೇಶ್ವರ ಹಾಗೂ ರಾಜೇಶ್ವರ ಲಿಂಗಗಳನ್ನು ಸ್ಥಾಪಿಸುತ್ತಾನೆ. ಮುಖ್ಯ ದೇವಾಲಯಕ್ಕೂ ಅಕ್ಕಪಕ್ಕದ ದೇವಾಲಯಗಳ ನಿರ್ಮಾಣಕ್ಕೂ ಕಾಲಾವಧಿಯಲ್ಲಿ ೬೪ ವರ್ಷಗಳ ಅಂತರವಿದ್ದದ್ದು ಶಾಸನಗಳಿಂದ ತಿಳಿಯಬಹುದು. ದೇವಾಲಯ ವಾಸ್ತು ಅಧ್ಯಯನದಿಂದಲೂ ಈ ಅಂತರವನ್ನು ಗಮನಿಸಬಹುದಾಗಿದೆ. ಈ ದೇವಾಲಯಕ್ಕೆ ದೊರೆತ ದಾನಗಳ ಬಗ್ಗೆ ತಿಳಿಯಲು ಪಟ್ಟಿ-೫ನ್ನು ಗಮನಿಸಬಹುದು.

| | | |
|---|---|---|
| ಊರು | : | ಕಾರಡಗಿ (ತಾ.ಸವಣೂರು) |
| ಸ್ಥಳ | : | ಗ್ರಾಮದ ನೈರುತ್ಯಕ್ಕೆ |
| ಹೆಸರು | : | ದೊಳ್ಳೇಶ್ವರ ದೇವಾಲಯ |
| ಅಭಿಮುಖ | : | ಪೂರ್ವ |
| ನಿವೇದನೆ | : | ಈಶ್ವರ (ಮೂರು ಗರ್ಭಗೃಹಗಳಲ್ಲಿ ಲಿಂಗಗಳು) |
| ಕಾಲ | : | ಕ್ರಿ.ಶ.೧೧-೧೨ನೇ ಶತಮಾನ |
| ಶೈಲಿ | : | ಕಲ್ಯಾಣ ಚಾಲುಕ್ಯ |
| ಬಳಸಿದ ವಸ್ತು | : | ಕಪ್ಪು ಮಿಶ್ರಿತ ನೀಲಿಛಾಯೆಯ ಕಲ್ಲು |

## ದೇವಾಲಯ ವಾಸ್ತುಶಿಲ್ಪ

**ತಳವಿನ್ಯಾಸ :** (ತಳವಿನ್ಯಾಸ ರೇಖಾಚಿತ್ರ-೭) ಮೂರು ಗರ್ಭಗೃಹಗಳು, ಮೂರು ಅರ್ಧಮಂಟಪಗಳು, ನವರಂಗ, ಹಾಳಾಗಿರುವ ಮುಖಮಂಟಪ.

**ಊರ್ಧ್ವಮುಖ ರಚನೆ :** ಸವಣೂರಿನಿಂದ ಆಗ್ನೇಯ ದಿಕ್ಕಿನಲ್ಲಿ ೮ ಕಿ.ಮೀ. ದೂರದಲ್ಲಿರುವ ಡೋಳ್ಳೇಶ್ವರ ದೇವಾಲಯವು ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದೆ. ದೇವಾಲಯವು ನೆಲಮಟ್ಟದಿಂದ ಕೆಳಗೆ ಇದೆ (ಛಾಯಾಚಿತ್ರ-೨೦). ಊರ್ಧ್ವಮುಖ ರಚನೆಗಳು ಯಾವುದೂ ಕಂಡುಬರುವುದಿಲ್ಲ. ಮಳೆಗಾಲದಲ್ಲಿ ದೇವಾಲಯವು ಮಣ್ಣು ಮತ್ತು ನೀರಿನಿಂದ ಆವೃತವಾಗುತ್ತದೆ. ಬೇಸಿಗೆಯಲ್ಲಿ ಮಾತ್ರ ದೇವಾಲಯದ ಒಳ ರಚನೆಗಳನ್ನು ಕಾಣಬಹುದು.

**ತಿರ್ಯಙ್ಮುಖ ರಚನೆಗಳು :** ಪೂರ್ವಾಭಿಮುಖವಾದ ಮುಖ್ಯಗರ್ಭಗೃಹವು ೮.೫ x ೮.೫ ಅಡಿ ವಿಸ್ತೀರ್ಣದಲ್ಲಿದೆ. ಭಿತ್ತಿಯು ನಾಲ್ಕು ಮೂಲೆ ಕಂಬಗಳಿಂದ ಮತ್ತು ಎಂಟು ಅಡಿ ಉದ್ದ ಅರ್ಧಅಡಿ ಅಗಲದ ಕಲ್ಲುಫಲಕಗಳನ್ನು ಬಳಸಿ ರಚನೆಗೊಂಡಿದೆ. ಪಶ್ಚಿಮ ಮತ್ತು ದಕ್ಷಿಣ ದಿಕ್ಕಿನ ಭಿತ್ತಿಯಲ್ಲಿ ಕೋಷ್ಟಗಳಿವೆ. ಛತ್ತಿನ ಭಾಗವು ಬಿದ್ದಿದೆ. ಗರ್ಭಗೃಹದ ಮಧ್ಯದಲ್ಲಿ ನೆಲಮಟ್ಟದಲ್ಲಿ ಲಿಂಗವಿದೆ. ಗರ್ಭಗೃಹದ ದ್ವಾರಬಂಧವು ಅರ್ಧಅಡಿ ಎತ್ತರದ ಹೊಸ್ತಿಲ ಮೇಲೆ ಪಂಚಶಾಖೆಗಳಿಂದ ಕೂಡಿದೆ. ಮುಖ್ಯ ಶಾಖೆಯಾದ ಸ್ತಂಭಶಾಖೆಯು ಅಡ್ಡಗೆರೆಗಳ ಅಲಂಕರಣ ಹೊಂದಿವೆ. ಉಳಿದ ಎಲ್ಲ ಶಾಖೆಗಳು ಅಲಂಕಾರರಹಿತವಾಗಿವೆ. ಲಲಾಟದ ಫಲಕದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಗರ್ಭಗೃಹದ ಮುಂದಿನ ರಚನೆಯಾದ ಅರ್ಧಮಂಟಪವು ವಿಸ್ತೀರ್ಣದಲ್ಲಿ ಗರ್ಭಗೃಹಕ್ಕೆ ಸಮಾನವಾಗಿದೆ. ಮೇಲಿನ ಛತ್ತು ಬಿದ್ದಿದೆ. ಅರ್ಧಮಂಟಪದ ದ್ವಾರಬಂಧವು ತೆಳುವಾದ ಮೂರು ಶಾಖೆಗಳನ್ನು ಹೊಂದಿದ್ದು, ಕ್ರಮವಾಗಿ ವಜ್ರಪಟ್ಟಿ, ಕುಸುರಿ, ಸ್ತಂಭ ಅಲಂಕರಣವನ್ನು ಹೊಂದಿದೆ. ಶಾಖೆಗಳ ಕೆಳಗೆ ತ್ರಿಭಂಗಿಯಲ್ಲಿ ನಿಂತ ಪ್ರತಿಹಾರರ ಉಬ್ಬುಶಿಲ್ಪಗಳಿವೆ. ದ್ವಾರದ ಲಲಾಟ ಫಲಕದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಉತ್ತರಾಂಗದಲ್ಲಿ ಮಕರತೋರಣದಲ್ಲಿ ಬ್ರಹ್ಮ, ಶಿವ, ವಿಷ್ಣುವಿನ ಉಬ್ಬುಶಿಲ್ಪಗಳನ್ನು ಕೊರೆಯಲಾಗಿದೆ. ದ್ವಾರದ ಇಕ್ಕೆಲಗಳಲ್ಲಿ ಜಾಲಂಧ್ರಗಳಿವೆ. ಜಾಲಂಧ್ರದ ಕೆಳಭಾಗದಲ್ಲಿ ಕುಂಭಗಳ ಅಲಂಕರಣವಿದೆ. ಅಕ್ಕಪಕ್ಕದ ಗರ್ಭಗೃಹಗಳು ವಿಸ್ತೀರ್ಣದಲ್ಲಿ ಮುಖ್ಯವನ್ನು ಹೋಲುತ್ತವೆ. ಭಿತ್ತಿ ರಚನೆಯ ಕ್ರಮದಲ್ಲೂ ಮುಖ್ಯವನ್ನೆ ಹೋಲುತ್ತವೆ. ಈ ಗರ್ಭಗೃಹಗಳಲ್ಲಿ ಒಂದೊಂದು ಭಿತ್ತಿ ಕೋಷ್ಟಗಳಿವೆ. ಛತ್ತಿನ ಭಾಗವು ಹಾಳಾಗಿದೆ. ಮಧ್ಯದಲ್ಲಿ ಎರಡು ಅಡಿ ಎತ್ತರದ ಶಿವಲಿಂಗಗಳಿವೆ. ಗರ್ಭಗೃಹಗಳ ದ್ವಾರಬಂಧವು ಮುಖ್ಯದಂತೆ ಅನಲಂಕೃವಾಗಿರದೆ ಪಂಚಶಾಖೆಗಳು ಕ್ರಮವಾಗಿ ವಜ್ರಪಟ್ಟಿಕೆ, ಕುಸುರಿಬಳ್ಳಿಗಳು, ಸ್ತಂಭಶಾಖೆ, ಬಳ್ಳಿಯಲ್ಲಿ ಪ್ರಾಣಿಗಳು, ಕಮಲದಳಗಳ ಅಲಂಕರಣದಿಂದ ಕೂಡಿವೆ. ಶಾಖೆಗಳ ಕೆಳಗೆ ಪ್ರತಿಹಾರ ಚಾಮರಧಾರಿಣಿಯರ ಉಬ್ಬುಶಿಲ್ಪಗಳು ತ್ರಿಭಂಗಿಯಲ್ಲಿವೆ. ಇಲ್ಲಿಯ ಸ್ತಂಭಶಾಖೆ ಗಳನ್ನು ವಿಶೇಷವಾಗಿ ಅಲಂಕರಿಸಲಾಗಿದೆ. ಲಲಾಟಫಲಕದಲ್ಲಿ ಗಜಲಕ್ಷ್ಮಿ ಇದೆ. ಗರ್ಭಗೃಹಗಳ ಮುಂದಿನ ರಚನೆಗಳಾದ ಅರ್ಧಮಂಟಪಗಳು ವಿಸ್ತೀರ್ಣದಲ್ಲಿ ಗರ್ಭಗೃಹಗಳಿಗೆ ಸಮಾನವಾಗಿವೆ. ಇಲ್ಲಿಯ ಛತ್ತಿನ ಭಾಗವು ಹಾಳಾಗಿದೆ. ಅರ್ಧಮಂಟಪಗಳ ದ್ವಾರಬಂಧವು ಅರ್ಧಅಡಿ ಎತ್ತರದ ಹೊಸ್ತಿಲ ಮೇಲೆ ತೆಳುವಾದ ತ್ರಿಶಾಖೆಗಳಿಂದ ಕೂಡಿದ್ದು ಕ್ರಮವಾಗಿ ವಜ್ರಪಟ್ಟಿ, ಬಳ್ಳಿಗಳು ಮತ್ತು ಸ್ತಂಭಗಳ ಅಲಂಕರಣ ಹೊಂದಿವೆ.




ತಳವಿನ್ಯಾಸ ರೇಖಾಚಿತ್ರ-೭, ಡೊಳ್ಳೇಶ್ವರ ದೇವಾಲಯ, ಕಾರಡಗಿ (ತಾ.ಸವಣೂರು)
೧. ಗರ್ಭಗೃಹ, ೨. ಅರ್ಧಮಂಟಪ, ೩. ನವರಂಗ, ೪. ಮಹಾಮಂಟಪದ ಅವಶೇಷಗಳು

ಲಲಾಟದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ದ್ವಾರಬಂಧದ ಅಕ್ಕಪಕ್ಕಗಳಲ್ಲಿ ಜಾಲಂದ್ರಗಳಿವೆ. ಇವು ಬಳ್ಳಿಗಳ ಅಲಂಕರಣದಿಂದ ಕೂಡಿದ್ದು ಮಧ್ಯದಲ್ಲಿ ಈಟಿ, ಗುರಾಣಿಗಳನ್ನು ಹಿಡಿದ ಮಾನವ ಶಿಲ್ಪಗಳನ್ನು ಕೊರೆಯಲಾಗಿದೆ.

ಮೂರೂ ಅರ್ಧಮಂಟಪಗಳನ್ನು ಒಂದೆಡೆ ಸೇರಿಸುವ ನವರಂಗವು ೧೯x೧೯ ಅಡಿ ವಿಸ್ತಾರವಾಗಿದೆ. ಅರ್ಧಅಡಿ ಎತ್ತರದ ಚೌಕಾಕಾರದ ವೇದಿಕೆಯು ನವರಂಗದ ಮಧ್ಯದಲ್ಲಿದೆ. ವೇದಿಕೆಯ ತುದಿಯ ನಾಲ್ಕು ಕಂಬಗಳು ತಿರುಗಣಿ ಯಂತ್ರದಿಂದ ನಿರ್ಮಾಣಗೊಂಡಿವೆ. ಮಧ್ಯದ ವಿತಾನದಲ್ಲಿ ಒಂಬತ್ತು ಕಮಲಗಳ ಅಲಂಕರಣವಿದೆ. ಭಿತ್ತಿ ಭಾಗದಲ್ಲಿ ಮುಖ್ಯದ ಅಕ್ಕಪಕ್ಕದಲ್ಲಿ ಎರಡು ಕೋಷ್ಟಗಳಿದ್ದು ಅವು ಬರಿದಾಗಿವೆ. ನವರಂಗದ ದ್ವಾರಬಂಧವು ಪಂಚಶಾಖೆಗಳಿಂದ ಕೂಡಿದ್ದು, ಕ್ರಮವಾಗಿ ವಜ್ರಾಕೃತಿ, ಬಳ್ಳಿಗಳು, ಸ್ತಂಭ, ಬಳ್ಳಿಗಳಲ್ಲಿ ಮನುಷ್ಯಾಕೃತಿ, ಕಮಲದಳಗಳಿಂದ ಅಲಂಕೃತಗೊಂಡಿವೆ. ಶಾಖೆಗಳ ಕೆಳಗೆ ನಾಲ್ಕು ಪ್ರತಿಹಾರರ ಉಬ್ಬುಶಿಲ್ಪಗಳು ತ್ರಿಭಂಗಿಯಲ್ಲಿವೆ. ಲಲಾಟದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಫಲಕದ ಅಕ್ಕಪಕ್ಕದಲ್ಲಿ ಅಧೋಮುಖ ಕಮಲಮೊಗ್ಗುಗಳ ಅಲಂಕರಣವಿದೆ. ಉತ್ತರಾಂಗದಲ್ಲಿ ನಾಗರಶೈಲಿಯ ೫ ಶಿಖರಗಳಿದ್ದು ಅವುಗಳ ಮಧ್ಯದಲ್ಲಿ ಬ್ರಹ್ಮ, ಶಿವ, ವಿಷ್ಣುವಿನ ಉಬ್ಬುಶಿಲ್ಪಗಳನ್ನು ಕೊರೆಯಲಾಗಿದೆ.

ನವರಂಗದ ಪೂರ್ವದಿಕ್ಕಿನಲ್ಲಿ ವಿಶಾಲವಾದ ಮುಖಮಂಟಪ ಇದ್ದಂತೆ ತೋರುತ್ತದೆ. ಈಗ ಪೂರ್ತಿ ಹಾಳಾಗಿದ್ದು ಅದಕ್ಕೆ ಸಂಬಂಧಿಸಿದ ಕಂಬಗಳು ಅಲ್ಲಲ್ಲಿ ಬಿದ್ದಿವೆ. ದೇವಾಲಯವು ಪೂರ್ತಿ ಹಾಳಾಗುವ ಸ್ಥಿತಿಯಲ್ಲಿದೆ.

ಈ ರೀತಿಯಾಗಿ ಹಾವೇರಿ ಜಿಲ್ಲೆಯಲ್ಲಿ ಆರು ವ್ಯಕ್ತಿನಾಮ/ಪರೋಕ್ಷವಿನಯ ದೇವಾಲಯಗಳನ್ನು ಗುರುತಿಸಲಾಗಿದೆ. ಒಟ್ಟಾರೆ ಈ ದೇವಾಲಯಗಳನ್ನು ಗಮನಿಸಿದಾಗ ವ್ಯಕ್ತಿನಾಮ/ಪರೋಕ್ಷವಿನಯ ದೇವಾಲಯಗಳು ವಾಸ್ತು ವಿನ್ಯಾಸದಲ್ಲಿ ಮೂರೂ ಗರ್ಭಗೃಹಗಳು ಸಮಾನ ಅಳತೆಯಲ್ಲಿವೆ. ಅದರಂತೆ ಮೂರೂ ಅರ್ಧಮಂಟಪಗಳು ಸಹ ಒಂದೇ ಅಳತೆಯಲ್ಲಿ ಇರುವುದು ಗಮನಾರ್ಹ. ವ್ಯಕ್ತಿಯ ಹೆಸರಿನಲ್ಲಿ ಲಿಂಗವನ್ನು ಸ್ಥಾಪಿಸಲು ಈ ದೇವಾಲಯಗಳು ನಿರ್ಮಾಣಗೊಂಡಿವೆ. ಅಬ್ಬಲೂರಿನ ಏಕಾಂತರಾಮಯ್ಯನ ಹೆಸರಿನಲ್ಲಿರುವ ಲಿಂಗವನ್ನು ಹೊರತುಪಡಿಸಿ ಉಳಿದೆಲ್ಲ ಲಿಂಗಗಳು ತಮ್ಮ ತಾಯಿ, ತಂದೆಯ ಹೆಸರಿನಲ್ಲಿ, ಪೂರ್ವಜರ ಹೆಸರಿನಲ್ಲಿ ಅಥವಾ ಸಂಬಂಧಿಗಳ ಹೆಸರಿನಲ್ಲಿ ಅವರ ಪರೋಕ್ಷವಿನಯಕ್ಕಾಗಿ ಸ್ಥಾಪಿತಗೊಂಡಿವೆ. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ ಈ ಲಿಂಗಗಳು ಪರೋಕ್ಷವಿನಯಕ್ಕೆ ಒಳಪಟ್ಟ ವ್ಯಕ್ತಿಯ ಸಮಾಧಿಯ ಮೇಲೆ ಸ್ಥಾಪಿತಗೊಂಡಿರಬಹುದು ಎಂಬ ಅನುಮಾನ ಹುಟ್ಟುತ್ತದೆ. ಸಮಾಧಿಗಳೇ ದೇವಾಲಯ ಮೂಲ ಮತ್ತು ಪಳ್ಳಿಪ್ಪಡೈ ಅಂದರೆ ಸಮಾಧಿಗಳ ಮೇಲೆ ಲಿಂಗವಿರಿಸಿ ಆಲಯವನ್ನು ಕಟ್ಟುವ ಪದ್ಧತಿಯನ್ನು ಎನ್.ವೆಂಕಟರಮಣಯ್ಯನವರು ಸಾಕ್ಷಾಧಾರಗಳಿಂದ ವಿವರಿಸಿದ್ದು ಮೇಲಿನ ಅನುಮಾನಕ್ಕೆ ಪುಷ್ಟಿಕೊಡುತ್ತದೆ. ಆದರೆ ಅವರ ಅಭಿಪ್ರಾಯವನ್ನು ಸಾರ್ವತ್ರಿಕವಾಗಿ ಸ್ವೀಕಿಸುವುದು ಕಷ್ಟಸಾಧ್ಯ. ಅಧ್ಯಯನಕ್ಕೆ ಒಳಪಡಿಸಿದ ಜಿಲ್ಲೆಯ ವ್ಯಕ್ತಿನಾಮ/ಪರೋಕ್ಷವಿನಯ ದೇವಾಲಯಗಳು ಸಮಾಧಿಯ ಮೇಲೆ ನಿರ್ಮಾಣಗೊಂಡ ದೇವಾಲಯಗಳಲ್ಲ ಎಂಬುದು ಅಧ್ಯಯನದಿಂದ ಸ್ಪಷ್ಟವಾಗುತ್ತದೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಪಟ್ಟಂತೆ

ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳಲ್ಲಿ ಆರು ದೇವಾಲಯಗಳು ಪರೋಕ್ಷ ವಿನಯಕ್ಕಾಗಿ ನಿರ್ಮಾಣಗೊಂಡಿರುವವು. ವಿಕ್ರಮೇಶ್ವರ, ಗುತ್ತೇಶ್ವರ(ಹರಳಹಳ್ಳಿ, ಹಾವೇರಿ ತಾ.), ಮಲ್ಲೇಶ್ವರ, ರಾಜೇಶ್ವರ(ರಟ್ಟೀಹಳ್ಳಿ, ಹಿರೇಕೆರೂರು ತಾ.), ಏಕಾಂತರಾಮಯ್ಯ ಮತ್ತು ಅಗ್ನಿಹೊನ್ನಯ್ಯ(ಅಬ್ಬಲೂರು, ಹಿರೇಕೆರೂರು ತಾ.) ಇವು ಪ್ರಮುಖವಾದವು. ಈ ದೇವಾಲಯಗಳಿಗೆ ಸಂಬಂಧಿಸಿದ ಶಾಸನಗಳನ್ನು ಅವಲೋಕಿಸಿದಾಗ ಈ ದೇವಾಲಯಗಳ ನಿರ್ಮಾಣದ ಕಾಲಕ್ಕೂ, ಆ ಹೆಸರಿನ ವ್ಯಕ್ತಿಯ ಜೀವಿತಾವಧಿ ಕಾಲಕ್ಕೂ ಅಂತರ ಇರುವುದು ಕಂಡುಬರುತ್ತದೆ. ಏಕಾಂತರಾಮಯ್ಯನು ತನ್ನ ಜೀವಿತಾವಧಿಯಲ್ಲಿಯೇ ತ್ರಿಕೂಟ ದೇವಾಲಯವನ್ನು ಕಟ್ಟಿದನೆಂದು ಶಾಸನವು ಸ್ಪಷ್ಟವಾಗಿ ಹೇಳುತ್ತದೆ. ಅಲ್ಲದೆ ಏಕಾಂತ ರಾಮಯ್ಯನ ಗದ್ದುಗೆಯು ಶಿಕಾರಿಪೂರ ತಾಲೂಕಿನ ಶಿರಾಳಕೊಪ್ಪದ ಸಮೀಪ ಮಾಳಗನ-ಕೊಪ್ಪ ಎಂಬಲ್ಲಿ ಇರುವುದು ಕಂಡುಬಂದಿದೆ.[೧೮೧] ಆದ್ದರಿಂದ ಇಲ್ಲಿಯ ದೇವಾಲಯಗಳು ಸಮಾಧಿಗಳಾಗಿರದೆ ಪರೋಕ್ಷ ವಿನಯಕ್ಕಾಗಿ ಕಟ್ಟಿದ ದೇವಾಲಯಗಳೆಂಬುದು ಸುಸ್ಪಷ್ಟ. ಈ ಆಧಾರದ ಮೇಲಿಂದ ಸಮಾಧಿಗಳೇ ದೇವಾಲಯ ಮೂಲ ಎಂದು ಖಂಡಿತವಾಗಿ ಹೇಳಲು ಆಗುವುದಿಲ್ಲ.

ಈ ವ್ಯಕ್ತಿನಾಮ/ಪರೋಕ್ಷವಿನಯ ದೇವಾಲಯಗಳು ಮಂಡಳೇಶ್ವರರಿಂದ ಮತ್ತು ಉನ್ನತ ಹುದ್ದೆಯಲ್ಲಿ ಇರುವವರಿಂದ ನಿರ್ಮಾಣಗೊಂಡಿವೆ. ಆ ಕಾರಣದಿಂದಲೇ ದೇವಾಲಯಗಳ ಗಾತ್ರ, ಉತ್ತಮ ಅಲಂಕರಣೆ, ರಚನಾ ವಿನ್ಯಾಸ ಮತ್ತು ಕಲ್ಲುಗಳನ್ನು ನಯಗೊಳಿಸಿ ಬಳಸುವಿಕೆಯಿಂದ ಉತ್ಕೃಷ್ಟವಾಗಿವೆ. ಕುಶಲ ಶಿಲ್ಪಿಗಳ ಬಳಕೆ ಮತ್ತು ದೇವಾಲಯ ನಿರ್ಮಾಣ ಕಾರ್ಯದಲ್ಲಿ ಹೆಚ್ಚು ಹಣ ವಿನಿಯೋಗಗೊಂಡಿದೆ ಎಂದು ಕಂಡುಬರುತ್ತದೆ. ದೇವಾಲಯಗಳಿಗೆ ಸಂಬಂಧಪಟ್ಟ ಶಾಸನಗಳೂ ಸಹ ಸುಧೀರ್ಘವಾಗಿವೆ. ದೇವಾಲಯ ನಿರ್ಮಾಣಕ್ಕೆ ಕಾರಣನಾದ ವ್ಯಕ್ತಿಯನ್ನು ಬಹುವಾಗಿ ಹೊಗಳುತ್ತವೆ. ಈ ಶಾಸನಗಳು ಸುದೀರ್ಘವಾಗಿದ್ದರೂ ಕೂಡ ಪರೋಕ್ಷವಿನಯಕ್ಕೆ ಒಳಗೊಂಡ ವ್ಯಕ್ತಿಯ ಬಗ್ಗೆ ಹೆಚ್ಚು ವಿವರಿಸುವುದಿಲ್ಲ. ಇಂಥ ಶಾಸನಗಳನ್ನು ಗಮನದಲ್ಲಿ ಇಟ್ಟುಕೊಂಡು, ಸಿ.ನಾಗಭೂಷಣ[೧೮೨] ಅವರು 'ಬೇರೆಯವರ ಸ್ಮರಣಾರ್ಥದ ಹೆಸರುಗಳ ಹಿನ್ನೆಲೆಯಲ್ಲಿ ದೇವಾಲಯಗಳನ್ನು ನಿರ್ಮಾಣ ಮಾಡಿದ್ದಾರೆ. ಆದರೆ ಶಾಸನಗಳಲ್ಲಿ ನೇರವಾಗಿ ದೇವಾಲಯಗಳನ್ನು ಯಾರು? ಯಾರ ಹೆಸರಿನಲ್ಲಿ? ಯಾರನ್ನು ಸಂಪ್ರೀತಗೊಳಿಸಲು ಪ್ರತಿಷ್ಠಾಪಿಸಿದ್ದಾರೆ? ಎಂಬ ಉಲ್ಲೇಖಗಳು ಹೆಚ್ಚಿಗೆ ದೊರೆಯುವುದಿಲ್ಲ. ಹೆಚ್ಚಿನ ಶಾಸನಗಳು ದೇವಾಲಯದ ರಚನೆಯ ಬಗ್ಗೆ ಏನನ್ನೂ ತಿಳಿಸದೆ ದೇವಾಲಯಗಳಿಗೆ ನೀಡಿದ ದಾನದತ್ತಿಗಳನ್ನಷ್ಟೇ ಉಲ್ಲೇಖಿಸುತ್ತವೆ' ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಮುಂದುವರೆದು ವ್ಯಕ್ತಿಗಳ ಹೆಸರಿನಲ್ಲಿ ನಿರ್ಮಿತವಾದ ದೇವಾಲಯಗಳ ವಿವರಣೆ ಕೊಡುತ್ತ '..... ವ್ಯಕ್ತಿಯ ಹೆಸರಿನಲ್ಲಿ ನಿರ್ಮಿತವಾದ ದೇವಾಲಯಗಳಲ್ಲಿ ವ್ಯಕ್ತಿಯ ಹೆಸರು ಮುಖ್ಯವೇ ಹೊರತು ದೇವರ ಹೆಸರು ಅಲ್ಲ. ವ್ಯಕ್ತಿಗಳ ಹೆಸರಿನಲ್ಲಿ ದೇವಾಲಯಗಳನ್ನು ನಿರ್ಮಿಸಿದವರಲ್ಲಿ ಬಹುಮಟ್ಟಿಗೆ ಉನ್ನತ ಹುದ್ದೆಯಲ್ಲಿದ್ದವರೇ ಆಗಿದ್ದರೆಂಬುದು ಶಾಸನಗಳ ಉಲ್ಲೇಖದಿಂದ ತಿಳಿದುಬರುತ್ತದೆ' ಎಂದು ಹೇಳುತ್ತಾರೆ.[೧೮೨] ಅವರ ಈ ಅಭಿಪ್ರಾಯ ಇಲ್ಲಿಯ ತ್ರಿಕೂಟ ದೇವಾಲಯಗಳಿಗೂ ಅನ್ವಯಿಸುತ್ತದೆಂದು ಇಲ್ಲಿಯ ಶಾಸನಾಧಾರಗಳಿಂದ ಹೇಳಬಹುದು. ಹರಳಹಳ್ಳಿ ಸೋಮನಾಥ ದೇವಾಲಯವನ್ನು ನಿರ್ಮಿಸಿದವನು ಶ್ರೀಮನ್ಮಹಾಮಂಡಳೇಶ್ವರ, ಗುಪ್ತವಂಶತ್ರಿಣೇತ್ರನೆಂದು ಹೊಗಳಿಕೆಗೆ ಪಾತ್ರನಾದ ಜೋಯಿದೇವರಸನು. ರಟ್ಟೀಹಳ್ಳಿ ಕಡಂಬೇಶ್ವರನನ್ನು ತ್ರಿಕೂಟವಾಗಿ ಪರಿವರ್ತಿಸಿದವನು ಮಂತ್ರಿಸ್ಥಾನದಲ್ಲಿದ್ದ ಹೊನ್ನಬೊಮ್ಮನು. ಅದರಂತೆ ಹೊನ್ನತ್ತಿ ಚಾಮೇಶ್ವರ

ದೇವರನ್ನು ಮಹಾಮಂಡಳೇಶ್ವರ ಗುತ್ತ ಜೋಯಿದೇವನ ಪ್ರಧಾನರಾದ ದೇಕಣ್ಣ ಮತ್ತು ನಾಕಣ್ಣರು, ರಾಜೇಶ್ವರ ಲಿಂಗ ಸ್ಥಾಪನೆಗೈದವನು ಸರ್ವ್ವಪ್ರಧಾನ ತಿಪ್ಪರಸನು. ಇವರೆಲ್ಲ ಉನ್ನತ ಹುದ್ದೆಯಲ್ಲಿದ್ದವರು.

ಇಲ್ಲಿ ಗಮನಿಸಬೇಕಾದ ಇನ್ನೊಂದು ಮುಖ್ಯ ಅಂಶವೆಂದರೆ ಇಲ್ಲಿಯ ಶಾಸನಗಳು ಸುದೀರ್ಘ ಶಾಸನಗಳು. ಇವುಗಳಲ್ಲಿ ಅಂದಿನ ರಾಜಕೀಯ ಪರಿಸ್ಥಿತಿಯನ್ನು ಗಮನಿಸಬಹುದು. ಹಾಗೂ ಚಕ್ರವರ್ತಿಯಿಂದ ಮೊದಲುಗೊಂಡು ಊರ ಗಾವುಂಡನವರೆಗೂ ರಾಜಕೀಯ ಶ್ರೇಣಿಗಳು ಉಲ್ಲೇಖಗೊಂಡಿವೆ. ಮಾತ್ರವಲ್ಲ ಅಲ್ಲಿ ಬರುವ ವ್ಯಕ್ತಿಗಳನ್ನು ಅವಶ್ಯಕತೆಗಿಂತ ಹೆಚ್ಚಿಗೆ ಹೊಗಳಿವೆ. ಇದು ರಾಜಕೀಯ ವ್ಯಕ್ತಿಗಳು ಇಂಥ ದೇವಾಲಯಗಳನ್ನು ನಿರ್ಮಿಸಿ ಅವುಗಳಿಗೆ ದಾನ ಕೊಡುವ ನೆಪದಲ್ಲಿ ತಮ್ಮನ್ನು ತಾವು ಹೊಗಳಿಸಿಕೊಳ್ಳುವುದು ಜೊತೆಗೆ ರಾಜಕೀಯ ಶ್ರೇಣಿಯಲ್ಲಿ ತಮ್ಮ ಹುದ್ದೆಯನ್ನು ಭದ್ರವಾಗಿರಿಸಿಕೊಳ್ಳುವ ಉದ್ದೇಶವನ್ನು ಹೊಂದಿದ್ದರು ಎಂದು ಅರ್ಥೈಸಲು ಎಡೆಮಾಡಿಕೊಟ್ಟಿವೆ. ಅದರಂತೆ ದೇವಾಲಯಗಳಿಗೂ ರಾಜಕೀಯದ ಬೆಂಬಲ ಬೇಕಿತ್ತು. ದೇವಾಲಯದ ನಿತ್ಯ ವೆಚ್ಚಕ್ಕೆ, ಜೊತೆಗೆ ಮಠಗಳಿದ್ದರೆ ಅಧ್ಯಯನ, ಅಧ್ಯಾಪನ, ತಪೋಧನರ ಆಹಾರಕ್ಕೆ ಮುಂತಾದವುಗಳಿಗೆ ಆರ್ಥಿಕ ಸೌಲಭ್ಯ ಅತ್ಯವಶ್ಯವಾಗಿತ್ತು. ಇದನ್ನು ಪೂರೈಸಿಕೊಳ್ಳಲು ದೇವಾಲಯದ ಸ್ಥಾನಾಚಾರ್ಯರು ರಾಜಕೀಯ ವ್ಯಕ್ತಿಗಳಿಂದ ದಾನ ಪಡೆದು ಅವರ ಬಗ್ಗೆ ವಿವರವಾಗಿ ಶಾಸನಗಳನ್ನು ಬರೆಯಿಸಿದ್ದನ್ನು ಗಮನಿಸುತ್ತೇವೆ. ಈ ರೀತಿಯಾಗಿ ದೇವಾಲಯಗಳು ಮತ್ತು ರಾಜಕೀಯ ಒಂದಕ್ಕೊಂದು ಪೂರಕವಾಗಿ ಕಾರ್ಯ ನಿರ್ವಹಿಸಿ, ಒಂದನ್ನೊಂದು ಉನ್ನತವಾಗಿ ಬೆಳೆಸುತ್ತ, ಮಧ್ಯಕಾಲೀನ ಇತಿಹಾಸದಲ್ಲಿ ಎರಡೂ ಗಟ್ಟಿಯಾಗಿ ಬೇರುಬಿಟ್ಟಿದ್ದನ್ನು ಗಮನಿಸಬಹುದು.

ಹಾವೇರಿ ಜಿಲ್ಲೆ ಹಾಗೂ ಅದರ ದಕ್ಷಿಣ ದಿಕ್ಕಿನಲ್ಲಿರುವ ಬಳ್ಳಿಗಾವೆಯ ಪ್ರದೇಶದಲ್ಲಿ ಈ ದೇವಾಲಯ ಸಂಸ್ಕೃತಿಯನ್ನು ಮುಖ್ಯವಾಗಿಸಿಕೊಂಡ ಕಾಳಾಮುಖ ಶೈವ ಪಂಥದವರಿಗೂ ಈ ರಾಜಕೀಯ ವ್ಯಕ್ತಿಗಳಿಗೂ ಇರುವ ಹೊಂದಾಣಿಕೆಯನ್ನು ಈ ದೇವಾಲಯಗಳಿಗೆ ಸಂಬಂಧಪಟ್ಟ ಶಾಸನಗಳು ವಿವರವಾಗಿ ತೋರಿ ಕೊಡುತ್ತವೆ. ಶೈವಯತಿಗಳು ದೇವಾಲಯ ನಿರ್ಮಾಣಕ್ಕೆ ಪ್ರಚೋದಿಸಿದರು. ಉನ್ನತ ಹುದ್ದೆಯಲ್ಲಿದ್ದ ವ್ಯಕ್ತಿಗಳು ತಮ್ಮ ಕೀರ್ತಿ ಅಜರಾಮರವಾಗಿರಲೆಂದು ಈಶ್ವರನ ಜೊತೆಗೆ ತಮ್ಮ ನಾಮವನ್ನು ಸೇರಿಸಿ ತಾವೂ ಈಶ್ವರನಾಗುವ ಉತ್ಕಟ ಇಚ್ಛೆಯಿಂದಲೂ, ಜೊತೆಗೆ ಧರ್ಮ ಊರ್ಜಿತದ ಉದ್ದೇಶದಿಂದಲೂ ದೇವಾಲಯಗಳನ್ನು ಕಟ್ಟಿಸಿದರು. ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿದ್ದ ಇವರು ಹೆಚ್ಚು ಹಣವನ್ನು ವೆಚ್ಚಮಾಡಿ, ಉತ್ತಮ ಶಿಲ್ಪಿಗಳನ್ನು, ಸಾಮಗ್ರಿಗಳನ್ನು ಉಪಯೋಗಿಸಿ ದೊಡ್ಡ ದೇವಾಲಯಗಳನ್ನು ನಿರ್ಮಿಸಿದರು ಎಂದರೆ ಆಶ್ಚರ್ಯವೇನಲ್ಲ.

ಇಲ್ಲಿ ಗಮನಿಸಬೇಕಾದ ಇನ್ನೊಂದು ಅಂಶವೆಂದರೆ, ಈ ದೇವಾಲಯಗಳಿಗೆ ಕೊಡಲ್ಪಟ್ಟ ದಾನಗಳನ್ನು ಅವಲೋಕಿಸಿದಾಗ ಮುಂದೆಯೂ ಸಹ ಆ ವ್ಯಕ್ತಿಯ ವಂಶಸ್ಥರೇ ಈ ದೇವಾಲಯಗಳಿಗೆ ದಾನದತ್ತಿಗಳನ್ನು ನೀಡಿರುವುದು ಕಂಡುಬರುತ್ತದೆ(ಪಟ್ಟಿ ೨ರಿಂದ ಪಟ್ಟಿ ೫ ಗಮನಿಸಿ). ಸಂಕ್ರಮಣ, ಸೂರ್ಯ, ಚಂದ್ರ ಗ್ರಹಣಗಳ ದಿನದಲ್ಲಿ, ಜೊತೆಗೆ ತಮ್ಮ ಪಟ್ಟಬಂದೋತ್ಸವ ಸಂದರ್ಭಗಳಲ್ಲಿ ತಮ್ಮ ಪೂರ್ವಜರ ಹೆಸರಲ್ಲಿ ನಿರ್ಮಾಣಗೊಂಡ ಈ ದೇವಾಲಯಗಳಿಗೆ ದಾನಕೊಟ್ಟಿರುವುದನ್ನು ಗಮನಿಸುತ್ತೇವೆ. ಒಂದರ್ಥದಲ್ಲಿ ಇಂಥ ದೇವಾಲಯಗಳು ಆಯಾ ಮನೆತನಕ್ಕೆ ಸಂಬಂಧಪಟ್ಟ ದೇವಾಲಯಗಳಂತೆ ತೋರಿಬರುತ್ತವೆ. ಸಮಾಜದಲ್ಲಿಯ

## ಪಟ್ಟಿ-೬ ವ್ಯಕ್ತಿನಾಮ ದೇವಾಲಯಗಳು (ವಾಸ್ತು ಹಿನ್ನೆಲೆಯಲ್ಲಿ)

| ಅ. ನಂ. | ಊರು | ದೇವಾಲಯ ಹೆಸರು | ಪಶ್ಚಿಮ ದಿಕ್ಕಿನ ಮು.ಗ.ಗೃ ಅಡಿಗಳಲ್ಲಿ | ಅರ್ಧಮಂಟಪ ಅಡಿಗಳಲ್ಲಿ | ದಕ್ಷಿಣದಿಕ್ಕಿನ ಗ.ಗೃ ಅಡಿಗಳಲ್ಲಿ | ಅರ್ಧಮಂಟಪ ಅಡಿಗಳಲ್ಲಿ | ಉತ್ತರದಿಕ್ಕಿನ ಗ.ಗೃ ಅಡಿಗಳಲ್ಲಿ | ಅರ್ಧಮಂಟಪ ಅಡಿಗಳಲ್ಲಿ | ನವರಂಗ ಅಡಿಗಳಲ್ಲಿ | ಮುಖ ಮಂಟಪ /ಮುಖಚತುಷ್ಕಿ ಅಡಿಗಳಲ್ಲಿ |
|---|---|---|---|---|---|---|---|---|---|---|
| ೧. | ಹರಳಹಳ್ಳಿ ತಾ. ಹಾವೇರಿ | ಸೋಮನಾಥ | ೮x೮ | ೮x೧೦ | ೮x೮ | ೮x೧೦ | ೮x೮ | ೮x೧೦ | ೧೭x೧೭ | ಮುಖ ಚತುಷ್ಕಿ ೧೨x೧೨ |
| ೨. | ಹೊನ್ನತ್ತಿ ತಾ.ರಾಣೆಬೆನ್ನೂರು | ರಾಮಲಿಂಗೇಶ್ವರ | ೮x೭ | ೭x೭ | ೮x೭ | ೭x೭ | ೮x೭ | ೮x೭ | ೧೭.೪x೧೭.೮ | ಪ್ರವೇಶ ಅಂಕಣ ೮x೧೦ |
| ೩. | ದಶರಥಕೊಪ್ಪ ತಾ.ಹಾನಗಲ್ಲ | ಗುರುಭಕ್ತರ ಗುಡಿ | ೯.೨x೭.೬ | ೯.೨x೭.೬ | ೯.೨x೭.೬ | ೯.೨x೭.೬ | ೯.೨x೭.೬ | ೯.೨x೭.೬ | ೧೮x೧೬ | - |
| ೪. | ಅಬ್ಬಲೂರು ತಾ.ಹಿರೇಕೆರೂರು | ಸೋಮನಾಥ | ೧೦.೫x೮.೧೦ | ೮.೮x೭.೩ | ೭.೫x೭.೫ | ೬.೨x೮.೫ | ೭.೫x೭.೫ | ೬.೨x೮.೫ | ೨೦x೨೦ | ಮುಖ ಮಂಟಪ ೨೦ ಕಂಬಗಳ |
| ೫. | ರಟ್ಟಿಹಳ್ಳಿ ತಾ.ಹಿರೇಕೆರೂರು | ಕಡಂಬೇಶ್ವರ | ೯.೫x೯.೫ | ೭x೮.೨ | ೯.೫x೯.೫ | ೭x೮.೨ | ೯.೫x೯.೫ | ೭x೮.೨ | ೨೨x೨೨ | ಮುಖ ಮಂಟಪ ೩೨ ಕಂಬಗಳ |
| ೬. | ಕಾರಡಗಿ ತಾ.ಸವಣೂರು | ಡೊಳ್ಳೇಶ್ವರ | ೮.೫x೮.೫ | ೮.೫x೮.೫ | ೮.೫x೮.೫ | ೮.೫x೮.೫ | ೮.೫x೮.೫ | ೮.೫x೮.೫ | ೧೯x೧೯ | ಹಾಳಾಗಿದೆ |

### ಪಟ್ಟಿ-೭ ವ್ಯಕ್ತಿನಾಮ ದೇವಾಲಯಗಳು (ಶಾಸನ ಹಿನ್ನೆಲೆಯಲ್ಲಿಯ ಪಟ್ಟಿ)

| ಅ.ನಂ. | ಊರು | ದೇವಾಲಯ ಹೆಸರು | ಪಶ್ಚಿಮ ದಿಕ್ಕಿನ ಮುಖ್ಯ ಗ.ಗೃ. | ದಕ್ಷಿಣದಿಕ್ಕಿನ ಗ.ಗೃ. | ಉತ್ತರದಿಕ್ಕಿನ ಗ.ಗೃ | ಕಾಲಮಾನ | ನಿರ್ಮಾಣಕ್ಕೆ ಕಾರಣರಾದವರು | ಉಲ್ಲೇಖ |
|---|---|---|---|---|---|---|---|---|
| ೧. | ಹರಳಹಳ್ಳಿ ತಾ. ಹಾವೇರಿ | ಸೋಮನಾಥ | ಸ್ವಯಂಭೂ ಸೋಮನಾಥ | ಗುತ್ತೇಶ್ವರ | ವಿಕ್ರಮೇಶ್ವರ | ಕ್ರಿ.ಶ. ೧೧೮೧ | ಮಹಾಮಂಡಳೇಶ್ವರ ಗುತ್ತ ಜೋಯಿದೇವರಸ | ಸೌ.ಇಂ.ಇನ್ ಸಂ.XVIII |
| ೨. | ಹೊನ್ನತ್ತಿ ತಾ.ರಾಣೆಬೆನ್ನೂರು | ರಾಮಲಿಂಗೇಶ್ವರ | ಚಾಮೇಶ್ವರ | ರಾಜೇಶ್ವರ | ಲಭ್ಯವಿಲ್ಲ | ಕ್ರಿ.ಶ. ೧೧೮೭ | ಮಹಾಪ್ರಧಾನರಾದ ದೇಕಣ ಮತ್ತು ನಾಕಣ | ಅದೇ, ನಂ.೧೨೪ ಮತ್ತು ೩೦೨ |
| ೩. | ದಶರಥಕೊಪ್ಪ ತಾ. ಹಾನಗಲ್ಲ | ಗುರುಭಕ್ತರ ಗುಡಿ | ಸ್ವಯಂಭೂ ಸೋಮನಾಥ | ಲಭ್ಯವಿಲ್ಲ | ಲಭ್ಯವಿಲ್ಲ | ಕ್ರಿ.ಶ.೧೨ನೇ ಶತಮಾನ | ಲಭ್ಯವಿಲ್ಲ | – |
| ೪ | ಅಬ್ಬಲೂರು ತಾ. ಹಿರೇಕೆರೂರು | ಸೋಮನಾಥ | ಸೋಮನಾಥ | ಏಕಾಂತರಾಮಯ್ಯ | ಅಗ್ನಿಹೊನ್ನಯ್ಯ | ಕ್ರಿ.ಶ.೧೨೦೦ | ಏಕಾಂತರಾಮಯ್ಯ | ಎ.ಇಂ., ಸಂ.V ಪು. ೨೪೫ |
| ೫. | ರಟ್ಟಿಹಳ್ಳಿ ತಾ. ಹಿರೇಕೆರೂರು | ಕಡಂಬೇಶ್ವರ | ಕಡಂಬೇಶ್ವರ | ಮಲ್ಲೇಶ್ವರ | ರಾಜೇಶ್ವರ | ಕ್ರಿ.ಶ.೧೨೩೮ | ಮಹಾಪ್ರಧಾನ ಹೊನ್ನಬೊಮ್ಮಶೆಟ್ಟಿ | ಕ.ಇನ್ಸ್, ಸಂ.VII ನಂ. ೪೪ |
| ೬. | ಕಾರಡಗಿ ತಾ. ಸವಣೂರು | ಡೊಳ್ಳೇಶ್ವರ | ಸ್ವಯಂಭೂಲಿಂಗ | ಲಭ್ಯವಿಲ್ಲ | ಲಭ್ಯವಿಲ್ಲ | ಕ್ರಿ.ಶ.೧೨ನೇ ಶತಮಾನ | ಲಭ್ಯವಿಲ್ಲ | – |



ಛಾಯಾಚಿತ್ರ - ೧, ಸೋಮೇಶ್ವರ ದೇವಾಲಯದ ಮುಖ್ಯ ಗರ್ಭಗೃಹದ ದಕ್ಷಿಣ ದಿಕ್ಕಿನ ಭದ್ರ ಕೋಷ್ಠ, ಹರಳಹಳ್ಳಿ ( ತಾ. ಹಾವೇರಿ)



ಛಾಯಾಚಿತ್ರ - ೨, ಸೋಮೇಶ್ವರ ದೇವಾಲಯ, ಹರಳಹಳ್ಳಿ (ತಾ.ಹಾವೇರಿ)



ಛಾಯಾಚಿತ್ರ – ೩, ಸೋಮೇಶ್ವರ ದೇವಾಲಯದ ಮುಖಚತುಷ್ಕಿಯ ಅಧಿಷ್ಠಾನ ಮತ್ತು ಕಕ್ಷಾಸನದ ಬೆನ್ನಿನ ಭಾಗ, ಹರಳಹಳ್ಳಿ, (ತಾ.ಹಾವೇರಿ)



ಛಾಯಾಚಿತ್ರ – ೪, ಸೋಮೇಶ್ವರ ದೇವಾಲಯದ ಮುಖ್ಯ ಗರ್ಭಗೃಹದ ದ್ವಾರ ಶಾಖೆಗಳು ಹರಳಹಳ್ಳಿ (ತಾ.ಹಾವೇರಿ)



ಛಾಯಾಚಿತ್ರ – ೫, ರಾಮಲಿಂಗೇಶ್ವರ ದೇವಾಲಯದ ಅಧಿಷ್ಠಾನ
ಹೊನ್ನತ್ತಿ (ತಾ.ರಾಣೆಬೆನ್ನೂರು)



ಛಾಯಾಚಿತ್ರ – ೬, ರಾಮಲಿಂಗೇಶ್ವರ ದೇವಾಲಯದ ದಕ್ಷಿಣ ದಿಕ್ಕಿನ ಬಿತ್ತಿ
ಹೊನ್ನತ್ತಿ (ತಾ.ರಾಣೆಬೆನ್ನೂರು)



ಛಾಯಾಚಿತ್ರ - ೭, ರಾಮಲಿಂಗೇಶ್ವರ ದೇವಾಲಯದ ದಕ್ಷಿಣ ದಿಕ್ಕಿನ ಗರ್ಭಗೃಹ ಮತ್ತು ಶಾಸನವುಳ್ಳ ಭಿತ್ತಿ ಸ್ತಂಭ, ಹೊನ್ನತ್ತಿ (ತಾ.ರಾಣೆಬೆನ್ನೂರು)



ಛಾಯಾಚಿತ್ರ - ೮, ಗುರುಭಕ್ತರ ಗುಡಿಯ ಉತ್ತರ ದಿಕ್ಕಿನ ಗರ್ಭಗೃಹ ದಶರಥಕೊಪ್ಪ (ತಾ.ಹಾನಗಲ್ಲ)



ಛಾಯಾಚಿತ್ರ – ೯, ಗುರುಭಕ್ತರ ಗುಡಿಯ ನವಂಗದ ಕೋಷ್ಠಗಳು
ದಶರಥಕೊಪ್ಪ (ತಾ.ಹಾನಗಲ್ಲ)



ಛಾಯಾಚಿತ್ರ – ೧೦, ಸೋಮೇಶ್ವರ ದೇವಾಲಯದ ಕಕ್ಷಾಸನದ ಬೆನ್ನಿನ ಮೇಲಿನ ಉಬ್ಬು ಶಿಲ್ಪ
ಅಬ್ಬಲೂರು (ತಾ. ಹಿರೇಕೆರೂರು)



ಛಾಯಾಚಿತ್ರ – ೧೧, ಸೋಮೇಶ್ವರ ದೇವಾಲಯ, ಅಬ್ಬಲೂರು (ತಾ. ಹಿರೇಕೇರೂರು)



ಛಾಯಾಚಿತ್ರ – ೧೨, ಸೋಮೇಶ್ವರ ದೇವಾಲಯದ ಮುಖ್ಯ ಗರ್ಭಗೃಹದ ಮೇಲ್ಕಟ್ಟಡ
ಅಬ್ಬಲೂರು (ತಾ.ಹಿರೇಕೆರೂರು)



ಛಾಯಾಚಿತ್ರ – ೧೩, ಸೋಮೇಶ್ವರ ದೇವಾಲಯದ ನವರಂಗ ದ್ವಾರ
ಅಬ್ಬಲೂರು (ತಾ. ಹಿರೇಕೆರೂರು)



ಛಾಯಾಚಿತ್ರ – ೧೪, ಸೋಮೇಶ್ವರ ದೇವಾಲಯದ ಮುಖಮಂಟಪ
ಅಬ್ಬಲೂರು (ತಾ.ಹಿರೇಕೆರೂರು)



ಛಾಯಾಚಿತ್ರ – ೧೫, ಕಡಂಬೇಶ್ವರ ದೇವಾಲಯದ ದಕ್ಷಿಣ ದಿಕ್ಕಿನ ಗರ್ಭಗೃಹದ ಮೇಲ್ಕಟ್ಟಡ
ರಟ್ಟಿಹಳ್ಳಿ (ತಾ.ಹಿರೇಕೆರೂರು)



ಛಾಯಾಚಿತ್ರ – ೧೬, ಕಡಂಬೇಶ್ವರ ದೇವಾಲಯ, ರಟ್ಟಿಹಳ್ಳಿ (ತಾ.ಹಿರೇಕೆರೂರು)



ಛಾಯಾಚಿತ್ರ – ೧೭, ಕಡಂಬೇಶ್ವರ ದೇವಾಲಯದ ಮುಖ್ಯ ಗರ್ಭಗೃಹದ ಮೇಲ್ಕಟ್ಟಡ
ರಟ್ಟಿಹಳ್ಳಿ (ತಾ.ಹಿರೇಕೆರೂರು)



ಛಾಯಾಚಿತ್ರ – ೧೮, ಕಡಂಬೇಶ್ವರ ದೇವಾಲಯದ ಮುಖ್ಯ ಗರ್ಭಗೃಹ
ರಟ್ಟಿಹಳ್ಳಿ (ತಾ.ಹಿರೇಕೆರೂರು)



ಛಾಯಾಚಿತ್ರ –೧೯, ಕಡಂಬೇಶ್ವರ ದೇವಾಲಯದ ನವರಂಗದ ಕೋಷ್ಠ
ರಟ್ಟಿಹಳ್ಳಿ (ತಾ.ಹಿರೇಕೆರೂರು)



ಛಾಯಾಚಿತ್ರ –೨೦, ಡೊಳ್ಳೇಶ್ವರ ದೇವಾಲಯ, ಕಾರಡಗಿ (ತಾ.ಸವಣೂರು)

ವಿವಿಧ ಸಂಘ ಸಂಸ್ಥೆಗಳಾಗಲಿ, ಶ್ರೀಸಾಮಾನ್ಯರಾಗಲಿ ಈ ದೇವಾಲಯಗಳಿಗೆ ದಾನ ಕೊಟ್ಟಂತೆ ಕಂಡು ಬರುವುದಿಲ್ಲ. ಮಂಡಳೇಶ್ವರನ ಆಶ್ರಯದಲ್ಲಿ ಹಳ್ಳಿಹಳ್ಳಿಗಳನ್ನೇ ದಾನವಾಗಿ ಪಡೆದುಕೊಂಡ ಈ ದೇವಾಲಯಗಳು ಸಾರ್ವಜನಿಕ ದಾನದತ್ತಿಗಳನ್ನು ಆಶ್ರಯಿಸಲಿಲ್ಲವೆಂದೂ ಊಹಿಸಬಹುದು.

## II. ತ್ರೈಪುರುಷ ದೇವಾಲಯಗಳು

ದೇವಾಲಯಗಳ ಹೆಸರೇ ಸೂಚಿಸುವಂತೆ ಈ ತ್ರಿಕೂಟ ದೇವಾಲಯಗಳ ಮೂರೂ ಗರ್ಭಗೃಹಗಳು ತ್ರೈಪುರುಷರಿಗಾಗಿ ಮೀಸಲಾಗಿದೆ. 'ತ್ರೈ' ಎಂದರೆ ಮೂರು. 'ಪುರುಷ'[೧೮೩] ಶಬ್ಧಕ್ಕೆ, ಪರಮಾತ್ಮ, ಆತ್ಮ, ಗಂಡಸು, ಮನುಷ್ಯ, ಆಳು ಎಂಬಿತ್ಯಾದಿ ಸಮಾನ ಪದಗಳನ್ನು ಕಾಣುತ್ತೇವೆ.[೧೮೪]

ಋಗ್ವೇದದ ದಶಮಮಂಡಲದ ಹತ್ತನೆಯ ಸೂಕ್ತವಾದ 'ಪುರುಷಸೂಕ್ತ'ವು ಹದಿನಾರು ಋಕ್ಕುಗಳಿಂದ ಕೂಡಿದ್ದು ಸೃಷ್ಟಿಕಲ್ಪನೆಯ ಬಗ್ಗೆ 'ಪುರುಷ'ನ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ. ಇದರ ಮೊದಲನೆಯ ಮಂತ್ರವು ಪುರುಷನನ್ನು

> ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್|
> ಸ ಭೂಮಿಂ ವಿಶ್ವತೋ ವೃತ್ವಾತ್ಯತಿಷ್ಠದ್ದಶಾಂಗುಲಂ

ಸಾವಿರ ತಲೆಯವನು, ಸಾವಿರ ಕಣ್ಣವನು, ಸಾವಿರ ಪದದವನು, ಮೂರು ಜಗವನ್ನು ಆವರಿಸಿ ದಶಾಂಗುಲದಷ್ಟು ಅತಿಕ್ರಮಿಸಿರುವನು ಎಂದು ವರ್ಣಿಸಿದೆ. ಮುಂದಿನ ಮಂತ್ರಗಳಲ್ಲಿ ಪುರುಷನಿಂದಲೇ ದಿಕ್ಕುಗಳು, ಲೋಕಗಳು, ಭೂಮಿ, ಅಂತರಿಕ್ಷಗಳು ಹುಟ್ಟಿವೆ ಎಂದು; ಜಗತ್ತಿನ ಸಕಲ ಪ್ರಾಣಿಗಳು, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಹಾಗೂ ಶೂದ್ರರು ಹುಟ್ಟಿದರೆಂದೂ; ನಾಲ್ಕು ವೇದಗಳು, ಸೂರ್ಯ, ಚಂದ್ರ, ವಾಯು, ಇಂದ್ರಾಗ್ನಿಗಳು ಹುಟ್ಟಿದವೆಂದು ವರ್ಣಿಸಿವೆ. ಪ್ರಪಂಚದಲ್ಲಿರುವ ಪ್ರಾಣಿಗಳೆಲ್ಲವುಗಳ ಅಂಗಗಳೆಲ್ಲ ಅವನೇ ಆಗಿರುವುದರಿಂದ, ಪುರುಷನು ವಿಶ್ವದೊಳಗೆಲ್ಲ ಪ್ರಸರಿಸಿದ ಅಂಗಗಳುಳ್ಳವನು. ಅವನಿಂದಲೇ ಸೃಷ್ಟಿ, ಸ್ಥಿತಿ, ಲಯ ಕಾರ್ಯಗಳು ಜರುಗುತ್ತವೆ ಎಂದು ಋಗ್ವೇದವು ಪುರುಷಸೂಕ್ತದಲ್ಲಿ ಪುರುಷನನ್ನು ವಿಶಾಲಾರ್ಥದಲ್ಲಿ ವರ್ಣಿಸಿದೆ.

ಇದೇ ವೇದದಲ್ಲಿ ಇಂದ್ರನು ಸೃಷ್ಟಿಕಾರ್ಯವನ್ನು ಮಾಡುವನೆಂದು[೧೮೫] ತನ್ನ ಶರೀರದಿಂದಲೇ ದ್ಯಾವಾ (ಆಕಾಶ), ಪೃಥ್ವಿಗಳನ್ನು ನಿರ್ಮಿಸಿದನೆಂದು ಹೇಳಿದೆ.[೧೮೬] ಇದರಿಂದ ಇಂದ್ರನಿಗೆ ಪ್ರಮುಖ ಸ್ಥಾನವನ್ನು ಕೊಡಲಾಗಿತ್ತು ಎಂದು ಗೋಚರಿಸುತ್ತದೆ. ಇಲ್ಲಿ ವಿಷ್ಣುವಾಗಲಿ, ರುದ್ರನಾಗಲಿ ಪ್ರಮುಖ ದೇವತೆಗಳಾಗಿ ಕಂಡುಬರುವುದಿಲ್ಲ. ವಿಷ್ಣುವು ಇಂದ್ರನಿಗೆ ಸಹಾಯಕನಾಗಿದ್ದನೆಂದು ಋಗ್ವೇದದ ಅನೇಕ ಮಂತ್ರಗಳು ಸೂಚಿಸುತ್ತವೆ.[೧೮೭] ನಂತರದಲ್ಲಿ ಇಂದ್ರನು ಈ ಸ್ಥಾನವನ್ನು ಕಳೆದುಕೊಂಡಂತೆ ಕಾಣುತ್ತದೆ.[೧೮೮] ಅಪ್ರಮುಖರಾಗಿದ್ದ ವಿಷ್ಣು, ರುದ್ರರು ಪ್ರಧಾನರಾದಂತೆ ತೋರುತ್ತದೆ.

**ಪುರಾಣಗಳು :** ವೇದಯುಗದ ನಂತರ ಭಾರತದ ಮೇಲೆ ವಿವಿಧ ಸಂಸ್ಕೃತಿಗಳ ಪ್ರಭಾವದಿಂದಾಗಿ ದೇವತೆಗಳ ಕಲ್ಪನೆಯಲ್ಲಿ ಅನೇಕ ವ್ಯತ್ಯಾಸಗಳು ಸಂಭವಿಸಿದವು. ವೇದಕಾಲದಲ್ಲಿ ಉಪಾಸನೆಗೊಳ್ಳುತ್ತಿದ್ದ ಇಂದ್ರ, ಅಗ್ನಿ,

ವರುಣ ಮುಂತಾದ ದೇವತೆಗಳು ಪುರಾಣಗಳಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿಗಳಾಗಿ ರೂಪಗೊಂಡು ಮಹತ್ವವನ್ನು ಪಡೆದುಕೊಂಡರು. ವೇದಕಾಲದ ದೇವರಲ್ಲೂ ಪುರಾಣದಲ್ಲಿಯ ತ್ರಿಮೂರ್ತಿಗಳಲ್ಲೂ ಇರುವ ಸಾಮ್ಯತೆಯನ್ನು ಆಧರಿಸಿ ಈ ಕೆಳಗಿನಂತೆ ಹೇಳಬಹುದು.[೧೮೯]

(ಸೂರ್ಯ) ಇಂದ್ರ-ವಿಷ್ಣು

ಅಗ್ನಿ-ಬ್ರಹ್ಮ

ವಾಯು-ಶಿವ (ರುದ್ರ)

ಒಟ್ಟು ಹದಿನೆಂಟು ಪುರಾಣಗಳಲ್ಲಿ ಹತ್ತು ಶೈವಪುರಾಣಗಳು. ಇದರಲ್ಲಿ ಶಿವ ಮಹಿಮೆಯು ವರ್ಣಿತವಾಗಿದೆ. ಶಿವನೇ ಎಲ್ಲದಕ್ಕೂ ಮೂಲ ಅವನಿಂದಲೇ ಸಕಲ ಜಗತ್ತು. ಸೃಷ್ಟಿ, ಸ್ಥಿತಿ, ಲಯ ಕರ್ತನಾದ ಇವನಿಂದಲೇ ಹುಟ್ಟಿದ ಜಗತ್ತು ಇವನಲ್ಲಿಯೇ ಲೀನವಾಗುತ್ತದೆ ಎಂದು ಪ್ರತಿಪಾದಿಸುವ ಶೈವ ಪಂಥದಲ್ಲಿ ಶಿವನು 'ಪುರುಷ'ನಾಗಿ ಕಂಡುಬರುತ್ತಾನೆ. ನಾಲ್ಕು ವೈಷ್ಣವ ಪುರಾಣಗಳಲ್ಲಿ ವಿಷ್ಣುವಿನ ದಶಾವತಾರಗಳನ್ನು ವಿಷ್ಣು ಸರ್ವೋತ್ತಮತ್ವವನ್ನು ಹೇಳಲಾಗಿದೆ. ಈ ವೈಷ್ಣವ ಪಂಥದಲ್ಲಿ ವಿಷ್ಣುವು 'ಪುರುಷ'ನಾಗಿ ಕಂಡುಬರುತ್ತಾನೆ. 'ಬ್ರಹ್ಮ' ಮತ್ತು 'ಪದ್ಮ' ಪುರಾಣಗಳು ಬ್ರಹ್ಮನನ್ನು ವರ್ಣಿಸುವ ಪುರಾಣಗಳಾಗಿವೆ.

**ಆಗಮಗಳು : ಆಗಮಗಳು**[೧೯೦] ವೇದಗಳಷ್ಟೇ ಪ್ರಮುಖವಾಗಿ ನಿಲ್ಲಬಲ್ಲ ಶಾಸ್ತ್ರಗಳಾಗಿ, ಮೂರ್ತಿ ಪೂಜೆಯನ್ನು, ದೇವಾಲಯಗಳನ್ನು ಕುರಿತು ನೇರವಾಗಿ ಪ್ರತಿಪಾದಿಸುತ್ತವೆ. ಕುಲಾರ್ಣವ ತಂತ್ರದಲ್ಲಿ ಕಲಿಯುಗದೊಳಗೆ ಆಗಮೋಕ್ತ ಮಾರ್ಗವೇ ಆಚಾರವೆಂದು ಹೇಳಲಾಗಿದೆ.[೧೯೧]

ಕೃತೇ ಶ್ರುತ್ಯುಕ್ತ ಆಚಾರಸ್ತ್ರೇತಾಯಾಂ ಸ್ಮೃತಿ ಸಂಭವಃ |

ದ್ವಾಪರೇತು ಪುರಾಣೋಕ್ತಂ ಕಲೌ ಆಗಮ ಕೇವಲಂ |

ಶೃತಿ, ಸ್ಮೃತಿ, ಪುರಾಣ, ಆಗಮಗಳು ಕ್ರಮವಾಗಿ ಕೃತ, ತ್ರೇತಾ, ದ್ವಾಪರ, ಕಲಿಯುಗದಲ್ಲಿ ಆಚಾರಕ್ಕೆ ಪ್ರಮಾಣವಾಗಿವೆ. ಆಗಮಗಳ ಉಗಮದ ಕುರಿತು ಹೇಳುವಾಗ ಮೇಲಿನ ಮಾತನ್ನು ಶಿವನು ಗಿರಿಜೆಗೆ ಹೇಳಿದನೆಂದು 'ಶಾರದಾ ತಿಲಕ' ಗ್ರಂಥದಿಂದ ತಿಳಿದು ಬರುತ್ತದೆ.[೧೯೨]

ಆಗಮ ಶಾಸ್ತ್ರದಲ್ಲಿ ಐದು ವಿಭಾಗಗಳನ್ನು ಮಾಡಲಾಗಿದೆ. ಶಿವಾಗಮ ಮತ್ತು ಶಾಕ್ತಾಗಮಗಳು ಮೊದಲಿನ ಗುಂಪಿಗೆ ಸೇರುತ್ತವೆ. ಅನಂತರ ವೈಷ್ಣವಾಗಮದಲ್ಲಿ 'ವೈಖಾಸನ' ಮತ್ತು 'ಪಂಚರಾತ್ರ' ಎಂಬ ಎರಡು ಉಪವಿಭಾಗಗಳಿವೆ. 'ಸೌರ', 'ಗಾಣಪತ್ಯ' ಮತ್ತು 'ಬೌದ್ಧ' ತಂತ್ರಗಳು ಆಗಮ ಶಾಸ್ತ್ರದ ಕೊನೆಯ ಮೂರು ವಿಭಾಗಗಳು. ಇವುಗಳಲ್ಲಿ ಶೈವಾಗಮಗಳು ಮತ್ತು ವೈಷ್ಣವಾಗಮಗಳು ಪ್ರಮುಖವಾಗಿವೆ. ಶೈವಾಗಮಗಳಲ್ಲಿ ಶಿವನು 'ಪುರುಷ'ನಾಗಿ ಕಂಡುಬರುತ್ತಾನೆ. ವೈಷ್ಣವಾಗಮಗಳಲ್ಲಿ ವಿಷ್ಣುವು 'ಪುರುಷ'ನಾಗಿ ಕಂಗೊಳಿಸುತ್ತಾನೆ. ಸೌರ ಪಂಥದಲ್ಲಿ ಸೂರ್ಯನಿಗೆ ಪ್ರಾಶಸ್ತ್ಯವನ್ನು ಕೊಡಲಾಗಿದೆ. ಆಗಮಗಳಲ್ಲಿ ಸಾಮಾನ್ಯವಾಗಿ ನಾಲ್ಕು ಭಾಗಗಳಿವೆ. ಜ್ಞಾನಕಾಂಡ, ಯೋಗಕಾಂಡ, ಕ್ರಿಯಾಕಾಂಡ ಮತ್ತು ಚರ್ಯಾಕಾಂಡ. ಜ್ಞಾನ ಮತ್ತು ಯೋಗಕಾಂಡದಲ್ಲಿ ದೈವತ್ವದ ಕಲ್ಪನೆ, ಸೃಷ್ಟಿ ನಿರ್ಮಾಣ, ಸಾಧನೆಯ ಮಾರ್ಗ ಇತ್ಯಾದಿ ತಾತ್ವಿಕ ಅಂಶಗಳು

ಬರುತ್ತವೆ. ಕ್ರಿಯಾ ಮತ್ತು ಚರ್ಯಾ ಕಾಂಡಗಳಲ್ಲಿ ದೇವಾಲಯಗಳ ನಿರ್ಮಾಣ, ಮೂರ್ತಿ ಪ್ರತಿಷ್ಠಾಪನೆಯ ವಿಧಾನ, ಪೂಜೆಯ ವಿವಿಧ ರೀತಿಗಳು ಮೊದಲಾದ ಧಾರ್ಮಿಕ ಸಂಪ್ರದಾಯಗಳನ್ನು ವರ್ಣಿಸುತ್ತವೆ.

ಆಯಾ ಪಂಥದ ಪುರಾಣ, ಆಗಮಗಳ ಪ್ರಕಾರ ಆ ಪಂಥದ 'ಪುರುಷ' ದೇವನ ಪೂಜೆ, ಪುನಸ್ಕಾರಗಳು ನೆರವೇರುತ್ತವೆ. ಶಿವಪಾರಮ್ಯವನ್ನು ಸಾರುವ ಪುರಾಣಗಳಾಗಲಿ, ವಿಷ್ಣು ಪಾರಮ್ಯವನ್ನು ಸಾರುವ ಪುರಾಣಗಳಾಗಲಿ ಎಲ್ಲೂ ಒಂದನ್ನೊಂದು ಅಗೌರವವಾಗಿ ಕಾಣುವುದಿಲ್ಲ, ಖಂಡಿಸುವುದಿಲ್ಲ. ಸೃಷ್ಟಿ, ಸ್ಥಿತಿ, ಲಯಗಳೆಲ್ಲ ಒಬ್ಬನಲ್ಲೇ ಎಂಬ ಪರಬ್ರಹ್ಮ ತತ್ವವನ್ನು ಸಾರುತ್ತವೆ. ಹೀಗೆ ಒಂದನ್ನೊಂದು ಗೌರವಿಸುವ, ಐಕ್ಯ ಭಾವನೆಯನ್ನು ಮಧ್ಯಯುಗೀನ ತ್ರೈಪುರುಷ ತ್ರಿಕೂಟ ದೇವಾಲಯಗಳಲ್ಲಿ ಸ್ಪಷ್ಟವಾಗಿ ಕಾಣುತ್ತೇವೆ. ಶೈವಪಂಥದ 'ಪುರುಷ' ದೇವನಾದ ಶಿವನನ್ನು ಪಶ್ಚಿಮದಿಕ್ಕಿನ ಗರ್ಭಗೃಹದಲ್ಲಿಯೂ; ವೈಷ್ಣವ ಪಂಥದ 'ಪುರುಷ' ದೇವನಾದ ವಿಷ್ಣುವನ್ನು ಉತ್ತರದಿಕ್ಕಿನ; ಸೌರಪಂಥದ ಸೂರ್ಯನನ್ನು ಪೂರ್ವದಿಕ್ಕಿನ ಗರ್ಭಗೃಹದಲ್ಲಿ ಪ್ರತಿಷ್ಠಾಪಿಸಿರುವುದನ್ನು ಕಾಣುತ್ತೇವೆ. ಇಲ್ಲಿ ತ್ರೈಪುರುಷರಿಗೆ ಸಮಾನವಾದ ಪ್ರಾಶಸ್ತ್ಯವಿದೆ. ಇದು ದೇವಾಲಯ ವಾಸ್ತುವಿನ್ಯಾಸದಿಂದಲೂ, ದೇವಾಲಯಗಳಿಗೆ ಸಂಬಂಧಪಟ್ಟ ಶಾಸನಗಳಿಂದಲೂ ಸ್ಪಷ್ಟವಾಗುತ್ತದೆ.

**ಬಳ್ಳಿಗಾವೆಯ ತ್ರಿಪುರಾಂತಕೇಶ್ವರ ತ್ರಿಕೂಟ ದೇವಾಲಯ :** ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳ ಮೇಲೆ ಬಳ್ಳಿಗಾವೆಯ ದೇವಾಲಯಗಳು ಸಾಕಷ್ಟು ಪ್ರಭಾವ ಬೀರಿವೆ ಎಂದು ಈ ಹಿಂದೆ ಗಮನಿಸಿದ್ದೇವೆ. 'A Twelth century university in Mysore'[೧೯೩] ಎಂಬ ಹೆಗ್ಗಳಿಕೆಗೆ ಪಾತ್ರವಾದ ಬಳ್ಳಿಗಾವೆ, ಮಧ್ಯಯುಗೀನ ಸಾಮಾಜಿಕ, ಧಾರ್ಮಿಕ ಚಟುವಟಿಕೆಗಳಿಗೆ ಮುಖ್ಯ ನೆಲೆಯಾಗಿ, ನಾನಾ ಧರ್ಮಗಳಿಗೆ, ನಂಬಿಕೆಗಳಿಗೆ ಆಶ್ರಯವಿತ್ತು, ವಿಶೇಷವಾಗಿ ಶೈವಧರ್ಮಕ್ಕೆ ಹೆಚ್ಚು ಒತ್ತುಕೊಟ್ಟಿತ್ತು. ಇದರ ಸುತ್ತಮುತ್ತಲ ಪ್ರದೇಶವು ನೇರವಾಗಿ ಇದರ ಪ್ರಭಾವಕ್ಕೆ ಒಳಪಟ್ಟಿತ್ತು[೧೯೪] ಎಂಬುದನ್ನೂ ಈಗಾಗಲೇ ಗಮನಿಸಿದ್ದಾಗಿದೆ. ಮಧ್ಯಯುಗೀನ ಸಮಾಜದಲ್ಲಿ ದೇವರು ದೇವಾಲಯ, ಧರ್ಮ, ವಿದ್ಯೆ, ಕಲೆ, ಸಾಮಾಜಿಕ ಚಟುವಟಿಕೆಗಳು ಇವು ಒಂದಕ್ಕೊಂದು ಹೆಣೆದುಕೊಂಡು, ಒಂದಕ್ಕೊಂದು ಪೂರಕವಾಗಿದ್ದವು. ಬಳ್ಳಿಗಾವೆಯ ಕಾಳಾಮುಖ ಶೈವ ಪಂಥದವರ ಧಾರ್ಮಿಕ ಪ್ರಭಾವ ಅದರ ಸುತ್ತಮುತ್ತಲ ಪ್ರದೇಶದಲ್ಲಿ ಬೀರಿದೆ ಎಂದರೆ, ಧರ್ಮದ ಜೊತೆಗಿದ್ದ ದೇವರು, ದೇವಾಲಯ, ವಿದ್ಯೆ, ಕಲೆ ಮುಂತಾದವುಗಳೂ ತಮ್ಮ ಪ್ರಭಾವವನ್ನು ಬೀರುವುದು ಸಹಜ. ಅದನ್ನೇ ಶಾಸನಗಳು ಮತ್ತು ದೇವಾಲಯ ವಾಸ್ತು ಶಿಲ್ಪಗಳಿಂದ ನಾವಿಂದು ಗಮನಿಸಬಹುದಾಗಿದೆ. ಬಳ್ಳಿಗಾವೆಯ ತ್ರಿಪುರಾಂತಕೇಶ್ವರ ತ್ರಿಕೂಟ ದೇವಾಲಯವು ಹಾವೇರಿ ಜಿಲ್ಲೆಯ ತ್ರೈಪುರುಷ ತ್ರಿಕೂಟ ದೇವಾಲಯಗಳ ಮೇಲೆ ಪ್ರಭಾವ ಬೀರಿದೆ ಎಂದು ಹೇಳಬಹುದು.

ಹಾವೇರಿ ಜಿಲ್ಲೆಯ ತ್ರೈಪುರುಷ ದೇವಾಲಯಗಳು ಗಾತ್ರದಲ್ಲಿ ತ್ರಿಪುರಾಂತಕೇಶ್ವರ ದೇವಾಲಯಕ್ಕಿಂತ ಚಿಕ್ಕದಾಗಿದ್ದರೂ, ವಾಸ್ತು ಶಿಲ್ಪ ವಿನ್ಯಾಸದಲ್ಲಿ ಸಾಕಷ್ಟು ಹೋಲಿಕೆಯನ್ನು ಪಡೆದಿವೆ. ಪೂರ್ವ, ಪಶ್ಚಿಮ, ಉತ್ತರ ದಿಕ್ಕುಗಳಲ್ಲಿಯ ಗರ್ಭಗೃಹಗಳಲ್ಲಿ ಕ್ರಮವಾಗಿ ಸೂರ್ಯ, ಲಿಂಗ, ವಿಷ್ಣು ಶಿಲ್ಪಗಳನ್ನು ಹೊಂದಿದ್ದು, ಮೂರೂ ಗರ್ಭಗೃಹಗಳು ಅರ್ಧಮಂಟಪವನ್ನು ಹೊಂದಿವೆ. ವಿಸ್ತಾರದಲ್ಲಿಯೂ ಮೂರೂ ಗರ್ಭಗೃಹಗಳು ಸಮಾನವಾಗಿವೆ. (ಪುಟ ಸಂಖ್ಯೆ ೧೪೭ರಲ್ಲಿಯ ಪಟ್ಟಿ-೧ನ್ನು ಗಮನಿಸಿ) ಅವುಗಳ ಲಲಾಟಬಿಂಬದಲ್ಲಿ

ತ್ರಿಮೂರ್ತಿಗಳ ಉಬ್ಬುಶಿಲ್ಪಗಳನ್ನು ಕೊರೆಯಲಾಗಿದೆ. ಇದರಿಂದ ಗರ್ಭಗೃಹಗಳಲ್ಲಿಯ ಪ್ರತಿಯೊಬ್ಬ ಪುರುಷ ದೇವನು ತ್ರಿಮೂರ್ತಿಗಳಾದ ಬ್ರಹ್ಮ, ವಿಷ್ಣು, ಮಹೇಶ್ವರರ ಕಾರ್ಯವನ್ನು ನಿರ್ವಹಿಸಬಲ್ಲವನಾಗಿದ್ದಾನೆ ಎಂದು ತಿಳಿಯಬಹುದಾಗಿದೆ. ಇಲ್ಲಿ ಈಶ್ವರ, ವಿಷ್ಣು, ಸೂರ್ಯರಿಗೆ ಸಮಾನ ಸ್ಥಾನವನ್ನು ಕೊಡಲಾಗಿದೆ. ಈ ದೇವಾಲಯಗಳಿಗೆ ಸಂಬಂಧಪಟ್ಟ ಶಾಸನಗಳೂ ಸಹ ಈ ಮೂರೂ ಪುರುಷರನ್ನು ಸಮಾನವಾಗಿ ಕಂಡಿದ್ದನ್ನು ಗಮನಿಸಬಹುದು. ಅಬ್ಬಲೂರು ಶಾಸನವು,[೧೯೪] 'ಬ್ರಹ್ಮಗಾವುಂಡನು ನಿರ್ಮಿಸಿದ ಅಲ್ಲಿಯ ಬ್ರಹ್ಮೇಶ್ವರ ದೇವಾಲಯವನ್ನು ಕುರಿತು, ಇದು ಶಿವನ ವಾಸಸ್ಥಾನವಾದ ಕೈಲಾಸಪರ್ವತವೆಂದೂ, ವಿಷ್ಣು ವಾಸಸ್ಥಾನವಾದ ವೈಕುಂಠ(ಹೇಮಾದ್ರಿ)ವೆಂದೂ ಮತ್ತು ಸೂರ್ಯೋದಯಗೊಳ್ಳುತ್ತಿರುವ ಪರ್ವತವೆಂದೂ' ವರ್ಣಿಸಿದೆ. ಕರಗುದರಿಯಲ್ಲಿದ್ದ ತ್ರೈಪುರುಷ ದೇವಾಲಯದ ಬಗ್ಗೆ ಮಾಹಿತಿ ಒದಗಿಸುವ ಕರಗುದರಿ ಶಾಸನವು[೧೯೫] ಆರಂಭದಲ್ಲಿ ಮೂರು ಶ್ಲೋಕಗಳನ್ನು ಹೊಂದಿದ್ದು ಕ್ರಮವಾಗಿ ಈಶ್ವರ, ವಿಷ್ಣು, ಸೂರ್ಯರನ್ನು ಸ್ತುತಿಸುತ್ತದೆ. ಈಶ್ವರನನ್ನು ಅಂಧಕಾರ ಸಂಹಾರಕನೆಂದೂ, ವಿಷ್ಣುವಿನ ವರಾಹ ಅವತಾರವನ್ನು, ಸೂರ್ಯನನ್ನು ದಿನಕರನೆಂದೂ, ಮೂರೂ ಲೋಕಗಳ ರಕ್ಷಕನೆಂದೂ ವರ್ಣಿಸಿದೆ. ಇದರಿಂದ ತ್ರೈಪುರುಷ ದೇವಾಲಯದಲ್ಲಿ ಬರುವ ಮೂರೂ ದೇವತೆಗಳು ಪ್ರಧಾನ ದೇವರುಗಳಾಗಿ ಕಂಡುಕೊಳ್ಳುತ್ತಾರೆ.

ಇಲ್ಲಿ ತ್ರೈಪುರುಷರು ಪ್ರಧಾನರಾಗಿದ್ದರೂ, ಈಶ್ವರನಿಗೆ ಹೆಚ್ಚು ಪ್ರಾಮುಖ್ಯತೆ ಇದ್ದಂತೆ ಕಂಡುಬರುತ್ತದೆ. ಈ ಎಲ್ಲ ದೇವಾಲಯಗಳು ಕಾಳಾಮುಖ ಶೈವಪಂಥದವರ ಮೇಲ್ವಿಚಾರಣೆಯಲ್ಲಿ ಇದ್ದ ದೇವಾಲಯಗಳು. ಆದ್ದರಿಂದ ಇಲ್ಲಿ ಶಿವನಿಗೆ ಮಹತ್ವ ಕೊಟ್ಟಿರುವುದು ಸಹಜ.[೧೯೬] ಮೂರು ಪ್ರಧಾನ ದೇವರನ್ನು ಒಳಗೊಂಡ ಈ ದೇವಾಲಯಗಳನ್ನು, 'ಸೋಮೇಶ್ವರ ದೇವಾಲಯ', 'ಬ್ರಹ್ಮಲಿಂಗೇಶ್ವರ ದೇವಾಲಯ', 'ಮಾಕಾಳೇಶ್ವರ ಹಾಗೂ ಶಂಕರದೇವ ದೇವಾಲಯ' ಎಂದು ಕರೆದಿರುವುದೂ ಶಿವಪಾರಮ್ಯವನ್ನೇ ಹೇಳುತ್ತವೆ. ದೇವಾಲಯಕ್ಕೆ ಕೊಡಲ್ಪಟ್ಟ ದಾನದತ್ತಿಗಳು ಸಹ ಸ್ಥಾನಾಚಾರ್ಯರಾದ ಕಾಳಾಮುಖ ಯತಿಗಳ ಕಾಲುತೊಳೆದು ಈಶ್ವರನ ಹೆಸರಿನಲ್ಲಿ ಕೊಟ್ಟಿರುವುದನ್ನು ಶಾಸನಗಳೂ ಉಲ್ಲೇಖಿಸುತ್ತವೆ.

ವಿಷ್ಣುಪಾರಮ್ಯವನ್ನು ಘೋಷಿಸುವಂತಹ ಪ್ರತ್ಯೇಕವಾದ ಒಂದು ಪಂಗಡ ಇರುವಾಗಲೂ ಕಾಳಾಮುಖರು ವಿಷ್ಣುವನ್ನು ತಮ್ಮ ಬಳಗದಲ್ಲಿ ಸೇರಿಸಿಕೊಂಡಿದ್ದು ಏಕೆ? ಶಿವಪಾರಮ್ಯದ ಅಡಿಯಲ್ಲಿ ತಮ್ಮ ವಿಷ್ಣು ದ್ವಿತೀಯನಾಗುವುದನ್ನು ವೈಷ್ಣವರು ಒಪ್ಪಿಕೊಂಡರೆ? ಎಂಬ ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ಇದು ಧರ್ಮಸಹಿಷ್ಣುತೆ ದೃಷ್ಟಿ ಒಂದಾದರೆ, ವೈಷ್ಣವರ ಅಸಂಘಟಿತ ಪರಿಸ್ಥಿತಿ ಎಂದು ಹೇಳಬಹುದು.

ಹತ್ತನೇ ಶತಮಾನದ ಪೂರ್ವಾರ್ಧದಲ್ಲಿ ಈ ಪ್ರದೇಶದಲ್ಲಿ ಕಾಳಾಮುಖ ದೇವಾಲಯ, ಮಠಗಳು ಉಚ್ಛ್ರಾಯ ಸ್ಥಿತಿಗೆ ಬರುವುದಕ್ಕೂ ಮುನ್ನ ಅಗ್ರಹಾರಗಳು ರಾಜಮನ್ನಣೆ ಪಡೆದು ಸಾಂಸ್ಕೃತಿಕ, ಧಾರ್ಮಿಕ, ವಿದ್ಯಾಕೇಂದ್ರಗಳಾಗಿ ಕಾರ್ಯ ನಿರ್ವಹಿಸಿದವು.[೧೯೮] ಇಂತಹ ಅಗ್ರಹಾರಗಳಲ್ಲಿದ್ದ ಮಹಾಜನರು ಎನಿಸಿಕೊಂಡವರು ಹೆಚ್ಚಾಗಿ ಬ್ರಾಹ್ಮಣರೇ ಆಗಿರುತ್ತಿದ್ದರು.[೧೯೯] ಈ ಬ್ರಾಹ್ಮಣರಲ್ಲಿ ಶೈವ ಮತ್ತು ವೈಷ್ಣವ ಇಬ್ಬರೂ ಇದ್ದು[೨೦೦] ಅವರಲ್ಲಿ ಶೈವಬ್ರಾಹ್ಮಣರ ಸಂಖ್ಯೆ ಹೆಚ್ಚಾಗಿರಬಹುದು.[೨೦೧] ಈ ಮಹಾಜನರನ್ನು ಶಾಸನಗಳು ಉಚ್ಚಮಟ್ಟದಲ್ಲಿ ಇರಿಸಿವೆ ಅಲ್ಲದೆ 'ಮಹಾಜನರಿನ್ನೂರ್ವರು ಧರ್ಮಂಗಳಂ ಸ್ವಧರ್ಮದಿಂ ಸುರಕ್ಷಿತಮಾಗೆ

ರಕ್ಷಿಸು'ತ್ತಿದ್ದರು ಎಂದು ಶಾಸನ ಉಲ್ಲೇಖಿಸುತ್ತದೆ.[೨೦೨] ಜೈನಧರ್ಮ ಮತ್ತು ಭೌದ್ಧ ಧರ್ಮಗಳನ್ನು ಬಿಟ್ಟರೆ ಉಳಿದ ಜಾತಿಗಳ ಮೇಲೆ ಬ್ರಾಹ್ಮಣರಿಗೆ ಒಂದು ರೀತಿಯ ಧಾರ್ಮಿಕ ಪ್ರಭುತ್ವವಿತ್ತೆಂದು ಸೂಚಿಸುತ್ತದೆ.[೨೦೩] ಹತ್ತನೇ ಶತಮಾನದ ನಂತರ ಕಾಳಾಮುಖರು ದೇವಾಲಯಗಳನ್ನು[೨೦೪] ಬೆಳೆಸಿ ಸಾಂಸ್ಕೃತಿಕ, ಧಾರ್ಮಿಕ, ವಿದ್ಯಾಕೇಂದ್ರಗಳನ್ನಾಗಿ ಮಾಡಿ, ಅಗ್ರಹಾರಗಳಿಗಿಂತ ಹೆಚ್ಚಿನ ಅಧಿಕಾರ ಬೆಳೆಸಿದರು. ಅನಿವಾರ್ಯವಾಗಿ ಅಗ್ರಹಾರಗಳು ಕಾಳಾಮುಖ ದೇವಾಲಯ ಸಂಸ್ಕೃತಿಯೊಂದಿಗೆ ಹೊಂದಿಕೊಂಡವು. ರಾಜಾರಾಮ ಹೆಗಡೆ ಅವರು ಕಾಳಾಮುಖ ಶೈವಪಂಥದ ದೇವಾಲಯಗಳು ಅಗ್ರಹಾರಗಳು ಒಂದಕ್ಕೊಂದು ಪೂರಕವಾಗಿ ಬೆಳೆದಿದ್ದನ್ನು ವಿವರಿಸುತ್ತಾ[೨೦೫] ದೇವಾಲಯ ಮತ್ತು ಮೂರ್ತಿಪೂಜೆಯನ್ನು ಬೆಂಬಲಿಸುವ ಕಾಳಾಮಪಖ ಶೈವಮಠಗಳನ್ನು ಅಗ್ರಹಾರಗಳು ಒಪ್ಪಿಕೊಂಡವು. ಅದರಂತೆ ಅಗ್ರಹಾರದ ಸಂಸ್ಕೃತಿಯನ್ನು ಕಾಳಾಮುಖ ಶೈವ ಮಠಗಳು ಅಳವಡಿಸಿಕೊಂಡವು. ಪೌರಾಣಿಕ ಮತ್ತು ತಾತ್ವಿಕ ನಿರೂಪಣೆಗಳ ಮೂಲಕ[೨೦೬] ವೈಷ್ಣವ ದೇವಾಲಯ ಪೂಜೆಯನ್ನು ಸುಲಭವಾಗಿ ತಮ್ಮ ಒಂದು ಭಾಗವಾಗಿ ಅಂತರ್ಗತ ಮಾಡಿಕೊಂಡವು. ಈ ರೀತಿ ಅಂತರ್ಗತಗೊಳ್ಳುವುದಕ್ಕೆ ಮೇಲಿನ ಕಾರಣದ ಜೊತೆಗೆ, ಈ ಪ್ರದೇಶದ ಶೈವರು ಸಂಘಟಿತರಾದಂತೆ ಇಲ್ಲಿಯ ವೈಷ್ಣವರು ಸಂಘಟಿತರಾಗಲಿಲ್ಲ ಎಂಬುದು ಗಮನಾರ್ಹ ಅಂಶ. ಹನ್ನೊಂದನೇ ಶತಮಾನದಲ್ಲಿ ಬಳ್ಳಿಗಾವೆಯಲ್ಲಿ ನರಸಿಂಹ ದೇವಾಲಯ ಕಟ್ಟಲಾಗಿತ್ತಾದರೂ ಅವು ಶಿವ ದೇವಾಲಯದಂತೆ ದೊಡ್ಡ ಸಂಸ್ಥೆಯಾಗಿ ಬೆಳೆಯಲಿಲ್ಲ.[೨೦೭]

ಈ ಭಾಗದ ತ್ರೈಪುರುಷ ದೇವಾಲಯಗಳಲ್ಲಿ ಕಂಡುಕೊಳ್ಳುವ ಇನ್ನೊಬ್ಬ ಪುರುಷ ದೇವತೆ ಎಂದರೆ ಸೂರ್ಯ. ಹಾವೇರಿ ಜಿಲ್ಲೆಯನ್ನು ಬಿಟ್ಟು ಬೇರೆಡೆಯ ಕೆಲವು ತ್ರೈಪುರುಷ ದೇವಾಲಯಗಳಲ್ಲಿ ಸೂರ್ಯನ ಬದಲು ಸರಸ್ವತಿ ಇರುವುದನ್ನು ಕಾಣಬಹುದು. ಜ್ಞಾನದೇವತೆಯಾದ ಸರಸ್ವತಿ ಎಂತಲೋ ಅಥವಾ ಮೂರ್ತಿ ಪೂಜೆಗೆ ಬಾಹಿರನಾದ ಬ್ರಹ್ಮನ ಬದಲು ಅವನ ಅರ್ಧಾಂಗಿನಿ ಸರಸ್ವತಿ ಎಂತಲೋ ಅವಳಿಗೆ ಸ್ಥಾನ ಕೊಟ್ಟಿರಬಹುದು.[೨೦೮] ಆದರೆ ಅದು 'ತ್ರೈಪುರುಷ' ಎನಿಸಿಕೊಳ್ಳುವುದಿಲ್ಲ. ಈ ಪ್ರದೇಶದ ಎಲ್ಲ ತ್ರೈಪುರುಷ ದೇವಾಲಯಗಳು ಸೂರ್ಯನನ್ನೇ ಹೊಂದಿರುವುದು ಗಮನಾರ್ಹ.

ಆಕಾಶದಲ್ಲಿ ಪ್ರಜ್ವಲವಾಗಿ ಬೆಳಗುವ ಸೂರ್ಯನು ಹಗಲು ಇರುಳುಗಳ ಸೃಷ್ಟಿಕರ್ತ. ಅವನಿಂದಲೇ ಭೂಮಿಯ ಮೇಲೆ ಜೀವಿ ಬದುಕಬಲ್ಲದು. ಭೂಮಿಗೆ ಪ್ರಕಾಶ ಮತ್ತು ಉಷ್ಣತೆಗಳನ್ನು ಒದಗಿಸುವವನೂ ಅವನೇ ಎಂಬುದು ತಿಳಿದ ವಿಷಯವೇ ಆಗಿದೆ. ಈ ಮೂಲಭೂತ ಸಂಗತಿಗಳು ಪ್ರಾಚೀನರ ಮನಸ್ಸಿನ ಮೇಲೆ ಪರಿಣಾಮ ಬೀರಿರಬೇಕು. ಇಂಥ ಸೂರ್ಯನ ಉಪಕಾರ ಸ್ಮರಣೆಗಾಗಿ ಸೂರ್ಯಾರಾಧನೆ ಹುಟ್ಟಿಕೊಂಡಿತು.[೨೦೯] ಸೂರ್ಯಾರಾಧನೆ ಭಾರತದ ಪ್ರಾಚೀನ ಕಾಲದಲ್ಲಿಯೂ ರೂಢಿಯಲ್ಲಿತ್ತು.[೨೧೦] ಋಗ್ವೇದದಲ್ಲಿ ಸೂರ್ಯನು ಪ್ರಮುಖ ದೇವತೆಯೆಂದು ಪರಿಗಣಿತನಾಗಿದ್ದಾನೆ. ರಾವಣನನ್ನು ಸಂಹರಿಸುವ ಮುನ್ನ ಶ್ರೀರಾಮಚಂದ್ರನು ಆದಿತ್ಯ ಹೃದಯವೆಂಬ ಸೂರ್ಯಸ್ತೋತ್ರವನ್ನು ಜಪಿಸಿದನಂತೆ. ಮಹಾಭಾರತದಲ್ಲಿಯೂ ಆದಿತ್ಯ[೨೧೧] ಸ್ತೋತ್ರಗಳಿವೆ. ಜ್ಯೋತಿರ್ವಿಜ್ಞಾನಿಗಳಾಗಿದ್ದ ಆರ್ಯಭಟ್ಟ, ವರಾಹಮಿಹಿರರು ಸೂರ್ಯಸ್ತುತಿಯನ್ನು ಮಾಡಿರುವರು.[೨೧೨] ಸೌರ ಪುರಾಣವು ಸೌರಮತ ಪರವಾಗಿದೆ.[೨೧೩] ಸಾಂಬ ಪುರಾಣದಲ್ಲಿ ಸೌರಮತದ ಬಗ್ಗೆ

ವಿವರಗಳಿವೆ.[೨೧೪] ಹಿಂದೂ ಧರ್ಮದ ಉಪನಯನ ಮೊದಲಾದ ಸಂಸ್ಕಾರಗಳಲ್ಲಿ ಪ್ರಾಚೀನ ಕಾಲದಿಂದಲೂ ಸೂರ್ಯನಿಗೆ ಮಹತ್ತರ ಸ್ಥಾನವಿದೆ. ಈಗಲೂ ದ್ವಿಜರು ಬಲು ನಿಷ್ಠೆಯಿಂದ ಜಪಿಸುವ ಗಾಯತ್ರಿ ಮಂತ್ರವು ಸವಿತೃ ಸ್ವರೂಪಿ ಸೂರ್ಯಪರವಾದದ್ದು ಅವರು ಸಲ್ಲಿಸುವ ಸಂಧ್ಯಾವಂದನವು ಸೂರ್ಯನಿಗೆ ಸಂಬಂಧಿಸಿದುದಾಗಿದೆ. ನವಗ್ರಹ ಪೂಜೆಯಲ್ಲಿ ಪ್ರಧಾನವಾದವನೂ ಸೂರ್ಯನೇ. ಇವನು ದ್ಯೌಸ ಮತ್ತು ಅದಿತಿಯ ಪುತ್ರ. ಉಷಾ ಅವನ ಪತ್ನಿ.[೨೧೫] ಏಕಚಕ್ರದಲ್ಲಿ ಕುಳಿತಿರುತ್ತಾನೆ. ಇದನ್ನು ಒಂದು ಇಲ್ಲವೆ ಏಳು ಕುದುರೆಗಳು ಎಳೆಯುತ್ತವೆ.[೨೧೬] ಸವಿತೃ, ಪೂಷನ್, ವಿಷ್ಣು, ಮಿತ್ರ, ವರುಣ, ಭರ್ಗ, ಆರ್ಯಮನ್, ಅಂಶ ಇವರು ಸೂರ್ಯನ ರೂಪರಾಗಿದ್ದು, ಸೂರ್ಯನ ಕಾರ್ಯದಲ್ಲಿ ಸಹಾಯಕರಾಗಿದ್ದು ಆದಿತ್ಯರೆಂಬ ಸಾಮಾನ್ಯ ಹೆಸರಿನಲ್ಲಿ ಪ್ರಾರ್ಥಿಸಲ್ಪಟ್ಟಿದ್ದಾರೆ.[೨೧೭]

ಮಧ್ಯಕಾಲೀನ ಜನತೆಯಲ್ಲಿ ಸೂರ್ಯಾರಾಧನೆಯ ಕಲ್ಪನೆ ಹೇಗಿತ್ತು ಎಂಬ ಅಂಶವನ್ನು ನೋಡಿದರೆ ರಾಜರು, ಸಾಮಂತರು ಅಥವಾ ಜನಸಾಮಾನ್ಯರೂ ಸಹ ಪುಣ್ಯಪ್ರಾಪ್ತಿಗಾಗಿ ದೇವಾಲಯಗಳನ್ನು ನಿರ್ಮಿಸಲೆಂದು ಮತ್ತು ದೇವರ ನಂದಾದೀವಿಗೆಗೆ ಖಂಡಸ್ಫುಟಿತಕ್ಕೆ ವಿದ್ಯಾದಾನ, ಅನ್ನದಾನ ಮೊದಲಾದ ಪುಣ್ಯ ಕಾರ್ಯಗಳಿಗೆ ದಾನ ಕೊಡುವಾಗ ಆದಷ್ಟು ಸೂರ್ಯನನ್ನೇ ಆಧರಿಸಿ ನಿರ್ದಿಷ್ಟ ದಿನವನ್ನು ಆಯ್ಕೆ ಮಾಡಿಕೊಳ್ಳುತ್ತಿದ್ದರು. ಭಾನುವಾರವನ್ನು ಬಳಸಿಕೊಳ್ಳುತ್ತಿದ್ದರು.[೨೧೮] ಉತ್ತರಾಯಣ ಸಂಕ್ರಾಂತಿ ಹಾಗೂ ಸೂರ್ಯಗ್ರಹಣವನ್ನು ಲಕ್ಷದಲ್ಲಿ ಇಟ್ಟುಕೊಳ್ಳುತ್ತಿದದ್ದು ಬಹಳಷ್ಟು ಶಾಸನಗಳಿಂದ ತಿಳಿದು ಬರುತ್ತದೆ.[೨೧೯] ಇದು ಜನತೆ ಸೂರ್ಯಾರಾಧನೆಗೆ ಕೊಟ್ಟ ಮಹತ್ವವನ್ನು ತಿಳಿಸುತ್ತದೆ. ಮಾತ್ರವಲ್ಲ ಸೂರ್ಯನಿಗಾಗಿ, ಸೂರ್ಯಲೋಕ ಪ್ರಾಪ್ತಿಗಾಗಿ ಪ್ರಾಣಾರ್ಪಣೆ ಮಾಡುವಷ್ಟರ ಮಟ್ಟಿಗೆ ಸೂರ್ಯ ಆರಾಧ್ಯ ದೈವವಾಗಿದ್ದ.[೨೨೦] ಈ ವಿಷಯಗಳ ಅವಲೋಕನದಿಂದ ಮಧ್ಯಕಾಲೀನ ಯುಗದಲ್ಲಿ ಈ ಪ್ರದೇಶವು ಸೂರ್ಯೋಪಾಸನೆಗೆ ಅತ್ಯಂತ ಮಹತ್ವಕೊಟ್ಟಿತ್ತು ಎಂದು ಸ್ಪಷ್ಟವಾಗುತ್ತದೆ. ಈ ಕಾರಣದಿಂದ ತ್ರೈಪುರುಷರ ದೇವಾಲಯದಲ್ಲಿ ಬ್ರಹ್ಮನ ಸ್ಥಾನದಲ್ಲಿ ಸೂರ್ಯದೇವನನ್ನು ಪ್ರತಿಷ್ಠಾಪಿಸಿದರು ಎಂದು ಮಾತ್ರ ಹೇಳಿದರೆ ತ್ರೈಪುರುಷ ದೇವಾಲಯದಲ್ಲಿ ಸೂರ್ಯನಿಗಿದ್ದ ಮಹತ್ವವನ್ನು ಮೊಟಕುಗೊಳಿಸಿದಂತೆ ಆಗುತ್ತದೆ. ಸರಸ್ವತಿಯನ್ನೋ ಅಥವಾ ಬ್ರಹ್ಮನನ್ನೋ ಪ್ರತಿಷ್ಠಾಪಿಸಬೇಕಿದ್ದ ಸ್ಥಾನವನ್ನು ಕಾಳಾಮುಖ ಗುರುಗಳು ಸೂರ್ಯನಿಗೆ ಮೀಸಲಾಗಿ ಇಟ್ಟಿರುವಲ್ಲಿಯೂ ಒಂದು ವಿಶೇಷತೆ ಇದೆ. ಹೊಂಬಳದ ಶಾಸನದಲ್ಲಿ[೨೨೧] ಬೆಳ್ಳಿಯ ಸಂತಾನದ ಕಾಳಾಮುಖ ಮುನೀಶ್ವರನಾದ ಬೊಂತೆಯ ಮುನಿಯನ್ನು[೨೨೨] ಲಕುಲೀಶ್ವರಾಪರನಾಮಧೇಯ ನೆನಿಸಿದ್ದ ಈ ಮಹಾನುಭಾವನನ್ನು ವರ್ಣಿಸುವಾಗ, ಕಾಳಾಮುಖರಿಗೂ ಸೂರ್ಯನಿಗೂ ಇದ್ದ ಸಂಬಂಧವು ಸ್ಪಷ್ಟವಾಗುತ್ತದೆ. ಶಾಸನವು

> .... "ನುಡಿ ಕರ್ತೃವಾದಮಂ ತೊಡ ।
> ರ್ದಡೆ ದೇವ ಮನುಷ್ಯ ಯಕ್ಷ ರಾಕ್ಷಸರೊಡನಾ ॥
> ದಡ ಮೆಂದನುಗ್ರಹಂ ಗೆ ।
> ಯ್ದಡೆ ದಿನಪಂ ಪಡೆದನಲ್ತೆ ಬೊಂತೆಯಮುನಿಪ .... ॥

ಎಂದು ಉಲ್ಲೇಖಿಸಿದೆ. ದೇವ, ಮನುಷ್ಯ, ಯಕ್ಷ, ರಾಕ್ಷಸರೊಡನೆ ತೊಡರಿದಾಗ 'ಕರ್ತೃವಾದ'ವನ್ನು ನುಡಿಯೆಂದು ಸೂರ್ಯನು ಅನುಗ್ರಹಗೈಯಲು ಬೊಂತೆ ಮುನಿಯು ಅದನ್ನು ಪಡೆದನು.[೨೨೩] ಇದರಿಂದ

ಕಾಳಾಮುಖ ಗುರುವಾದ ಈ ಬೊಂತೆ ಮುನಿಯು ಕರ್ತೃವಾದವನ್ನು ಹೇಳುವವನಾಗಿದ್ದನು.[೨೨೪] ಈ ಮೇಲಿನ ಶಾಸನದಿಂದ ಕಾಳಾಮುಖರಿಗೆ ಕರ್ತೃವಾದವು ಸೂರ್ಯದೇವನಿಂದ ಕೊಡಲ್ಪಟ್ಟಿತು ಎಂದು ಸ್ಪಷ್ಟವಾಗುತ್ತದೆ. ನೈಯಾಯಿಕರಾದ ಕಾಳಾಮುಖರ ಕರ್ತೃವಾದವನ್ನು ದಯಪಾಲಿಸಿದಂತಹ ಸೂರ್ಯ ದೇವನೊಂದಿಗೆ ಕಾಳಾಮುಖರ ನಂಟು ವಿಶೇಷವಾಗಿ ಇದ್ದದ್ದು ಸಹಜ. ಈ ಸಂದರ್ಭದಲ್ಲಿ ಮೂರುಜಾವಿ ದೇವರ ಪ್ರಕರಣವನ್ನು ನೆನೆಯಬಹುದು.[೨೨೫] ಆದುದರಿಂದ ಸೂರ್ಯದೇವನಿಗೆ ತ್ರೈಪುರುಷ ದೇವಾಲಯದ ಪೂರ್ವದಿಕ್ಕಿನ ಗರ್ಭಗೃಹದಲ್ಲಿ ಸ್ಥಾನಕೊಟ್ಟರು ಎಂದು ತಿಳಿಯಬಹುದು.

ಹಾವೇರಿ ಜಿಲ್ಲೆಯಲ್ಲಿ ಎಂಟು ತ್ರೈಪುರುಷ ದೇವಾಲಯಗಳನ್ನು ಗುರುತಿಸಲಾಗಿದೆ. ಅವುಗಳಲ್ಲಿ ನಾಲ್ಕು ದೇವಾಲಯಗಳು ಸುಸ್ಥಿತಿಯಲ್ಲಿವೆ. ಎರಡು ದೇವಾಲಯಗಳು ಹಾಳಾಗಿವೆ. ಒಂದು ಪೂರ್ತಿ ನವೀಕರಣ ಗೊಂಡಿದೆ. ಕರಗುದರಿ ದೇವಾಲಯವು 'ದೇವಾಲಯವೇ ಇಲ್ಲ' ಎನ್ನುವಷ್ಟು ಹಾಳಾಗಿದ್ದು ಅದಕ್ಕೆ ಸಂಬಂಧಪಟ್ಟ ಶಾಸನ ಮಾತ್ರ ಇದೆ.

ವಾಸ್ತುಶಿಲ್ಪದ ದೃಷ್ಟಿಯಿಂದ ಈ ಎಲ್ಲ ದೇವಾಲಯಗಳು ಒಂದೇ ಮಾದರಿಗೆ ಸೇರುತ್ತವೆ. ಪೂರ್ವ, ಪಶ್ಚಿಮ, ಉತ್ತರ ದಿಕ್ಕುಗಳಲ್ಲಿಯ ಗರ್ಭಗೃಹಗಳು ಕ್ರಮವಾಗಿ ಸೂರ್ಯ, ಈಶ್ವರ ಮತ್ತು ವಿಷ್ಣು ಶಿಲ್ಪಗಳನ್ನು ಒಳಗೊಂಡಿರುತ್ತವೆ. ಮೂರೂ ಗರ್ಭಗೃಹಗಳು ಅರ್ಧಮಂಟಪವನ್ನು ಹೊಂದಿವೆ. ಸೂರ್ಯಗೃಹದ ಅರ್ಧಮಂಟಪ ಮಾತ್ರ ತೆರೆದ ಮಾದರಿಯಲ್ಲಿದೆ. ನವರಂಗದ ಪೂರ್ವ ಭಾಗದಲ್ಲಿ ಲಿಂಗಕ್ಕೆ ಎದುರಾಗಿ ನಂದಿ ಶಿಲ್ಪವಿದೆ. ನವರಂಗಕ್ಕೆ ದಕ್ಷಿಣ ದಿಕ್ಕಿನಿಂದ ಪ್ರವೇಶವಿದೆ. ಇವು ಈ ದೇವಾಲಯಗಳ ಮುಖ್ಯ ಲಕ್ಷಣಗಳು (ನಕ್ಷೆ-೪).

| | | | |
|---|---|---|---|
| ೧. | ಉಪ್ಪುಣಸಿ | (ತಾ.ಹಾನಗಲ್ಲು) | ಕ್ರಿ.ಶ.೧೦೨೮ |
| ೨. | ಕುಳೇನೂರು | (ತಾ.ಹಾವೇರಿ) | ಕ್ರಿ.ಶ.೧೦೨೮ |
| ೩. | ಮೇದೂರು | (ತಾ.ಹಿರೇಕೆರೂರು) | ಕ್ರಿ.ಶ.೧೦೪೭ |
| ೪. | ಕಲಕೇರಿ | (ತಾ.ಹಾನಗಲ್ಲು) | ಕ್ರಿ.ಶ.೧೦೭೬ |
| ೫. | ಅಬ್ಬಲೂರು | (ತಾ.ಹಿರೇಕೆರೂರು) | ಕ್ರಿ.ಶ.೧೧೦೧ |
| ೬. | ನಾಗವಂದ | (ತಾ. ಹಿರೇಕೆರೂರು) | ಕ್ರಿ.ಶ.೧೧೨೮ |
| ೭. | ಪುರದಗೇರಿ | (ತಾ. ಹಿರೇಕೆರೂರು) | ಕ್ರಿ.ಶ.ಸು.೧೨ನೇ ಶತಮಾನ |
| ೮. | ಕರಗುದರಿ | (ತಾ. ಹಾನಗಲ್ಲು) | ಕ್ರಿ.ಶ.೧೧೦೮ |

ಊರು : ಉಪ್ಪುಣಸಿ (ತಾ. ಹಾನಗಲ್ಲು)
ಸ್ಥಳ : ಗ್ರಾಮದಿಂದ ಉತ್ತರಕ್ಕೆ
ಹೆಸರು : ಕಲ್ಮೇಶ್ವರ
ಅಭಿಮುಖ : ದಕ್ಷಿಣ




ನಕ್ಷೆ ೪

## ತ್ರೈಪುರುಷ ದೇವಾಲಯಗಳಿರುವ ಸ್ಥಳಗಳು

ಶಿಗ್ಗಾಂವ
ಸವಣೂರು
೩
ಹಾನಗಲ್ಲ
ಧರ್ಮಾ ನದಿ
ಹಾವೇರಿ
೫
೨
ವರದಾ ನದಿ
೪
ಬ್ಯಾಡಗಿ
ರಾಣೆಬೆನ್ನೂರು
೧
ಹಿರೇಕೆರೂರು
ಕುಮುದ್ವತಿ ನದಿ
ತುಂಗಭದ್ರಾ ನದಿ
೭
೮
೬

ತಾಲೂಕು ಸ್ಥಳ
ದೇವಾಲಯ
ಜಿಲ್ಲಾ ಗಡಿರೇಖೆ
ತಾಲೂಕು ಗಡಿರೇಖೆ
ನದಿ

೧. ಅಬ್ಬಲೂರು
೨. ಉಪ್ಪುಣಸಿ
೩. ಕರಗುದರಿ
೪. ಕಲಕೇರಿ
೫. ಕುಳೇನೂರು
೬. ನಾಗವಂದ
೭. ಪುರದಗೇರಿ
೮. ಮೆದೂರು

೨೦ ೧೦ ೦ ೧೦ ೨೦ ಕಿ.ಮೀ.

ನಿವೇದನೆ : ಲಿಂಗ, ಸೂರ್ಯ

ಕಾಲ : ಕ್ರಿ.ಶ.೧೦೨೮

ಶೈಲಿ : ಕಲ್ಯಾಣ ಚಾಲುಕ್ಯ

ಬಳಸಿದ ವಸ್ತು : ನೀಲಿ ಛಾಯೆಯ ಕಪ್ಪು ಕಲ್ಲು

## ದೇವಾಲಯ ವಾಸ್ತುಶಿಲ್ಪ

**ತಳವಿನ್ಯಾಸ :** (ತಳವಿನ್ಯಾಸ ರೇಖಾಚಿತ್ರ-೮) ಮೂರು ಗರ್ಭಗೃಹಗಳು, ಮೂರು ತೆರೆದ ಅರ್ಧಮಂಟಪಗಳು, ನವರಂಗ, ದಕ್ಷಿಣ ದಿಕ್ಕಿಗೆ ಪ್ರವೇಶ.

**ಊರ್ಧ್ವಮುಖ ರಚನೆ :** ಹಾನಗಲ್ಲಿನಿಂದ ಆಗ್ನೇಯಕ್ಕೆ ಸು. ೩೫ ಕಿ.ಮೀ. ದೂರದಲ್ಲಿರುವ ಈ ದೇವಾಲಯವು ಕಲ್ಯಾಣ ಚಾಲುಕ್ಯ ಶೈಲಿಗೆ ಸೇರಿದುದಾಗಿದೆ. ದೇವಾಲಯದ ಅಧಿಷ್ಠಾನವು ಮಣ್ಣಲ್ಲಿ ಮುಚ್ಚಿದೆ. ದೇವಾಲಯ ಭಿತ್ತಿಯು ದುರಸ್ತಿಗೊಂಡಿದೆ. ಮೂರು ಗರ್ಭಗೃಹಗಳ ಮೇಲ್ಕಟ್ಟಡವಾಗಿ ಇತ್ತೀಚೆಗೆ ದುರಸ್ತಿಗೊಂಡ ಕದಂಬನಾಗರ ಶೈಲಿಯ ಶಿಖರವನ್ನು ಕಾಣಬಹುದಾಗಿದೆ(ಛಾಯಾಚಿತ್ರ-೨೧).

**ತಿರ್ಯಙ್ಮುಖ ರಚನೆಗಳು :** ಮುಖ್ಯ ಗರ್ಭಗೃಹವು ಪೂರ್ವಾಭಿಮುಖವಾಗಿದ್ದು ೮x೮ ಅಡಿ ವಿಸ್ತೀರ್ಣದಲ್ಲಿದೆ. ನಾಲ್ಕು ಮೂಲೆ ಕಂಬಗಳಿಂದ ರಚನೆಗೊಂಡ ಭಿತ್ತಿಯನ್ನು ದುರಸ್ತಿಗೊಳಿಸಲಾಗಿದೆ. ಛತ್ತಿನಲ್ಲಿ ಸಮತಲದಲ್ಲಿ ಕಮಲದ ಅಲಂಕರಣವಿದೆ. ಗರ್ಭಗೃಹದಲ್ಲಿ ಲಿಂಗವಿದೆ. ಬಾಗಿಲುವಾಡವು ಅಲಂಕಾರ ರಹಿತವಾದ ಹೊಸ್ತಿಲ ಮೇಲೆ ತ್ರಿಶಾಖೆಗಳಿಂದ ರಚನೆಗೊಂಡಿದೆ. ಶಾಖೆಗಳು ಕ್ರಮವಾಗಿ ವಜ್ರಾಕೃತಿ, ಹಗ್ಗದಂತೆ ಹೊಸೆದ ಮುತ್ತಿನ ಸರಗಳು ಮತ್ತು ಕಮಲದಳಗಳ ಅಲಂಕರಣಗಳಿಂದ ಕೂಡಿದೆ. ಶಾಖೆಗಳ ಕೆಳಫಲಕದಲ್ಲಿ ಕುಂಭಗಳ ಅಲಂಕರಣವಿದೆ. ಲಲಾಟಫಲಕದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ. ಗರ್ಭಗೃಹದ ಮುಂದೆ ಪೂರ್ವ-ಪಶ್ಚಿಮ, ಉತ್ತರ-ದಕ್ಷಿಣವಾಗಿ ೬x೮ ಅಡಿ ವಿಸ್ತೀರ್ಣದ ತೆರೆದ ಅರ್ಧಮಂಟಪದ ರಚನೆ ಇದೆ. ಪೂರ್ವದಿಕ್ಕಿನ ಗರ್ಭಗೃಹವು ವಿಸ್ತೀರ್ಣದಲ್ಲಿ ೮x೮ ಅಡಿ ವಿಸ್ತೀರ್ಣದಲ್ಲಿದೆ. ಭಿತ್ತಿಯು ದುರಸ್ತಿಗೊಂಡಿದೆ. ಈ ಗೃಹದಲ್ಲಿ ನಾಲ್ಕು ಅಡಿ ಎತ್ತರದ ಸೂರ್ಯ ಶಿಲ್ಪವಿದೆ. ಇಲ್ಲಿಯ ದ್ವಾರಬಂಧವು ತೆಳುವಾದ ಹೊಸ್ತಿಲ ಮೇಲೆ, ತ್ರಿಶಾಖೆಗಳಿಂದ ಕೂಡಿವೆ. ಶಾಖೆಗಳು ಕ್ರಮವಾಗಿ ವಜ್ರಾಕೃತಿ ಹಗ್ಗದಂತೆ ಹೊಸೆದ ಮುತ್ತಿನಸರಗಳು ಮತ್ತು ಕಮಲದಳಗಳ ಅಲಂಕರಣಗಳಿಂದ ಕೂಡಿವೆ. ಪಾದಫಲಕದಲ್ಲಿ ಕುಂಭಗಳ ಉಬ್ಬು ಶಿಲ್ಪಗಳಿವೆ. ಲಲಾಟಫಲಕದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಈ ಗರ್ಭಗೃಹವು ಕೂಡ ೬x೮ ಅಡಿ ವಿಸ್ತೀರ್ಣವನ್ನು ಹೊಂದಿದ ತೆರೆದ ಅರ್ಧಮಂಟಪವನ್ನು ಹೊಂದಿದೆ.

ಪ್ರವೇಶಕ್ಕೆ ಎದುರಾಗಿದ್ದ ಉತ್ತರ ಗರ್ಭಗೃಹವು ಕೂಡ ೮x೮ ಅಡಿ ವಿಸ್ತೀರ್ಣವನ್ನು ಹೊಂದಿದೆ. ಭಿತ್ತಿಯು ದುರಸ್ತಿಗೊಂಡಿದೆ. ಛತ್ತಿನಲ್ಲಿ ಸಮತಲದಲ್ಲಿ ಕಮಲದ ಅಲಂಕರಣವಿದೆ. ಬಾಗಿಲುವಾಡವು ತ್ರಿಶಾಖೆಗಳಿಂದ ಕೂಡಿದ್ದು ಕ್ರಮವಾಗಿ ವಜ್ರಾಕೃತಿ, ಲತಾ ಸುರುಳಿಯಲ್ಲಿ ವಾದ್ಯವೃಂದದ ಉಬ್ಬುಶಿಲ್ಪಗಳನ್ನು ಹೊಂದಿದಂತೆ ಅಲಂಕೃತಗೊಂಡಿವೆ. ಕೊನೆಯ ಶಾಖೆಯು ಸುಣ್ಣದಿಂದ ಮುಚ್ಚಲ್ಪಟ್ಟಿದೆ. ಪಾದಫಲಕದಲ್ಲಿ ತ್ರಿಶೂಲ-ಡಮರು







ತಳವಿನ್ಯಾಸ ರೇಖಾಚಿತ್ರ-೮, ಕಲ್ಮೇಶ್ವರ ದೇವಾಲಯ, ಉಪ್ಪುಣಸಿ (ತಾ.ಹಾನಗಲ್ಲ)

೧. ಗರ್ಭಗೃಹ, ೨. ಅರ್ಧಮಂಟಪ, ೩. ನವರಂಗ




ರೇಖಾಚಿತ್ರ-೧೦, ಕಲ್ಮೇಶ್ವರ ದೇವಾಲಯದ ನವರಂಗದಲ್ಲಿರುವ ಕಂಬ, ಉಪ್ಪುಣಸಿ (ತಾ.ಹಾನಗಲ್ಲ)
೧. ಪೀಠ, ೨. ಪಾದ, ೩. ದಂಡ, ೪. ಘಟ, ೫. ಫಲಕ, ೬. ಬೋದಿಗೆ

ಹಿಡಿದ ದ್ವಾರಪಾಲಕರ ಶಿಲ್ಪಗಳು ತ್ರಿಭಂಗಿಯಲ್ಲಿವೆ(ಛಾಯಾಚಿತ್ರ-೨೨). ಲಲಾಟಫಲಕದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಈ ಗೃಹವು ಕೂಡ ೮x೬ ಅಡಿ ವಿಸ್ತೀರ್ಣದ ತೆರೆದ ಅರ್ಧಮಂಟಪವನ್ನು ಹೊಂದಿದೆ.

ಮೂರು ಅರ್ಧಮಂಟಪಗಳನ್ನು ಒಂದೆಡೆ ಸೇರಿಸುವ ನವರಂಗವು ಪೂರ್ವ-ಪಶ್ಚಿಮ, ಉತ್ತರ-ದಕ್ಷಿಣವಾಗಿ ೨೨x೨೪ ಅಡಿ ವಿಸ್ತಾರವಾಗಿದೆ. ಮಧ್ಯದಲ್ಲಿ ಚೌಕಾಕಾರದ ವೇದಿಕೆ ಇದೆ. ವೇದಿಕೆಯ ತುದಿಯಲ್ಲಿದ್ದ ನಾಲ್ಕು ಕಂಬಗಳು ಕಲಾತ್ಮಕವಾಗಿದೆ. ಚೌಕಾಕಾರದ ಪೀಠದ ಮೇಲೆ ಪಾದ ಭಾಗವು ಚೌಕಾಕಾರವಾಗಿದೆ. ದಂಡಭಾಗದ ರಚನೆಗಳು ವೃತ್ತಾಕಾರದಲ್ಲಿವೆ. ಕಮಲದಳಗಳು, ಕೀರ್ತಿಮುಖ, ಮಣಿಹಾರಗಳು ವಜ್ರಾಕೃತಿಗಳು ಮತ್ತು ಬಿಡಿ ಶಿಲ್ಪಗಳನ್ನು ಕಂಡರಿಸಲಾಗಿದೆ(ರೇಖಾಚಿತ್ರ-೧೦). ತ್ರಿಕೋನ ಮಾದರಿಯ ಬೋದಿಗೆಗಳು ಒಂದು ಅಡಿ ದಪ್ಪ ಮತ್ತು ೧ ೧/೨ ಅಡಿ ಅಗಲದ ತೊಲೆಗಳನ್ನು ಹೊತ್ತಿವೆ. ನವರಂಗದ ಭಿತ್ತಿಯಲ್ಲಿ ಉತ್ತರ ದಿಕ್ಕಿನ ಅರ್ಧಮಂಟಪದ ಇಕ್ಕೆಲಗಳಲ್ಲಿ ಸಣ್ಣ ಗರ್ಭಗೃಹಗಳ ರಚನೆಗಳಿವೆ. ಅವು ನಂತರದಲ್ಲಿ ಜೋಡಣೆಗೊಂಡಿರಬೇಕು. ಈ ಗೃಹಗಳು ಲಲಾಟದಲ್ಲಿ ಗಜಲಕ್ಷ್ಮಿಯನ್ನು ಪಾದಫಲಕಗಳಲ್ಲಿ ಕುಂಭಗಳ ಉಬ್ಬುಶಿಲ್ಪಗಳನ್ನು ಹೊಂದಿವೆ. ದಕ್ಷಿಣ ಭಾಗದ ಸಣ್ಣ ಗೃಹವು ಹರಿಹರ ಶಿಲ್ಪವನ್ನು ಉತ್ತರ ಭಾಗದ ಸಣ್ಣಗೃಹವು ಉಮಾಮಹೇಶ್ವರ ಶಿಲ್ಪಗಳನ್ನು ಹೊಂದಿವೆ. ಪಶ್ಚಿಮ ದಿಕ್ಕಿನ ಶಿವಲಿಂಗಕ್ಕೆ ಎದುರಾಗಿ ನಂದಿ ಶಿಲ್ಪವಿದೆ. ನವರಂಗದ ದ್ವಾರಬಂಧವು ನಾಲ್ಕು ಶಾಖೆಗಳಿಂದ ಕೂಡಿದ್ದು, ಕ್ರಮವಾಗಿ ವಜ್ರಾಕೃತಿ, ಲತಾಸುರುಳಿಯಲ್ಲಿ ವಾದ್ಯವೃಂದ, ಕೀರ್ತಿಮುಖವನ್ನು ಹೊಂದಿದ ಸ್ತಂಭ ಮತ್ತು ಹೊಸೆದ ಹಗ್ಗದ ಸುರುಳಿ ಅಲಂಕರಣಗಳಿಂದ ಕೂಡಿದೆ. ಪಾದಫಲಕದಲ್ಲಿ ಪೂರ್ಣ ಕುಂಭಗಳ ಉಬ್ಬುಶಿಲ್ಪಗಳಿವೆ. ಲಲಾಟಫಲಕದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ದೇವಾಲಯವು ಬಹಳಷ್ಟು ಮಾರ್ಪಾಡುಗಳಿಗೆ ಒಳಗಾಗಿದೆ.

**ಶಾಸನಗಳಿಂದ ಹೆಚ್ಚಿನ ವಿವರ :** ಶಾಸನಗಳು ಈ ಊರನ್ನು ಪುಣಸೆ[೨೨೬] ಒಪ್ಪುಣಸೆ[೨೨೭] ಎಂದು ಕರೆದಿವೆ. ಕ್ರಮೇಣ ಇದು ಒಪ್ಪುಣಸೆ, ಒಪ್ಪುಣಿಸೆ, ಉಪ್ಪುಣಸಿಯಾಗಿ ರೂಪಾಂತರಗೊಂಡಿರುವಂತೆ ತೋರುತ್ತದೆ. ಕ್ರಿ.ಶ.೧೦೨೮ರ ಕಲ್ಯಾಣ ಚಾಲುಕ್ಯ ಎರಡನೇ ಜಯಸಿಂಹನ ಇಲ್ಲಿನ ಶಾಸನವು[೨೨೮] ಕುಂದರಾಜನ ಮಹಾದೇವಿ ಕುಂದಬ್ಬರಸಿಯಿಂದ ಕಲ್ಲೇಶ್ವರ ದೇವಾಲಯದ ಮಠಕ್ಕೆ ದಾನಕೊಟ್ಟಿರುವ ವಿಷಯವನ್ನು ಉಲ್ಲೇಖಿಸುತ್ತದೆ. ಈ ಆಧಾರದಿಂದ ಕ್ರಿ.ಶ.೧೦೨೮ರಲ್ಲಿ ಉಪ್ಪುಣಸಿ ಕಲ್ಲೇಶ್ವರ ದೇವಾಲಯವು ಮಠವನ್ನು ಹೊಂದಿತ್ತು ಎಂದು ಹೇಳಬಹುದು.

| | | |
|---|---|---|
| ಊರು | : | ಕುಳೇನೂರು (ತಾ.ಹಾವೇರಿ) |
| ಸ್ಥಳ | : | ಗ್ರಾಮದ ಪ್ರವೇಶ |
| ಹೆಸರು | : | ಕಲ್ಮೇಶ್ವರ |
| ಅಭಿಮುಖ | : | ದಕ್ಷಿಣ |
| ನಿವೇದನೆ | : | ಲಿಂಗ, ವಿಷ್ಣು |
| ಕಾಲ | : | ಕ್ರಿ.ಶ.೧೦೨೮ |
| ಶೈಲಿ | : | ಕಲ್ಯಾಣ ಚಾಲುಕ್ಯ |
| ಬಳಸಿದ ವಸ್ತು | : | ನೀಲಿ ಛಾಯೆಯ ಕಪ್ಪು ಕಲ್ಲು |

## ದೇವಾಲಯ ವಾಸ್ತುಶಿಲ್ಪ

**ತಳವಿನ್ಯಾಸ :** (ತಳವಿನ್ಯಾಸ ರೇಖಾಚಿತ್ರ-೯) ಎರಡು ಗರ್ಭಗೃಹಗಳು, ಒಂದು ಅರ್ಧಮಂಟಪ, ನವರಂಗ

**ಊರ್ಧ್ವಮುಖ ರಚನೆ :** ಹಾವೇರಿಯಿಂದ ೧೪ ಕಿ.ಮೀ ದೂರದಲ್ಲಿರುವ ಈ ದೇವಾಲಯವು ಕಲ್ಯಾಣ ಚಾಲುಕ್ಯ ಶೈಲಿಗೆ ಸೇರಿದುದಾಗಿದೆ. ದೇವಾಲಯದ ಅಧಿಷ್ಠಾನವು ಮಣ್ಣಲ್ಲಿ ಹೂತಿದೆ. ಭಿತ್ತಿ ಭಾಗವು ಇತ್ತೀಚೆಗೆ ದುರಸ್ತಿಗೊಂಡಿದೆ. ಶಿಖರ ಭಾಗಗಳು ಹಾಳಾಗಿವೆ.

**ತಿರ್ಯಙ್ಮುಖ ರಚನೆಗಳು :** ಮುಖ್ಯ ಗರ್ಭಗೃಹವು ಪೂರ್ವಾಭಿಮುಖವಾಗಿದೆ. ಇದರ ವಿಸ್ತೀರ್ಣವು ೮x೮ ಅಡಿ ಇದ್ದು, ಭಿತ್ತಿನಲ್ಲಿ ಸಮತಲದಲ್ಲಿ ಕಮಲದ ಅಲಂಕರಣವಿದೆ. ಬಾಗಿಲುವಾಡವು ತ್ರಿಶಾಖೆಗಳಿಂದ ಕೂಡಿದೆ. ಲಲಾಟದ ಫಲಕದಲ್ಲಿ ಯಾವ ಶಿಲ್ಪವೂ ಇಲ್ಲ. ಗರ್ಭಗೃಹದಲ್ಲಿ ಲಿಂಗವಿದೆ. ಇದರ ಮುಂದಿನ ರಚನೆಯಾಗಿ ೮x೯ ಅಡಿ ವಿಸ್ತೀರ್ಣದಲ್ಲಿ ತೆರೆದ ಅರ್ಧಮಂಟಪ ಇದೆ. ದುರಸ್ತಿಯ ಸಂದರ್ಭದಲ್ಲಿ ಉತ್ತರದಿಕ್ಕಿನ ಗರ್ಭಗೃಹವನ್ನು ಕೈಬಿಡಲಾಗಿದೆ.

ನವರಂಗವು ಪೂರ್ವ-ಪಶ್ಚಿಮ, ಉತ್ತರ-ದಕ್ಷಿಣವಾಗಿ ೨೪x೨೨ ಅಡಿ ವಿಸ್ತೀರ್ಣದಲ್ಲಿದೆ. ಇತ್ತೀಚೆಗೆ ನವರಂಗದ ನೆಲವನ್ನು ದುರಸ್ತಿ ಮಾಡಲಾಗಿದೆ. ಮಧ್ಯದ ನಾಲ್ಕು ಕಂಬಗಳು, ಒಂದು ಅಡಿ ಎತ್ತರದ ಪೀಠದ ಮೇಲೆ ಪ್ರಧಾನವಾಗಿ ಎರಡು ಚೌಕಾಕಾರದ ಭಾಗಗಳನ್ನು ಹೊಂದಿವೆ. ಎರಡು ಚೌಕಗಳ ಮಧ್ಯದಲ್ಲಿ ಕ್ರಮವಾಗಿ ಅಷ್ಟಮುಖದಲ್ಲಿ ಊರ್ಧ್ವಮುಖ ಕಮಲದಳಗಳು, ಹದಿನಾರು ಮುಖಗಳ ನಿಮ್ನ ರಚನೆ, ಹದಿನಾರು ಮುಖಗಳ ಪಟ್ಟಿಕೆ, ಹದಿನಾರು ಮುಖಗಳ ನಿಮ್ನ ರಚನೆ ಅದರ ಮೇಲೆ ಅಷ್ಟಮುಖ ರಚನೆಯಲ್ಲಿ ಅಧೋಮುಖ ಕಮಲದಳಗಳು ಹೀಗೆ ಕ್ರಮವಾದ ಅಲಂಕರಣವಿದೆ. ದಂಡಾಗ್ರದಲ್ಲಿ ಕಳಸ, ತಾಟಿಕಾ, ಘಟ, ಮಂಡಿ, ಫಲಕ ಭಾಗಗಳನ್ನು ಹೊಂದಿದೆ. ತ್ರಿಕೋಣ ಮಾದರಿಯಲ್ಲಿ ನಾಲ್ಕು ಮುಖ ಬೋದಿಗೆ ಇದೆ. ಭಿತ್ತಿನಲ್ಲಿ ಸಮತಲದಲ್ಲಿ ಕಮಲದ ಅಲಂಕರಣವಿದೆ. ನವರಂಗ ಭಿತ್ತಿಯು ದುರಸ್ತಿಗೊಳಗಾಗಿದೆ. ಸಪ್ತಮಾತೃಕಾ ಫಲಕ, ಉಮಾಮಹೇಶ್ವರ, ರತಿಮನ್ಮಥ, ನಾಗಶಿಲ್ಪಗಳನ್ನು ಭಿತ್ತಿಯಲ್ಲಿಟ್ಟು ಕಟ್ಟಲಾಗಿದೆ. ನವರಂಗದ ದ್ವಾರಬಂಧವು ಆಕರ್ಷಕವಾಗಿದೆ. ಕಲಾತ್ಮಕವಾದ ಮುಂಚಾಚುಗಳನ್ನು ಹೊಂದಿದ ಹೊಸ್ತಿಲ ಮೇಲೆ ಪಂಚಶಾಖೆಗಳಿಂದ ಕೂಡಿದೆ. ಶಾಖೆಗಳು ಕ್ರಮವಾಗಿ ವಜ್ರಪಟ್ಟಿ, ವಲ್ಲಿಬಂಧದಲ್ಲಿ ವಾದ್ಯವೃಂದ, ಕಬ್ಬಿನ ಜಲ್ಲೆ ಮಾದರಿಯ ಸ್ತಂಭ, ಹಗ್ಗದ ಸುರುಳಿಯಲ್ಲಿ ಮುತ್ತಿನ ಸರ ಮಧ್ಯದಲ್ಲಿ ಮನುಷ್ಯಾಕೃತಿಯ ಉಬ್ಬುಶಿಲ್ಪಗಳು, ಕಮಲದಳಗಳ ಅಲಂಕರಣವನ್ನು ಹೊಂದಿವೆ. ಶಾಖೆಯ ಕೆಳಗೆ ಯಾವ ಶಿಲ್ಪಗಳು ಇಲ್ಲ. ಮೊದಲ ಎರಡು ಶಾಖೆಗಳು ಲಲಾಟದಲ್ಲಿಯೂ ಮುಂದುವರೆದು ಗಜಲಕ್ಷ್ಮಿಯ ಫಲಕದಲ್ಲಿ ಸಂಧಿಸಿವೆ. ಸ್ತಂಭ ಶಾಖೆಗಳು ದಂಡಾಗ್ರ, ಬೋದಿಗೆ ಭಾಗಗಳಿಂದ ಕೂಡಿದ್ದು, ಉತ್ತರಾಂಗಕ್ಕೆ ಆಸರೆಯಾಗಿವೆ. ಉತ್ತರಾಂಗದಲ್ಲಿ ಮೂರು ಅಲ್ಪವಿಮಾನ ರಚನೆಗಳಿವೆ. ಅವುಗಳಲ್ಲಿ ಕ್ರಮವಾಗಿ ಗಣಪತಿ, ಲಿಂಗ, ಲಕ್ಷ್ಮಿಯರ ಉಬ್ಬುಶಿಲ್ಪಗಳಿವೆ. ಎರಡು ಮಂಟಪಗಳ ಮಧ್ಯದ ಸ್ಥಳದಲ್ಲಿ ಸಮಭಂಗಿಯಲ್ಲಿ ನಿಂತ ಹೆಣ್ಣು ಶಿಲ್ಪಗಳಿವೆ(ಛಾಯಾಚಿತ್ರ-೨೭).

ದೇವಾಲಯದ ಆವರಣದಲ್ಲಿ ಭಗ್ನಗೊಂಡ ವಿಷ್ಣುಶಿಲ್ಪವು ಗರುಡಪೀಠದಲ್ಲಿದೆ. ಬಹುಶಃ ಈ ಶಿಲ್ಪವು ಉತ್ತರ ದಿಕ್ಕಿನ ಗರ್ಭಗೃಹದ ಶಿಲ್ಪವಾಗಿರಬಹುದು(ಛಾಯಾಚಿತ್ರ-೨೪).




ತಳವಿನ್ಯಾಸ ರೇಖಾಚಿತ್ರ-೯, ಕಲ್ಮೇಶ್ವರ ದೇವಾಲಯ, ಕುಳೇನೂರು (ತಾ.ಹಾವೇರಿ)
೧. ಗರ್ಭಗೃಹ, ೨. ಅರ್ಧಮಂಟಪ, ೩. ನವರಂಗ

## ಪಟ್ಟಿ-೮

| ಅ. ನಂ. | ಊರು | ದೇವಾಲಯ ಹೆಸರು | ದಾನ ನೀಡಿದವರು | ದಾನ ಸ್ವೀಕರಿಸಿದವರು | ದಾನ ವಿವರ | ಕ್ರಿ.ಶ. | ದಾನದ ವಿನಿಯೋಗ | ದಾನ ನೀಡಿದ ಸಂದರ್ಭ (ಶಾಸನದಲ್ಲಿ ಉಲ್ಲೇಖಿಸಿದಂತೆ) | ಉಲ್ಲೇಖ |
|---|---|---|---|---|---|---|---|---|---|
| ೧. | ಕುಳೇನೂರು ತಾ. ಹಾವೇರಿ | ಕಲ್ಮೇಶ್ವರ | ಕುಂದರಾಜನ ಕುಲವಧು ಕುಂದಬ್ಬರಸಿ | ಸಂಕರಾಶಿಜೀಯ | ಗದ್ದೆ, ಎರೆಭೂಮಿ, ಹನ್ನೆರಡು ಮನೆಗಳು | ೧೦೨೮ | ದೇವರಿಗೆ ಮಠಕ್ಕೆ, ವಿದ್ಯಾ ದಾನಕ್ಕೆ, ಪರೆಕಾರರಿಗೆ | ವಿಭವ ಸಂವತ್ಸರದ ಪುಷ್ಯ ಶುದ್ಧ ಪಂಚಮಿ ಸೋಮ ವಾರ ಉತ್ತರಾಯಣ ಸಂಕ್ರಾಂತಿ | ಎ.ಇಂ.ಸಂ. XV ಪು.೩೩೨ |

**ಶಾಸನಗಳಿಂದ ಹೆಚ್ಚಿನ ವಿವರ :** ಕುಳೇನೂರನ್ನು ಇಲ್ಲಿಯ ಶಾಸನಗಳು 'ಕುಳುವನೂರು' ಎಂದು ಉಲ್ಲೇಖಿಸಿವೆ. ಕುಳವನೂರು ಬಾಸವೂರ-೧೪೦ ಕ್ಕೆ ಸೇರಿತ್ತೆಂದು ಕ್ರಿ.ಶ. ೧೦೨೮ರ ಶಾಸನ ಉಲ್ಲೇಖಿಸುತ್ತದೆ.[೨೯] ಕಲ್ಯಾಣ ಚಾಲುಕ್ಯ ಎರಡನೇ ಜಯಸಿಂಹನ ಕಾಲಕ್ಕೆ ಸೇರಿದ ಈ ಶಾಸನವು ಇಲ್ಲಿ ಮಠ ಇದ್ದುದಾಗಿ ಸೂಚಿಸುತ್ತದೆ. ಇರಿವಬೆಡಂಗದೇವನ ಮಗ ಕುಂದರಾಜ ಮತ್ತು ಅವನ ಹೆಂಡತಿ ಕುಂಡಲದೇವಿ ಬನವಾಸಿ-೧೨೦೦೦ ಆಳುವಾಗ, ಕುಂಡಲದೇವಿ ಧರ್ಮಚಿತ್ತಗೈದು ಭೂದಾನ ಮಾಡಿರುವಳು. ಅದರೊಳಗೆ ದೇವರಿಗೆ ಮತ್ತು ಮಠಕ್ಕೆ ವಿದ್ಯಾದಾನಕ್ಕೆಂದು ತಲಾ ಮೂವತ್ತು ಕಮ್ಮ ಗದ್ದೆ, ೨೫ ಕಮ್ಮ ಎರೆ ಮತ್ತು ಪರೆಕಾರ್‌ಗೆ ಇಪ್ಪತ್ತುಕಮ್ಮ ಗದ್ದೆ, ಇಪ್ಪತ್ತೈದು ಕಮ್ಮ ಎರೆ ಎಂದು ದಾನವನ್ನು ಹಂಚಲಾಗಿದೆ. ಇಲ್ಲಿಯ ಮಠವು ನೈಷ್ಠಿಕ ಸ್ಥಾನವಾಗಿತ್ತೆಂದು ತಿಳಿದು ಬರುತ್ತದೆ. 'ಮಠದೊಳ್ ಮುಖ್ಯರಾಗಿರಪ್ಪ ತಪಸ್ವಿಗೆ ಗುಣಸಾನಂ ಬ್ರಹ್ಮಚರ್ಯಂಗೆಟ್ಟ ತಪಸ್ವಿಯರ್ ಇರಲ್‌ಆಗದು' ಎಂದು ಶಾಸನ ಉಲ್ಲೇಖಿಸಿದೆ.

| | | |
|---|---|---|
| ಊರು | : | ಮೇದೂರು (ತಾ.ಹಿರೇಕೆರೂರು) |
| ಸ್ಥಳ | : | ಊರ ಬಸವಣ್ಣ ದೇವರ ಪ್ರಾಂಗಣದಲ್ಲಿ |
| ಹೆಸರು | : | ಸಣ್ಣ ಬಸವೇಶ್ವರ (ಮಾಕಾಳೇಶ್ವರ) |
| ಅಭಿಮುಖ | : | ದಕ್ಷಿಣ |
| ನಿವೇದನೆ | : | ಲಿಂಗ, ಸೂರ್ಯ, ವಿಷ್ಣು |
| ಕಾಲ | : | ಕ್ರಿ.ಶ.೧೦೪೭ |
| ಶೈಲಿ | : | ರಾಷ್ಟ್ರಕೂಟ |
| ಬಳಸಿದ ವಸ್ತು | : | ನೀಲಿ ಛಾಯೆಯ ಕಪ್ಪು ಕಲ್ಲು |

## ದೇವಾಲಯ ವಾಸ್ತುಶಿಲ್ಪ

**ತಳವಿನ್ಯಾಸ :** (ತಳವಿನ್ಯಾಸ ರೇಖಾಚಿತ್ರ-೧೦) ಎರಡು ಗರ್ಭಗೃಹಗಳು, ಒಂದು ಅರ್ಧಮಂಟಪ, ನವರಂಗ, ದಕ್ಷಿಣಕ್ಕೆ ದ್ವಾರ.

**ಊರ್ಧ್ವಮುಖ ರಚನೆ :** ಹಿರೇಕೆರೂರಿನಿಂದ ೧೭ ಕಿ.ಮೀ. ದೂರದಲ್ಲಿರುವ ಈ ದೇವಾಲಯವು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣಗೊಂಡಿದ್ದರೂ ರಾಷ್ಟ್ರಕೂಟ ಶೈಲಿಯನ್ನು ಅಳವಡಿಸಿಕೊಂಡಿದೆ. ದೇವಾಲಯದ ಅಧಿಷ್ಠಾನವು ಮಣ್ಣಲ್ಲಿ ಮುಚ್ಚಿದೆ. ಭಿತ್ತಿಯು ದುರಸ್ತಿಗೊಂಡಿದೆ. ಶಿಖರ ಭಾಗಗಳು ಕಂಡುಬರುವುದಿಲ್ಲ.

**ತಿರ್ಯಙ್ಮುಖ ರಚನೆಗಳು :** ದೇವಾಲಯದ ಪ್ರವೇಶವು ದಕ್ಷಿಣ ದಿಕ್ಕಿನಲ್ಲಿದ್ದರೂ ಮುಖ್ಯ ಗರ್ಭಗೃಹವು ಪೂರ್ವಾಭಿಮುಖವಾಗಿದೆ. ಇದು ೮x೮ ಅಡಿ ವಿಸ್ತೀರ್ಣದಲ್ಲಿ ಇದೆ. ಈ ಗರ್ಭಗೃಹದ ಭಿತ್ತಿಯನ್ನು ನಿರ್ಮಿಸುವಲ್ಲಿ ಹತ್ತು ಗೋಡೆ ಕಂಬಗಳನ್ನು ಬಳಸಲಾಗಿದೆ. ನಾಲ್ಕು ಮೂಲೆ ಕಂಬಗಳಾದರೆ ಉಳಿದ ಆರು ಕಂಬಗಳನ್ನು ಭಿತ್ತಿಯ ಮಧ್ಯದಲ್ಲಿ ನಿಲ್ಲಿಸಲಾಗಿದೆ. ಛತ್ತಿನಲ್ಲಿ ಸಮತಲದಲ್ಲಿ ಕಮಲದ ಅಲಂಕರಣವಿದೆ. ಗರ್ಭಗೃಹದಲ್ಲಿ ಮೂರು ಅಡಿ ಎತ್ತರದ ಲಿಂಗವಿದೆ. ಬಾಗಿಲುವಾಡವು ೨.೩ ಅಡಿ ಎತ್ತರದ ಹೊಸ್ತಿಲ ಮೇಲೆ ೪.೫ ಅಡಿ ಎತ್ತರವಾಗಿದ್ದು ಗಿಡ್ಡವಾಗಿದೆ. ಇದರ ಮುಂದಿನ ರಚನೆಯಾದ ಅರ್ಧಮಂಟಪವು ತೆರೆದ




ತಳವಿನ್ಯಾಸ ರೇಖಾಚಿತ್ರ-೧೦, ಮಾಕಾಳೇಶ್ವರ ದೇವಾಲಯ, ಮೇದೂರು (ತಾ.ಹಿರೇಕೆರೂರು)
೧. ಗರ್ಭಗೃಹ, ೨. ಅರ್ಧಮಂಟಪ, ೩. ನವರಂಗ




ರೇಖಾಚಿತ್ರ-೧೧, ಸಣ್ಣ ಬಸವೇಶ್ವರ ದೇವಾಲಯದ ನವರಂಗದಲ್ಲಿರುವ ಕಂಬ, ಮೇದೂರು
(ತಾ.ಹಿರೇಕೆರೂರು)
೧. ಪೀಠ, ೨. ಪಾದ, ೩. ದಂಡ, ೪. ಘಟ, ೫. ಫಲಕ, ೬. ಬೋದಿಗೆ

ಮಂಟಪವಾಗಿದ್ದು ಪೂರ್ವ-ಪಶ್ಚಿಮ, ಉತ್ತರ-ದಕ್ಷಿಣವಾಗಿ ೫.೯x೬.೬ ಅಡಿ ವಿಸ್ತೀರ್ಣದಲ್ಲಿದೆ. ಪೂರ್ವ ದಿಕ್ಕಿನ ಗರ್ಭಗೃಹವು ವಿಸ್ತೀರ್ಣದಲ್ಲಿ ಮುಖ್ಯದಷ್ಟೇ ಇದೆ. ಇಲ್ಲಿ ಸೂರ್ಯಶಿಲ್ಪವನ್ನು ಕಾಣಬಹುದು. ಈ ಗರ್ಭಗೃಹದ ಬಾಗಿಲುವಾಡವು ಹಾಳಾಗಿದೆ. ಮುಂದಿನ ರಚನೆಯಾದ ಅರ್ಧಮಂಟಪವು ತೆರೆದ ಮಾದರಿಯಲ್ಲಿದೆ. ಉತ್ತರದಿಕ್ಕಿನ ಗರ್ಭಗೃಹವನ್ನು ದುರಸ್ತಿಕಾರ್ಯದಲ್ಲಿ ಕೈಬಿಡಲಾಗಿದೆ.[೨೩೦] ಅದಕ್ಕೆ ಹೊಂದಿಕೊಂಡ ತೆರೆದ ಅರ್ಧಮಂಟಪದ ರಚನೆ ಇದ್ದು ಈಗ ಅಲ್ಲಿ ಲಿಂಗವನ್ನು ಇಡಲಾಗಿದೆ. ಉತ್ತರ ದಿಕ್ಕಿನ ಗರ್ಭಗೃಹವು ವಿಷ್ಣುಗೃಹವಾಗಿದ್ದು ವಿಷ್ಣುಶಿಲ್ಪವು ಈಗ ನವರಂಗದಲ್ಲಿದೆ.

ಮೂರೂ ತೆರೆದ ಅರ್ಧಮಂಟಪಗಳಿಗೆ ಒಂದು ನವರಂಗವಿದ್ದು ೧೬.೪ x ೧೬.೪ ಅಡಿ ವಿಸ್ತೀರ್ಣದಲ್ಲಿದೆ. ಮಧ್ಯದ ನಾಲ್ಕು ಕಂಬಗಳು ರಾಷ್ಟ್ರಕೂಟ ಶೈಲಿಯಲ್ಲಿವೆ. ಅರ್ಧ ಅಡಿ ಎತ್ತರದ ಪೀಠದ ಮೇಲೆ ದಂಡ ಭಾಗವು ಚೌಕಾಕಾರವಾಗಿದೆ. ದಂಡಾಗ್ರವು ವೃತ್ತಾಕಾರದಲ್ಲಿದೆ. ದಂಡಭಾಗದ ಪ್ರತಿ ಮುಖದಲ್ಲೂ ಸ್ತಂಭ ಮತ್ತು ತೋರಣಗಳನ್ನು ಹೊಂದಿದ ಮಂಟಪ ರಚನೆಯ ಮಧ್ಯದಲ್ಲಿ ನಟರಾಜ, ರತಿ ಮನ್ಮಥ, ನರಸಿಂಹ, ಆನೆ, ಕುಂಭಗಳ ಉಬ್ಬುಶಿಲ್ಪಗಳಿವೆ. ಅದರ ಮೇಲಿನ ಭಾಗದಲ್ಲಿ ತ್ರಿಕೋನ ರಚನೆಗಳ ಮತ್ತು ಲಂಬ ರೇಖೆಗಳ ಅಲಂಕರಣವಿದೆ. ನಂತರದ ಭಾಗವಾಗಿ ಅಲಂಕೃತ ಪಟ್ಟಿ ಇದ್ದು, ಅದರಲ್ಲಿ ಮಿಥುನ ಶಿಲ್ಪಗಳಿವೆ. ದಂಡಾಗ್ರ ಭಾಗಗಳಾದ ಕಳಸ, ತಾಟಕಾ, ಘಟ, ಮಂಡಿ, ಫಲಕ ಭಾಗಗಳನ್ನು ಕಾಣಬಹುದು. (ರೇಖಾಚಿತ್ರ-೧೧) ತ್ರಿಕೋನ ಮಾದರಿಯ ನಾಲ್ಕು ಬೋದಿಗೆಗಳು ಅರ್ಧ ಅಡಿ ದಪ್ಪ ಒಂದು ಅಡಿ ಅಗಲದ ಕಲ್ಲು ತೊಲೆಗಳನ್ನು ಹೊತ್ತಿವೆ. ಮಧ್ಯದ ವಿತಾನದಲ್ಲಿ ಸಮತಲದಲ್ಲಿ ಏಳು ಸುತ್ತಿನ ಕಮಲದ ಅಲಂಕರಣವಿದೆ. (ಛಾಯಾಚಿತ್ರ-೨೫) ನವರಂಗದ ಭಿತ್ತಿಯು ದುರಸ್ತಿಗೊಂಡು ಕೋಷ್ಠಗಳು ಮಾರ್ಪಾಡುಗೊಂಡಿವೆ. ನವರಂಗದ ಬಾಗಿಲುವಾಡವು ತ್ರಿಶಾಖೆಗಳಿಂದ ಕೂಡಿದ್ದು, ಕ್ರಮವಾಗಿ ವಜ್ರಾಕೃತಿ, ಬಳ್ಳಿಗಳಲ್ಲಿ ವಾದ್ಯಮೇಳ, ಸ್ತಂಭಗಳಿಂದ ಅಲಂಕೃತಗೊಂಡಿವೆ. ಪ್ರತಿಶಾಖೆಯ ಕೆಳಗೂ ಚಾಮರಧಾರಿಣಿಯರ, ದ್ವಾರಪಾಲಕರ ಉಬ್ಬುಶಿಲ್ಪಗಳು ತ್ರಿಭಂಗಿಯಲ್ಲಿವೆ.

**ಶಾಸನಗಳಿಂದ ಹೆಚ್ಚಿನ ವಿವರ :** ಶಾಸನಗಳು ಮೇದೂರನ್ನು 'ಮೇಜೂರ' ಎಂದು ಉಲ್ಲೇಖಿಸಿವೆ. ಶಾಸನೋಕ್ತ ಮೇಜೂರು ಎಡವಟ್ಟೆಪ್ಪತ್ತರ ಪ್ರಮುಖ ಪಟ್ಟಣವಾಗಿತ್ತು. ಸಣ್ಣಬಸವಣ್ಣ ಎಂದು ಸ್ಥಳೀಯವಾಗಿ ಕರೆಯಲಾಗಿರುವ ರಾಷ್ಟ್ರಕೂಟ ಶೈಲಿಯ ತ್ರಿಕೂಟ ದೇವಾಲಯವನ್ನು ಶಾಸನೋಕ್ತ ಮಾಕಾಳೇಶ್ವರ ಎಂದು ಊಹಿಸಬಹುದು. ಕ್ರಿ.ಶ.ಸು.೧೦೪೭ರ ಕಲ್ಯಾಣ ಚಾಲುಕ್ಯ ಅರಸ ಒಂದನೇ ಸೋಮೇಶ್ವರನ ಕಾಲದ ಶಾಸನವು[೨೩೧] ಮಾಕಳಗಾವುಂಡನು ಮಾಕಳೇಶ್ವರ ದೇವಾಲಯ ನಿರ್ಮಿಸಿ ಕೆಲವು ದಾನಗಳನ್ನು ಮಾಡಿದನೆಂದು ಉಲ್ಲೇಖಿಸಿದೆ. ಇದೇ ಶಾಸನವು ಬಿಜ್ಜರಸನು ಯೋಗಾತ್ಮನಗ್ನಿಭಟ್ಟಾರಕರ ಕಾಲಂ ಕರ್ಚಿ ದಾನಬಿಡುವಾಗ.

'ಕಚ್ಚವಿಯ ಗಡಿಂಬದ ಕೋಲಲ್ಲಂಗಸಮುದ್ರದ ಕೆಳಗೆ
ಗಟ್ಟೆ ಮತ್ತರೊಂದು ಬೆ-
ರ್ದಲೂರಿಂ ಮೂಡ ಮತ್ತರು ಪನ್ನೆರಡು ಪೂ (ದೊ) ಟವೊಂದು
ಇವಟೊ-
-ಳಗೆ ಯಿ (ದೋಂಟ) .... ಮಠಕ್ಕೆ ಇಂತೀ....'

## ಪಟ್ಟಿ-೯

| ಅ. ನಂ. | ಊರು | ದೇವಾಲಯ ಹೆಸರು | ದಾನ ನೀಡಿದವರು | ದಾನ ಸ್ವೀಕರಿಸಿದವರು | ದಾನ ವಿವರ | ಕ್ರಿ.ಶ. | ದಾನದ ವಿನಿಯೋಗ | ದಾನ ನೀಡಿದ ಸಂದರ್ಭ | ಉಲ್ಲೇಖ |
|---|---|---|---|---|---|---|---|---|---|
| ೧. | ಮೇದೂರು ತಾ. ಹಿರೇಕೆರೂರು | ಮಾಕಾಳೇಶ್ವರ | ಮಾಕಳಗಾವುಂಡ | ಯೋಗಾತ್ಮನಗ್ನಿಭಟ್ಟಾರಕ | ಭೂದಾನ | ಸು.೧೧ | – | ...ತ್ಸಂವತ್ಸರದ ಭಾದ್ರಪದದಮಾವಾಸ್ಯೆ ಆದಿತ್ಯವಾರದಂ.... | ಕ.ಇನ್ಸ್. ಸಂ. VI ನಂ.೮ |
| ೨. | ಅದೇ | ಅದೇ | ಮಹಾಸಾಮಂತ ಬಿಜ್ಜರಸ | ಯೋಗಾತ್ಮನಗ್ನಿಭಟ್ಟಾರಕ | ಗದ್ದೆ, ಹೂದೋಟ | ೧೦೪೭ | – | ಪಾರ್ಥೀವ ಸಂವತ್ಸರದ ಮಾಘ ಶುದ್ಧ ಪಂಚಮಿ ಆದಿತ್ಯವಾರದಂದು | ಅದೇ |
| ೩. | ಅದೇ | ಅದೇ | ಪಠ್ಯ ಹಾಳಾಗಿದೆ | ಲಕುಲೀಶ್ವರ ಪಂಡಿತ | ಪಠ್ಯ ಹಾಳಾಗಿದೆ | | – | ಪುಷ್ಯ ಬಹುಳ ದಶಮಿ ಉತ್ತರಾಯಣ ಸಂಕ್ರಾಂತಿ | ಅದೇ |

ಇಲ್ಲಿಯ ಮಠಕ್ಕೆಂದು ಉಲ್ಲೇಖಿಸುತ್ತದೆ. ಮತ್ತು ದೇವಾಲಯದ ದಕ್ಷಿಣಕ್ಕೆ ಸರಸ್ವತಿ ಮಂಟಪವನ್ನು ಕಾಣಬಹುದು. ಈ ಮಂಟಪವು ಏಕಗರ್ಭಗೃಹವಾಗಿದ್ದು ಭಿತ್ತಿನಲ್ಲಿ ಕಮಲದ ಅಲಂಕರಣವನ್ನು ಹೊಂದಿದ್ದು ಬಾಗಿಲುವಾಡವು ಸಾದಾ ಮಾದರಿಯಲ್ಲಿದೆ. ಹಂಸಪೀಠದಲ್ಲಿ ಸರಸ್ವತಿ ವಿಗ್ರಹವಿದೆ(ಛಾಯಾಚಿತ್ರ-೫೩). ಇದರಿಂದ ಮಾಕಾಳೇಶ್ವರ ತ್ರೈಪುರುಷ ದೇವಾಲಯವು ಮಠವನ್ನು ಹೊಂದಿತ್ತು ಎಂದು ಸ್ಪಷ್ಟವಾಗುತ್ತದೆ.

| | | |
|---|---|---|
| ಊರು | : | ಕಲಕೇರಿ (ತಾ.ಹಾನಗಲ್ಲ) |
| ಸ್ಥಳ | : | ಗ್ರಾಮದ ಪಶ್ಚಿಮಕ್ಕೆ |
| ಹೆಸರು | : | ಸೋಮಲಿಂಗೇಶ್ವರ |
| ಅಭಿಮುಖ | : | ದಕ್ಷಿಣ, (ಪೂರ್ವ ದಿಕ್ಕಿನಲ್ಲೂ ಪ್ರವೇಶ ದ್ವಾರವಿದೆ) |
| ನಿವೇದನೆ | : | ಈಶ್ವರ, ವಿಷ್ಣು, ಸೂರ್ಯ |
| ಕಾಲ | : | ಕ್ರಿ.ಶ.೧೦೭೬ |
| ಶೈಲಿ | : | ಕಲ್ಯಾಣ ಚಾಲುಕ್ಯ |
| ಬಳಸಿದ ವಸ್ತು | : | ನೀಲಿ ಛಾಯೆಯ ಕಪ್ಪು ಕಲ್ಲು |

## ದೇವಾಲಯ ವಾಸ್ತುಶೈಲಿ

**ತಳವಿನ್ಯಾಸ :** (ತಳವಿನ್ಯಾಸ ರೇಖಾಚಿತ್ರ-೧೧) ಮೂರು ಗರ್ಭಗೃಹಗಳು, ಎರಡು ಅರ್ಧಮಂಟಪಗಳು, ಒಂದು ಸಣ್ಣ ಕೋಣೆಯಂತಹ ರಚನೆ, ಗೂಢಮಂಟಪ, ಪೂರ್ವ ಮತ್ತು ದಕ್ಷಿಣ ದಿಕ್ಕಿನಲ್ಲಿ ಪ್ರವೇಶ.

**ಊರ್ಧ್ವಮುಖ ರಚನೆ :** ಹಾನಗಲ್ಲಿನಿಂದ ಆಗ್ನೇಯಕ್ಕೆ ೩೫ ಕಿ.ಮೀ. ದೂರದಲ್ಲಿರುವ ಈ ದೇವಾಲಯವು ಕಲ್ಯಾಣ ಚಾಲುಕ್ಯ ಶೈಲಿಗೆ ಸೇರುತ್ತದೆ. ದೇವಾಲಯದ ಅಧಿಷ್ಠಾನ ಭಾಗವು ಮಣ್ಣಿನಲ್ಲಿ ಮುಚ್ಚಿದೆ. ಭಿತ್ತಿ ರಚನೆಯು ೧/೨ x ೫ ಅಡಿ ಉದ್ದದ ಕಲ್ಲುಗಳನ್ನು ಒಳಮುಖದಲ್ಲಿ ಮತ್ತು ಹೊರಮುಖದಲ್ಲಿ ಹೊಂದಿಸಿ ಮಧ್ಯದ ಭಾಗದಲ್ಲಿ ಮಣ್ಣು ಕಲ್ಲುಗಳನ್ನು ತುಂಬಿ ಮೂರು ಅಡಿ ದಪ್ಪವಾಗಿ ನಿರ್ಮಾಣಗೊಂಡಿದೆ. ಭಿತ್ತಿಯು ಯಾವ ಅಲಂಕರಣವಿಲ್ಲದೆ ಸರಳವಾಗಿದೆ(ಛಾಯಾಚಿತ್ರ-೨೬). ಮೂರು ಗರ್ಭಗೃಹಗಳು ಮೇಲ್ಕಟ್ಟಡವನ್ನು ಹೊಂದಿವೆ. ಆರು ಸ್ಥರಗಳಲ್ಲಿ ಹಂತಹಂತವಾಗಿ ಕಿರಿದಾಗುತ್ತ ಮೇಲೆ ಚೌಕಾಕಾರದ ಮುಗುಚಿದ ಬೋಗುಣಿಯಂತಹ ಶಿಖರ ಭಾಗವನ್ನು ಹೊಂದಿ ಕದಂಬನಾಗರ ಶೈಲಿ ಅಥವಾ ಫಾಂಸನಾ ಶಿಖರ ಮಾದರಿಗೆ ಸೇರುತ್ತದೆ. ಮೂರು ಶಿಖರಗಳ ಸ್ತೂಪಿ ಭಾಗಗಳು ಕಳಚಿವೆ. ಶಿಖರ ಭಾಗದ ನಾಲ್ಕು ಮಗ್ಗುಲಲ್ಲಿ ಅಲಂಕಾರ ರಹಿತವಾದ ನಾಸಿ ಫಲಕಗಳನ್ನು ಕಾಣಬಹುದು. ಮೂರೂ ಶಿಖರಗಳು ಶುಕನಾಸಿಯನ್ನು ಹೊಂದಿವೆ. ಇವುಗಳ ಮುಖಫಲಕಗಳಲ್ಲಿ ಯಾವ ಶಿಲ್ಪಗಳೂ ಇಲ್ಲ. ಮೇಲ್ಕಟ್ಟಡದ ಮೊದಲ ಎರಡು ಸ್ತರಗಳು ನವರಂಗದ ಭಿತ್ತಿನಲ್ಲಿಯೂ ಮುಂದುವರೆದಿವೆ. ಆಯತಾಕಾರದ ನವರಂಗ ಛಾವಣಿಯು ಸಮತಟ್ಟಾಗಿದೆ. ನವರಂಗದ ದಕ್ಷಿಣ ದಿಕ್ಕಿನಲ್ಲಿ ಮತ್ತು ಆಗ್ನೇಯ ಮೂಲೆಯ ಮುಂಭಾಗದಲ್ಲಿ ನಾಲ್ಕು ಅಡಿ ಇಳಿಜಾರು ಛತ್ತು ಇದೆ(ಛಾಯಾಚಿತ್ರ-೨೭).




ತಳವಿನ್ಯಾಸ ರೇಖಾಚಿತ್ರ-೧೧, ಸೋಮೇಶ್ವರ ದೇವಾಲಯ, ಕಲಕೇರಿ (ತಾ.ಹಾನಗಲ್ಲ)

೧. ಗರ್ಭಗೃಹ, ೨. ಅರ್ಧಮಂಟಪ, ೩. ಗೂಢಮಂಟಪ

**ತಿರ್ಯಙ್ಮುಖ ರಚನೆಗಳು :** ಮುಖ್ಯಗರ್ಭಗೃಹವು ಪೂರ್ವಾಭಿಮುಖವಾಗಿದೆ. ಇದರ ವಿಸ್ತೀರ್ಣವು ೮x೮ ಅಡಿ ವಿಸ್ತಾರವಾಗಿದ್ದು ಛತ್ತಿನಲ್ಲಿ ಸಮತಲದಲ್ಲಿ ಕಮಲದ ಅಲಂಕರಣವನ್ನು ಹೊಂದಿದೆ. ಗರ್ಭಗೃಹದ ಮಧ್ಯದಲ್ಲಿ ಸ್ವಯಂಭು ಲಿಂಗವಿದೆ. ದ್ವಾರಬಂಧವು ಅರ್ಧಅಡಿ ಎತ್ತರದ ಹೊಸ್ತಿಲ ಮೇಲೆ ತ್ರಿಶಾಖೆಯಿಂದ ಕೂಡಿದ ಸಾದಾ ಮಾದರಿಯಲ್ಲಿದ್ದು, ಲಲಾಟಫಲಕದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಗರ್ಭಗೃಹಕ್ಕೆ ಹೊಂದಿಕೊಂಡಂತೆ ೮x೬ ಅಡಿ ವಿಸ್ತೀರ್ಣದ ಅರ್ಧಮಂಟಪ ರಚನೆ ಇದೆ. ಇದರ ದ್ವಾರಬಂಧವು ತೆಳುವಾದ ಏಕಶಾಖೆಯನ್ನು ಮತ್ತು ಅಕ್ಕಪಕ್ಕದಲ್ಲಿ ೧.೫ ಅಡಿ ಅಗಲ ೬ ಅಡಿ ಎತ್ತರದ ಜಾಲಂದ್ರಗಳನ್ನು ಹೊಂದಿದೆ. ಜಾಲಂದ್ರಗಳು ಮೂರು ಉದ್ದ ಪಟ್ಟಿಕೆ ಹದಿಮೂರು ಅಡ್ಡ ಪಟ್ಟಿಕೆಗಳಿಂದ ರಚನೆಗೊಂಡು, ಮಧ್ಯದ ಚೌಕಗಳಲ್ಲಿ ಹೂವಿನ ಅಲಂಕರಣವಿದೆ. ಲಲಾಟಫಲಕದಲ್ಲಿ ಮಕರ ತೋರಣಗಳ ಅಡಿಯಲ್ಲಿ ಬ್ರಹ್ಮ, ಮಹೇಶ್ವರ ಮತ್ತು ವಿಷ್ಣುವಿನ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ ಮತ್ತು ಅರ್ಧಮಂಟಪದ ಗೋಡೆ ಕಂಬಗಳ ಪೀಠಭಾಗದಲ್ಲೂ ಶಿವ ಮತ್ತು ಬ್ರಹ್ಮರ ಉಬ್ಬುಶಿಲ್ಪಗಳನ್ನು ಬಿಡಿಸಲಾಗಿದೆ.

ಉತ್ತರ ದಿಕ್ಕಿನ ಗರ್ಭಗೃಹವು ಸಹ ವಿಸ್ತೀರ್ಣದಲ್ಲಿ ಮುಖ್ಯ ಗರ್ಭಗೃಹವನ್ನೇ ಹೋಲುತ್ತದೆ. ಛತ್ತಿನ ಸಮತಲದಲ್ಲಿ ಕಮಲದ ಅಲಂಕರಣವಿದೆ. ಈ ಗೃಹವು ಖಾಲಿಯಾಗಿದೆ. ಇದರ ಬಾಗಿಲುವಾಡವು ಸಾದಾ ಮಾದರಿಯಲ್ಲಿ ತ್ರಿಶಾಖೆಯನ್ನು ಹೊಂದಿದ್ದು, ಲಲಾಟಫಲಕದಲ್ಲಿ ಗಜಲಕ್ಷ್ಮಿ ಉಬ್ಬುಶಿಲ್ಪವಿದೆ. ಅರ್ಧಮಂಟಪವು ಮುಖ್ಯದಂತೆ ೮x೬ ಅಡಿ ವಿಸ್ತೀರ್ಣದಲ್ಲಿದೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಅರ್ಧಮಂಟಪದ ದ್ವಾರಬಂಧವೂ ಸಹ ಮುಖ್ಯದಂತೆ ಒಂದು ಶಾಖೆಯಿಂದ ಮತ್ತು ಜಾಲಂದ್ರಗಳಿಂದ ರಚನೆಗೊಂಡಿದೆ. ಜಾಲಂದ್ರ ವಿನ್ಯಾಸವು ಕೂಡ ಮುಖ್ಯದಂತೆ ಇದೆ. (ಛಾಯಾಚಿತ್ರ-೨೮) ಲಲಾಟದಲ್ಲಿ ಮಕರತೋರಣದ ಅಡಿಯಲ್ಲಿ ಬ್ರಹ್ಮ, ಶಿವ, ವಿಷ್ಣು ತ್ರಿಮೂರ್ತಿಗಳ ಉಬ್ಬುಶಿಲ್ಪಗಳಿವೆ. ಉತ್ತರದಿಕ್ಕಿನ ಅರ್ಧಮಂಟಪ ರಚನೆಗೆ ಹೊಂದಿಕೊಂಡಂತೆ ಎಡಬದಿಯಲ್ಲಿ ಸಣ್ಣ ಕೋಣೆಯಂತಹ ರಚನೆ ಇದೆ. ಇದು ಬಹುಶಃ ಲಕ್ಷ್ಮಿ ವಿಗ್ರಹಕ್ಕೆ ಮೀಸಲಾಗಿರಬಹುದು. (ಛಾಯಾಚಿತ್ರ-೨೮) ಪೂರ್ವದಿಕ್ಕಿನ ಗರ್ಭಗೃಹವು ಮುಖ್ಯಕ್ಕಿಂತ ಸ್ವಲ್ಪ ಚಿಕ್ಕದಾಗಿದ್ದು ೭x೭ ಅಡಿ ವಿಸ್ತೀರ್ಣದಲ್ಲಿದೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಈ ಗರ್ಭಗೃಹದಲ್ಲಿ ಸೂರ್ಯ ಪೀಠವಿದೆ. ಇದಕ್ಕೆ ಸಂಬಂಧಿಸಿದ ವಿಗ್ರಹವನ್ನು ಇದೇ ಊರಿನ ದೊಡ್ಡ ಬಸವೇಶ್ವರ ದೇವಾಲಯದಲ್ಲಿ ಕಾಣಬಹುದು. ಗರ್ಭಗೃಹದ ದ್ವಾರಬಂಧವು ಮುಖ್ಯ ಅರ್ಧಮಂಟಪದ ದ್ವಾರದಂತೆ ರಚನೆಗೊಂಡಿದೆ. ತೆಳುವಾದ ಒಂದು ಶಾಖೆಯ ಜೊತೆ ಜಾಲಂದ್ರಗಳನ್ನು ಹೊಂದಿದೆ. ಲಲಾಟ ಫಲಕದಲ್ಲಿ ಮಕರತೋರಣದಡಿಯಲ್ಲಿ ಎರಡೂ ಕೈಯಲ್ಲಿ ಕಮಲಗಳನ್ನು ಹಿಡಿದ ಸೂರ್ಯನ ಉಬ್ಬುಶಿಲ್ಪ ವನ್ನು ಬಿಡಿಸಲಾಗಿದೆ. ಇದಕ್ಕೆ ಅರ್ಧಮಂಟಪ ರಚನೆ ಇಲ್ಲ.

ಮೂರೂ ದಿಕ್ಕಿನ ವಾಸ್ತುರಚನೆಯನ್ನು ಒಂದೆಡೆ ಸೇರಿಸುವ ಗೂಢಮಂಟಪವು[೨೩೨] ಆರು ಮಧ್ಯ ಕಂಬಗಳಿಂದ ನಾಲ್ಕು ಕಕ್ಷಾಸನ ಕಂಬಗಳಿಂದ ರಚನೆಗೊಂಡಿದೆ. ಇದರ ವಿಸ್ತೀರ್ಣವು ಪೂರ್ವ-ಪಶ್ಚಿಮ, ಉತ್ತರ-ದಕ್ಷಿಣವಾಗಿ ೩೨x೨೪ ಅಡಿ ಇದೆ. ಮುಖ್ಯಗೃಹದ ಎದುರಿನ ನಾಲ್ಕು ಕಂಬಗಳು ಚೌಕಾಕಾರದ ವೇದಿಕೆಯ ತುದಿಯಲ್ಲಿ ನಿಂತಿವೆ. ಈ ಕಂಬಗಳು ತಿರುಗಣಿ ಯಂತ್ರದಿಂದ ರಚನೆಗೊಂಡದ್ದಾಗಿದ್ದು,




ರೇಖಾಚಿತ್ರ-೧೨, ಸೋಮೇಶ್ವರ ದೇವಾಲಯದ ನವರಂಗದ ಕಂಬ, ಕಲಕೇರಿ (ತಾ.ಹಾನಗಲ್ಲ)
೧. ಪೀಠ, ೨. ಪಾದ, ೩. ದಂಡ, ೪. ಘಟಿ, ೫. ಫಲಕ, ೬. ಬೋದಿಗೆ

ಚೌಕಾಕಾರದ ಪೀಠದ ಮೇಲೆ ಚೌಕಾಕಾರದ ಪಾದ ಭಾಗವಿದೆ. ಇದರ ಮೇಲೆ ವೃತ್ತಾಕಾರದ ಬಳೆಗಳ ಅಲಂಕರಣ ಮತ್ತು ಗಂಟಾಕಾರ ರಚನೆಗಳಿಂದ ಕೂಡಿದ ದಂಡ ಭಾಗವಿದೆ. ಇವುಗಳ ಮೇಲೆ ಅಧೋಮುಖ ಎಲೆಗಳ ಅಲಂಕರಣ ಬಿಡಿಸಲಾಗಿದೆ. ದಂಡಾಗ್ರದಲ್ಲಿ ಕಳಶ, ಘಟ, ಮಂಡಿ, ಫಲಕ ಭಾಗಗಳಿದ್ದು, ಮೇಲೆ ತ್ರಿಕೋನಮಾದರಿಯ ಚತುರ್ಮುಖ ಬೋದಿಗೆ ಇದೆ(ರೇಖಾಚಿತ್ರ-೧೨). ಪೂರ್ವದಿಕ್ಕಿನ ಗರ್ಭಗೃಹದ ಎದುರಿಗೆ ಇರುವ ಒಂದು ಜೊತೆ ಕಂಬಗಳು ನಯವಾಗಿಲ್ಲ. ಪೀಠ ಮತ್ತು ಪಾದ ಭಾಗಗಳು ಚೌಕಾಕಾರದಲ್ಲಿದ್ದು ದಂಡಭಾಗವು ವೃತ್ತಾಕಾರದಲ್ಲಿದೆ. ಗಂಟಾರಚನೆ ಇದ್ದು ದಂಡಾಗ್ರದಲ್ಲಿ ಘಟ, ಫಲಕಗಳ ರಚನೆ ಇಲ್ಲ. ಪೂರ್ವದಿಕ್ಕಿನ ಗರ್ಭಗೃಹದ ಗೋಡೆ ಕಂಬಗಳಿಗೆ ಹೊಂದಿಕೊಂಡು ಮುಂಭಾಗದಲ್ಲಿ ಒಂದು ಜೊತೆ ಹೆಚ್ಚಿನ ಕಂಬಗಳನ್ನು ಸೇರಿಸಲಾಗಿದೆ. ಇವು ಪೂರ್ತಿ ಚೌಕಾಕಾರದಲ್ಲಿದ್ದು, ದ್ವಿಮುಖ ಬೋದಿಗೆಯನ್ನು ಹೊಂದಿವೆ. ಇಲ್ಲಿ ಪಶ್ಚಿಮ ಗರ್ಭಗೃಹಕ್ಕೆ ಮುಖಮಾಡಿ ಕುಳಿತ ನಂದಿ ಶಿಲ್ಪವಿದೆ. ಗೂಢಮಂಟಪದ ದಕ್ಷಿಣ ದಿಕ್ಕಿನಲ್ಲಿ ಮುಚ್ಚಿದ ಕಕ್ಷಾಸನವಿದ್ದು ಇದರ ಮೇಲೆ ವೃತ್ತಾಕಾರದ ನಾಲ್ಕು ಕಂಬಗಳಿವೆ. ಗೂಢಮಂಟಪ ಮಧ್ಯದ ಆರು ಕಂಬಗಳು ಗೋಡೆ ಕಂಬಗಳೊಂದಿಗೆ ಕಲ್ಲುತೊಲೆಗಳಿಂದ ಜೋಡಣೆಗೊಂಡು, ಹನ್ನೆರಡು ಅಂಕಣಗಳನ್ನು ನಿರ್ಮಿಸಿವೆ. ಮಧ್ಯದ ವಿತಾನವು ಎರಡು ಸುತ್ತಿನ ಕಮಲದ ಅಲಂಕರಣವನ್ನು ಹೊಂದಿದೆ. ಗೂಢಮಂಟಪದ ಮೂರು ಗೋಡೆಕಂಬಗಳ ಮೇಲೆ ಶಾಸನ ಪಾಠಗಳಿವೆ. ಗೂಢಮಂಟಪವು ಪೂರ್ವದಿಕ್ಕಿನಲ್ಲಿ ಮತ್ತು ದಕ್ಷಿಣ ದಿಕ್ಕಿನಲ್ಲಿ ಪ್ರವೇಶಗಳನ್ನು ಹೊಂದಿದೆ. ದಕ್ಷಿಣ ದಿಕ್ಕಿನ ಪ್ರವೇಶವು ಅಲಂಕಾರರಹಿತವಾಗಿದೆ. ಪೂರ್ವದಿಕ್ಕಿನ ಪ್ರವೇಶದ ದ್ವಾರಬಂಧವು ಸಾದಾ ಮಾದರಿಯ ತ್ರಿಶಾಖೆಯಿಂದ ಕೂಡಿದ್ದು, ಲಲಾಟದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಈ ದ್ವಾರದ ಬಲಭಾಗದಲ್ಲಿ ಎರಡು ಚೌಕಾಕಾರದ ಕಂಬಗಳಿಂದ ರಚನೆಗೊಂಡ ಜಗಲಿ ಇದೆ.

**ಶಾಸನಗಳಿಂದ ಹೆಚ್ಚಿನ ವಿವರ :** ಬಾಸವೂರು-೧೪೦ ಕ್ಕೆ ಸೇರಿದ ಈ ಊರನ್ನು ಶಾಸನಗಳು 'ಕಲುಕೆರೆ'[೨೩೩] 'ಕಲ್ಕೆರೆ'[೨೩೪] ಎಂದು ಕರೆದಿವೆ. ಈ ಗ್ರಾಮದಲ್ಲಿರುವ ಕಲ್ಲಿನಿಂದ ಕಟ್ಟಲ್ಪಟ್ಟ ಕೆರೆಯಿಂದಾಗಿ ಈ ಗ್ರಾಮಕ್ಕೆ ಈ ಹೆಸರು ಪ್ರಾಪ್ತವಾಗಿದೆ ಎಂಬ ಅಭಿಪ್ರಾಯವಿದೆ.[೨೩೫] ಇಲ್ಲಿ ಮೂವತ್ತೆರಡು ಶಾಸನಗಳಿದ್ದು ಹೆಚ್ಚಿನವು ಕಲ್ಯಾಣ ಚಾಲುಕ್ಯ, ಯಾದವ, ಹೊಯ್ಸಳ, ವಿಜಯನಗರದರಸರ ಕಾಲಕ್ಕೆ ಸೇರುತ್ತವೆ. ಇವುಗಳಲ್ಲಿ ಒಂಭತ್ತು ಶಾಸನಗಳು ಇಲ್ಲಿಯ ಸ್ವಯಂಭು ಸೋಮನಾಥ ದೇವಾಲಯಕ್ಕೆ ಬೇರೆ ಬೇರೆ ಅರಸರ ಕಾಲದಲ್ಲಿ ನೀಡಿದ ದಾನ ಶಾಸನಗಳಾಗಿವೆ. (ಪಟ್ಟಿ ೧೦) ಶಾಸನ ಉಲ್ಲೇಖದಿಂದ ಸ್ವಯಂಭೂ ಸೋಮೇಶ್ವರ ದೇವಾಲಯವು ಬಹು ರಮ್ಯ ತಾಣವಾಗಿತ್ತೆಂದು ತಿಳಿದುಬರುತ್ತದೆ. ಶಾಸನವು

.... 'ಕಲ್ಕೆರೆಯುತ್ತರ ದಿಶಾಭಾಗದ ದೇವತೋಧ್ಯಾನ ವನಮಧ್ಯಸ್ಥಿತ ಸರೋವರದ
ಪಶ್ಚಿಮ ತಟದಲ್ಪೂರ್ಬ್ಬಾಭಿಮುಖವಾಗಿಟ್ಟಿ ಶಿವಾಲಯಂ ಪ್ರದಕ್ಷಿಣಂ ಬಂದು
ಶ್ರೀ ಸೊಮೇಶ್ವರ ದೇವರಂ ಕಣ್ಡು'....

ಎಂದು ಬಣ್ಣಿಸಿದೆ. ಕಲಕೇರಿಯ ಉತ್ತರ ದಿಕ್ಕಿಗೆ ದೇವರ ಉದ್ಯಾನವನವಿದ್ದು, ಅದರ ಮಧ್ಯ ಭಾಗದಲ್ಲಿ ಸರೋವರವಿದ್ದು, ಆ ಸರೋವರದ ಪಶ್ಚಿಮ ತಟದಲ್ಲಿ ಪೂರ್ವದಿಕ್ಕಿಗೆ ಮುಖಮಾಡಿ ಸೋಮೇಶ್ವರ ದೇವಾಲಯವಿತ್ತು ಎಂದು ಸೂಚಿಸುತ್ತದೆ. ಅಲ್ಲದೆ ಈ ದೇವಾಲಯವು ಧಾರ್ಮಿಕ ಕೇಂದ್ರವಾಗಿ ನೈಷ್ಠಿಕ ಸ್ಥಾನವಾಗಿತ್ತು.

## ಪಟ್ಟಿ-೧೦

| ಅ. ನಂ. | ಊರು | ದೇವಾಲಯ ಹೆಸರು | ದಾನ ನೀಡಿದವರು | ದಾನ ಸ್ವೀಕರಿಸಿದವರು | ದಾನ ವಿವರ | ಕ್ರಿ.ಶ. | ದಾನದ ವಿನಿಯೋಗ | ದಾನ ನೀಡಿದ ಸಂದರ್ಭ (ಶಾಸನದಲ್ಲಿ ಉಲ್ಲೇಖಿಸಿದಂತೆ) | ಉಲ್ಲೇಖ |
|---|---|---|---|---|---|---|---|---|---|
| ೧. | ಕಲಕೇರಿ ತಾ.ಹಾನಗಲ್ಲ | ಸ್ವಯಂಭೂ ಸೋಮೇಶ್ವರ | ನೊಳಂಬ ಉದಯಾದಿತ್ಯ ಮಾಳಲದೇವಿ | ಮಲೆಯಾಳ ತಪೋನಿಧಿ ದೇವಸಿಂಗಿಜೀಯರು | ಪುಲ್ಲವಳ ಗ್ರಾಮ | ೧೦೭೧ | ಕಾಳಾಮುಖ ನೈಷ್ಠಿಕ ತಪೋಧನರ್ಗ್ಗವಲ್ಲಿಯ ಚ್ಛಾತ್ರರ್ಗ್ಗವಲ್ಲಿಯ ಪಾವುಳಕ್ಕಂ ಖಣ್ಣಸ್ಫುಟಿತಕ್ಕಂ, ದೇವರ ಗಂಧ ಧೂಪ ನೈವೇದ್ಯಕಂ | ಶಕವರ್ಷ ೯೯೮ನೆಯ ರಾಕ್ಷಸ ಸಂವತ್ಸರದ ಪುಷ್ಯದಮಾವಸ್ಯೆ ಆದಿತ್ಯವಾರ ಹಸ್ತ ನಕ್ಷತ್ರ ಉತ್ತರಾಯಣ ಸಂಕ್ರಾಂತಿ ವ್ಯತೀಪಾತ | ಸೌ.ಇಂ.ಇನ್ಸ್.ಸಂ XX ನಂ. ೪೯ |
| ೨. | ,, | ,, | ಪೇರ್ಗಡೆ ಚಂಗ ದೇವಯ್ಯ ಪುನರ್ದತ್ತಿ ಮಾಡುವನು | | ನಾಲ್ಕುಂ ಸುಂಕದೊಳ ವೆರಡೊಲ್ಲೆಟಿ ಕೊಡ ವೀಸವ ಸಹಿತವಾಗಿ ಉಪ್ಪಿನಪೆಂಟೆ ಅರುವತ್ತು ನಂದಾದೀವಿಗೆಗೆ ಎಣ್ಣೆಗೆಂದು ತಿಂಗಳಿಗೆ ಒಂದು ಪಣ | ೧೦೮೮ | ದೇವರ ಗಂಧ ಧೂಪ ನೈವೇದ್ಯಕ್ಕೆಂದು | ... ಪೌಶ್ಯ ಬಹುಳ ೧ ಆದಿತ್ಯ ವಾರ ಸೋಮ ಗ್ರಹಣ... | ಸೌ.ಇಂ.ಇನ್ಸ್.ಸಂ XX ನಂ. ೬೦ |
| ೩. | ,, | ,, | ಜಯಸಿಂಗಸೆಟ್ಟಿ | | ತ್ರುಟಿತ | - | - | - | - |
| ೪. | ,, | ,, | ಲಕ್ಷ್ಮೀಪಾಳದೇವಸರ ಸುಂಕದ ಹೆಗಡೆ ಕಡುವ | - | ಎತ್ತು ಒಕ್ಕಲುದೇಟಿ, ಹೆಜುಂಕ ಬಿಲುಕೊಡೆ ಮೂಲೆ ಸುಂಕ ಸಹಿತ ೨೦ ಎತ್ತುಗಳು, ಗಾಣ ಒಕ್ಕಲು ದೇಟಿ, ಮಾನೆಣ್ಣೆ, ಕೊಳಗ ವಿಂಡಿ | ೧೨೨೪ | ದೇವರ ನೈವೇದ್ಯ, ತಪೋಧನರ ಭಿಕ್ಷೆಗೆ | ತಾರಣ ಸಂವತ್ಸರದ ಜೇಷ್ಟ ಸುದ ೫ ಆದಿತ್ಯವಾರ ವ್ಯತಿಪಾತದಂದು | ಸೌ.ಇಂ.ಇನ್ಸ್.ಸಂ XX ನಂ.೧೯೬ |

## ಪಟ್ಟಿ-೧೧

| ಕ್ರ. ಸಂ. | ಊರು | ದೇವಾಲಯ ಹೆಸರು | ದಾನ ನೀಡಿದವರು | ದಾನ ಸ್ವೀಕರಿಸಿದವರು | ದಾನ ವಿವರ | ಕ್ರಿ.ಶ. | ದಾನದ ವಿನಿಯೋಗ | ದಾನ ನೀಡಿದ ಸಂದರ್ಭ (ಶಾಸನದಲ್ಲಿ ಉಲ್ಲೇಖಿಸಿದಂತೆ) | ಉಲ್ಲೇಖ |
|---|---|---|---|---|---|---|---|---|---|
| ೫. | ಕಲಕೇರಿ ತಾ.ಹಾನಗಲ್ಲ | ಸ್ವಯಂಭೂ ಸೋಮೇಶ್ವರ | ಸುಂಕಾಧಿಕಾರಿ ಸಿತಾಬಿ ಮಾಯಿದೇವ | – | ಇಪ್ಪತ್ತು ಎತ್ತು, ಅಡಕೆ, ಮೆಣಸು ಏನೇ ಹೇರಿದರೂ ಅದರ ಸುಂಕವನ್ನು ಸರ್ವ ಮಾನ್ಯವಾಗಿ ಬಿಡುವನು | ೧೨೨೦ | ದೇವರ ನೈವೇದ್ಯಕ್ಕೆ, ತಪೋಧನರ ಆಹಾರದಾನಕ್ಕೆ, | ಪ್ರಮಾದೋಚ ಸಂವತ್ಸರದ ಜೇಷ್ಟ ಸು. ೫ ಸೋಮವಾರ ಸಂಕ್ರಮ ಣಾದಂ | ಸೌ.ಇಂ.ಇನ್ಸ್.ಸಂ XX ನಂ. ೨೨೦ |
| ೬. | ,, | ,, | ನಾಳ್ಪಭು ಹರಿಯಮ್ಮನ ಸೆಟ್ಟಿ ಕಾಚೆಯ ಸಾಹಣಿ, ಅಣ್ಣಿಗೇರಿಯ ಅಮೃತೇಶ್ವರ ದೇವರ ಪಾದಾರಾಧಕ ಮುದಗೇರಿಯಮಿತೆಯ ಸಾಹಣಿ | ಮೂರುಜಾವಿ ದೇವರು | ಗದ್ದೆ, ಹಕ್ಕಲು | ೧೨೦೬ | ದೇವರ ಗಂಧ, ಧೂಪ, ದೀಪ, ನೈವೇದ್ಯ, ತಾಂಬೂಳ, ತಪೋಧನರ, ಬ್ರಾಹ್ಮಣರ ಆಹಾರ ದಾನಕ್ಕೆ ಜೀರ್ಣೋದ್ಧಾರಕ್ಕೆ | ಪ್ರಭವ ಸಂವತ್ಸರದ ಮಾರ್ಗ್ಗಸಿರ ಸುದ್ಧ ೧೧ ಬ್ಯತೀಪಾತ ಸೋಮವಾರದಂದು | ಸೌ.ಇಂ.ಇನ್ಸ್.ಸಂ XX ನಂ. ೨೨೮ |
| | | | ವಾಸಿಯಣ್ಣ, ಸಮಸ್ತ ನಾಯಕರು ಎಕ್ಕಟಿಗರು, ಹರಿಯಮಸೆಟ್ಟಿ, ವೀರಯಗೌಡ | ಮೂರುಜಾವಿ ದೇವರು | ಹಕ್ಕಲು | ೧೨೦೬ | ಶಿವರಾತ್ರಿಯ ಪರ್ವದಲ್ಲಿ ದೇವರ ಜಲಗಂಧಾಕ್ಷತೆ, ಪುಷ್ಪ, ಧೂಪ, ನೈವೇದ್ಯ, ತಾಂಬೂಳ, ಆಚಾರಿಯರ ತಪೋಧನರ, ಬ್ರಾಹ್ಮಣರ ಭೋಜನಕ್ಕೆ, ಜೀರ್ಣೋದ್ಧಾರಕ್ಕೆ | ಅದೇ | ಅದೇ |

ಪಟ್ಟಿ-೧೦

| ಕ್ರ. ಸಂ. | ಊರು | ದೇವಾಲಯ ಹೆಸರು | ದಾನ ನೀಡಿದವರು | ದಾನ ಸ್ವೀಕರಿಸಿದವರು | ದಾನ ವಿವರ | ಕ್ರಿ.ಶ. | ದಾನದ ವಿನಿಯೋಗ | ದಾನ ನೀಡಿದ ಸಂದರ್ಭ (ಶಾಸನದಲ್ಲಿ ಉಲ್ಲೇಖಿಸಿದಂತೆ) | ಉಲ್ಲೇಖ |
|---|---|---|---|---|---|---|---|---|---|
| | ಕಲಕೇರಿ ತಾ.ಹಾನಗಲ್ಲ | ಸ್ವಯಂಭೂ ಸೋಮೇಶ್ವರ | ವೀರಯ, ಬನದೆಯ ನಾಯಕ, ಜೋಯ ನಾಯಕ, ರಾಗವ ನಾಯಕ, ಸೇನಬೋವ ಚಟ್ಟಯ್ಯ ಎಕ್ಕಟಿಗರು | ಮೂರುಜಾವಿ ದೇವರು | ಗದ್ದೆ | ೧೨೦೬ | ಚೈತ್ರದ ಪರ್ವದಲಿ ದೇವರಿಗೆ ಜಲಗಂಧಾಕ್ಷತೆ, ಪುಷ್ಪ, ಧೂಪ, ನೈವೇದ್ಯ, ತಾಂಬೂಳ, ತಪೋಧನರ, ಬ್ರಾಹ್ಮಣರ ಆಹಾರ ದಾನಕ್ಕೆ, ಜೀರ್ಣೋದ್ಧಾರಕ್ಕೆ | ಅದೇ | ಸೌ.ಇ.ಇನ್ಸ್.ಸಂ XX ನಂ. ೨೨೮ |
| ೭ | ,, | ,, | ಇಡಿರೆಶೆಟ್ಟಿಯ ಸಮಸ್ತ ಪ್ರಜೆ, ಎಂಟು ಹಿಟ್ಟುಗಳು | ಮೂರುಜಾವಿ ದೇವರು | ಮೂರು ಹೊನ್ನ ವೃದ್ಧಿಯಿಂದ ಒಂದು ನಂದಾದೀವಿಗೆಯ ನಡೆಸಿದರು | | | ಅದೇ | ಅದೇ |
| | ,, | ,, | ಸರ್ವಾಧಿಕಾರಿ ಲಕುಮೆಯ ರಾಹುತ | ಮೂರುಜಾವಿ ದೇವರು | ಭೂಮಿ | | ಅಂಗಭೋಗ, ಜೀರ್ಣೋದ್ಧಾರಕ್ಕೆ | ಅದೇ | ಅದೇ |
| | | | ಅಧಿಕಾರಿ ತಿಪ್ಪರಸರು | | ಯೆತ್ತು ಮೂರು ಬಂಡಿ ವಂದು ಮಮಂಜದಕ ಕಜೆಯ ಮೆಣಸಿನ ಹೇರುಮಂ ಮಾಣಿಕವ ತಂದರೆ ಅಯಿದು ಪ XXX ಮಾನ್ಯ | ೧೩-೧೪ನೇ ಶತಮಾನ | ದೇವರ ಪೂಜಾಕಾರ್ಯ ದೀಪಕ್ಕೆ | ಸರ್ವಾಧಿಕಾರಿ ಸಂವಚರದ ಮಾಘ ಬ. ೩೦ ಶಲು ಸೂರಿಯ್ಯ ಗ್ರಹಣ | ಸೌ.ಇಂ.ಇನ್ಸ್. ಸಂ.XX ನಂ. [illegible] |

'ಈ ಸ್ಥಾನದಲು ನೈಷ್ಠಿಕರಲ್ಲದ ತಪೋಧನರಿರಲಾಗದು' ಎಂದು ಶಾಸನ ಉಲ್ಲೇಖಿಸಿದೆ. ಇಲ್ಲಿಯ ತಪೋಧನರಿಗೆ ಬ್ರಹ್ಮಚರ್ಯ ಕಡ್ಡಾಯವಾಗಿತ್ತೆಂದು ಇದರಿಂದ ತಿಳಿದುಬರುತ್ತದೆ. ಸ್ವಯಂಭೂ ಸೋಮೇಶ್ವರ ದೇವಾಲಯದ ದಕ್ಷಿಣಕ್ಕೆ ಸರಸ್ವತಿ ದೇವಾಲಯ ಇರುವುದು ಗಮನಿಸಬೇಕಾದ ಅಂಶ. ಈ ಆಲಯವು ಗರ್ಭಗೃಹ, ನವರಂಗಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಹಂಸ ಪೀಠವಿದೆ. ಇದೇ ಊರಿನ ಬಸವೇಶ್ವರ ದೇವಾಲಯದಲ್ಲಿ ಇಡಲಾದ ಸರಸ್ವತಿ ವಿಗ್ರಹವು ಈ ಪೀಠಕ್ಕೆ ಸಂಬಂಧಿಸಿದ್ದಾಗಿರಬಹುದು. ಗರ್ಭಗೃಹದ ದ್ವಾರಬಂಧವು ತ್ರಿಶಾಖೆಯಿಂದ ಕೂಡಿದ್ದು ಲಲಾಟಫಲಕದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ, ನವರಂಗವು ಮಧ್ಯದಲ್ಲಿ ಚೌಕಾಕಾರದ ವೇದಿಕೆಯನ್ನು ಹೊಂದಿದೆ. ವೇದಿಕೆಯ ಮೇಲಿನ ಕಂಬಗಳು ಅರ್ಧ ಅಡಿ ಎತ್ತರದ ಪೀಠದ ಮೇಲೆ ಚೌಕಾಕಾರದ ಪಾದಭಾಗವನ್ನು ಹೊಂದಿವೆ. ದಂಡ ಭಾಗದಲ್ಲಿ ಅಷ್ಟಮುಖಗಳಲ್ಲಿ ಊರ್ಧ್ವಮುಖ ಕಮಲದಳಗಳು, ಹದಿನಾರು ಮುಖಗಳ ಪಟ್ಟಿ ಮತ್ತು ಅಧೋಮುಖ ಕಮಲದಳಗಳ ಅಲಂಕರಣದಿಂದ ಕೂಡಿದ್ದು ಆಕರ್ಷಕವಾಗಿವೆ. ದಂಡಾಗ್ರದಲ್ಲಿ ಕಳಸ, ಘುಟ, ಮಂಡಿ, ಫಲಕಗಳಿವೆ. ಕಂಬದ ಮೇಲೆ ನಾಲ್ಕು ಮುಖಬೋದಿಗೆಗಳಿವೆ. ಬೋದಿಗೆಯ ಮೇಲಿನ ತೊಲೆಯ ಭಾಗದಲ್ಲಿ ಸಾಲುಪುಷ್ಪಗಳ ಅಲಂಕರಣವಿದೆ. (ಛಾಯಾಚಿತ್ರ-೨೯) ಸರಸ್ವತಿ ದೇವಾಲಯದಿಂದ ಮತ್ತು ಶಾಸನಪಾಠದಿಂದ ಈ ಸ್ಥಾನವು ವಿದ್ಯಾಕೇಂದ್ರವಾಗಿತ್ತು ಎಂದು ಸ್ಪಷ್ಟವಾಗುತ್ತದೆ.

| | | |
|---|---|---|
| ಊರು | : | ಅಬ್ಬಲೂರು (ತಾ.ಹಿರೇಕೆರೂರು) |
| ಸ್ಥಳ | : | ಊರ ನಡುವೆ |
| ಹೆಸರು | : | ಬಸವೇಶ್ವರ (ಬ್ರಹ್ಮಲಿಂಗೇಶ್ವರ) |
| ಅಭಿಮುಖ | : | ದಕ್ಷಿಣ |
| ನಿವೇದನೆ | : | ಲಿಂಗ, ವಿಷ್ಣು, ಸೂರ್ಯ |
| ಕಾಲ | : | ಕ್ರಿ.ಶ.೧೧೦೧ |
| ಶೈಲಿ | : | ಕಲ್ಯಾಣ ಚಾಲುಕ್ಯ |
| ಬಳಸಿದ ವಸ್ತು | : | ನೀಲಿ ಛಾಯೆಯ ಕಪ್ಪು ಕಲ್ಲು |

**ದೇವಾಲಯ ವಾಸ್ತುಶೈಲಿ**

**ತಳವಿನ್ಯಾಸ :** (ತಳವಿನ್ಯಾಸ ರೇಖಾಚಿತ್ರ-೧೨) ಮೂರು ಗರ್ಭಗೃಹಗಳು, ಮೂರು ಅರ್ಧಮಂಟಪಗಳು, ಗೂಢಮಂಟಪ, ದಕ್ಷಿಣ ದಿಕ್ಕಿಗೆ ದ್ವಾರ ((ತಳವಿನ್ಯಾಸ ರೇಖಾಚಿತ್ರ-ಅ) ಸರಸ್ವತಿ ಮಂದಿರ

**ಊರ್ಧ್ವಮುಖ ರಚನೆ :** ಹಿರೇಕೆರೂರಿನಿಂದ ೪ ಕಿ.ಮೀ. ದೂರದಲ್ಲಿರುವ ಈ ದೇವಾಲಯವು ಕಲ್ಯಾಣ ಚಾಲುಕ್ಯ ಶೈಲಿಗೆ ಸೇರಿದುದಾಗಿದೆ. ಮೂರು ಗರ್ಭಗೃಹಗಳ ಅಧಿಷ್ಠಾನವು ಮೂರು ಅಡಿ ಎತ್ತರವಾಗಿದ್ದು, ಉಪಾನ, ಜಗತಿ, ಪದ್ಮ, ತ್ರಿಪಟ್ಟ ಕುಮುದ ಮತ್ತು ಹಿಂದೆ ಸರಿದ ಕಪೋತ ಭಾಗದಲ್ಲಿ ದಂತ ಮಾದರಿಯ ಸಣ್ಣ ಕಂಟಕಗಳನ್ನು ಹೊಂದಿದೆ. ಪ್ರಧಾನ ಅಂಗಗಳ ಮಧ್ಯದಲ್ಲಿ ಕಂಪ-ಗಳ-ಕಂಪ ರಚನೆಗಳಿವೆ(ರೇಖಾಚಿತ್ರ-೧೩). ಪಾದಬಂಧ ಪ್ರಭೇದಕ್ಕೆ ಸೇರಿದ ಈ ಅಧಿಷ್ಠಾನವು ಮೂರು ಮುಂಚಾಚುಗಳಿಂದ ಕೂಡಿದೆ. ಕರ್ಣಭಾಗವು




ತಳವಿನ್ಯಾಸ ರೇಖಾಚಿತ್ರ-೧೨, ಬ್ರಹ್ಮಲಿಂಗೇಶ್ವರ ದೇವಾಲಯ, ಅಬ್ಬಲೂರು (ತಾ.ಹಿರೇಕೆರೂರು)

೧. ಗರ್ಭಗೃಹ, ೨. ಅರ್ಧಮಂಟಪ, ೩. ಗೂಢಮಂಟಪ




ತಳವಿನ್ಯಾಸ ರೇಖಾಚಿತ್ರ-೧೨ ಅ

ಸರಸ್ವತಿ ದೇವಾಲಯ




ರೇಖಾಚಿತ್ರ-೧೩, ಬ್ರಹ್ಮಲಿಂಗೇಶ್ವರ ದೇವಾಲಯದ ಅಧಿಷ್ಠಾನ, ಅಬ್ಬಲೂರು (ತಾ.ಹಿರೇಕೆರೂರು)
೧. ಉಪಾನ, ೨. ಜಗತಿ, ೩. ಪದ್ಮ, ೪. ಕುಮುದ, ೫. ಕಂಪ, ೬. ಕಪೋತ

ಒಂದು ಹಂತದಲ್ಲಿ ಮುಂದೆ ಸರಿದರೆ ಭದ್ರಭಾಗವು ಮೂರು ಹಂತಗಳಲ್ಲಿ ಮುಂಚಾಚಿದೆ. ಕರ್ಣ ಭದ್ರಗಳ ನಡುವೆ ಒಂದು ಹಿಂಜರಿತ ಏರ್ಪಟ್ಟಿದೆ. ಭಿತ್ತಿಯನ್ನು ಒಳಮುಖದಲ್ಲಿ ಮತ್ತು ಹೊರಮುಖದಲ್ಲಿ ನಯಗೊಳಿಸಿದ ಕಲ್ಲುಗಳನ್ನು ಹೊಂದಿಸಿ, ಮಧ್ಯದ ಖಾಲಿ ಭಾಗದಲ್ಲಿ ಮಣ್ಣು ಕಲ್ಲುಗಳನ್ನು ತುಂಬಿ ಐದು ಅಡಿ ದಪ್ಪದಾಗಿ ರಚಿಸಲಾಗಿದೆ. ಅಧಿಷ್ಠಾನದ ಹಿಂಚಾಚು ಮುಂಚಾಚುಗಳಿಗೆ ತಕ್ಕಂತೆ ಭಿತ್ತಿಯೂ ಮೇಲೇರಿದೆ. ಭಿತ್ತಿ ಭಾಗದಲ್ಲಿ ಕೋಷ್ಠಗಳಾಗಲಿ, ಅಲಂಕಾರವಾಗಲಿ ಕಂಡುಬರುವುದಿಲ್ಲ. ಪ್ರಸ್ತರ ಭಾಗದಲ್ಲಿ ಹಿಂದೆ ಸರಿದ ಕಪೋತ ಭಾಗವಿದ್ದು, ದಂತ ಮಾದರಿಯ ಅಲಂಕರಣವಿದೆ. ಅದರ ಮೇಲಿನ ಭಾಗದಲ್ಲಿ ವ್ಯಾಳಮಾಲೆಯು ಭಿತ್ತಿಯ ಆಕಾರಕ್ಕೆ ತಕ್ಕಂತೆ ಸುತ್ತುವರೆದಿದೆ. ವ್ಯಾಳ ಮಾಲೆಯ ಮೇಲೆ ತೆಳುವಾದ ವೇದಿಕೆ ಇದ್ದು, ಕರ್ಣಕೂಟ, ಪಂಜರ, ಶಾಲಾಗಳನ್ನು ಹೊತ್ತಿದೆ. ಕರ್ಣಕೂಟ, ಸಣ್ಣ ಗಾತ್ರದ ಪಂಜರ, ದ್ವಿಮುಖಶಾಲಾ, ಸಣ್ಣಗಾತ್ರದ ಪಂಜರ, ಕರ್ಣಕೂಟ ಹೀಗೆ ಹಾರವು ರಚನೆಗೊಂಡಿದೆ. ದೇವಾಲಯದ ಮೇಲ್ಕಟ್ಟಡವು ತ್ರಿತಲಗಳಿಂದ ಕೂಡಿದೆ. ತಲಗಳು ಹಂತಹಂತವಾಗಿ ಕಿರಿದಾಗುತ್ತ, ಮೇಲೇರುತ್ತ, ಚೌಕಾಕಾರದ ಮುಗುಚಿದ ಬೋಗುಣಿಯಂತಹ ಶಿಖರಭಾಗವನ್ನು ಹೊಂದಿದೆ. ಗ್ರೀವ ಭಾಗದಲ್ಲಿ ಪ್ರತಿ ಮೂಲೆಯಲ್ಲೂ ನಂದಿ ಶಿಲ್ಪಗಳನ್ನು ಇಡಲಾಗಿದೆ. ಶಿಖರದ ಮೇಲಿನ ಮಹಾಪದ್ಮದ ಮಧ್ಯ ಬಿಂದುವಿನಲ್ಲಿ ಕಲಶವನ್ನು ನೆಡಲಾಗಿದೆ. ಕಲಶದ ಘಟ ಭಾಗವು ಹೆಚ್ಚು ಉಬ್ಬಿದಂತಿದೆ. (ಛಾಯಾಚಿತ್ರ-೩೦) ಹಾರಗಳಲ್ಲಿಯ ಶಾಲಾ ಫಲಕಗಳಲ್ಲಿ ತ್ರಿಶೂಲ, ಡಮರುಧಾರಿ ಶಿವನ ಉಬ್ಬುಶಿಲ್ಪಗಳಿವೆ.  ಮೇಲ್ಕಟ್ಟಡವು ಮುಂಭಾಗದಲ್ಲಿ ಶುಕನಾಸಿಯನ್ನು ಹೊಂದಿದೆ. ಫಲಕದಲ್ಲಿ ಕೀರ್ತಿಮುಖವಿದೆ. ಈಗ ಮುಖ್ಯ ಗರ್ಭಗೃಹಕ್ಕೆ ಮಾತ್ರ ಶಿಖರವಿದ್ದು, ಉಳಿದೆರಡು ಶಿಖರಗಳು ಕಂಡು ಬರುವುದಿಲ್ಲ. ಇವುಗಳ ಭಿತ್ತಿಭಾಗವೂ ದುರಸ್ತಿಗೊಂಡಿದೆ.

ಗೂಢಮಂಟಪದ ಅಧಿಷ್ಠಾನವು ಗರ್ಭಗೃಹಗಳ ಅಧಿಷ್ಠಾನದಿಂದ ಭಿನ್ನವಾಗಿದ್ದು ಮಂಚಕ ರೀತಿಯಲ್ಲಿದೆ. ಉಪಾನ, ಜಗತಿ, ಕಂಠ ಮತ್ತು ಹಿಂಜರಿತ ಕಪೋತ ಭಾಗಗಳನ್ನು ಹೊಂದಿದೆ. ಕಂಠಭಾಗವು ಒಂದು ಅಡಿ ಅಗಲವಾಗಿದ್ದು, ಇಲ್ಲಿ ನೃತ್ಯ ಗಣಪತಿ, ವಾದ್ಯವೃಂದ, ಯುದ್ಧ, ಮಿಥುನಶಿಲ್ಪ, ಸಮುದ್ರ ಮಂಥನ, ಒಂದೇ ಬಾಣದಿಂದ ಏಳುಮರಗಳಿಗೆ ಗುರಿ ಇಟ್ಟ ಶ್ರೀರಾಮ, ಜಡೆ ಹಣೆದುಕೊಳ್ಳುವವಳ ಉಬ್ಬುಶಿಲ್ಪಗಳನ್ನು ಆಕರ್ಷಕವಾಗಿ ಕೆತ್ತಲಾಗಿದೆ. ಕಪೋತದ ಮುಂಭಾಗದಲ್ಲಿ ದಂತ ಮಾದರಿಯ ಅಲಂಕರಣವಿದೆ. ಗೂಢಮಂಟಪವು ತೆರೆದ ಮಂಟಪವಾಗಿದ್ದು, ಸುತ್ತಲೂ ಕಕ್ಷಾಸನವನ್ನು ಹೊಂದಿದೆ. ಈಗ ಇದನ್ನು ಕಬ್ಬಿಣದ ಸರಳುಗಳಿಂದ ಮುಚ್ಚಲಾಗಿದೆ. ಕಕ್ಷಾಸನದ ಬೆನ್ನಿನಲ್ಲಿ ಗಣಪತಿ, ಲಕ್ಷ್ಮಿ, ಕುಂಭಗಳು ಮತ್ತು ನಾಲ್ಕು ದಳಗಳುಳ್ಳ ಚೌಕಾಕಾರದ ಪುಷ್ಪಗಳ ಉಬ್ಬು ಅಲಂಕರಣವನ್ನು ಕಾಣುತ್ತೇವೆ. ಇವುಗಳನ್ನು ಒಂದು ಜೊತೆ ಕಂಬಗಳು ಬೇರ್ಪಡಿಸಿವೆ(ಛಾಯಾಚಿತ್ರ-೩೧). ಕಕ್ಷಾಸನದ ಮೇಲೆ ವೃತ್ತಾಕಾರದ ಕಂಬಗಳಿದ್ದು ತ್ರಿಕೋನ ಮಾದರಿಯ ಬೋದಿಗೆಯನ್ನು ಹೊಂದಿವೆ. ಈ ಕಂಬಗಳ ಮಧ್ಯಭಾಗದಲ್ಲಿ ಕುಬ್ಜರ ಶಿಲ್ಪಗಳಿವೆ. ಬೋದಿಗೆಯ ಮೇಲೆ ಇಳಿಜಾರು ಛತ್ತಿನ ರಚನೆ ಇದೆ. ಗರ್ಭಗೃಹಗಳ ಪ್ರಸ್ತರದ ಭಾಗಗಳಾದ ಕಪೋತ, ವ್ಯಾಳಮಾಲಾಗಳು ಗೂಢಮಂಟಪದ ಮೇಲ್ಕಟ್ಟಡಕ್ಕೂ ಮುಂದುವರೆದಿವೆ.

**ತಿರ್ಯಙ್ಮುಖ ರಚನೆಗಳು :** ದೇವಾಲಯದ ಪ್ರವೇಶದ್ವಾರವು ದಕ್ಷಿಣ ದಿಕ್ಕಿಗೆ ಇದ್ದರೂ ಮುಖ್ಯ ಗರ್ಭಗೃಹವು ಪೂರ್ವಾಭಿಮುಖವಾಗಿದೆ. ಇದರ ವಿಸ್ತೀರ್ಣವು ೭.೪ x ೭.೪ ಅಡಿ ಆಗಿದ್ದು ೧/೨ x ೩ ಅಡಿ ಉದ್ದದ

ಕಲ್ಲುಗಳನ್ನು ನಾಲ್ಕು ಮೂಲೆ ಕಂಬಗಳ ನಡುವೆ ಹೊಂದಿಸಿ ಭಿತ್ತಿಯನ್ನು ರಚಿಸಲಾಗಿದೆ. ಪಶ್ಚಿಮ ಭಿತ್ತಿಯಲ್ಲಿ ಸಣ್ಣ ಕೋಷ್ಠವಿದೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಗರ್ಭಗೃಹದ ದ್ವಾರಬಂಧವು, ಅರ್ಧಅಡಿ ಎತ್ತರದ ಮೂರು ಮುಂಚಾಚುಗಳನ್ನು ಹೊಂದಿದ ಕಲಾತ್ಮಕ ಹೊಸ್ತಿಲ ಮೇಲೆ ಪಂಚಶಾಖೆಗಳಿಂದ ಕೂಡಿದ್ದು, ಬಹು ಆಕರ್ಷಕವಾಗಿ ರಚನೆಗೊಂಡಿದೆ. ಪಂಚಶಾಖೆಗಳಲ್ಲಿ ಮಧ್ಯದ ಶಾಖೆಯು ಪ್ರಧಾನವಾಗಿದ್ದು, ಮುಕ್ಕಾಲು ಅಡಿ ಅಗಲವಾಗಿದೆ ಮತ್ತು ಎಲ್ಲ ಶಾಖೆಗಳಿಂದ ಹೆಚ್ಚು ಮುಂಚಾಚಿದೆ. ಅಕ್ಕಪಕ್ಕದ ಶಾಖೆಗಳು ಅರ್ಧಅಡಿ ಅಗಲವಾಗಿದ್ದು ಹಂತಹಂತವಾಗಿ ಹಿಂದೆ ಸರಿದಿವೆ. ಶಾಖೆಗಳು ಕ್ರಮವಾಗಿ ವಜ್ರಾಕೃತಿ, ನಾಗದಂಪತಿಗಳು, ವಲ್ಲಿಬಂಧದಲ್ಲಿ ದಂಪತಿಗಳ ನೃತ್ಯ, ವಲ್ಲಿ ಬಂಧದಲ್ಲಿ ಪ್ರಾಣಿಗಳು ಮತ್ತು ಕಮಲದಳಗಳ ಅಲಂಕರಣವನ್ನು ಹೊಂದಿವೆ. ಪ್ರತಿ ಶಾಖೆಯ ಕೆಳಗೂ ಕೀರ್ತಿಮುಖ ತೋರಣದ ಕೆಳಗೆ ತ್ರಿಭಂಗಿಯಲ್ಲಿ ನಿಂತ ಪ್ರತಿಹಾರರ ಉಬ್ಬುಶಿಲ್ಪಗಳಿವೆ. (ಛಾಯಾಚಿತ್ರ-೩೨) ಮೊದಲ ಎರಡು ಶಾಖೆಗಳು ಲಲಾಟದಲ್ಲಿಯೂ ಮುಂದುವರೆದು, ಫಲಕದ ಪಾರ್ಶ್ವದಲ್ಲಿ ಸಂಧಿಸಿವೆ. ಲಲಾಟಫಲಕದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಅರ್ಧಮಂಟಪವು ಪೂರ್ವ-ಪಶ್ಚಿಮ, ಉತ್ತರ-ದಕ್ಷಿಣವಾಗಿ ೪.೪ x ೭.೬ ಅಡಿ ವಿಸ್ತೀರ್ಣದಲ್ಲಿದ್ದು, ಗರ್ಭಗೃಹಕ್ಕಿಂತ ಚಿಕ್ಕದಾಗಿದೆ. ಚಂದ್ರಶಿಲಾ ಸ್ಥಳದಲ್ಲಿ ಅಲಂಕೃತ ವೃತ್ತ ರಚನೆ ಇದೆ. ಛತ್ತಿನಲ್ಲಿ ಕಮಲದ ಅಲಂಕರಣ ಇದೆ. ಅರ್ಧಮಂಟಪದ ಬಾಗಿಲುವಾಡವು ಅರ್ಧಅಡಿ ಎತ್ತರದ ಹೊಸ್ತಿಲ ಮೇಲೆ ತೆಳುವಾದ ತ್ರಿಶಾಖೆಗಳಿಂದ ಅಕ್ಕಪಕ್ಕದಲ್ಲಿ ಜಾಲಂದ್ರ ಫಲಕಗಳಿಂದ ಕೂಡಿದೆ. ತೆಳು ಶಾಖೆಗಳು ಲಲಾಟದಲ್ಲಿಯೂ ಮುಂದುವರೆದಿವೆ. ಲಲಾಟಫಲಕದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ದ್ವಾರದ ಉತ್ತರಾಂಗದಲ್ಲಿ ಮಕರ ತೋರಣದಲ್ಲಿ ಗಣಪತಿ, ಬ್ರಹ್ಮ, ಶಿವ, ವಿಷ್ಣು, ಮಹಿಷಮರ್ಧಿನಿಯರ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ.

ಪೂರ್ವದಿಕ್ಕಿನ ಗರ್ಭಗೃಹವು, ವಿಸ್ತೀರ್ಣದಲ್ಲಿ ಮುಖ್ಯ ಗೃಹವನ್ನು ಹೋಲುತ್ತದೆ. ಇಲ್ಲಿ ಐದು ಅಡಿ ಎತ್ತರದ ಸೂರ್ಯ ಶಿಲ್ಪವನ್ನು ಕಾಣಬಹುದು. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಈ ಗೃಹದ ದ್ವಾರಬಂಧವು ಒಂದು ಅಡಿ ಎತ್ತರದ ಕಲಾತ್ಮಕ ಹೊಸ್ತಿಲ ಮೇಲೆ ಪಂಚಶಾಖೆಗಳಿಂದ ಕೂಡಿದ್ದು ಮುಖ್ಯ ಗರ್ಭಗೃಹದ ದ್ವಾರಬಂಧವನ್ನು ಹೋಲುತ್ತದೆ. ಈ ಗರ್ಭಗೃಹವು ತೆರೆದ ಅರ್ಧಮಂಟಪವನ್ನು ಹೊಂದಿದೆ. ಇಲ್ಲಿ ಮುಖ್ಯಕ್ಕೆ ಎದುರಾಗಿ ಕುಳಿತ ಬೃಹತ್ ನಂದಿ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ.

ಉತ್ತರದಿಕ್ಕಿನ ಗರ್ಭಗೃಹವು ವಿಸ್ತೀರ್ಣದಲ್ಲಿ ಉಳಿದವುಗಳಿಗಿಂತ ಒಂದು ಅಡಿ ಹೆಚ್ಚಾಗಿದೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಇಲ್ಲಿ ನಾಲ್ಕು ಅಡಿ ಎತ್ತರದ ಸುಂದರವಾದ ವಿಷ್ಣು ಶಿಲ್ಪವನ್ನು ಕಾಣಬಹುದು. ಇಲ್ಲಿಯ ಗರ್ಭಗೃಹ ದ್ವಾರವೂ ಸಹ ಮುಖ್ಯ ಗರ್ಭಗೃಹವನ್ನು ಹೋಲುತ್ತದೆ. ಅರ್ಧಮಂಟಪವು ವಿಸ್ತೀರ್ಣದಲ್ಲಿ ಮುಖ್ಯ ಗರ್ಭಗೃಹದ ಅರ್ಧಮಂಟಪಕ್ಕಿಂತ ದೊಡ್ಡದಾಗಿದೆ. ಪೂರ್ವ-ಪಶ್ಚಿಮ, ಉತ್ತರ-ದಕ್ಷಿಣವಾಗಿ ೮x೭ ಅಡಿ ವಿಸ್ತೀರ್ಣದಲ್ಲಿದೆ. ಅರ್ಧಮಂಟಪದ ದ್ವಾರಬಂಧವೂ ಸಹ ಮುಖ್ಯಅರ್ಧಮಂಟಪ ದಂತೆ ಅಲಂಕೃತಗೊಂಡಿದೆ. ಆದರೆ ದ್ವಾರಬಂಧದ ಉತ್ತರಾಂಗದಲ್ಲಿ ಮಕರತೋರಣದಲ್ಲಿ ರುಕ್ಮಿಣಿ, ವೇಣುಗೋಪಾಲ, ಸತ್ಯಭಾಮಾ ಮತ್ತು ಇಬ್ಬರು ಚಾಮರಧಾರಿಣಿಯರ ಉಬ್ಬುಶಿಲ್ಪಗಳನ್ನು ಕೊರೆಯಲಾಗಿದೆ.

ಮೂರು ದಿಕ್ಕಿನ ರಚನೆಗಳನ್ನು ಒಂದೆಡೆ ಸೇರಿಸುವ ಗೂಢಮಂಟಪವು ೩೨x೩೨ ಅಡಿ ವಿಸ್ತೀರ್ಣದಲ್ಲಿದ್ದು ಚೌಕಾಕಾರವಾಗಿದೆ. ಹದಿನಾರು ಮಧ್ಯ ಕಂಬಗಳಿಂದಲೂ, ಹದಿನಾಲ್ಕು ಕಕ್ಷಾಸನ ಕಂಬಗಳಿಂದಲೂ ರೂಪಗೊಂಡ

ಗೂಢಮಂಟಪವು, ಇಪ್ಪತ್ತೈದು ಅಂಕಣಗಳನ್ನು ಹೊಂದಿದ್ದು ಬಹು ಆಕರ್ಷಕವಾಗಿದೆ. ಮಧ್ಯದ ಹದಿನಾರು ಕಂಬಗಳಲ್ಲಿ ಕೆಲವು ತಿರುಗಣೆಯಂತ್ರದ ರಚನೆಗಳಾದರೆ, ಇನ್ನು ಕೆಲವು ನಕ್ಷತ್ರಾಕಾರದಲ್ಲಿ ರೂಪಗೊಂಡು ಆಕರ್ಷಣೀಯವಾಗಿವೆ(ಛಾಯಾಚಿತ್ರ-೩೩). ಈ ನಕ್ಷತ್ರಾಕಾರದ ಕಂಬಗಳು ಪೀಠಭಾಗದಲ್ಲಿ ಚೌಕಾಕಾರ ವಾಗಿದ್ದರೂ, ಪಾದಭಾಗದಲ್ಲಿ ಹದಿನಾರು ಮುಖಗಳಿರುವ ನಕ್ಷತ್ರ ಆಕಾರವನ್ನು ಪಡೆದುಕೊಂಡಿವೆ. ಅಲ್ಲಿಂದ ಹುಟ್ಟಿಕೊಂಡ ಹದಿನಾರು ಲಂಬರೇಖೆಗಳು ದಂಡಾಗ್ರಭಾಗದಲ್ಲಿಯ 'ಮಂಡಿ'ಯವರೆಗೂ ಮುಂದುವರೆದಿವೆ. ದಂಡಭಾಗದಲ್ಲಿ, ಅಡ್ಡ ಗೆರೆಗಳ ಮತ್ತು ಅಧೋಮುಖ, ಊರ್ಧ್ವಮುಖ ಹಾವಿನ ಹೆಡೆಗಳನ್ನು ಹೋಲುವ ಅಲಂಕರಣವು, ನಕ್ಷತ್ರ ಮಾದರಿಯನ್ನೇ ಅನುಸರಿಸಿ ರಚನೆಗೊಂಡ ಗಂಟಾ ಭಾಗವು ಒಟ್ಟಾರೆ ಕಂಬದ ಸೌಂದರ್ಯವನ್ನು ಹೆಚ್ಚಿಸಿವೆ. ಮಧ್ಯದ ನಾಲ್ಕು ಕಂಬಗಳು ತಿರುಗಣೆಯಂತ್ರದ ರಚನೆಗಳಾಗಿದ್ದು ಗೂಢಮಂಟಪದ ಚೌಕಾಕಾರದ ವೇದಿಕೆಯ ತುದಿಯಲ್ಲಿ ನಿಂತಿವೆ. ಇಲ್ಲಿ ಚೌಕಾಕಾರದ ಮತ್ತು ವೃತ್ತಾಕಾರದ ಎರಡೂ ವೇದಿಕೆಗಳು ಇರುವುದು ವಿಶೇಷ. ಅರ್ಧಅಡಿ ಎತ್ತರದ ಚೌಕಾಕಾರದ ವೇದಿಕೆಯು ಮಧ್ಯ ಕಂಬಗಳ ಹೊರ ಮೂಲೆಯನ್ನು ಸ್ಪರ್ಶಿಸಿದಂತೆ ರೂಪಗೊಂಡಿದ್ದರೆ, ಅದರ ಮೇಲೆ ಅರ್ಧಅಡಿ ಎತ್ತರದ ವೃತ್ತಾಕಾರದ ವೇದಿಕೆಯು ಮಧ್ಯ ಕಂಬಗಳ ಒಳಮೂಲೆಯನ್ನು ಸ್ಪರ್ಶಿಸಿದಂತೆ ರೂಪಗೊಂಡಿದೆ. ಗೂಢಮಂಟಪದ ಎಲ್ಲ ಕಂಬಗಳೂ ತ್ರಿಕೋನ ಮಾದರಿಯ ಬೋದಿಗೆಯನ್ನು ಹೊಂದಿದ್ದು, ಸಿಂಹ ಮುಖಗಳಿಂದ ಅಲಂಕೃತಗೊಂಡಿವೆ. ಎರಡು ಅಡಿ ದಪ್ಪದ ತೊಲೆಗಳು ಗೂಢಮಂಟಪದ ಛತ್ತಿನಲ್ಲಿ ಹಬ್ಬಿಕೊಂಡಿವೆ. ಮಧ್ಯದ ಚೌಕಾಕಾರದ ವಿತಾನವು ಸೂಕ್ಷ್ಮ ಕೆತ್ತನೆಗಳಿಂದ ಆಕರ್ಷಕವಾಗಿ ರಚನೆಗೊಂಡಿದೆ. ಈ ವಿತಾನದ ಉತ್ತರಾ ಭಾಗದ ಒಳಮುಖದಲ್ಲಿ ದ್ವಾದಶ ಆದಿತ್ಯರು ಬ್ರಹ್ಮ, ವಿಷ್ಣು, ಮಹೇಶ್ವರರ ಉಬ್ಬುಶಿಲ್ಪಗಳನ್ನು ಕೊರೆಯಲಾಗಿದೆ. ಹೊರಮುಖದಲ್ಲಿ ಕಪೋತ ಮಾದರಿ ರಚನೆ ಇದ್ದು ಅಲ್ಲಿ ಮುತ್ತಿನ ಸರಗಳನ್ನು ಕಟ್ಟಿದಂತೆ ಅಲಂಕರಣವಿದೆ. ವಿತಾನದಲ್ಲಿ ಒಂಬತ್ತು ಚೌಕಗಳಿದ್ದು ಅಷ್ಟದಿಕ್ಪಾಲಕರನ್ನೂ, ಮಧ್ಯದಲ್ಲಿ ತಾಂಡವ ಶಿವನನ್ನು ಬಿಡಿಸಲಾಗಿದೆ. ಒಟ್ಟಾರೆ ಗೂಢಮಂಟಪದ ಈ ಮಧ್ಯಭಾಗವು ನಾಲ್ಕು ಕಂಬಗಳಿಂದ ರಚನೆಗೊಂಡ ಮಂಟಪದಂತೆ ಆಕರ್ಷಕವಾಗಿ ಎದ್ದು ಕಾಣುತ್ತದೆ. ಹದಿನಾಲ್ಕು ಕಂಬಗಳಿಂದ ರಚನೆಗೊಂಡ ಸುತ್ತಲಿನ ಕಕ್ಷಾಸನವು ಎರಡು ಅಡಿ ಅಗಲವಾಗಿದೆ. ತೆರೆದ ಕಕ್ಷಾಸನವನ್ನು ಈಗ ಮುಚ್ಚಲಾಗಿದೆ. ನವರಂಗದ ದ್ವಾರಬಂಧವು ಇತ್ತೀಚೆಗೆ ದುರಸ್ತಿಗೊಂಡು ತ್ರಿಶಾಖೆಗಳನ್ನು ಒಳಗೊಂಡ ಮರದ ರಚನೆಯಾಗಿದೆ.

**ಶಾಸನಗಳಿಂದ ಹೆಚ್ಚಿನ ವಿವರ :** ಶಾಸನಗಳಲ್ಲೂ ಸಹ ಈ ಊರನ್ನು 'ಅಬ್ಬಲೂರು' ಎಂದೇ ಉಲ್ಲೇಖಿಸ ಲಾಗಿದೆ.[೨೬] ಈಗ ಬಸವೇಶ್ವರ ದೇವಾಲಯವೆಂದು ಕರೆಯಲಾಗುವ ಈ ದೇವಾಲಯವು ಶಾಸನೋಕ್ತ ಬ್ರಹ್ಮಲಿಂಗೇಶ್ವರ ದೇವಾಲಯವಾಗಿದೆ. ಇದನ್ನು ಗ್ರಾಮದ ಗಾವುಂಡನಾದ ಬಮ್ಮನು ನಿರ್ಮಿಸಿದನು. ಈ ದೇವಾಲಯವು ಮತ್ತು ಇದಕ್ಕೆ ಸಂಬಂಧಿಸಿದ ಮಠವು ಬಳ್ಳಿಗಾವೆಯ, ಕೇದಾರೇಶ್ವರ ಮಠದ ಯತಿ ಪರಂಪರೆಯವರ ಮೇಲ್ವಿಚಾರಣೆಯಲ್ಲಿ ಇತ್ತು. ಕ್ರಿ.ಶ.೧೧೦೧ರ ಶಾಸನದಲ್ಲಿ ದಂಡನಾಯಕ ಗೋವಿಂದರಸ ದಾನ ಕೊಡುವ ಸಂದರ್ಭದಲ್ಲಿ ಸೋಮೇಶ್ವರ ಪಂಡಿತ ದೇವರ ಯತಿ ಪರಂಪರೆಯನ್ನು ಹೇಳಿದೆ.

ಶ್ರೀಮದಬ್ಬಲೂರೇಚಗಾವುಂಡನ ಗುರುಗಳ್ ಶ್ರೀ ಸೋಮೇಶ್ವರ ಪಂಡಿತ ದೇವರಜ್ಜ ಗುರುಗಳ ತಪಃ ಪ್ರಭಾವಮೆಂತೆಂದೊಡೆ

ಧರೆಗೆಸೆವ ಶಕ್ತಿಪರ್ಷೆಗೆ
ಕರಮಗ್ರಣಿಯೆನಿಪ ಪರ್ವ್ವತಾವಳಿಯೊಳ್ ಮೂ-
ವರ ಕೋಣೆಯ ಸಂತತಿಗಾ-
ಭರಣಂ ಕೇದಾರಶಕ್ತಿ ಯತಿಪತಿ ನೆಗಳ್ದಂ

ಅಜ್ಜ ಗುರುಗಳು ಎಂದರೆ ಗುರುವಿನ ಗುರು. ಬಳ್ಳಿಗಾವೆಯ ಕೇದಾರೇಶ್ವರ ಮಠದ ಸ್ಥಾಪಕ ಮೂವರ ಕೋಣೆಯ ಸಂತತಿಯ ಕೇದಾರಶಕ್ತಿಯ ಶಿಷ್ಯ ಶ್ರೀಕಂಠದೇವ. ಶ್ರೀಕಂಠದೇವನ ಶಿಷ್ಯ ಇಲ್ಲಿಯ ದಾನ ಸ್ವೀಕರಿಸಿದ ಸೋಮೇಶ್ವರ ಪಂಡಿತದೇವ. ಕ್ರಿ.ಶ. ೧೧೪೪ರ ಶಾಸನದಲ್ಲಿ ಏಚಗಾವುಂಡನ ಮಗ ಬಮ್ಮಗಾವುಂಡನು ದಾನ ಬಿಡುವ ಸಂದರ್ಭದಲ್ಲಿ ಮೂವರ ಕೋಣೆಯ ಸಂತತಿಯ ಜ್ಞಾನಶಕ್ತಿ ಪಂಡಿತದೇವರ ಕಾಲು ತೊಳೆದು ಕೊಟ್ಟಿರುವನು. ಶಾಸನಗಳು ದೇವಾಲಯದ ಮಠದಲ್ಲಿ ನಡೆಯುತ್ತಿರುವ ವಿದ್ಯಾದಾನದ ಬಗ್ಗೆ ಸಮಗ್ರ ಮಾಹಿತಿಯನ್ನು ಒದಗಿಸುವುದಿಲ್ಲ. ಆದರೂ ವಿದ್ಯಾದಾನಕ್ಕೆ ಪ್ರಸಿದ್ಧ ಮಠವಾದ ಬಳ್ಳಿಗಾವೆಯ ಕೇದಾರೇಶ್ವರ ಮಠವನ್ನು 'ಭವಾನೀ ಭವನದಂತೆ ಬ್ರಹ್ಮಚಾರಿ ಸದಾಚಾರ ಸಂಭಾವಿತಮುಂ ಕುರುಕೇತ್ರದಂತೆ ಸರಸ್ವತೀ ವಿಳಸಿತಮುಂ ಖಚರ ಲೋಕದಂತೆ ವಿದ್ಯಾಧರಾಧೀಶ್ವರ ಪರಿವೃತ'ವೂ ಆಗಿತ್ತು ಎಂದು ಶಾಸನಗಳು ಬಣ್ಣಿಸುತ್ತವೆ. ಅಲ್ಲಿಯ ಗುರುಗಳ ಪಾಂಡಿತ್ಯ ಮತ್ತು ಪಾಠಕ್ರಮಗಳು ನಾನಾ ಭಾಗಗಳಿಂದ ವಿದ್ಯಾರ್ಥಿಗಳನ್ನು ಸೆಳೆಯುತ್ತಿದ್ದುವು. ಋಗ್ವೇದ, ಯಜುರ್ವೇದ ಮುಂತಾದ ವೇದಗಳ, ಕೌಮಾರ, ಪಾಣಿನೀಯ ಮುಂತಾದ ವ್ಯಾಕರಣಗಳ, ಷಡ್ದರ್ಶನಗಳ, ಲಾಕುಳ ಸಿದ್ಧಾಂತ, ಪಾತಂಜಳ ಯೋಗಶಾಸ್ತ್ರ ಮತ್ತು ಪುರಾಣ, ಕಾವ್ಯ, ನಾಟಕ ಮುಂತಾದವುಗಳ ಅಧ್ಯಯನವು ಅಲ್ಲಿ ನಡೆಯುತ್ತಿತ್ತು. ಅದು ದೇಶದ ಎಲ್ಲೆಡೆಗಳಿಂದ ಬಂದ ಸನ್ಯಾಸಿಗಳ, ಭಿಕ್ಷುಕರ, ರೋಗಿಗಳ, ಕಲಾವಿದರ ಆಶ್ರಯಸ್ಥಾನವಾಗಿತ್ತು ಎಂದು ಶಾಸನಗಳು ಬಣ್ಣಿಸಿವೆ.[೨೩೭] ಬಳ್ಳಿಗಾವೆ ಕೇದಾರೇಶ್ವರ ಮಠದ ಯತಿಗಳೇ ಇಲ್ಲಿಯೂ ಕಾರ್ಯ ನಿರ್ವಹಿಸುತ್ತಿದ್ದುದರಿಂದ ಇಲ್ಲಿಯೂ ಅದೇ ರೀತಿಯಲ್ಲಿ ವಿದ್ಯಾದಾನ ನಡೆಯುತ್ತಿತ್ತು ಎಂದು ಹೇಳಬಹುದು.

ಬ್ರಹ್ಮಲಿಂಗೇಶ್ವರ ತ್ರೈಪುರುಷ ದೇವಾಲಯದ ದಕ್ಷಿಣಕ್ಕೆ ಸರಸ್ವತಿ ಮಂದಿರವನ್ನು ಕಾಣುತ್ತೇವೆ. ಉತ್ತರಾಭಿಮುಖವಾದ ಈ ಮಂದಿರವು ಚೌಕಾಕಾರದ ಗರ್ಭಗೃಹವನ್ನು ಹೊಂದಿದ್ದು ಮಧ್ಯದಲ್ಲಿ ಹಂಸಪೀಠದ ಮೇಲೆ ಕುಳಿತ ಚತುರ್ಭುಜ ಸರಸ್ವತಿಯ ವಿಗ್ರಹವಿದೆ. ಗರ್ಭಗೃಹದ ಎರಡೂ ಪಕ್ಕಗಳಲ್ಲಿ ಕೋಣೆಯಂತಹ ರಚನೆಗಳಿವೆ(ತಳವಿನ್ಯಾಸ ರೇಖಾಚಿತ್ರ-೨೩೮). ಈ ಕೋಣೆಗಳು ಗ್ರಂಥಾಲಯವಾಗಿರಬಹುದು ಅಥವಾ ತಪೋಧನರ ಉಪಯೋಗಕ್ಕೆ ಇರುವ ಕೊಠಡಿಗಳಾಗಿರಬಹುದು. ಮಂದಿರವು ವಿಶಾಲವಾದ ನವರಂಗವನ್ನು ಹೊಂದಿದೆ. ಮಧ್ಯದ ಚೌಕಾಕಾರದ ವೇದಿಕೆಯ ಮೇಲೆ ನಾಲ್ಕು ಕಂಬಗಳಿವೆ. ನವರಂಗದ ದ್ವಾರಬಂಧವು ತ್ರಿಶಾಖೆಯಿಂದ ಕೂಡಿದ್ದು ಲಲಾಟಫಲಕದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ದ್ವಾರದ ಇಕ್ಕೆಲಗಳಲ್ಲಿ ನಾಲ್ಕು ಕಂಬಗಳಿಂದ ರಚನೆಗೊಂಡ ಜಗಲಿ ಇದೆ. ಬ್ರಹ್ಮಲಿಂಗೇಶ್ವರ ದೇವಾಲಯಕ್ಕೆ ಸಂಬಂಧಪಟ್ಟಂತೆ ಮೂರು ದಾನಶಾಸನಗಳಿವೆ. ಇಲ್ಲಿಯ ಮಠ ಹಾಗೂ ತಪೋಧನರ ಆಹಾರಕ್ಕೂ ದಾನಗಳು ವಿನಿಯೋಗ ಗೊಂಡಿವೆ(ಪಟ್ಟಿ ೧೧). ಈ ಆಧಾರಗಳಿಂದ ದೇವಾಲಯವು ಪ್ರಸಿದ್ಧ ವಿದ್ಯಾಕೇಂದ್ರವಾಗಿತ್ತು ಎಂದು ಸ್ಪಷ್ಟವಾಗುತ್ತದೆ.

## ಪಟ್ಟಿ-೧೧

| ಕ್ರ. ಸಂ. | ಊರು | ದೇವಾಲಯ ಹೆಸರು | ದಾನ ನೀಡಿದವರು | ದಾನ ಸ್ವೀಕರಿಸಿದವರು | ದಾನ ವಿವರ | ಕ್ರಿ.ಶ. | ದಾನದ ವಿನಿಯೋಗ | ದಾನ ನೀಡಿದ ಸಂದರ್ಭ (ಶಾಸನದಲ್ಲಿ ಉಲ್ಲೇಖಿಸಿದಂತೆ) | ಉಲ್ಲೇಖ |
|---|---|---|---|---|---|---|---|---|---|
| ೧. | ಅಬ್ಬಲೂರು ತಾ. ಹಿರೇಕೆರೂರು | ಬ್ರಹ್ಮಲಿಂಗೇಶ್ವರ | ದಂಡನಾಯಕ ಗೋವಿಂದರಸ | ಸೋಮೇಶ್ವರ ಪಂಡಿತ ದೇವ | ಮರಿಗನಹಳ್ಳಿ ಗ್ರಾಮ | ೧೧೦೧ | ದೇವರ ಅಂಗಭೋಗಕ್ಕೆ, ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆ, ಯತಿಗಳ, ವಿದ್ಯಾರ್ಥಿಗಳ ಆಹಾರಕ್ಕೆ | ವಿಶು ಸಂವತ್ಸರ ವೈಶಾಖ ಮಾಸ ಆದಿತ್ಯವಾರ, ವ್ಯತಿಪಾತ ಸೂರ್ಯಗ್ರಹಣ ದಂದು | ಎ. ಇಂ. ಸಂ. V ಪು. ೨೪೫ |
| ೨. | | | ಹತ್ತು ಗ್ರಾಮಸ್ಥರು | ಸೋಮೇಶ್ವರ ಪಂಡಿತ ದೇವ | ಚಿನ್ನ ... | ೧೧೦೪ | ದೇವರ ಅಂಗಭೋಗ ಮತ್ತು ಎಣ್ಣೆಗೆ, ಹರಿದ್ರ, ಅರಿಷಿಣ | ತಾರಣ ಸಂವತ್ಸರ ಭಾದ್ರ ಪದ ಮಾಸ ಶುಕ್ಲಪಕ್ಷ ಆದಿತ್ಯವಾರ | ಅದೇ |
| ೩. | | | ದಂಡನಾಯಕ ಮಲ್ಲಿಭಾವರಸ | ಜ್ಞಾನಶಕ್ತಿ ಪಂಡಿತ ದೇವ | ಭತ್ತದ ಗದ್ದೆ, ಕೆರೆ ಕೆಳಗೆ ಸಾವಿರ ಮರಗಳು, ಇಪ್ಪತ್ತು ಮನೆಗಳ ನಿವೇಶನ .... ಸುಂಕದಾನ | ೧೧೪೪ | ದೇವರ ನಂದಾದೀವಿಗೆಗೆ, ತಪೋಧನ ಆಹಾರಕ್ಕೆ, ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆ | ಸೌಮ್ಯ ಸಂವತ್ಸರ ಮಾಘ ಮಾಸದ ಅಮವಾಸ್ಯೆ ಸೂರ್ಯ ಗ್ರಹಣದಂದು | ಅದೇ |

ಊರು : ನಾಗವಂದ (ತಾ.ಹಿರೇಕೆರೂರು)

ಸ್ಥಳ : ಊರ ಈಶಾನ್ಯಕ್ಕೆ

ಹೆಸರು : ಸಿದ್ದೇಶ್ವರ ದೇವಾಲಯ (ಬ್ರಹ್ಮೇಶ್ವರ)

ಅಭಿಮುಖ : ದಕ್ಷಿಣ

ನಿವೇದನೆ : ಈಶ್ವರ, ವಿಷ್ಣು, ಸೂರ್ಯ

ಕಾಲ : ಕ್ರಿ.ಶ.೧೧೨೯

ಶೈಲಿ : ಹೊಯ್ಸಳ

ಬಳಸಿದ ವಸ್ತು : ನೀಲಿ ಛಾಯೆಯ ಕಪ್ಪು ಕಲ್ಲು

## ದೇವಾಲಯ ವಾಸ್ತುಶೈಲಿ

**ತಳವಿನ್ಯಾಸ :** (ತಳವಿನ್ಯಾಸ ರೇಖಾಚಿತ್ರ-೧೩) ಮೂರು ಗರ್ಭಗೃಹಗಳು, ಮೂರು ಅರ್ಧಮಂಟಪಗಳು, ನವರಂಗ, ದಕ್ಷಿಣ ದಿಕ್ಕಿಗೆ ಪ್ರವೇಶದ್ವಾರ.

**ಊರ್ಧ್ವಮುಖ ರಚನೆ :** ಹಿರೇಕೆರೂರಿನಿಂದ ಆಗ್ನೇಯಕ್ಕೆ ೨೩ ಕಿ.ಮೀ. ದೂರದಲ್ಲಿರುವ ಈ ದೇವಾಲಯವು ಹೊಯ್ಸಳ ಶೈಲಿಯ ಕೆಲವು ಲಕ್ಷಣಗಳನ್ನು ಒಳಗೊಂಡಿದೆ. ದೇವಾಲಯದ ಮುಕ್ಕಾಲು ಭಾಗವು ನೆಲದಲ್ಲಿ ಹುಗಿದಿರುವುದರಿಂದ ದೇವಾಲಯದ ಅಧಿಷ್ಠಾನವು ಕಂಡುಬರುವುದಿಲ್ಲ. ಒಂದು ಅಡಿ ಎತ್ತರದಷ್ಟು ಭಿತ್ತಿ ಭಾಗವು ಮಾತ್ರ ನೆಲದಿಂದ ಮೇಲಕ್ಕೆ ಕಾಣಿಸುತ್ತದೆ. ೧/೨ x ೫ ಅಡಿ ಉದ್ದದ ಕಲ್ಲುಗಳನ್ನು ಭಿತ್ತಿಯ ಒಳಮುಖದಲ್ಲಿ ಮತ್ತು ಹೊರಮುಖದಲ್ಲಿ ಹೊಂದಿಸಿ ಮಧ್ಯದ ಭಾಗವನ್ನು ಕಲ್ಲುಮಣ್ಣುಗಳಿಂದ ತುಂಬಿ ೨ ೧/೨ ಅಡಿ ದಪ್ಪದ ಭಿತ್ತಿಯನ್ನು ರಚಿಸಲಾಗಿದೆ. ಪ್ರಸ್ತರದಲ್ಲಿ ಹಿಂಜರಿದ ಕಪೋತ ಭಾಗದಲ್ಲಿ ದಂತ ಮಾದರಿಯ ಅಲಂಕರಣವನ್ನು ಮಾತ್ರ ಕಾಣುತ್ತೇವೆ. ಉಳಿದಂತೆ ದೇವಾಲಯದ ಮೇಲ್ಕಟ್ಟಡವು ದುರಸ್ತಿಗೊಂಡಿದೆ. ಮುಖ್ಯಗರ್ಭಗೃಹಕ್ಕೆ ಇತ್ತೀಚೆಗೆ ಕಟ್ಟಲಾದ ಕದಂಬನಾಗರ ಶೈಲಿಯನ್ನು ಹೋಲುವ ಶಿಖರವನ್ನು ಕಾಣುತ್ತೇವೆ(ಛಾಯಾಚಿತ್ರ-೩೪).

**ತಿರ್ಯಙ್ಮುಖ ರಚನೆಗಳು :** ದೇವಾಲಯದ ಪ್ರವೇಶದ್ವಾರವು ದಕ್ಷಿಣ ದಿಕ್ಕಿನಲ್ಲಿ ಇದ್ದರೂ ಮುಖ್ಯ ಗರ್ಭಗೃಹವು ಪೂರ್ವಾಭಿಮುಖವಾಗಿದೆ. ೬.೪x೬.೪ ಅಡಿ ವಿಸ್ತೀರ್ಣದಲ್ಲಿದೆ. ಪಶ್ಚಿಮ ಮತ್ತು ಉತ್ತರ ದಿಕ್ಕಿನ ಗೋಡೆಗಳಲ್ಲಿ ಒಂದು ಅಡಿ ಅಗಲದ ಮುಂಚಾಚಿದ ಫಲಕಗಳಿವೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಗರ್ಭಗೃಹದ ಮಧ್ಯದಲ್ಲಿ ಎರಡು ಅಡಿ ಎತ್ತರದ, ಚೌಕಾಕಾರದ ಯೋನಿ ಪೀಠವಿರುವ ಲಿಂಗವಿದೆ. ಗರ್ಭಗೃಹದ ಬಾಗಿಲುವಾಡವು ಪಂಚಶಾಖೆಗಳಿಂದ ಕೂಡಿದ್ದು ಅಲಂಕಾರರಹಿತವಾಗಿದೆ. ಮೊದಲ ಮೂರು ಶಾಖೆಗಳು ಲಲಾಟದಲ್ಲಿಯೂ ಮುಂದುವರೆದಿವೆ. ಲಲಾಟದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಬಾಗಿಲುವಾಡವು ನಾಲ್ಕು ಅಡಿ ಎತ್ತರವಾಗಿದ್ದು ಗಿಡ್ಡದಾಗಿದೆ. ಗರ್ಭಗೃಹದ ಮುಂದಿನ ರಚನೆಯಾದ ಅರ್ಧಮಂಟಪವು ೫x೫ ಅಡಿ ವಿಸ್ತೀರ್ಣದಲ್ಲಿದೆ. ಇದರ ಬಾಗಿಲುವಾಡವು ಬಹು ಆಕರ್ಷಣೀಯವಾಗಿದೆ. ಇಲ್ಲಿಯ ಅಲಂಕರಣವು ಬಳ್ಳಿಗಾವೆಯ ತ್ರಿಪುರಾಂತಕೇಶ್ವರ ದೇವಾಲಯದ ಮುಖ್ಯ ಅರ್ಧಮಂಟಪದ ದ್ವಾರಬಂಧವನ್ನು ನೆನಪಿಸುತ್ತದೆ. ಮಧ್ಯದಲ್ಲಿ ಒಂದು ಮುಂಚಾಚನ್ನು ಹೊಂದಿದ ತೆಳುವಾದ ಹೊಸ್ತಿಲ




ತಳವಿನ್ಯಾಸ ರೇಖಾಚಿತ್ರ-೧೩, ಸಿದ್ದೇಶ್ವರ (ಶಾಸನೋಕ್ತ ಬ್ರಹ್ಮೇಶ್ವರ) ದೇವಾಲಯ, ನಾಗವಂದ
(ತಾ.ಹಿರೇಕೆರೂರು)
೧. ಗರ್ಭಗೃಹ, ೨. ಅರ್ಧಮಂಟಪ, ೩. ನವರಂಗ

ಮೇಲೆ ದ್ವಾರ ಫಲಕಗಳನ್ನು ನಿಲ್ಲಿಸಲಾಗಿದೆ. ಇವು ನಾಲ್ಕು ಶಾಖೆಗಳಿಂದ ಕೂಡಿವೆ. ಶಾಖೆಗಳು ಕ್ರಮವಾಗಿ ಅಲಂಕಾರ ರಹಿತ ತೆಳುಪಟ್ಟಿ, ಜಾಲಂದ್ರ, ಸ್ತಂಭ ಮತ್ತು ವಲ್ಲಿಬಂಧ ಪಟ್ಟಿಕೆಗಳಿಂದ ಅಲಂಕೃತಗೊಂಡಿವೆ. ಜಾಲಂದ್ರ ಶಾಖೆಯು ಮುಕ್ಕಾಲು ಅಡಿ ಅಗಲ, ಮೂರು ಅಡಿ ಎತ್ತರವಾಗಿದ್ದು ಮಧ್ಯದಲ್ಲಿ ವಜ್ರಾಕೃತಿಯಲ್ಲಿ ಕಂಡಿಗಳು ಬರುವಂತೆ ಪಟ್ಟಿಗಳನ್ನು ಕೊರೆಯಲಾಗಿದೆ. ಸ್ತಂಭಶಾಖೆಯು ಕಬ್ಬಿನ ಜಲ್ಲೆಯಂತೆ ಅಲಂಕೃತಗೊಂಡಿದೆ. ವಲ್ಲಿಬಂಧ ಪಟ್ಟಿಯಲ್ಲಿ ಪಂಚತಂತ್ರ ಕಥೆಗಳ ಉಬ್ಬುಶಿಲ್ಪಗಳನ್ನು ಕೊರೆಯಲಾಗಿದೆ. ಆಮೆ ಮತ್ತು ಹಂಸ ಪಕ್ಷಿಗಳ ಕಥೆ, ಮಂಗವು ಮಹಿಳೆಯೊಬ್ಬಳ ಸೆರಗನ್ನು ಎಳೆಯುತ್ತಿರುವ ದೃಶ್ಯಗಳಿವೆ. ಈ ಶಾಖೆಗಳ ಪಾದಫಲಕದಲ್ಲಿ ಕಬ್ಬಿನ ಜಲ್ಲೆಯಿಂದ ಮಾಡಿದ ಬಿಲ್ಲನ್ನು ಧರಿಸಿದ ಮನ್ಮಥ ಮತ್ತು ಕೊಳಲುಧಾರಿಯರ ಉಬ್ಬುಶಿಲ್ಪಗಳಿವೆ. ದ್ವಾರದ ಲಲಾಟವೂ ಸಹ ಬಹು ಆಕರ್ಷಣೀಯವಾಗಿದೆ. ಮಕರತೋರಣದಲ್ಲಿ ಬ್ರಹ್ಮ, ನಟರಾಜ ಮತ್ತು ವಿಷ್ಣು ಉಬ್ಬುಶಿಲ್ಪಗಳಿವೆ. ನಟರಾಜನ ಶಿಲ್ಪವು ಮನೋಹರವಾಗಿದೆ. ತ್ರಿಮೂರ್ತಿಗಳ ಅಕ್ಕಪಕ್ಕದಲ್ಲಿ, ಗಡ್ಡಧಾರಿ ಮನುಷ್ಯನ ಮುಖವುಳ್ಳ ಸಿಂಹವು ಆನೆಯನ್ನು ನೆಲಕ್ಕೆ ಕೆಡವಿರುವ ದೃಶ್ಯವನ್ನು, ಇನ್ನೊಂದು ಪಕ್ಕದಲ್ಲಿ ಗಡ್ಡಧಾರಿ ಮನುಷ್ಯನು ಸಿಂಹದೊಂದಿಗೆ ಹೋರಾಡುತ್ತಿರುವ ದೃಶ್ಯವನ್ನು ಕೊರೆಯಲಾಗಿದೆ.

ಉತ್ತರದಿಕ್ಕಿನ ಗರ್ಭಗೃಹವು ವಿಸ್ತೀರ್ಣದಲ್ಲಿ ಮುಖ್ಯಕ್ಕಿಂತ ಒಂದು ಅಡಿ ಅಗಲದಲ್ಲಿ ಕಡಿಮೆ ಇದೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಈಗ ಈ ಗೃಹದಲ್ಲಿ ನಾಲ್ಕು ಅಡಿ ಎತ್ತರದ ದ್ವಿಭುಜ ಶಿಲ್ಪವಿದೆ. ಈ ಶಿಲ್ಪವು ಒಂದು ಹಸ್ತದಲ್ಲಿ ಲಿಂಗ ಇನ್ನೊಂದು ಹಸ್ತದಲ್ಲಿ ಜಪಮಣಿ ಸರವನ್ನು ಧರಿಸಿದೆ. ಗರ್ಭಗೃಹದ ದ್ವಾರವು ಅಲಂಕಾರ ರಹಿತವಾದ ಪಂಚಶಾಖೆಗಳಿಂದ ಕೂಡಿದ್ದು, ಮೊದಲ ಮೂರು ಶಾಖೆಗಳು ಲಲಾಟದಲ್ಲಿಯೂ ಮುಂದುವರೆದಿವೆ. ಲಲಾಟಫಲಕದಲ್ಲಿ ಗಜಲಕ್ಷ್ಮೀ ಶಿಲ್ಪವಿದೆ. ಬಾಗಿಲುವಾಡವು ನಾಲ್ಕು ಅಡಿ ಎತ್ತರವಾಗಿದೆ. ಅರ್ಧಮಂಟಪವು ವಿಸ್ತೀರ್ಣದಲ್ಲಿ ಮುಖ್ಯದ ಅರ್ಧಮಂಟಪವಷ್ಟೇ ಇದೆ. ಇದರ ಬಾಗಿಲುವಾಡವೂ ಸಹ ಆಕರ್ಷಕವಾಗಿದೆ. ನಾಲ್ಕು ಶಾಖೆಗಳಿಂದ ಅಲಂಕೃತಗೊಂಡಿದೆ. ಶಾಖೆಗಳು ಕ್ರಮವಾಗಿ ಅಲಂಕಾರರಹಿತ ತೆಳುಪಟ್ಟಿ, ಜಾಲಂದ್ರ, ಸ್ತಂಭ, ಲತಾಸುರುಳಿಗಳಿಂದ ಅಲಂಕೃತಗೊಂಡಿವೆ. ಜಾಲಂದ್ರಗಳು ವಿನ್ಯಾಸದಲ್ಲಿ ಮುಖ್ಯದ ಜಾಲಂದ್ರಗಳನ್ನು ಹೋಲುತ್ತವೆ. ಸ್ತಂಭ ಶಾಖೆಯು ಕಬ್ಬಿನ ಜಲ್ಲೆಯಂತೆ ಇದೆ. ಲತಾ ಸುರುಳಿಗಳು ಒಂದು ಅಡಿ ಅಗಲವಾಗಿದ್ದು ಅವುಗಳಲ್ಲಿ ಪಂಚತಂತ್ರದ ಕಥೆಗಳನ್ನು, ವಾದ್ಯ ಮೇಳವನ್ನು ಕಂಡರಿಸಲಾಗಿದೆ. ಪಾದಫಲಕಗಳಲ್ಲಿ ಬಲಿ ಚಕ್ರವರ್ತಿಯ ಕಥೆಯ ಸನ್ನಿವೇಶವನ್ನು, ವಿಷ್ಣುವಿನ ವಿಶ್ವರೂಪವನ್ನು ಆಕರ್ಷಕವಾಗಿ ಕೊರೆಯಲಾಗಿದೆ. ಈ ಉಬ್ಬುಶಿಲ್ಪಗಳ ಆಧಾರದಿಂದ ಈ ಗೃಹವು ವಿಷ್ಣು ಗೃಹವಾಗಿರಬಹುದು ಎಂದು ಸ್ಪಷ್ಟವಾಗಿ ಹೇಳಬಹುದುಡೀ ಗರ್ಭಗೃಹಕ್ಕೆ ಸೇರಿದ ಅನಂತಶಯನ ಶಿಲ್ಪವು ಈಗ ನವರಂಗದಲ್ಲಿದೆ. ದ್ವಾರದ ಲಲಾಟ ಭಾಗದಲ್ಲಿ ಸ್ತಂಭಶಾಖೆಯ ಮೇಲೆ ಕುಳಿತ ಮಕರಗಳಿವೆ. ತೋರಣದ ಅಡಿಯಲ್ಲಿ ದೊಡ್ಡ ಗಾತ್ರದ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ(ಛಾಯಾಚಿತ್ರ-೩೫).

ಪೂರ್ವದಿಕ್ಕಿನ ಗರ್ಭಗೃಹವು ವಿಸ್ತೀರ್ಣದಲ್ಲಿ ಮುಖ್ಯದಷ್ಟೇ ಇದೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಈ ಗೃಹದ ಮಧ್ಯದಲ್ಲಿ ಸೂರ್ಯ ಪೀಠವಿದೆ. ಭಗ್ನಗೊಂಡ ಸೂರ್ಯ ಶಿಲ್ಪವನ್ನು ಗೋಡೆಗೆ




ರೇಖಾಚಿತ್ರ-೧೪, ಸಿದ್ಧೇಶ್ವರ ದೇವಾಲಯದ ನವರಂಗದ ಕಂಬ, ನಾಗವಂದ (ತಾ.ಹಿರೇಕೆರೂರು)
೧. ಪೀಠ, ೨. ಪಾದ, ೩. ದಂಡ, ೪. ಘಟ, ೫. ಫಲಕ, ೬. ಬೋದಿಗೆ

ಆಸೀನ ಇಡಲಾಗಿದೆ. ಗರ್ಭಗೃಹದ ದ್ವಾರಬಂಧವು ಸಾದಾ ಮಾದರಿಯ ಪಂಚಶಾಖೆಗಳಿಂದ ಕೂಡಿದೆ. ಮೊದಲ ಮೂರು ಶಾಖೆಗಳು ಲಲಾಟ ಭಾಗದಲ್ಲೂ ಮುಂದುವರೆದಿವೆ. ಲಲಾಟಫಲಕದಲ್ಲಿ ಗಜಲಕ್ಷ್ಮೀ ಉಬ್ಬುಶಿಲ್ಪವಿದೆ. ಈ ಗೃಹವು ತೆರೆದ ಅರ್ಧಮಂಟಪವನ್ನು ಹೊಂದಿದೆ. ಈ ಭಾಗದಲ್ಲಿ ಮುಖ್ಯ ಗರ್ಭಗೃಹಕ್ಕೆ ಎದುರಾಗಿ ನಾಲ್ಕು ಅಡಿ ಎತ್ತರದ ನಂದಿಶಿಲ್ಪವನ್ನು ಇಡಲಾಗಿದೆ.

ಮೂರೂ ದಿಕ್ಕುಗಳಲ್ಲಿರುವ ವಾಸ್ತು ರಚನೆಗಳನ್ನು ಒಂದೆಡೆ ಸೇರಿಸುವ ನವರಂಗವು ೧೬.೫x೧೬.೫ ಅಡಿ ವಿಸ್ತೀರ್ಣದಲ್ಲಿದೆ. ಮಧ್ಯದಲ್ಲಿ ಚೌಕಾಕಾರದ ವೇದಿಕೆ ಇದೆ. ವೇದಿಕೆಯ ನಾಲ್ಕು ತುದಿಗಳಲ್ಲಿ ನಾಲ್ಕು ಕಂಬಗಳಿವೆ. ಈ ಕಂಬಗಳು ತಿರುಗಣಿ ಯಂತ್ರದಿಂದ ತಯಾರಿಸಿದ ಕಂಬಗಳಾಗಿವೆ. ಚೌಕಾಕಾರದ ಪೀಠದ ಮೇಲೆ ದಂಡಭಾಗವು ಚೌಕಾಕಾರದಲ್ಲಿದೆ. ಅಷ್ಟಮುಖ ತಟ್ಟೆಯಂತಹ ರಚನೆಯ ಮೇಲೆ ಮೇಲಿನ ಭಾಗಗಳು ವೃತ್ತಾಕಾರದಲ್ಲಿವೆ. ಬಳೆಗಳು, ಘಂಟಾಕೃತಿ ಕಂಠ ಭಾಗದಲ್ಲಿ ಇದ್ದರೆ ದಂಡಾಗ್ರದಲ್ಲಿ ಕಳಸ, ತಾಟಿಕಾ, ಘಟ, ಮಂಡಿ ಫಲಕ ಭಾಗಗಳಿವೆ(ರೇಖಾಚಿತ್ರ-೧೪). ಕಂಬದಿಂದ ಕಂಬಕ್ಕೆ ಜೋಡಣೆಗೊಳ್ಳುವ ತೊಲೆಗಳು ನೇರವಾಗಿ ಫಲಕ ಭಾಗದ ಮೇಲೆ ನಿಂತಿವೆ. ತೊಲೆಗಳು ಗೋಡೆ ಭಾಗದ ಕಂಬಗಳೊಂದಿಗೆ ಜೋಡಣೆಗೊಂಡು ನವರಂಗವನ್ನು ಏರ್ಪಡಿಸಿವೆ. ಮಧ್ಯದ ವಿತಾನವು ಸಮತಲದಲ್ಲಿ ಎರಡು ಸುತ್ತಿನ ಕಮಲದ ಅಲಂಕರಣವನ್ನು ಹೊಂದಿದೆ. ಭಿತ್ತಿ ಭಾಗದಲ್ಲಿ ಐದು ಕೋಷ್ಟಗಳನ್ನು ಕಾಣಬಹುದು. ಕೋಷ್ಟಗಳಲ್ಲಿ ನಾಗ, ನಾಗಿಣಿ, ಮಹಿಷಮರ್ದಿನಿ, ಉಮಾಮಹೇಶ್ವರ, ಸಪ್ತಮಾತೃಕಾ ಫಲಕ, ಅನಂತಶಯನ ಶಿಲ್ಪಗಳನ್ನು ಕಾಣಬಹುದು. ಕೋಷ್ಟಗಳು ದೊಡ್ಡ ಗಾತ್ರದಲ್ಲಿದ್ದು ಅಲಂಕಾರರಹಿತವಾಗಿವೆ. ಅಲ್ಲದೆ ಮುಖ್ಯದ ಅಕ್ಕಪಕ್ಕದಲ್ಲಿ ಆರು ಅಡಿ ಎತ್ತರದ ದ್ವಾರಪಾಲಕರ ಶಿಲ್ಪಗಳಿವೆ. ನವರಂಗದ ದ್ವಾರಬಂಧವು ಆಧುನಿಕರಣಗೊಂಡಿದೆ.

**ಶಾಸನಗಳಿಂದ ಹೆಚ್ಚಿನ ವಿವರ :** ಶಾಸನಗಳು ಈ ಗ್ರಾಮವನ್ನು 'ನಾಗಾರ್ಜುನ' ಎಂದು ಉಲ್ಲೇಖಿಸಿವೆ.[೨೩೮] ಸಿದ್ದೇಶ್ವರ ದೇವಾಲಯವೆಂದು ಈಗ ಗುರುತಿಸಲ್ಪಡುವ ಈ ದೇವಾಲಯವು ಶಾಸನೋಕ್ತ ಬ್ರಹ್ಮೇಶ್ವರ ದೇವಾಲಯವಾಗಿದೆ.

..... 'ತುಂಗಭದ್ರಾದೇವಿಯ ಸಂನಿಧಿಯಲೆಡೆವೆಟ್ಟವೆಪ್ಪತ್ತಟಿ ಬಳಿಯ
ನಾಗಾರ್ಜುನದ ಬ್ರಹ್ಮೇಶ್ವರ ದೇವರ ...' ಎಂದುದು ಗಮನಾರ್ಹ.

ಕಲ್ಯಾಣ ಚಾಲುಕ್ಯ ಮೂರನೇ ಸೋಮೇಶ್ವರನ ಕಾಲಕ್ಕೆ ಸೇರಿದ ಎರಡು ಶಾಸನಗಳು ಬ್ರಹ್ಮೇಶ್ವರ ದೇವಾಲಯದ ಬಗ್ಗೆ ಸಮಗ್ರ ಮಾಹಿತಿ ಒದಗಿಸುವುದಿಲ್ಲ. ಗದಗ ತಾಲೂಕಿನ ನಾಗಾವಿಯಂತೆ ಇದೂ ಪ್ರಾಚೀನ ವಿದ್ಯಾರ್ಜನೆಯ ಕೇಂದ್ರವಾಗಿತ್ತು ಎಂದು ಹೇಳಲಾಗಿದೆ.[೨೩೯]

ಪಟ್ಟಿ-೧೨

| ಕ್ರ. ಸಂ. | ಊರು | ದೇವಾಲಯ ಹೆಸರು | ದಾನ ನೀಡಿದವರು | ದಾನ ಸ್ವೀಕರಿಸಿದವರು | ದಾನ ವಿವರ | ಕ್ರಿ.ಶ. | ದಾನದ ವಿನಿಯೋಗ | ದಾನ ನೀಡಿದ ಸಂದರ್ಭ (ಶಾಸನದಲ್ಲಿ ಉಲ್ಲೇಖಿಸಿದಂತೆ) | ಉಲ್ಲೇಖ |
|---|---|---|---|---|---|---|---|---|---|
| ೧. | ನಾಗವಂದ (ನಾಗಾರ್ಜುನ) ತಾ. ಹಿರೇಕೆರೂರು | ಸಿದ್ಧೇಶ್ವರ ಶಾಸನೋಕ್ತ (ಬ್ರಹ್ಮೇಶ್ವರ) | ಮುದ್ದಕನ ಚಟ್ಟ ಮತ್ತು ಬೂವ | – | ಹಂದರದ ಮೇಲಿನ ಸುಂಕ | – | ದೇವರ ನಂದಾದೀವಿಗೆಗೆ | ಕೀಲಕ ಸಂವತ್ಸರದ ಮಾರ್ಗಶಿರದ ಸೋಮಗ್ರಹಣ | ಕ.ಇನ್ಸ್., ಸಂ.V, ನಂ. ೧೯ |

| | | |
|---|---|---|
| ಊರು | : | ಪುರದಕೇರಿ (ತಾ.ಹಿರೇಕೆರೂರು) |
| ಸ್ಥಳ | : | ಗ್ರಾಮದ ಪೂರ್ವಕ್ಕೆ ನದಿ ದಂಡೆಯ ಮೇಲೆ |
| ಹೆಸರು | : | ಸೋಮೇಶ್ವರ ದೇವಾಲಯ |
| ಅಭಿಮುಖ | : | ದಕ್ಷಿಣ |
| ನಿವೇದನೆ | : | ಈಶ್ವರ (ವಿಷ್ಣು, ಸೂರ್ಯ) |
| ಕಾಲ | : | ಕ್ರಿ.ಶ.ಸು.೧೨ನೇ ಶತಮಾನ |
| ಶೈಲಿ | : | ಕಲ್ಯಾಣ ಚಾಲುಕ್ಯ |
| ಬಳಸಿದ ವಸ್ತು | : | ನೀಲಿ ಛಾಯೆಯ ಕಪ್ಪು ಕಲ್ಲು |

**ದೇವಾಲಯ ವಾಸ್ತುಶಿಲ್ಪ**

**ತಳವಿನ್ಯಾಸ :** (ತಳವಿನ್ಯಾಸ ರೇಖಾಚಿತ್ರ-೧೪) ಎರಡು ಗರ್ಭಗೃಹಗಳು, ಒಂದು ಅರ್ಧಮಂಟಪ, ಒಂದು ನವರಂಗ, ದಕ್ಷಿಣ ದಿಕ್ಕಿನಲ್ಲಿ ಪ್ರವೇಶದ್ವಾರ.

**ಊರ್ಧ್ವಮುಖ ರಚನೆ :** ಹಿರೇಕೆರೂರಿನಿಂದ ಆಗ್ನೇಯಕ್ಕೆ ಸುಮಾರು ೩೦ ಕಿ.ಮೀ. ದೂರದಲ್ಲಿರುವ ಈ ದೇವಾಲಯವು ಕಲ್ಯಾಣ ಚಾಲುಕ್ಯ ಶೈಲಿಗೆ ಸೇರುತ್ತದೆ. ದೇವಾಲಯವು ಪೂರ್ತಿ ಆಧುನೀಕರಣಗೊಂಡಿದೆ. ಊರ್ಧ್ವಮುಖ ರಚನೆಯಲ್ಲಿ ಪ್ರಾಚೀನವಾದ ಯಾವ ಅಂಗವೂ ಇಲ್ಲ. ಶಿಖರವು ಮುಖ್ಯ ಗರ್ಭಗೃಹಕ್ಕೆ ಮಾತ್ರ ಇದ್ದು ಅದೂ ಆಧುನಿಕ ಶಿಖರವಾಗಿದೆ. ದುರಸ್ತಿಕಾರ್ಯದಲ್ಲಿ ಉತ್ತರ ದಿಕ್ಕಿನ ಗರ್ಭಗೃಹವನ್ನು ಮತ್ತು ಪೂರ್ವದಿಕ್ಕಿನ ಗರ್ಭಗೃಹವನ್ನು ಕೈ ಬಿಟ್ಟು, ಉತ್ತರ ದಿಕ್ಕಿನ ಅರ್ಧಮಂಟಪ ಭಾಗವನ್ನು ಉಳಿಸಿಕೊಳ್ಳಲಾಗಿದೆ.

**ತಿರ್ಯಙ್ಮುಖ ರಚನೆಗಳು :** ದೇವಾಲಯದ ಪ್ರವೇಶವು ದಕ್ಷಿಣ ದಿಕ್ಕಿನಲ್ಲಿ ಇದ್ದರೂ ಮುಖ್ಯ ಗರ್ಭಗೃಹವು ಪೂರ್ವಾಭಿಮುಖವಾಗಿದೆ. ಈ ಗೃಹವು ೧೦x೧೦ ಅಡಿ ವಿಸ್ತೀರ್ಣದಲ್ಲಿದೆ. ಮಧ್ಯದಲ್ಲಿ ನಾಲ್ಕು ಅಡಿ ಎತ್ತರದ ಆಧುನಿಕ ಲಿಂಗವಿದೆ. ಗರ್ಭಗೃಹದ ದ್ವಾರಬಂಧವು ನಾಲ್ಕು ಶಾಖೆಗಳಿಂದ ಕೂಡಿದೆ. ಶಾಖೆಗಳು ಕ್ರಮವಾಗಿ ವಜ್ರಾಕೃತಿ, ಲತಾ ಸುರುಳಿಯಲ್ಲಿ ವಾದ್ಯಮೇಳ, ಸ್ತಂಭ, ಕಮಲದಳ ಅಲಂಕರಣಗಳಿಂದ ಕೂಡಿದ್ದು ಕೊನೆಯ ಶಾಖೆಯು ಗೋಡೆಯ ಒಳಗೆ ಮುಚ್ಚಿದೆ. ಮೊದಲ ಎರಡು ಶಾಖೆಗಳು ಲಲಾಟದಲ್ಲೂ ಮುಂದುವರೆದಿವೆ. ಅರ್ಧಮಂಟಪವು ನವರಂಗದಷ್ಟೇ ಅಗಲವಾಗಿದ್ದು ಆಯತಾಕಾರದ ರಚನೆಯಾಗಿದೆ. (ತಳವಿನ್ಯಾಸ-೧೪) ಅರ್ಧಮಂಟಪದ ಬಾಗಿಲುವಾಡವು ನಾಗವಂದ ದೇವಾಲಯದ ದ್ವಾರಬಂಧವನ್ನು ಹೋಲುತ್ತದೆ. ತೆಳುವಾದ ಹೊಸ್ತಿಲ ಮೇಲೆ ದ್ವಾರಫಲಕಗಳನ್ನು ನಿಲ್ಲಿಸಲಾಗಿದೆ. ನಾಲ್ಕು ಶಾಖೆಗಳಿಂದ ಕೂಡಿದ ಈ ಫಲಕಗಳು ಕ್ರಮವಾಗಿ ಅಲಂಕಾರ ರಹಿತ ತೆಳುಪಟ್ಟಿ, ಜಾಲಂದ್ರ, ಸ್ತಂಭ ಮತ್ತು ವಲ್ಲಿಬಂಧ ಪಟ್ಟಿಕೆಗಳಿಂದ ಅಲಂಕೃತಗೊಂಡಿವೆ. ಜಾಲಂದ್ರ ಶಾಖೆಯು ಮುಕ್ಕಾಲು ಅಡಿ ಅಗಲ, ಮೂರು ಅಡಿ ಎತ್ತರವಾಗಿದ್ದು, ಮಧ್ಯದಲ್ಲಿ ವಜ್ರಾಕೃತಿಯಲ್ಲಿ ಕಂಡಿಗಳು ಬರುವಂತೆ ಪಟ್ಟಿಗಳನ್ನು ಕೊರೆಯಲಾಗಿದೆ. ಸ್ತಂಭಶಾಖೆಯ ನಂತರದ ಶಾಖೆಯಾದ ವಲ್ಲಿಬಂಧ ಶಾಖೆಯು ಒಂದು ಅಡಿ ಅಗಲವಾಗಿದ್ದು ಅಲ್ಲಿ ಪಂಚತಂತ್ರ ಕಥೆಗಳನ್ನು, ವಾದ್ಯವೃಂದಗಳನ್ನು

ಉ

೧ ಸೆ.ಮೀ. = ೪ ಅಡಿ

ತಳವಿನ್ಯಾಸ ರೇಖಾಚಿತ್ರ-೧೪, ಸೋಮೇಶ್ವರ ದೇವಾಲಯ, ಪುರದಗೇರಿ (ತಾ.ಹಿರೇಕೆರೂರು)

೧. ಗರ್ಭಗೃಹ, ೨. ಅರ್ಧಮಂಟಪ, ೩. ನವರಂಗ

ಕೊರೆಯಲಾಗಿದೆ. ಈ ಶಾಖೆಗಳ ಪಾದಫಲಕದಲ್ಲಿ ಮನ್ಮಥ, ಕೊಳಲುಧಾರಿಯರ ಉಬ್ಬು ಶಿಲ್ಪಗಳಿವೆ. ಲಲಾಟದಲ್ಲಿ ಬ್ರಹ್ಮ, ನಟರಾಜ ಶಿವ, ವಿಷ್ಣು ತ್ರಿಮೂರ್ತಿಗಳ ಉಬ್ಬುಶಿಲ್ಪಗಳು ಆಕರ್ಷಕವಾಗಿವೆ. (ಛಾಯಾಚಿತ್ರ-೩೬) ಉತ್ತರ ದಿಕ್ಕಿನ ಗೃಹದಲ್ಲಿ ಈಗ ನೀಲಮ್ಮನ ಗದ್ದುಗೆಯನ್ನು ಕಾಣುತ್ತೇವೆ. ಮಧ್ಯದ ನವರಂಗವು ೨೪x೨೪ ಅಡಿ ವಿಸ್ತೀರ್ಣವಾಗಿದೆ. ಮಧ್ಯದಲ್ಲಿ ನಾಲ್ಕು ಕಂಬಗಳು ತಿರುಗಣಿ ಯಂತ್ರದಿಂದ ತಯಾರಿಸಿದ ಕಂಬಗಳಾಗಿವೆ. ಚೌಕಾಕಾರದ ಪೀಠ ಭಾಗದ ಮೇಲೆ ಚೌಕಾಕಾರದ ದಂಡಭಾಗವನ್ನು ಹೊಂದಿದೆ. ಅಷ್ಟಮುಖ ತಟ್ಟೆಯಂತಹ ರಚನೆ ಮೇಲೆ ಬಳೆಗಳು, ಗಂಟಾಕಾರದ ರಚನೆಗಳಿವೆ. ದಂಡಾಗ್ರಭಾಗದಲ್ಲಿ ಕಳಸ, ತಾಟಿಕಾ, ಘಟ, ಮಂಡಿ, ಫಲಕಗಳನ್ನು ಹೊಂದಿದ್ದು ಏಳು ಅಡಿ ಎತ್ತರವಾಗಿದೆ. ತ್ರಿಕೋನ ಮಾದರಿಯ ಬೋದಿಗೆಗಳಿವೆ. ಮಧ್ಯದ ವಿತಾನದಲ್ಲಿ ಕಮಲದ ಅಲಂಕರಣವಿದೆ. ನವರಂಗದ ಭಿತ್ತಿಯು ಆಧುನಿಕರಣಗೊಂಡಿದೆ. ಮುಖ್ಯ ಗರ್ಭಗೃಹಕ್ಕೆ ಎದುರಾಗಿ ನಂದಿ ಶಿಲ್ಪವಿದೆ. ಮತ್ತು ಮುಖ್ಯ ಅರ್ಧಮಂಟಪದ ದ್ವಾರದ ಅಕ್ಕಪಕ್ಕಗಳಲ್ಲಿ ಸೂರ್ಯ ಮತ್ತು ವಿಷ್ಣು ಶಿಲ್ಪಗಳು ನಾಲ್ಕು ಅಡಿ ಎತ್ತರವಾಗಿದ್ದು ಆಕರ್ಷಕವಾಗಿದೆ. ಈ ಶಿಲ್ಪಗಳು ಉತ್ತರ ದಿಕ್ಕಿನ ಗರ್ಭಗೃಹಕ್ಕೂ, ಪೂರ್ವದಿಕ್ಕಿನ ಗರ್ಭಗೃಹಕ್ಕೂ ಸೇರಿದವುಗಳಾಗಿರಬೇಕು. ನವರಂಗ ದ್ವಾರಬಂಧದ ಲಲಾಟಫಲಕದಲ್ಲಿ ಒರಟಾಗಿ ಕೆತ್ತಲಾದ ಗಣಪತಿಯ ಉಬ್ಬುಶಿಲ್ಪವಿದೆ.

**ಶಾಸನಗಳಿಂದ ಹೆಚ್ಚಿನ ವಿವರ :** ಹೊಯ್ಸಳ ಅರಸ ಎರಡನೇಯ ವೀರಬಲ್ಲಾಳನ ಕ್ರಿ.ಶ.ಸು.೧೩ನೇ ಶತಮಾನದ ಶಾಸನವು ಆನೆಯ ತುಳಿತದಿಂದ ವ್ಯಕ್ತಿಯೊಬ್ಬನು ಮರಣ ಹೊಂದಿದನೆಂದು ದಾಖಲಿಸುವ ವೀರಗಲ್ಲು ಶಾಸನ ಬಿಟ್ಟರೆ ಬೇರೆ ಯಾವ ಶಾಸನಗಳು ಲಭ್ಯವಾಗಿಲ್ಲ.

ಊರು : ಕರಗುದರಿ (ತಾ.ಹಾನಗಲ್ಲ)
ಸ್ಥಳ : ಕೆರೆಯ ಹತ್ತಿರ
ಹೆಸರು : ಶಂಕರದೇವ ದೇವಾಲಯ
ಅಭಿಮುಖ : ದಕ್ಷಿಣ ( ? )
ನಿವೇದನೆ : ಈಶ್ವರ, ಕೇಶವ, ಸೂರ್ಯ
ಕಾಲ : ಕ್ರಿ.ಶ.೧೧೦೮-೦೯
ಶೈಲಿ : -
ಬಳಸಿದ ವಸ್ತು : ನೀಲಿ ಛಾಯೆಯ ಕಪ್ಪು ಕಲ್ಲು

**ದೇವಾಲಯ ವಾಸ್ತುಶಿಲ್ಪ**

ಹಾನಗಲ್ಲಿನಿಂದ ಉತ್ತರಕ್ಕೆ ಐದು ಕಿ.ಮೀ. ದೂರದಲ್ಲಿರುವ ಈ ಗ್ರಾಮದಲ್ಲಿ ಈಗ ಈ ತ್ರೈಪುರುಷ ದೇವಾಲಯವು ಕಂಡುಬರುವುದಿಲ್ಲ. ಆದರೆ ಕೆರೆಯ ಹತ್ತಿರ ಆಂಜನೇಯ ದೇವಾಲಯವಿರುವ ಸ್ಥಳದಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ದೇವಾಲಯವೊಂದರ ವಾಸ್ತು ಅವಶೇಷಗಳು ಕಂಡುಬರುತ್ತವೆ. ಈ ಹಿಂದೆ ಗಮನಿಸಿದ ತ್ರೈಪುರುಷರ ದೇವಾಲಯದ ವಾಸ್ತುಶಿಲ್ಪದ ಆಧಾರದ ಮೇಲಿಂದ ಇಲ್ಲಿಯ ದೇವಾಲಯದ ವಾಸ್ತುವಿನ್ಯಾಸವನ್ನು ಊಹಿಸಬಹುದು. ಶಾಸನ ಉಲ್ಲೇಖಿಸುವ ಶಂಕರದೇವ ಗರ್ಭಗೃಹವು

### ಪಟ್ಟಿ-೧೩

| ಕ್ರ. ಸಂ. | ಊರು | ದೇವಾಲಯ ಹೆಸರು | ದಾನ ನೀಡಿದವರು | ದಾನ ಸ್ವೀಕರಿಸಿದವರು | ದಾನದ ವಿವರ | ಕ್ರಿ.ಶ. | ದಾನದ ವಿನಿಯೋಗ | ದಾನ ನೀಡಿದ ಸಂದರ್ಭ (ಶಾಸನದಲ್ಲಿ ಉಲ್ಲೇಖಿಸಿದಂತೆ) | ಉಲ್ಲೇಖ |
|---|---|---|---|---|---|---|---|---|---|
| ೧. | ಕರಗುದರಿ ತಾ.ಹಾನಗಲ್ಲ | ಶಂಕರದೇವ ಕೇಶವದೇವ ಭಾಸ್ಕರದೇವರ ತ್ರೈಪುರುಷ ದೇವಾಲಯ | ಮಹಾಮಂಡಲೇಶ್ವರ ಎರಡನೇ ತೈಲಪದೇವ ಮತ್ತು ಇವನ ಪಾಂಡ್ಯ ರಾಣಿ ಬಾಚಲದೇವಿ | - | ಪ್ ಲಂಬಿ - ೭೦ರ್ ಒಳಿಯ ಕರಗುದರಿಯ ಉತ್ತರ ದಿಕ್ಕಿನ ತಾವರೆ ಗೆರೆಯ ಕೆಳಗೆ ಒಂದು ಮತ್ತರಗದ್ದೆ ೫೦೦ ಮರಗಳ ತೋಟದ ಭೂಮಿ | ೧೧೦೮-೦೯ | ಮೂರೂ ದೇವರ ಅಂಗಭೋಗ ಮತ್ತು ನೈವೇದ್ಯಕ್ಕೆ | ಸರ್ವಧಾರಿ ಸಂವತ್ಸರ ಹೆರಜ್ಜುಗ್ಗಿಯ ಹುಣ್ಣಿಮೆ ಸೋಮವಾರ (ಸೀಗಿ ಹುಣ್ಣಿಮೆ) | ಇಂ.ಆಂ.ಸಂ. ೧೦, ಪು. ೨೪೯ |
| | | | ಬೊಪ್ಪಗಡನ ಮಗ ಸಿಂಗ | - | ಹಳ್ಳಿಯ ಮನೆ ಸುಂಕ ಮತ್ತು ಕೊಡೆವಣ | ೧೧೦೮-೦೯ | | | |

ಪೂರ್ವಾಭಿಮುಖವಾಗಿ, ಕೇಶವದೇವ ಗರ್ಭಗೃಹವು ದಕ್ಷಿಣಾಭಿಮುಖವಾಗಿ, ಭಾಸ್ಕರದೇವರ ಗರ್ಭಗೃಹವು ಪಶ್ಚಿಮಾಭಿಮುಖವಾಗಿ ಇದ್ದಿರಬಹುದು. ಪಶ್ಚಿಮದಿಕ್ಕಿನ ಮತ್ತು ಉತ್ತರದಿಕ್ಕಿನ ಗರ್ಭಗೃಹಗಳಿಗೆ ಮುಚ್ಚಿದ ಅರ್ಧಮಂಟಪಗಳಿದ್ದು ಪೂರ್ವದಿಕ್ಕಿನ ಗರ್ಭಗೃಹಕ್ಕೆ ತೆರೆದ ಅರ್ಧಮಂಟಪ ಅದರ ಮುಂದೆ ಶಂಕರದೇವನಿಗೆ ಎದುರಾಗಿ ನಂದಿ ಶಿಲ್ಪವಿರಬಹುದು. ಮೂರೂ ದಿಕ್ಕಿನ ವಾಸ್ತುರಚನೆಯನ್ನು ಒಂದೆಡೆ ಸೇರಿಸುವ ನವರಂಗ ರಚನೆ ಇದ್ದು, ನವರಂಗವು ದಕ್ಷಿಣದಿಕ್ಕಿನಲ್ಲಿ ಪ್ರವೇಶದ್ವಾರವನ್ನು ಹೊಂದಿರುತ್ತದೆ. ದೇವಾಲಯದ ದಕ್ಷಿಣ ದಿಕ್ಕಿಗೆ ಉತ್ತರಾಭಿಮುಖವಾಗಿ ಸರಸ್ವತಿ ಮಂಟಪ ರಚನೆಯೂ ಇರುತ್ತದೆ ಎಂದು ಊಹಿಸಬಹುದು.

**ಶಾಸನಗಳಿಂದ ಹೆಚ್ಚಿನ ವಿವರ :** ಇಲ್ಲಿಯ ಶಾಸನಗಳು ಈ ಗ್ರಾಮವನ್ನು 'ಕರಗುದರಿ' ಎಂದೇ ಉಲ್ಲೇಖಿಸಿವೆ.[೨೪೦] ಕ್ರಿ.ಶ.೧೧೦೮ರ ಶಾಸನವು ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯನ ಕಾಲಕ್ಕೆ ಸಂಬಂಧಿಸಿದ್ದಾಗಿದ್ದು ದಂಡನಾಯಕಿತಿ ಮಲ್ಲಿಯಕ್ಕ ತ್ರೈಪುರುಷ ದೇವಾಲಯವನ್ನು ನಿರ್ಮಿಸಿದಳೆಂದು ಉಲ್ಲೇಖಿಸಿದೆ.

ಈ ರೀತಿಯಾಗಿ ಹಾವೇರಿ ಜಿಲ್ಲೆಯಲ್ಲಿ ಎಂಟು ತ್ರೈಪುರುಷ ದೇವಾಲಯಗಳನ್ನು ಗುರುತಿಸಲಾಗಿದೆ. ಒಟ್ಟಾರೆ ಈ ದೇವಾಲಯಗಳನ್ನು ಗಮನಿಸಿದರೆ ತ್ರೈಪುರುಷ ದೇವಾಲಯಗಳ ವಾಸ್ತು ಹಿನ್ನೆಲೆಯಲ್ಲಿ, ಇಲ್ಲಿಯ ಗರ್ಭಗೃಹಗಳ ಅಳತೆಯಲ್ಲಿ ಸಮಾನತೆ ಕಂಡುಬರುವುದಿಲ್ಲ. ಈಶ್ವರ, ವಿಷ್ಣು ಮತ್ತು ಸೂರ್ಯರಿಗಾಗಿ ನಿರ್ಮಾಣಗೊಂಡ ದೇವಾಲಯಗಳು. ಇಲ್ಲಿ ಮೂರೂ ದೇವರುಗಳಿಗೆ ಸಮಾನ ಸ್ಥಾನವನ್ನು ಕೊಡಲಾಗಿದೆ. ಈ ದೇವಾಲಯಗಳ ಸ್ಥಾನಾಚಾರ್ಯರಾದ ಕಾಳಾಮುಖ ಶೈವಯತಿಗಳ ದಕ್ಷತೆಯಲ್ಲಿ ಈ ತ್ರೈಪುರುಷ ದೇವಾಲಯಗಳು ಪ್ರಮುಖ ವಿದ್ಯಾಕೇಂದ್ರಗಳಾಗಿ ಕಾರ್ಯನಿರ್ವಹಿಸಿವೆ.

ಮೂರು ಪ್ರಮುಖ ಪಂಥಗಳನ್ನು ಒಂದೆಡೆ ಸೇರಿಸಿದ ತ್ರೈಪುರುಷ ತ್ರಿಕೂಟ ದೇವಾಲಯಗಳು ಸಮಾಜದ ಬಹು ಜನರಿಂದ ಮನ್ನಣೆ ಪಡೆದಂತೆ ಕಾಣುತ್ತದೆ. ಸಮಾಜದ ಎಲ್ಲ ವರ್ಗದ ಜನರೂ ತ್ರೈಪುರುಷ ದೇವಾಲಯಗಳಲ್ಲಿ ದೇವರ ನಂದಾ ದೀವಿಗೆಗೆ, ದೇವಾಲಯ ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆ, ಇಲ್ಲಿ ನಡೆಯುವ ಅನ್ನದಾನಕ್ಕೆ, ವಿದ್ಯಾದಾನಕ್ಕೆ, ತಪೋಧನರ ಆಹಾರಕ್ಕೆ ಮುಂತಾದ ಕಾರ್ಯಗಳು ನಡೆದುಕೊಂಡು ಬರಲು ದಾನದತ್ತಿಗಳನ್ನು ಕೊಟ್ಟಿರುವರು. ದೇವಾಲಯಗಳ ದಾನದತ್ತಿಗಳ ಪಟ್ಟಿಯನ್ನು ಗಮನಿಸಿದಾಗ ಇದು ಸ್ಪಷ್ಟವಾಗುತ್ತದೆ. ಅಲ್ಲದೆ ತ್ರೈಪುರುಷ ದೇವಾಲಯಗಳನ್ನು ನಿರ್ಮಿಸಿದವರನ್ನು, ದೇವಾಲಯಕ್ಕೆ ದೊಡ್ಡ ಸಂಖ್ಯೆಯಲ್ಲಿ ದಾನಕೊಟ್ಟವರನ್ನು ಜನರು ಬಹುವಾಗಿ ಮೆಚ್ಚಿಕೊಳ್ಳುತ್ತಿದ್ದರೆಂದೂ ತೋರುತ್ತದೆ. ಅಬ್ಬಲೂರಿನ ಬ್ರಹ್ಮಲಿಂಗೇಶ್ವರವನ್ನು ನಿರ್ಮಿಸಿದ ಬ್ರಹ್ಮಗಾವುಂಡನ ಉದಾರತನ ಮತ್ತು ಸದ್ಗುಣಗಳನ್ನು ಬಹುವಾಗಿ ಹೊಗಳಿದ್ದಾರೆ.[೨೪೧] ಇವನು ಔದಾರ್ಯದಲ್ಲಿ ದಿಲೀಪನೆಂದೂ, ಸತ್ಯವಾಕ್ಯಪರಿಪಾಲನೆಯಲ್ಲಿ ಚಂಪಾಪತಿಯೆಂದೂ, ಪರೋಪಕಾರದಲ್ಲಿ ಕಲ್ಪವೃಕ್ಷವೆಂದೂ, ಆದುದರಿಂದಲೇ ಅವನಿಂದ ದೇವಾಲಯ ನಿರ್ಮಾಣವೆಂಬ ಮಹತ್‌ಕಾರ್ಯ ನಡೆಯಿತೆಂದೂ ವರ್ಣಿಸಿದೆ. ಕರಗುದರಿಯಲ್ಲಿ ತ್ರೈಪುರುಷ ದೇವಾಲಯವನ್ನು ನಿರ್ಮಿಸಿದ ಮಲ್ಲಿಯಕ್ಕಳೂ ಸಹ ಹೊಗಳಿಕೆಗೆ ಪಾತ್ರಳಾಗಿದ್ದಾಳೆ.[೨೪೨] ಸದ್ಗುಣೆಯೆಂದೂ, ಧರ್ಮವನ್ನು ಎತ್ತಿ ಹಿಡಿಯುವವಳೆಂದೂ, ಇವಳ ಶ್ಲಾಘನೀಯವಾದ ಈ ಮಹತ್‌ಕಾರ್ಯವನ್ನು ಕಂಡು; ಅವಳು ಪ್ರತಿಷ್ಠಾಪಿಸಿದ

ಮೂರ್ತಿಗಳು ಉಮಾಪತಿ, ಹರಿ, ಭಾಸ್ಕರ ಎಂದೊಡೆ ಮಹಾಮಂಡಳೇಶ್ವರ ಕದಂಬ ತೈಲನು ಮಲ್ಲಿಯಕ್ಕನಂತಹ ಸತಿಗೆ ಸಮಾನರಾರು? ಎಂದು ಉದ್ಗಾರ ತೆಗೆದಿದ್ದಾನೆ. ಅದರಂತೆ ಕಲ್ಕೇರಿಯ ಸ್ವಯಂಭೂ ಸೋಮೇಶ್ವರನಿಗೆ ದಾನಕೊಟ್ಟ ಮಾಳಲದೇವಿಯನ್ನೂ ಶಾಸನವು ಹೊಗಳಿದೆ.[೨೪೩]

> ..... ನೆಗಮ್ದಿತ್ತುಂಗ ಶಿವಾಲಯ
> ಪ್ರತತಿಯಾದಿತ್ಯಾಲಯಂ ಸಾಲೆ ವಿಷ್ಣುಗೃಹಂ ಬುದ್ಧವಿಹಾರ
> ಮಹಾಭವನಂ ನಾಗಾಲಯಂ ಬಾವಿ(ದಿ)ಗ್ಗಿಗೆ ಶತ್ರಂ, ಕೇಟಿ
> ದೀಪಮಾಲೆಯೆನೆ ನಾನಾಧರ್ಮಮಂ ಮಾಡಿಸಲ್ ಜಗದೊಳ್
> ಮಾಳಲದೇವಿಯಂತು ಪೆಟೆರಾರ್ನ್ನೋತಮ್ಮರ್ಹಾದಾನಿಗಳ್ .....

ಎಂದಿದೆ. ಶಾಸನವು ಮಾಳಲದೇವಿಯನ್ನು 'ಹರಚರಣಯುಗಳಪುಟಪ್ರಿಯೆ' 'ಅನ್ತು ಸಮಸ್ತ ಸಮಯ ಧರ್ಮ್ಮಕ್ಕಾನಿರ್ಮ್ಮಮೆನಿಸಿದ ಮಾಳಲದೇವಿಯರುಂ' ಎಂದಿದೆ. ಮಾಳಲದೇವಿಯು ಹರಭಕ್ತೆಯಾಗಿದ್ದರೂ ಸಹ ಸಕಲ ಧರ್ಮಗಳಿಗೂ ಆಶ್ರಯಕೊಟ್ಟಳು ಎಂಬುದು ಇಲ್ಲಿ ಗಮನಾರ್ಹ ಅಂಶ. ಇವಳ ಪತಿ ಉದಯಾದಿತ್ಯನನ್ನೂ ಕೂಡ ಶಾಸನವು 'ಷಡ್‌ದರ್ಶನಸರಸಿರುಹನಿಕರಕ್ಕಾದಿತ್ಯ ನೆನಸಿದುದಯಾದಿತ್ಯನಂ' ಎಂದು ಹೊಗಳಿದೆ.

ಇಂತಹ ದಾನಪ್ರಿಯರು ಕೊಟ್ಟ ದಾನವು ದೇವಾಲಯ ನಿರ್ಮಾಣಕ್ಕೆ, ದೇವರ ಅಂಗಭೋಗ, ರಂಗಭೋಗ, ನಂದಾದೀವಿಗೆ, ತಪೋಧನರ ಆಹಾರಕ್ಕೆ, ವಸತಿಗೆ ದೇವಾಲಯ ಪರಿಚಾರಿಕವರ್ಗಕ್ಕೆ, ಖಂಡ ಸ್ಫುಟಿತ ಜೀರ್ಣೋದ್ಧಾರಕ್ಕೆ, ಚೈತ್ರ, ಶಿವರಾತ್ರಿ ನಾನಾ ಪರ್ವಗಳಿಗೆ, ಅನ್ನದಾನಕ್ಕೆ ಹೀಗೆ ನಾನಾ ಕಾರ್ಯಗಳಿಗೆ ಸದುಪಯೋಗಗೊಳ್ಳುತ್ತಿತ್ತು. ಇಲ್ಲಿ ನಡೆಯುವ ಸತ್ಕಾರ್ಯಗಳನ್ನು ಕಂಡು ದಾನಗಳ ಸಂಖ್ಯೆಯೂ ಹೆಚ್ಚುತ್ತಿತ್ತು. ತ್ರೈಪುರುಷ ದೇವಾಲಯಗಳಿಗೆ ಕೊಟ್ಟ ದಾನಗಳ ಪಟ್ಟಿಯನ್ನು ಗಮನಿಸಿದರೆ, ಈ ದೇವಾಲಯಗಳು ಸಮಾಜದ ಎಲ್ಲ ವರ್ಗದ ಜನರ ಮೆಚ್ಚುಗೆಯನ್ನು ಪಡೆದಿದ್ದವು ಎಂದು ಸ್ಪಷ್ಟವಾಗುತ್ತದೆ. ಚಕ್ರವರ್ತಿಗಳು[೨೪೪] ಮಹಾಮಂಡಳೇಶ್ವರರು,[೨೪೫] ದಂಡಾಧೀಶರು,[೨೪೬] ಸುಂಕಾಧಿಕಾರಿಗಳು,[೨೪೭] ಗಾವುಂಡಾದಿಗಳು[೨೪೮] ಮತ್ತು ಗ್ರಾಮದ ನಾಗರಿಕರೂ[೨೪೯] ಸಹ ದಾನಕೊಟ್ಟಿರುವುದನ್ನು ಗಮನಿಸುತ್ತೇವೆ. ಈ ದಾನಗಳ ಉದ್ದೇಶ ದೇವರ ಅಂಗಭೋಗ ರಂಗಭೋಗದ ಜೊತೆಗೆ ಇಲ್ಲಿಯ ವಿದ್ಯಾದಾನಕ್ಕೆ ಎಂಬುದು ಸ್ಪಷ್ಟವಾಗಿ ಕಂಡುಬರುತ್ತದೆ. ವಿದ್ಯಾಸಂಸ್ಥೆಗಳು ದೇವಾಲಯಗಳಿಗೆ ಮತ್ತು ಮಠಗಳಿಗೆ ಹೊಂದಿಕೊಂಡಿರುತ್ತಿದ್ದವು ಎಂಬ ಅಭಿಪ್ರಾಯ ಇರುವುದಾದರೂ, ವಿದ್ಯಾಸಂಸ್ಥೆಗಳು ವಿಶೇಷವಾಗಿ ತ್ರೈಪುರುಷ ದೇವಾಲಯಗಳ ಜೊತೆಗೆ ಇರುತ್ತಿದ್ದವು.[೨೫೦] ಇದಕ್ಕೆ ಉದಾಹರಣೆಯಾಗಿ ನಿಡಗುಂದಿ,[೨೫೧] ತಂಬಿಗೆ,[೨೫೨] ಹೊಟ್ಟೂರ್,[೨೫೩] ಮಲಘಣ,[೨೫೪] ಕೊಲಾನುಪಾಕ,[೨೫೫] ಕಟಗೇರಿ,[೨೫೬] ಸಾಲೋಟಗಿ,[೨೫೭] ಕೋಹಳ್ಳಿ[೨೫೮] ಮುಂತಾದವುಗಳನ್ನು ಹೇಳಬಹುದು. ಅದರಂತೆ ಹಾವೇರಿ ಜಿಲ್ಲೆಯ ಎಂಟು ತ್ರೈಪುರುಷ ದೇವಾಲಯಗಳು ಮಠಗಳನ್ನು ಹೊಂದಿದ್ದು ವಿದ್ಯಾದಾನ ಕಾರ್ಯವನ್ನು ಕೈಗೊಂಡಿದ್ದವು. ಈ ದೇವಾಲಯಗಳ ಆವರಣದಲ್ಲಿ 'ಸರಸ್ವತಿ ಮಂಟಪ' ಎಂಬ ರಚನೆಯು ಇರುವುದನ್ನು ಗಮನಿಸುತ್ತೇವೆ. ಅಬ್ಬಲೂರಿನ ಬ್ರಹ್ಮಲಿಂಗೇಶ್ವರ, ಕಲಕೇರಿಯ ಸ್ವಯಂಭೂ ಸೋಮೇಶ್ವರ,

ಮೇದೂರಿನ ಮಾಕಾಳೇಶ್ವರ ತ್ರೈಪುರುಷ ದೇವಾಲಯಗಳ ಆವರಣದಲ್ಲಿ ಇಂಥ ಮಂಟಪಗಳು ಕಂಡಬರುತ್ತವೆ. 'ಸರಸ್ವತಿ ಮಂಟಪಗಳು ಶಾಲೆಯನ್ನು ನಡೆಸಲೆಂದೇ ಉದ್ದೇಶಿತವಾಗಿರುತ್ತಿದ್ದವು' ಎಂದು ಬಾ.ರಾ. ಗೋಪಾಲ ಅವರು ಅಭಿಪ್ರಾಯಪಡುತ್ತಾರೆ.[೨೫೯] ಸರಸ್ವತಿ ಮಂಟಪಗಳು ದೇವಾಲಯಗಳಲ್ಲಿ ವಿದ್ಯಾಭ್ಯಾಸಕ್ಕೆಂದೇ ಮೀಸಲಾಗಿದ್ದ ವಿಶಾಲವಾದ ಕೊಠಡಿಗಳು[೨೬೦] ಅಬ್ಬಲೂರಿನ ಸರಸ್ವತಿ ಮಂಟಪವು ವಿಶಾಲವಾದ ನವರಂಗದಂತಹ ರಚನೆಯನ್ನು ಹೊಂದಿದೆ. ಮತ್ತು ಗರ್ಭಗೃಹಭಾಗವೂ ಆಯತಾಕಾರದಲ್ಲಿದ್ದು ಮಧ್ಯದಲ್ಲಿ ಸರಸ್ವತಿ ವಿಗ್ರಹವನ್ನು ಇಡಲಾಗಿದೆ. ಅಕ್ಕಪಕ್ಕಗಳಲ್ಲಿ ಕೊಠಡಿಗಳಿವೆ. ಕಲಕೇರಿಯಲ್ಲಿಯೂ ಸಹ ಇದೇ ರೀತಿಯ ಸರಸ್ವತಿ ಮಂಟಪ ರಚನೆಯನ್ನು ಕಾಣುತ್ತೇವೆ.

ಇಲ್ಲಿ ನಡೆಯುವ ವಿದ್ಯಾಭ್ಯಾಸವೂ ಕಟ್ಟುನಿಟ್ಟಿನದಾಗಿತ್ತೆಂದು ಕಾಣುತ್ತದೆ. ಕಲಕೇರಿ ಮತ್ತು ಕುಳೇನೂರು, ಅಬ್ಬಲೂರು ಶಾಸನಗಳು ಅಲ್ಲಿಯ ದೇವಾಲಯ, ಮಠಗಳು ನೈಷ್ಠಿಕ ಸ್ಥಾನಗಳಾಗಿದ್ದುವೆಂದು ಉಲ್ಲೇಖಿಸುತ್ತವೆ. 'ಶೈವಗುರುಗಳು ಅಖಂಡ ಬ್ರಹ್ಮಚಾರಿಗಳಾಗಿದ್ದುಕೊಂಡು ಬ್ರಹ್ಮಚಾರಿ ವಿದ್ಯಾರ್ಥಿಗಳಿಗೆ ವಿದ್ಯಾದಾನ ಮಾಡುತ್ತಿದ್ದ ಸ್ಥಾನವೇ ನೈಷ್ಠಿಕ ಸ್ಥಾನ' ಎಂದು ಎಂ.ಚಿದಾನಂದಮೂರ್ತಿ ಅವರು ತಿಳಿಸುತ್ತಾರೆ.[೨೬೧] ಇಲ್ಲಿಯ ತಪೋಧನರು ನೈಷ್ಠಿಕರಾಗಿಯೇ ಇರುವುದು ಕಡ್ಡಾಯವಾಗಿ ಇದ್ದಂತೆ ತೋರುತ್ತದೆ. ಕಲಕೇರಿ ಶಾಸನವು 'ಈ ಸ್ಥಾನದಲು ನೈಷ್ಠಿಕರಲ್ಲದ ತಪೋಧನರಿರಲಾಗದು ಎಂದರೆ; ಕುಳೆನೂರು ಶಾಸನವು ಇನ್ನಷ್ಟು ಕಠಿಣವಾಗಿ 'ಮಠದೊಳ್ ಮುಖ್ಯರಾಗಿರಪ್ಪ ತಪಸ್ವಿಗೆ ಗುಣಶಾಸನಮ್ ಬ್ರಹ್ಮಚರ್ಯಂಗೆಟ್ಟ ತಪಸ್ವಿಯರ ಇರಲಾಗದು' ಎಂದು ಆಜ್ಞೈಯುತ್ತದೆ. ಇದರಿಂದ ಈ ಮಠಗಳಲ್ಲಿ ಜ್ಞಾನಾರ್ಜನೆಯೇ ಪ್ರಥಮ ಉದ್ದೇಶವಾಗಿತ್ತು ಎಂದು ಸ್ಪಷ್ಟವಾಗುತ್ತದೆ.[೨೬೨] ಅದಕ್ಕಾಗಿ ಇಲ್ಲಿ ನಡೆಯುವ ವ್ಯವಸ್ಥಿತವಾದ ಕ್ರಮಬದ್ಧವಾದ ವಿದ್ಯಾಭ್ಯಾಸವನ್ನು ಗಮನಿಸಿ ಸಮಾಜದ ಎಲ್ಲ ವರ್ಗದ ಜನರಿಂದಲೂ ದಾನದತ್ತಿಗಳು ಕೊಡಲ್ಪಟ್ಟಿವೆ. ಎಲ್ಲ ದಾನಗಳಲ್ಲಿ ವಿದ್ಯಾದಾನ ಪರಮ ಶ್ರೇಷ್ಠದಾನ ಎಂಬ ನಂಬಿಕೆ ಅವರಲ್ಲಿತ್ತು.[೨೬೩] ಬಳ್ಳಿಗಾವೆಯ ಒಂದು ಶಾಸನವು[೨೬೪] ಯಾರು ವಿದ್ಯಾರ್ಥಿಗಳಿಗೆ ಆಹಾರ, ಬಟ್ಟೆ, ಔಷಧಿಗಾಗಿ ದಾನ ಮಾಡುತ್ತಾರೋ, ವಿದ್ಯಾರ್ಥಿಗಳ ಅವಶ್ಯಕತೆಗಳನ್ನು ಪೂರೈಸುತ್ತಾರೋ ಅವರು ತೀರ್ಥಯಾತ್ರೆ ಮಾಡಿ ಬಂದ ಪುಣ್ಯಕ್ಕಿಂತ ಹೆಚ್ಚು ಪುಣ್ಯವನ್ನು ಪಡೆಯುತ್ತಾರೆ ಎಂದು ಉಲ್ಲೇಖಿಸುತ್ತದೆ. ಅಬ್ಬಲೂರಿನ ಕ್ರಿ.ಶ.೧೧೪೪ರ ಶಾಸನದಲ್ಲಿ[೨೬೫] ಒಂದು ದಿನ ನಾಡಪ್ರಭು ಬ್ರಹ್ಮಗಾವುಂಡನು ಧರ್ಮದ ಬಗ್ಗೆ ಪ್ರಸ್ತಾಪಿಸುತ್ತಿರುವಾಗ ಅವನ ಶಾನುಭೋಗ ಬೊಪ್ಪನು ಧರ್ಮದ ಬಗ್ಗೆ ಚರ್ಚಿಸುತ್ತ, ಧರ್ಮವೆನ್ನುವುದು ಬೆಂಬಲವಾಗಿ ಇರುವಂತಹದ್ದು, ಪುಣ್ಯದ ಖಜಾನೆ, ವ್ಯಕ್ತಿಯ ಆಭರಣ, ಆದ್ದರಿಂದ ಒಳ್ಳೆ ಕೆಲಸಗಳಿಗೆ ದಾನ ಕೊಡುವುದು ಪ್ರತಿಯೊಬ್ಬನ ಕರ್ತವ್ಯ ಎಂದು ಬ್ರಹ್ಮಗಾವುಂಡನಿಗೆ ದಾನ ಕೊಡಲು ಪ್ರೇರೇಪಿಸುತ್ತಾನೆ. ಇದಕ್ಕೆ ಸ್ಫೂರ್ತಿಗೊಂಡ ಬ್ರಹ್ಮಗಾವುಂಡನು ತನ್ನ ಹರೆಯದ ಕುದುರೆಯು ಎಷ್ಟು ದೂರ ಓಡುತ್ತದೊ ಅಷ್ಟು ಭೂಮಿಯನ್ನು ದಾನ ಮಾಡುತ್ತೇನೆಂದು ಪ್ರಮಾಣ ಮಾಡುತ್ತಾನೆ.

ಎಲ್ಲಾ ವರ್ಗದ ಜನರಿಂದಲೂ ದಾನದತ್ತಿಗಳನ್ನು ಪಡೆದ ಈ ದೇವಾಲಯಗಳು, ಸಾಮಾಜಿಕ ಸಂಸ್ಥೆಗಳಾಗಿ ಅದರಲ್ಲೂ ವಿದ್ಯಾದಾನಕ್ಕೆ ಹೆಚ್ಚು ಮಹತ್ವಕೊಟ್ಟು ಮಧ್ಯಯುಗೀನ ಕಾಲದ ಶಿಕ್ಷಣಸಂಸ್ಥೆಗಳಾಗಿ ಕಾರ್ಯ

## ಪಟ್ಟಿ-೧೪ ತ್ರೈಪುರುಷ ದೇವಾಲಯಗಳು (ವಾಸ್ತುಶಿಲ್ಪ ಹಿನ್ನೆಲೆಯಲ್ಲಿ)

| ಕ್ರ.ಸಂ. | ಊರು | ದೇವಾಲಯ ಹೆಸರು | ಪಶ್ಚಿಮ ದಿಕ್ಕಿನ ಮುಖ್ಯ ಗ.ಗೃ.ಶಿಲ್ಪ | ಅರ್ಧಮಂಟಪ (ಅಡಿಗಳಲ್ಲಿ) | ಉತ್ತರದಿಕ್ಕಿನ ಗ.ಗೃ, ಶಿಲ್ಪ (ಅಡಿಗಳಲ್ಲಿ) | ಅರ್ಧಮಂಟಪ (ಅಡಿಗಳಲ್ಲಿ) | ಪೂರ್ವದಿಕ್ಕಿನ ಗ.ಗೃ, ಶಿಲ್ಪ (ಅಡಿಗಳಲ್ಲಿ) | ಅರ್ಧಮಂಟಪ (ಅಡಿಗಳಲ್ಲಿ) | ನವರಂಗ ಪ್ರವೇಶದ್ವಾರ (ಅಡಿಗಳಲ್ಲಿ) |
|---|---|---|---|---|---|---|---|---|---|
| ೧. | ಉಪ್ಪುಣಸಿ | ಕಲ್ಮೇಶ್ವರ | ೮x೮ ಈಶ್ವರ | ೬x೮ | ೮x೮ ಈಶ್ವರ | ೮x೬ | ೮x೮ ಸೂರ್ಯ | ೬x೮ ತೆರೆದ | ೨೨x೨೪ ದಕ್ಷಿಣ ದಿಕ್ಕಿನಲ್ಲಿ |
| ೨. | ಕುಳೇನೂರು | ಕಲ್ಮೇಶ್ವರ | ೮x೮ ಈಶ್ವರ | ೮x೬ | ಹಾಳಾಗಿದೆ | ಹಾಳಾಗಿದೆ | ೮x೬ | - | ೨೪x೨೨ ದಕ್ಷಿಣ ದಿಕ್ಕಿನಲ್ಲಿ |
| ೩. | ಮೇದೂರು | ಮಾಕಾಳೇಶ್ವರ | ೮x೮ ಈಶ್ವರ | ೫.೯ x ೬.೬ | ಹಾಳಾಗಿದೆ | ಹಾಳಾಗಿದೆ | ೮x೮ ಸೂರ್ಯ | ೫.೯x೬.೬ ತೆರೆದ | ೧೮.೪x೧೮.೪ ದಕ್ಷಿಣ ದಿಕ್ಕಿನಲ್ಲಿ |
| ೪. | ಕಲಕೇರಿ | ಸೋಮೇಶ್ವರ | ೮x೮ ಈಶ್ವರ | ೮ x ೬ | ೮ x ೮ | ೮ x ೬ | ೭x೭ ಸೂರ್ಯ | - | ೩೨ x ೨೪ ಪೂರ್ವ, ದಕ್ಷಿಣ |
| ೫. | ಅಬ್ಬಲೂರು | ಬ್ರಹ್ಮಲಿಂಗೇಶ್ವರ | ೭.೪ x ೭.೪ ಈಶ್ವರ | ೪.೪ x ೭.೬ | ೮ x ೮ ವಿಷ್ಣು | ೮ x ೭ | ೭.೪ x ೭.೪ ಸೂರ್ಯ | ೮ x ೭.೪ ತೆರೆದ | ೩೨ x ೩೨ ದಕ್ಷಿಣಕ್ಕೆ |
| ೬. | ಪುರದಗೇರಿ | ಈಶ್ವರ | ೧೦ x ೧೦ ಈಶ್ವರ | ೨೪ x ೧೦ | ಆಧುನೀಕರಣ | ಆಧುನೀಕರಣ | ದುರಸ್ತಿ ಕಾರ್ಯದಲ್ಲಿ ಕೈ ಬಿಡಲಾಗಿದೆ | ದುರಸ್ತಿ ಕಾರ್ಯದಲ್ಲಿ ಕೈ ಬಿಡಲಾಗಿದೆ | ೨೪ x ೨೪ ದಕ್ಷಿಣಕ್ಕೆ |
| ೭. | ನಾಗವಂದ | ಸಿದ್ಧೇಶ್ವರ | ೬.೪ x ೬.೪ ಈಶ್ವರ | ೫ x ೫ | ೬ x ೬ ಸಿದ್ಧೇಶ್ವರ | ೫ x ೫ | ೬.೪ x ೬.೪ ಸೂರ್ಯ | ೫ x ೫ ತೆರೆದ | ೧೬.೫ x ೧೬.೫ ದಕ್ಷಿಣಕ್ಕೆ |
| ೮. | ಕರಗುದರಿ | ಶಂಕರದೇವ | - | - | - | - | - | - | - |



ಛಾಯಾಚಿತ್ರ - ೨೧, ಕಲ್ಮೇಶ್ವರ ದೇವಾಲಯ ಉಪ್ಪುಣಸಿ (ತಾ.ಹಾನಗಲ್ಲ)



ಛಾಯಾಚಿತ್ರ - ೨೨, ಕಲ್ಮೇಶ್ವರ ದೇವಾಲಯದ ಉತ್ತರ ದಿಕ್ಕಿನ ಗರ್ಭಗೃಹ
ಉಪ್ಪುಣಸಿ (ತಾ.ಹಾನಗಲ್ಲ)



ಛಾಯಾಚಿತ್ರ – ೨೩, ಕಲ್ಮೇಶ್ವರ ದೇವಾಲಯ, ಕುಳೇನೂರು, (ತಾ.ಹಾವೇರಿ)



ಛಾಯಾಚಿತ್ರ – ೨೪, ಕಲ್ಮೇಶ್ವರ ದೇವಾಲಯದ ಆವರಣದಲ್ಲಿರುವ ಭಗ್ನಗೊಂಡ ವಿಷ್ಣು ಶಿಲ್ಪ
ಕುಳೇನೂರು (ತಾ.ಹಾವೇರಿ)



ಛಾಯಾಚಿತ್ರ - ೨೫, ಸಣ್ಣಬಸವೇಶ್ವರ ದೇವಾಲಯದ ವಿತಾನ ಅಲಂಕರಣ
ಮೇದೂರು (ತಾ. ಹಿರೇಕೆರೂರು)



ಛಾಯಾಚಿತ್ರ - ೨೬, ಸೋಮೇಶ್ವರ ದೇವಾಲಯದ ಪಶ್ಚಿಮ ದಿಕ್ಕಿನ ಭಿತ್ತಿ
ಕಲಕೇರಿ (ತಾ. ಹಾನಗಲ್ಲ)



ಛಾಯಾಚಿತ್ರ – ೨೭, ಸೋಮೇಶ್ವರ ದೇವಾಲಯ, ಕಲಕೇರಿ (ತಾ.ಹಾನಗಲ್ಲ)



ಛಾಯಾಚಿತ್ರ – ೨೮, ಸೋಮೇಶ್ವರ ದೇವಾಲಯದ ನವರಂಗ, ಕಲಕೇರಿ (ತಾ.ಹಾನಗಲ್ಲ)



ಛಾಯಾಚಿತ್ರ - ೨೯, ಸೋಮೇಶ್ವರ ದೇವಾಲಯದ ಆವರಣದಲ್ಲಿರುವ ಸರಸ್ವತಿ ಮಂದಿರ
ಕಲಕೇರಿ (ತಾ.ಹಾನಗಲ್ಲ)



ಛಾಯಾಚಿತ್ರ - ೩೦, ಬ್ರಹ್ಮಲಿಂಗೇಶ್ವರ ದೇವಾಲಯದ ಮುಖ್ಯ ಗರ್ಭಗೃಹದ ಮೇಲ್ಕಟ್ಟಡ
ಅಬ್ಬಲೂರು (ತಾ.ಹಿರೇಕೆರೂರು)



ಛಾಯಾಚಿತ್ರ – ೩೧, ಬ್ರಹ್ಮಲಿಂಗೇಶ್ವರ ದೇವಾಲಯದ ಕಕ್ಷಾಸನದ ಬೆನ್ನಿನ ಭಾಗ
ಅಬ್ಬಲೂರು (ತಾ.ಹಿರೇಕೆರೂರು)



ಛಾಯಾಚಿತ್ರ – ೩೨, ಬ್ರಹ್ಮಲಿಂಗೇಶ್ವರ ದೇವಾಲಯದ ಮುಖ್ಯ ಗರ್ಭಗೃಹದ ದ್ವಾರಶಾಖೆಗಳು
ಅಬ್ಬಲೂರು (ತಾ. ಹಿರೇಕೆರೂರು)



ಛಾಯಾಚಿತ್ರ – ೩೩, ಬ್ರಹ್ಮಲಿಂಗೇಶ್ವರ ದೇವಾಲಯದ ನವರಂಗದ ಕಂಬ
ಅಬ್ಬಲೂರು (ತಾ.ಹಿರೇಕೆರೂರು)



ಛಾಯಾಚಿತ್ರ – ೩೪, ಸಿದ್ದೇಶ್ವರ ದೇವಾಲಯದ ಹೊರಭಾಗ, ನಾಗವಂದ (ತಾ.ಹಿರೇಕೆರೂರು)



ಛಾಯಾಚಿತ್ರ – ೩೫, ಸಿದ್ದೇಶ್ವರ ದೇವಾಲಯದ ಉತ್ತರ ದಿಕ್ಕಿನ ಗರ್ಭಗೃಹ
ನಾಗವಂದ (ತಾ.ಹಿರೇಕೆರೂರು)



ಛಾಯಾಚಿತ್ರ – ೩೬, ಸೋಮೇಶ್ವರ ದೇವಾಲಯದ ಪಶ್ಚಿಮ ದಿಕ್ಕಿನ ಗರ್ಭಗೃಹ
ಮರದಗೇರಿ (ತಾ.ಹಿರೇಕೆರೂರು)

ನಿರ್ವಹಿಸಿದವು ಎಂದು ಹೇಳಬಹುದು. ವಿದ್ಯಾಸಂಸ್ಥೆಗಳು ದೇವಾಲಯಗಳಿಗೆ ಮಠಗಳಿಗೆ ಹೊಂದಿಕೊಂಡು ಇರುತ್ತಿದ್ದವು ಎಂಬ ಅಭಿಪ್ರಾಯ ಇರುವುದಾದರೂ ವಿಶೇಷವಾಗಿ ತ್ರೈಪುರುಷ ದೇವಾಲಯಗಳ ಜೊತೆಗೆ ಇರುತ್ತಿದ್ದವು ಎಂಬುದು ಗಮನಾರ್ಹ ಸಂಗತಿ.

## III. ನ್ಯಾಯದರ್ಶನ/ತ್ರಿಮೂರ್ತಿ ತ್ರಿಕೂಟ ದೇವಾಲಯಗಳು

ಹಾವೇರಿ ಜಿಲ್ಲೆಯಲ್ಲಿ ನ್ಯಾಯದರ್ಶನ ಹಿನ್ನೆಲೆಯಲ್ಲಿ ರೂಪಗೊಂಡ ೧೬ ತ್ರಿಕೂಟ ದೇವಾಲಯಗಳನ್ನು ಗುರುತಿಸಲಾಗಿದೆ. ಜಿಲ್ಲೆಯ ಹಿರೇಕೆರೂರು ಹಾಗೂ ರಾಣೆಬೆನ್ನೂರು ತಾಲೂಕುಗಳಲ್ಲಿ ಈ ಗುಂಪಿಗೆ ಸೇರಿದ ದೇವಾಲಯಗಳು ಹೆಚ್ಚಾಗಿರುವುದನ್ನು ನಕ್ಷೆ-೪ರ ಮುಖಾಂತರ ಗಮನಿಸಬಹುದು. ಮಧ್ಯಯುಗೀನ ಕಾಲದಲ್ಲಿ ಕಾಳಾಮುಖ ಶೈವಪಂಥದ ಪ್ರಮುಖ ನೆಲೆಯಾದ ಬಳ್ಳಿಗಾವೆಯ ಪ್ರಭಾವವೇ ಇದಕ್ಕೆ ಕಾರಣ ಎಂದು ಸ್ಪಷ್ಟವಾಗುತ್ತದೆ. ಕಾಳಾಮುಖ ಶೈವಪಂಥಿಯರನ್ನು 'ಪರಮನೈಯಾಯಿಕ[೨೬೬] ನೈಯಾಯಿಕಾಗ್ರೇಸರ'[೨೬೭] ಮತ್ತು 'ನೈಯಾಯಿಕ ಸಂರಕ್ಷಣೈಕದಕ್ಷ'[೨೬೮] ಎಂದು ಶಾಸನಗಳು ಹೊಗಳಿವೆ. ಇದರಿಂದ ಕಾಳಾಮುಖ ಶೈವಪಂಥೀಯರು ನೈಯಾಯಿಕ ದಾರ್ಶನಿಕರೆಂದು ತಿಳಿದುಬರುತ್ತದೆ. ಬಳ್ಳಿಗಾವೆಯ ಕೇದಾರೇಶ್ವರ ದೇವಸ್ಥಾನ ಮತ್ತು ಕೇದಾರೇಶ್ವರ ಪ್ರಾಂಗಣದಲ್ಲಿರುವ ನಖರೇಶ್ವರ ದೇವಸ್ಥಾನಗಳ ಆಚಾರ್ಯನಾದ ಸೋಮೇಶ್ವರ ಸೂರಿಯನ್ನು ಕುರಿತು ಅಬ್ಬಲೂರು ಶಾಸನವು[೨೬೯]

.......ಕೆಲಬರ್ತ್ತರ್ಕ್ಕವಿಶಾರದರ್ಕ್ಕೆಲಬರಾಪ್ತಾಲಾಪಸಂಭೋದಕ-
ರ್ಕ್ಕೆಲಬರ್ನ್ನಾಟಕಕೋವಿದರ್ಕ್ಕೆಲಬರೊಳ್ಗ್ರಬ್ಬಂಗಳಂ ಬಲ್ಲವ-
ರ್ಕ್ಕೆಲಬರ್ಬ್ಯಾಕರಣಜ್ಞರಿಂತಿನಿತುಮಂ ಬಲ್ಲನ್ನರಿಲ್ಲೆಲ್ಲಮಂ
ಸಲೆ ಸೋಮೇಶ್ವರಸೂರಿ ಬಲ್ಲನನಘಂ ನಯ್ಯಾಯಿಕಾಗ್ರೇಶ್ವರಂ.....

ಎಂದು ವರ್ಣಿಸಿದೆ. ಶಾಸನವು ಸೋಮೇಶ್ವರ ಸೂರಿಯನ್ನು 'ನಯ್ಯಾಯಿಕಾಗ್ರೇಶ್ವರ' ಎಂದು ಉಲ್ಲೇಖಿಸಿರುವುದು ಗಮನಾರ್ಹ. ಬಳ್ಳಿಗಾವೆಯ ದೇವಾಲಯದ ಸ್ಥಾನಾಚಾರ್ಯರ ಪ್ರಭಾವ ಜಿಲ್ಲೆಯ ದಕ್ಷಿಣ ಭಾಗದಲ್ಲಿ ಗಾಢವಾಗಿದ್ದದ್ದು ಶಾಸನಗಳಿಂದಲೂ, ಕೇದಾರೇಶ್ವರ ಮತ್ತು ನಖರೇಶ್ವರ ತ್ರಿಕೂಟ ದೇವಾಲಯಗಳ ವಾಸ್ತುಶಿಲ್ಪಗಳನ್ನು ಹೋಲುವ ೧೬ ತ್ರಿಕೂಟ ದೇವಾಲಯಗಳಿಂದಲೂ ಸ್ಪಷ್ಟವಾಗಿ ಗೋಚರಿಸುತ್ತದೆ. ಈ ಸಂದರ್ಭದಲ್ಲಿ ನ್ಯಾಯದರ್ಶನದ ದಾರ್ಶನಿಕ ನೋಟ, ಈಶ್ವರನ ಅನಿತ್ಯರೂಪ, ತ್ರಿಕೂಟಕ್ಕೆ ಸಂಬಂಧಪಟ್ಟಂತೆ 'ಮೂವರ ಕೋಣೆಯ ಸಂತತಿ'ಯ ಬಗ್ಗೆ ಸ್ಪಷ್ಟತೆ ಬರಲು ನ್ಯಾಯದರ್ಶನದ ಬಗ್ಗೆ ಗಮನಹರಿಸುವುದು ಅವಶ್ಯವೆನಿಸುತ್ತದೆ.

**ದರ್ಶನಗಳು :** ಈ ವಿಶ್ವಸೃಷ್ಟಿಗೆ ಕಾರಣನಾರು? ಈ ಜೀವಾತ್ಮನು ಇಲ್ಲಿ ಸುಖದುಃಖಗಳನ್ನು ಅನುಭವಿಸಲು ಎಲ್ಲಿಂದ ಬಂದನು? ಎಲ್ಲಿಗೆ ಹೋಗುವನು? ಈ ವಿಶ್ವವ್ಯಾಪಾರವನ್ನು ನಡೆಸುವವರು ಯಾರು? ಸುಖ ದುಃಖಗಳ ವ್ಯವಸ್ಥೆ ಹೇಗೆ? ಜೀವಾತ್ಮನ ಸ್ವರೂಪವೆಂಥದು? ಜೀವಾತ್ಮನ ಗುರಿ ಏನು? ಎಂಬ ಪ್ರಶ್ನೆಗಳು ಎಲ್ಲ ಧರ್ಮಗಳಲ್ಲಿಯೂ ಬರುತ್ತದೆ. ಜ್ಞಾನಿಗಳಾದವರು ಈ ಪ್ರಶ್ನೆಗಳಿಗೆ ಉತ್ತರಗಳನ್ನು ಹುಡುಕಲು ಪ್ರಯತ್ನಿಸಿದ್ದಾರೆ. ದಾರ್ಶನಿಕರೂ ಈ ಪ್ರಯತ್ನ ಮಾಡಿದ್ದಾರೆ.

ಶ್ರುತಿ, ಸ್ಮೃತಿ, ಆಗಮಗಳ ನಂತರ ದರ್ಶನಗಳು ಬೆಳಕಿಗೆ ಬಂದವು. ದರ್ಶನ ಎಂದರೆ ನೋಡುವುದು, ಭೇಟಿ, ಕಾಣ್ಕೆ ಎಂದು ಅರ್ಥ.[೨೨೦] ಭಾರತೀಯ ಋಷಿ ಮುನಿಗಳು ತಮ್ಮ ಸಾಧನೆಯಿಂದ ಹೊಂದಿದ ಜ್ಞಾನ, ಪಡೆದ ಸಿದ್ಧಿ, ಅಂತಃಸ್ಸತ್ತ್ವದಲ್ಲಿ ಕಂಡ ಸತ್ಯ, ತಲುಪಿದ ಗುರಿ, ಅನುಭವಿಸಿದ ಆನಂದಕ್ಕೆ ದರ್ಶನ ಎಂದು ಹೆಸರು. ಗೌತಮ ಬೌದ್ಧನ ತರುವಾಯ ನಾಸ್ತಿಕವಾದಿಗಳಾದ[೨೨೧] ಚಾರ್ವಾಕ, ಬೌದ್ಧ, ಜೈನ ವಾದಗಳು ಪ್ರಬಲಿಸಿದಾಗ ಆಸ್ತಿಕರು ಎಚ್ಚೆತ್ತು ವೇದ ಪ್ರಮಾಣವನ್ನು ಹಿಡಿದೇ ನಾಸ್ತಿಕವಾದಿಗಳನ್ನು ಎದುರಿಸಿದರು. ಆಸ್ತಿಕ ದರ್ಶನಕಾರರ ದರ್ಶನಗಳು ಬೆಳಕಿಗೆ ಬಂದವು. ಅಂತಹ ದರ್ಶನಗಳಲ್ಲಿ ಆರು ದರ್ಶನಗಳು ಮಾತ್ರ ಸರ್ವಸಮ್ಮತವಾದ ರೀತಿಯಲ್ಲಿ ಪ್ರಸಿದ್ಧಿಗೆ ಬಂದವು. ಅವು ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ಪೂರ್ವಮೀಮಾಂಸೆ ಮತ್ತು ಉತ್ತರ ಮೀಮಾಂಸೆ.

ಕಲ್ಪಸೂತ್ರಗಳು ಭಾರತದ ವಾಙ್ಮಯದಲ್ಲಿ ಒಂದು ವಿಶಿಷ್ಟ ಸ್ಥಾನ ಗಳಿಸಿವೆ. ಯಜ್ಞಯಾಗಾದಿಗಳ ಸಂಬಂಧವಲ್ಲದೆ ವ್ಯಾಕರಣಾದಿ ಇತರ ಶಾಸ್ತ್ರಗಳೂ ಸಹ ಈ ಸೂತ್ರಕ್ರಮದಲ್ಲೇ ರಚಿತವಾದವು. ಅಷ್ಟೇ ಅಲ್ಲ ದರ್ಶನಗಳ ಮೂಲವೂ ಈ ಸೂತ್ರಪದ್ಧತಿಯಲ್ಲೇ ಕಂಡುಬರುವುದು. ಈ ಸೂತ್ರಗಳು ಕ್ಲಿಷ್ಟವಾದ್ದರಿಂದ ಇವುಗಳಿಗೆ ಟೀಕೆ ಟಿಪ್ಪಣೆಗಳು ಭಾಷ್ಯಗಳೂ ರಚಿತವಾಗಿ ಈ ಸೂತ್ರಗಳ ಅಭಿಪ್ರಾಯವನ್ನು ವಿಶದೀಕರಿಸುವವು.

ಮೇಲೆ ಹೇಳಿದ ಆರು ದರ್ಶನಗಳಲ್ಲಿ ಕ್ರಮವಾಗಿ ಎರಡೆರಡು ಒಂದು ಗುಂಪಿಗೆ ಸೇರಿವೆ. ಈ ಆರೂ ಭಿನ್ನಪ್ರಯೋಗಗಳನ್ನು ಒಳಗೊಂಡಿದ್ದರೂ ಇವಕ್ಕೆ ಸಾಮಾನ್ಯ ಹಿನ್ನೆಲೆ ಇದೆ. ಎಲ್ಲಾ ದರ್ಶನಗಳು ಜ್ಞಾನವೆಂದರೇನು ಅದರ ಪ್ರಭೇದಗಳೆಷ್ಟು ಪ್ರಮಾಣದ ಲಕ್ಷಣಗಳೇನು ಎಂಬ ಪ್ರಶ್ನೆಗಳನ್ನು ಮೂಲವಾಗಿ ಇಟ್ಟುಕೊಂಡು ವಿಶದೀಕರಣಗೊಳ್ಳುತ್ತವೆ. ಈ ಪ್ರಮಾಣ ಸಮೀಕ್ಷಣವಿಲ್ಲದ ದರ್ಶನವಿಲ್ಲ. ಪ್ರಮಾಣವೆಂದರೆ ಯಥಾರ್ಥ ದರ್ಶನವನ್ನು ಹುಟ್ಟಿಸುವ ಸಾಧನ ಇದು ಯಥಾರ್ಥ ಜ್ಞಾನವನ್ನು ಹುಟ್ಟಿಸುವುದಲ್ಲದೆ ಈ ಜ್ಞಾನದ ಯಥಾರ್ಥ್ಯವನ್ನೂ ತೋರಿಸಿಕೊಡುತ್ತದೆ. ಆದುದರಿಂದ ಇದು ದರ್ಶನ ಶಾಸ್ತ್ರವೂ ಹೌದು, ಸಾಧನ ಶಾಸ್ತ್ರವೂ ಹೌದು. ಈ ಪ್ರಮಾಣದ ವಿವರಗಳ ಬಗ್ಗೆ ಭಿನ್ನಾಭಿಪ್ರಾಯವಿದೆ. ಬಹು ದಾರ್ಶನಿಕರಿಗೆ ಸಮ್ಮತವಾದದ್ದು ಪ್ರತ್ಯಕ್ಷ, ಅನುಮಾನ ಮತ್ತು ಆಗಮ ಅಥವಾ ಶಬ್ದ ಪ್ರಮಾಣಗಳು. ಶಬ್ದ ಪ್ರಮಾಣದಲ್ಲಿ ಪೌರುಷೆಯ ಮತ್ತು ಅಪೌರುಷೆಯವೆಂದು ಎರಡು ಬಗೆ. ಇದರಲ್ಲಿ ಪೌರುಷೆಯ ಆಗಮವೆಂದರೆ ನಂಬಿಕೆಗೆ ಅರ್ಹವಾದ ಆಪ್ತನಿಂದ ಹೇಳಲ್ಪಟ್ಟ ಶಬ್ದ. ಅಪೌರುಷೆಯವೆಂದರೆ ಯಾರಿಂದಲೂ ಹೇಳಲ್ಪಡದ ಸನಾತನವಾಗಿ ಬಂದ ಆಗಮ. ವೇದವೇ ಇಂತಹ ಆಗಮ. ಪ್ರತ್ಯಕ್ಷ ಮತ್ತು ಅನುಮಾನಗಳ ಮಿತಿಮೀರಿದ ಸ್ಥಳದಲ್ಲಿ ಆಗಮ ಉಪಯೋಗಗೊಳ್ಳುತ್ತವೆ.[೨೨೨] ಅದರಲ್ಲೂ ಅದೃಷ್ಟ ವಿಷಯಗಳ ನಿಜವಾದ ಜ್ಞಾನವನ್ನು ಹುಟ್ಟಿಸಲು ಅಪೌರುಷೆಯ ಆಗಮ ಮಾತ್ರ ಶಕ್ತವಾಗುತ್ತದೆ. ಪೂರ್ವಮೀಮಾಂಸಕರು ಮತ್ತು ಉತ್ತರಮೀಮಾಂಸಕರು ಮಾತ್ರ ಅಪೌರುಷೆಯ ಆಗಮವನ್ನು ಒಪ್ಪುವರು. ಉತ್ತರ ಮೀಮಾಂಸಕರಲ್ಲಿ ಅದ್ವೈತ, ದ್ವೈತ, ವಿಶಿಷ್ಟಾದ್ವೈತ ಎಂಬ ಮೂರು ಮತಗಳು ವಿಶೇಷವಾಗಿ ಪ್ರಸಿದ್ಧವಾದವುಗಳು.[೨೨೩]

ನ್ಯಾಯದರ್ಶನ : ನ್ಯಾಯದರ್ಶನದ ನ್ಯಾಯ ಸೂತ್ರಗಳನ್ನು ರಚಿಸಿದವರು ಗೌತಮರು. ಇವರಿಗೆ 'ಅಕ್ಷಪಾದ' ಎಂಬ ಇನ್ನೊಂದು ಹೆಸರೂ ಇದೆ. ಇದರಿಂದ ನ್ಯಾಯದರ್ಶನವನ್ನು 'ಅಕ್ಷಪಾದದರ್ಶನ'

ಎಂದೂ ಕರೆಯುತ್ತಾರೆ.[೨೭೪] ಪದಾರ್ಥಗಳನ್ನು ಪ್ರಮಾಣಗಳಿಂದ ಪರೀಕ್ಷೆ ಮಾಡುವ ಶಾಸ್ತ್ರವೇ 'ನ್ಯಾಯ'. ಪ್ರತಿಯೊಂದು ವಿಚಾರವನ್ನು ತರ್ಕಬದ್ಧವಾಗಿ ಪರಿಶೀಲಿಸಿ ಸಕಾರಣವಾಗಿ ಜೀವನ, ಜಗತ್ತು, ಆತ್ಮ ಇತ್ಯಾದಿ ವಿಚಾರಗಳ ಬಗ್ಗೆ ನ್ಯಾಯದರ್ಶನವು ವಿವರಣೆಗಳನ್ನು ನೀಡುತ್ತದೆ. ತರ್ಕದಿಂದ ಕೂಡಿರುವ ಶಾಸ್ತ್ರವಾದ್ದರಿಂದ ಇದಕ್ಕೆ 'ತರ್ಕಶಾಸ್ತ್ರ' ಎಂಬ ಹೆಸರೂ ಇದೆ. ಹಾಗೆಯೇ ವಿಮರ್ಶಾತ್ಮಕ ದೃಷ್ಟಿಯಿಂದ ಜೀವನ, ಜಗತ್ತು, ಆತ್ಮ ಇತ್ಯಾದಿ ವಿಚಾರಗಳನ್ನು ಪರಿಶೀಲಿಸುವುದರಿಂದ ಇದಕ್ಕೆ 'ಅನ್ವೀಕ್ಷಿಕೀ' ಎಂದೂ ಹೆಸರಿದೆ. ನ್ಯಾಯದರ್ಶನವು ತರ್ಕಬದ್ಧವಾಗಿರುವುದಾದರೂ ಜೀವನದ ಪರಮಗುರಿ ಆತ್ಮ ಸಾಕ್ಷಾತ್ಕಾರ ಅಥವಾ ಮೋಕ್ಷ ಎಂಬುದನ್ನು ಹೇಳಿ ಮೋಕ್ಷಕ್ಕೆ ಹಾದಿಯನ್ನು ತರ್ಕ ಮತ್ತು ಯುಕ್ತಿಗಳಿಂದ ಪ್ರತಿಪಾದಿಸಿರುತ್ತದೆ. ನ್ಯಾಯದರ್ಶನದ ಆಧಾರಸ್ತಂಭಗಳು ಎಂದರೆ ನಾಲ್ಕು ಪ್ರಮಾಣಗಳು ಮತ್ತು ಹದಿನಾರು ವಿಷಯ ಪರಿಶೀಲನೆಗಳು.[೨೭೫] ನಾಲ್ಕು ಪ್ರಮಾಣಗಳು ಯಾವುವೆಂದರೆ ೧. ಪ್ರತ್ಯಕ್ಷ ಪ್ರಮಾಣ ೨. ಅನುಮಾನ ಪ್ರಮಾಣ ೩.ಶಬ್ದ ಪ್ರಮಾಣ ಮತ್ತು ೪. ಉಪಮಾನ ಪ್ರಮಾಣ. ಹದಿನಾರು ವಿಷಯ ಪರಿಶೀಲನೆಗಳು ಯಾವುವೆಂದರೆ ಪ್ರಮಾಣ, ಪ್ರಮೇಯ, ಸಂಶಯ, ಪ್ರಯೋಜನ, ದೃಷ್ಟಾಂತ, ಸಿದ್ಧಾಂತ, ಅವಯವ, ತರ್ಕ, ನಿರ್ಣಯ, ವಾದ, ಜಲ್ಪ, ವಿತಂಡ, ಹೇತ್ವಾಭಾಸ, ಛಲ, ಜೌತಿ ಮತ್ತು ನಿಗ್ರಹಸ್ಥಾನಗಳಾಗಿವೆ. ನಾಲ್ಕು ಪ್ರಮಾಣಗಳ ಮೂಲಕ ದರ್ಶನವು ಆತ್ಮ-ಶರೀರಗಳ ಇರುವಿಕೆಯನ್ನ ಸ್ಪಷ್ಟಪಡಿಸಿ ಅನಂತರ ಈ ಶರೀರ ಎಂದರೇನು? ಆತ್ಮ ಎಂದರೇನು? ಶರೀರಿಯು ಆತ್ಮ ಸಾಕ್ಷಾತ್ಕಾರವನ್ನು ಪಡೆಯುವುದು ಹೇಗೆ? ಎಂಬ ಪ್ರಶ್ನೆಗಳಿಗೆ ಉತ್ತರಿಸುತ್ತದೆ. ಮೇಲೆ ಹೇಳಿದ ಹದಿನಾರು ವಿಷಯ ಪರಿಶೀಲನೆಗಳನ್ನು ನಿರೂಪಿಸುತ್ತ ಪರಮೇಶ್ವರನ ಕರ್ತೃತ್ವವನ್ನು ನಿಶ್ಚಿಯಿಸುತ್ತದೆ.[೨೭೬] ಈ ಹದಿನಾರು ಹಂತಗಳನ್ನು ಸಾಧಕನು ಸರಿಯಾಗಿ ಹಾದು ಹೋದರೆ ನಿಜವಾದ ಜ್ಞಾನವು ದೊರಕಿ ಮೋಕ್ಷವನ್ನು ಪಡೆಯುತ್ತಾನೆ.

**ನ್ಯಾಯದರ್ಶನ ಸಂಗ್ರಹ :** ನ್ಯಾಯದರ್ಶನದಲ್ಲಿ ನವದ್ರವ್ಯಗಳ ಪ್ರಸ್ತಾಪವಿದೆ. ಅವು ಯಾವುವೆಂದರೆ ೧. ಕಾಲ ೨. ದಿಕ್ ೩. ಬುದ್ಧಿ ೪. ಆತ್ಮ ೫. ಆಕಾಶ ೬. ಅಗ್ನಿ ೭. ವಾಯು ೮. ನೀರು ಮತ್ತು ೯. ಪೃಥ್ವಿ ಈ ದ್ರವ್ಯಗಳಿಂದ ಪರಮಾಣುಗಳ ಸಂಯೋಗದಿಂದ ಜಗತ್ತು ಸೃಷ್ಟಿಯಾಗಿದೆ. ದೇವರೇ ಇವೆಲ್ಲಕ್ಕೂ ಮೂಲ ಕಾರಣ. ಆ ಪರಮಾತ್ಮನು ವಿಭುವಾಗಿದ್ದು ನಿತ್ಯಸರ್ವಜ್ಞನಾಗಿದ್ದಾನೆ. ದೇವರು, ಜೀವರುಗಳ ಪೂರ್ವಕರ್ಮಕ್ಕೆ ಅನುಸಾರವಾಗಿ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಕಾರ್ಯಗಳನ್ನು ಮಾಡುತ್ತಾನೆ. ಜೀವಿಯು ಈ ಸಂಸಾರ ಚಕ್ರದಿಂದ ನಿವೃತ್ತಿಗೊಳ್ಳಲು ಮೇಲೆ ವಿವರಿಸಿದ ಹದಿನಾರು ವಿಷಯಗಳ ಜ್ಞಾನವನ್ನು ಪಡೆದುಕೊಳ್ಳಬೇಕು. ಹಾಗೆ ಮಾಡಿದಲ್ಲಿ ರಾಗದ್ವೇಷಾದಿ ದುಃಖಗಳಿಂದ ನಿವೃತ್ತನಾಗಿ ಕರ್ಮಗಳಿಂದ ಮುಕ್ತನಾಗುತ್ತಾನೆ. ಕರ್ಮಗಳಿಂದ ಮುಕ್ತನಾದವನು ಜನ್ಮದಿಂದ ಮತ್ತು ದುಃಖಗಳಿಂದ ಮುಕ್ತನಾಗುತ್ತಾನೆ. ಈ ರೀತಿ ಬಿಡುಗಡೆ ಹೊಂದುವುದನ್ನು ನ್ಯಾಯದರ್ಶನದಲ್ಲಿ 'ಅಪವರ್ಗ' ಎಂದು ಕರೆಯಲಾಗಿದೆ.[೨೭೭] ಹೀಗೆ ನ್ಯಾಯದರ್ಶನವು ದೇವರು, ಆತ್ಮ ಎಂಬೀ ವಿಚಾರಗಳನ್ನು ತರ್ಕದಿಂದ ಸಮಂಜಸವಾದ ರೀತಿಯಲ್ಲಿ ಸಮರ್ಥಿಸಿರುತ್ತದೆ.

ನೈಯಾಯಿಕರಾದ ಕಾಳಾಮುಖರು ಮೋಕ್ಷಕ್ಕೆ ಮಾರ್ಗವನ್ನು ತರ್ಕ ಮತ್ತು ಯುಕ್ತಿಗಳಿಂದ ಪ್ರತಿಪಾದಿಸುತ್ತಿದ್ದರೆಂದು ಈ ಪ್ರದೇಶದ ಶಾಸನಗಳಿಂದಲೂ ತಿಳಿದುಬರುತ್ತದೆ. ಅಬ್ಬಲೂರು ಶಾಸನವು ಕೇದಾರಶಕ್ತಿಯ

ಶಿಷ್ಯನಾದ ಶ್ರೀಕಾಂತಪಂಡಿತದೇವನನ್ನು 'ತರ್ಕವಿದ್ಯಾಸಮುದ್ರಂ' ಎಂದಿದೆ.[೨೭೮] ಬಳ್ಳಿಗಾವೆಯ ಶಾಸನದಲ್ಲಿ ಸೋಮೇಶ್ವರ ಸೂರಿಯನ್ನು 'ಸುಗತಸಿರೇಜಾತ ಚಂಡಾಂಶು ತಾರ್ಕಿಕ ಸೋಮೇಶ್ವರ ಸೂರಿ ಪೆಂಪುವಡೆದಂ ನೈಯಾಯಿಕಾಗ್ರೇಸರಂ' ಎಂದು ವರ್ಣಿಸಿದೆ.[೨೭೯] ಹರಳಹಳ್ಳಿ ಶಾಸನವು ಪರ್ವತಾವಳಿಯ ಕಿಟ್ಟಗಾವಿ ಸಂತತಿಯ ಕಲ್ಯಾಣಶಕ್ತಿಯತಿಯನ್ನು 'ಯತಿವಿತತಿಗಧೀಶಂ ಮಹಾತಾರ್ಕಿಕೇಶಂ' ಎಂದಿದೆ.[೨೮೦] ಸೊರಬ ಶಾಸನದಲ್ಲಿ ರುದ್ರಶಕ್ತಿಯನ್ನು ವರ್ಣಿಸುವಾಗ 'ಪ್ರತಿಪಕ್ಷತಾರ್ಕಿಕ ಮನೋಗತ ಪರ್ವತ ಭೇದನ ವಜ್ರರುಂ' ಎಂದಿದೆ.[೨೮೧] ಇಲ್ಲಿ 'ತರ್ಕ' ಎಂದರೆ ಊಹೆ ಎಂದು ಹೇಳಬಹುದು. ವಾದದಲ್ಲಿ ವಿರೋಧವನ್ನು ಎದುರಿಸಲು ತನ್ನ ನಿಲುವನ್ನು ಸಮರ್ಥಿಸಲು ಉಪಯೋಗಿಸುವ ವಾದದ ಸರಣಿಯೇ ತರ್ಕ.[೨೮೨] ಲಕುಲೀಶ್ವರ ಪಂಡಿತನನ್ನು ವರ್ಣಿಸುವಾಗ ಬಳ್ಳಿಗಾವೆ ಶಾಸನವು 'ಸಮಸ್ತ ತರ್ಕಾದಿಶಾಸ್ತ್ರ ಪಾರಾವಾರ ತಾರಗಂ, ವಾದಿರುದ್ರವಾದೀಭಮಸ್ತಕ ನಖಾಸ್ಫಾಡನ ಕಿಶೋರ ಕೇಸರಿ, ವಾದಿ ಮಹಾರಣ್ಯದಾವದಹನಂ, ದುಷ್ಟವಾದಿನಿಷ್ಠುರ ಪಟಿಷ್ಠ ಶಾರ್ದೂಲಂ' ಎಂದು ಉಲ್ಲೇಖಿಸಿದೆ. ಇಲ್ಲಿ ಬರುವ 'ವಾದ'ವು ವಾದಿಗಳು ತಮ್ಮ ತಮ್ಮ ಅಭಿಪ್ರಾಯಗಳನ್ನು ತರ್ಕಬದ್ಧವಾಗಿ ಸ್ಪಷ್ಟಪಡಿಸಿ ಸತ್ಯದ ನೆಲೆಗೆ ತಲುಪಲು ಯತ್ನಿಸುವುದೇ 'ವಾದ'. 'ವಾದ' ಎಂದರೆ ಚರ್ಚೆ ಎಂದು ತಾತ್ಪರ್ಯವಾಗಿ ಹೇಳಬಹುದು. ನ್ಯಾಯದರ್ಶನ ಹೇಳುವ ಷೋಡಶ ಪದಾರ್ಥಗಳಲ್ಲಿ ತರ್ಕ ಮತ್ತು ವಾದಗಳು ಇರುವುದನ್ನು ಇಲ್ಲಿ ಗಮನಿಸಬಹುದು.

ನೈಯಾಯಿಕರ ಪ್ರಕ್ರಿಯೆಯಾದ ಈಶ್ವರ ಕರ್ತೃವಾದದ ಮೇಲೆ ಶಾಸನಗಳೂ ಸಹ ಬೆಳಕು ಚೆಲ್ಲುತ್ತವೆ.[೨೮೩] ಹೊಂಬಳ ಶಾಸನದಲ್ಲಿ ಬೊಂತೆಮುನೀಂದ್ರನು ಜಯಸಿಂಹನ ಸಂಗಡದಲ್ಲಿ ಇರುವಾಗ ಎಲ್ಲ ತಾರ್ಕಿತರ ಸಭೆ ಸೇರಿತ್ತು. ಆ ನರೇಶ್ವರ ಸಭೆಯಲ್ಲಿ ಕರ್ತೃವಿನ ರೂಪ ಎಂತಹದೆಂದು ಪ್ರಶ್ನೆಯೆದ್ದಿರುವಾಗ ಬೊಂತೆ ಮುನಿಯು ಅದನ್ನು ನಿರ್ಣಯಿಸಿದನೆಂದು ಈ ಕೆಳಗಿನ ಸಾಲುಗಳಿಂದ ತಿಳಿದು ಬರುತ್ತದೆ.

> ಪರಸಮಯಂಗಳೊಳ್ ನೆಗರ್ದ ತಾರ್ಕಿಕರೆಲ್ಲರುಮಿರ್ದು ತನ್ನರೇ
> ಶ್ವರಸಭೆಯೊಳ್ ಸಮರ್ಥಿಸುವ ಕರ್ತೃವಿನರೂಪಮದೆಂತುಟೆಂದನೂ
> ರ್ವರೊಳಮನಿತ್ಯರೂಪೆನಿಸಿ ನಿಂದು ನಿರುತ್ತರರಾಗಿ ಮಾಡಿ ಬಿ |
> ತ್ತರಿಸಿದನಲ್ತೆ ಬೊಂತೆ ಮುನೀಶ್ವರ ಕರ್ತೃವಾದಮಂ ||

ಈಶ್ವರನ ರೂಪವನ್ನು ಅನಿತ್ಯವೆಂದು ಪ್ರತಿಪಾದಿಸಿದ್ದು ಇಲ್ಲಿ ಕಂಡುಬರುತ್ತದೆ. ಶ್ರೀ ಕಪಟರಾಳ ಕೃಷ್ಣರಾಯರು ಈಶ್ವರನ ಅನಿತ್ಯ ರೂಪವನ್ನು ವಿವರಿಸುತ್ತ 'ಈಶ್ವರನ ರೂಪ ಅನಿತ್ಯವೆಂದುದು ಹೇಗೆ? ಪರಮಾತ್ಮನು ಒಂದು ರೂಪದಿಂದ ಸೃಷ್ಟಿಕಾರ್ಯ, ಇನ್ನೊಂದು ರೂಪದಿಂದ ಪಾಲನಕಾರ್ಯ ಮತ್ತೊಂದು ರೂಪದಿಂದ ಸಂಹಾರಕಾರ್ಯ ಈ ರೀತಿ ಬೇರೆ ಬೇರೆ ರೂಪುಗಳಿಂದ ಬೇರೆ ಬೇರೆ ಕಾರ್ಯಗಳನ್ನು ಮಾಡುವುದರಿಂದ ಈಶ್ವರನ ರೂಪ ಅನಿತ್ಯ ಎನ್ನಲಾಗಿದೆ. ಇದು ನೈಯಾಯಿಕರ ಪ್ರಕ್ರಿಯೆಯು' ಎಂದು ವಿವರಿಸಿದ್ದಾರೆ.[೨೮೪]

**ಮೂವರ ಕೋಣೆಯ ಸಂತತಿ :** ಈಶ್ವರನ ಅನಿತ್ಯ ರೂಪಗಳನ್ನು ಪ್ರತ್ಯೇಕವಾಗಿ ಪೂಜಿಸುವ ಉದ್ದೇಶದಿಂದ ಮತ್ತು ನೈಯಾಯಿಕ ಪ್ರಕ್ರಿಯೆಯನ್ನು ಎತ್ತಿ ಹೇಳುವ ಉದ್ದೇಶದಿಂದ ರೂಪಗೊಂಡ ತ್ರಿಕೂಟ ದೇವಾಲಯಗಳೇ ನ್ಯಾಯದರ್ಶನ ದೇವಾಲಯಗಳು. ಬಳ್ಳಿಗಾವೆಯ ನಖರೇಶ್ವರ ದೇವಾಲಯವನ್ನು ಗಮನಿಸಿದರೆ ಈ

ದೇವಾಲಯವು ಪಶ್ಚಿಮ, ಉತ್ತರ, ದಕ್ಷಿಣ ದಿಕ್ಕುಗಳಲ್ಲಿ ಒಟ್ಟು ಮೂರು ಗರ್ಭಗೃಹಗಳನ್ನು ಹೊಂದಿದೆ. ಪಶ್ಚಿಮದ ಗೃಹದಲ್ಲಿ ಲಿಂಗವು, ದಕ್ಷಿಣ ದಿಕ್ಕಿನ ಗೃಹದಲ್ಲಿ ಬ್ರಹ್ಮಲಿಂಗವು ಮತ್ತು ಉತ್ತರದಿಕ್ಕಿನ ಗೃಹದಲ್ಲಿ ವಿಷ್ಣುಶಿಲ್ಪ ಇದ್ದಿರಬಹುದು. ಈಗ ಹದಿನೇಳನೆಯ ಶತಮಾನಕ್ಕೆ ಸೇರಬಹುದಾದ ವೀರಭದ್ರನ ಶಿಲ್ಪವಿದೆ. ಈ ಮೂರೂ ಗರ್ಭಗೃಹಗಳು ಅರ್ಧಮಂಟಪಗಳನ್ನು ಹೊಂದಿರದೆ ನೇರವಾಗಿ ನವರಂಗಕ್ಕೆ ಜೋಡಣೆಗೊಂಡಿವೆ. ಇವುಗಳ ದ್ವಾರಬಂಧದ ಲಲಾಟಫಲಕಗಳಲ್ಲಿ ಯಾವ ಶಿಲ್ಪವೂ ಇಲ್ಲ. ಆದರೆ ಮೂರು ಗರ್ಭಗೃಹಗಳನ್ನು ಒಂದೆಡೆ ಸೇರಿಸುವ ನವರಂಗದ ದ್ವಾರದ ಲಲಾಟಫಲಕದ ಮಕರತೋರಣದಲ್ಲಿ ತ್ರಿಮೂರ್ತಿಗಳಾದ ಬ್ರಹ್ಮ, ಶಿವ ಮತ್ತು ವಿಷ್ಣುವಿನ ಉಬ್ಬುಶಿಲ್ಪವನ್ನು ಕೊರೆಯಲಾಗಿದೆ ಎಂಬುದು ಅತ್ಯಂತ ಗಮನಾರ್ಹ ಸಂಗತಿ. ಇಲ್ಲಿ ಶಿವನೇ ಸರ್ವಸ್ವ ಅವನ ಭಿನ್ನ ರೂಪಗಳು ಒಂದೊಂದು ಗೃಹಗಳಲ್ಲಿ ಪ್ರತಿಷ್ಠಾಪನೆಗೊಂಡಿವೆ.

ಹರಳಹಳ್ಳಿಯ ಕ್ರಿ.ಶ.೧೧೮೧ರ ಶಾಸನವು[೨೮೫] ವಾಮದೇವಮುನಿಪನನ್ನು ವರ್ಣಿಸುವಾಗ 'ಶ್ರೀವಾಮದೇವ ಮುನಿಪ... ಕೃತಪಂಚಬ್ರಹ್ಮನಂಗೀಕೃತಸಕಳಜನಸ್ತುತ್ಯಂ ಸದ್ವಿ(ಶ್ವ)ವಿದ್ಯಂ ಯತಿನಾಥಂ ವಾಮದೇವಬ್ರತಿಪತಿ ಸರದಿಂ ಮೂವರುಂ ದೇವರುಂ ಕೂಡೆ ತರಂಗೊಂಡೇಕಮೂರ್ತತ್ವಮನೆ ತಳೆದವ...' ಎಂದಿದೆ. ಮುಂದಿನ ಶಾಸನ ಪಾಠವು ತೃಟಿತಗೊಂಡಿರುವುದರಿಂದ ಪೂರ್ಣವಾಗಿ ಅರ್ಥೈಸುವುದು ಕಷ್ಟ. ಇಲ್ಲಿ 'ಮೂವರುಂ ದೇವರುಂ' ಎಂದರೆ ಶಿವನ ಅನಿತ್ಯರೂಪಗಳಾದ ಬ್ರಹ್ಮ, ವಿಷ್ಣು ಮತ್ತು ಮಹೇಶ್ವರ ಆಗಿರಬಹುದು. ಅಬ್ಬಲೂರು ಶಾಸನವು[೨೮೬] ಬಳ್ಳಿಗಾವೆ ಕೇದಾರೇಶ್ವರ ದೇವಾಲಯದ ಕೇದಾರಶಕ್ತಿ ಯತಿಯ ತಪಃ ಪ್ರಭಾವವನ್ನು ವಿವರಿಸುವಾಗ

.....ಧರೆಗೆಸೆವ ಶಕ್ತಿಪರ್ಷೆಗೆ
ಕರಮಗ್ರಣಿಯೆನಿಪ ಪರ್ವ್ವತಾವಳಿಯೊಳ್ ಮೂ-
ವರ ಕೋಣೆಯ ಸಂತತಿಗಾ-
ಭರಣಂ ಕೇದಾರಶಕ್ತಿ ಯತಿಪತಿ ನೆಗಳ್ದಂ.......

ಎಂದಿದೆ. ಶಾಸನಗಳು ಕೇದಾರಶಕ್ತಿಯ ಶಿಷ್ಯಪರಂಪರೆ ಯತಿಗಳನ್ನು 'ಮೂವರ ಕೋಣೆಯ ಸಂತತಿ'ಯವರು ಎಂದೇ ಉಲ್ಲೇಖಿಸಿದೆ. ಇಲ್ಲಿ ಬರುವ ಮೂವರಕೋಣೆ ಎಂದರೆ ಮೂವರು ದೇವರ ಕೋಣೆ. ಆ ಮೂವರು ದೇವರು ಈಶ್ವರನ ಅನಿತ್ಯರೂಪಗಳಾದ ಬ್ರಹ್ಮ, ವಿಷ್ಣು, ಮಹೇಶ್ವರರು. 'ಮೂವರ ಕೋಣೆಯ ಸಂತತಿ' ಬಗ್ಗೆ ಈಗಾಗಲೇ ಸಾಕಷ್ಟು ವಿದ್ವಾಂಸರು ಕೆಲಸ ಮಾಡಿದ್ದಾರೆ. ಆದರೂ ಈ ವಿಷಯದಲ್ಲಿ ಸ್ಪಷ್ಟತೆ ಕಂಡು ಬಂದಿರುವುದಿಲ್ಲ. ಜೆ.ಎಫ್.ಫ್ಲೀಟ್ ಅವರು ಎಪಿಗ್ರಾಫಿಯ ಇಂಡಿಕಾ ಐದನೇ ಸಂಪುಟದಲ್ಲಿ ಬಳ್ಳಿಗಾವೆಯ ಕೇದಾರಶಕ್ತಿ ಯತಿಪರಂಪರೆಯನ್ನು ಮೂವರ ಕೋಣೆಯ ಸಂತತಿಯವರೆಂದು ಗುರುತಿಸಲಾಗುತ್ತಿರುವ ವಿಷಯವನ್ನು ಶಾಸನಾಧಾರದಿಂದ ವಿವರಿಸಿದ್ದಾರೆ. ಆದರೆ ಅಲ್ಲಿಯೇ ಅಡಿಟಿಪ್ಪಣಿಯಲ್ಲಿ 'I have not found anything yet to explain the meaning of this name. Muvara must be the genitive of muvaru, three persons, unless it can be connected with *mu, =mudu* advanced age.

For *kone*, of which koneya is the genitive, the dictionary only gives the meaning of a pitcher, an inner apartment or chamber, a room' ಎಂಬ ವಿವರಣೆಯನ್ನು ಕೊಟ್ಟಿದ್ದಾರೆ. ಡೆವಿಡ್ ಎನ್. ಲೊರೆಂಜನ್ ಅವರು ಫ್ಲೀಟ್ ಅವರ ಮಾತುಗಳನ್ನೇ ಅನುಮೋದಿಸಿದ್ದಾರೆ.[೨೮೭]

ಎಂ.ಚಿದಾನಂದಮೂರ್ತಿ ಅವರು ಶಾಸನವೊಂದರ ಆಧಾರದಿಂದ ಮಹಾದೇವ ದಂಡನಾಯಕನು ತನ್ನ ಹೆಸರಿನಲ್ಲಿ ಮಹಾದೇವೇಶ್ವರಲಿಂಗವನ್ನು, ತನ್ನ ತಂದೆಯ ಹೆಸರಿನಲ್ಲಿ (ಮಾ)ಳಪೇಶ್ವರಲಿಂಗವನ್ನು ಸ್ಥಾಪಿಸಿದನೆಂದು ಹೇಳಲಾಗಿದೆ. ಇಲ್ಲಿಯೇ 'ಮೂವರು ದೇವರ ನೈವೇದ್ಯಕ್ಕೆ' ದತ್ತಿಬಿಟ್ಟಿದ್ದನ್ನು ಮೂರು ಪ್ರತ್ಯೇಕ ವಾಕ್ಯಗಳಲ್ಲಿ ಹೇಳಲಾಗಿದೆ. 'ಇದೇ ಮೂವರಕೋಣೆ ದೇವಾಲಯವಾಗಿರ'ಬಹುದು ಎಂದು ಅಭಿಪ್ರಾಯಪಡುತ್ತಾರೆ.[೨೮೮] ಎಂ.ಎಂ.ಕಲಬುರ್ಗಿ ಅವರು ಈ ವಿಷಯವನ್ನು ಸರಳಗೊಳಿಸಿ ಎಂ.ಚಿದಾನಂದ ಮೂರ್ತಿಯವರು ಸೂಚಿಸಿದ ದೇವಾಲಯವನ್ನು ಮೂರು ಕೋಣೆಯ ಸಂತಾನದ ವಾಮಶಕ್ತಿಯತಿಯ ಕೇದಾರೇಶ್ವರ ದೇವಾಲಯಕ್ಕೆ ಪ್ರತಿಬದ್ಧಗೊಳಿಸಿರುವುದರಿಂದ, ಮೂವರಕೋಣೆಯ ದೇವಾಲಯವೆಂದರೆ "ಪ್ರಸಿದ್ಧ ಕೇದಾರೇಶ್ವರ ದೇವಾಲಯವೆಂದೇ ಹೇಳಬೇಕಾಗುತ್ತದೆ" ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.[೨೮೯] ಮುಂದುವರೆದು ಅವರು ಕರ್ನಾಟಕದಲ್ಲಿ ಇದು ಶಕ್ತಿಪರ್ಷೆಯ ಪ್ರಥಮ ತ್ರಿಕೂಟ ದೇವಾಲಯ. ಈ ಪ್ರಥಮತ್ವ ಕಾರಣವಾಗಿ ಇದನ್ನು ಮೂವರ ಕೋಣೆಯ ದೇವಾಲಯವೆಂದು, ಇದಕ್ಕೆ ಸಂಬಂಧಪಟ್ಟ ಶಕ್ತಿಪರ್ಷೆಯವರನ್ನು "ಮೂವರ ಕೋಣೆಯ ಸಂತತಿ"ಯವರೆಂದು ಕರೆದಿರಬಹುದು ಎಂದು ವಿವರಣೆ ಕೊಡುತ್ತಾರೆ. ವಿದ್ವಾಂಸರು ಗುರುತಿರುಸುವಂತೆ ಪ್ರಸಿದ್ಧ ಕೇದಾರೇಶ್ವರ ತ್ರಿಕೂಟ ದೇವಾಲಯವು ಮೂವರ ಕೋಣೆಯ ದೇವಾಲಯವಾಗಿದೆ. ಶಕ್ತಿಪರ್ಷೆಯ ಪ್ರಥಮ ತ್ರಿಕೂಟ ದೇವಾಲಯವೂ ಹೌದು. ಆದರೆ ಬರೀ ಪ್ರಥಮತ್ವದ ಕಾರಣದಿಂದ ದೇವಾಲಯಕ್ಕೆ ಸಂಬಂಧಪಟ್ಟ ಶಕ್ತಿಪರ್ಷೆಯವರನ್ನು 'ಮೂವರು ಕೋಣೆಯ ಸಂತತಿ'ಯವರೆಂದು ಕರೆದಿರಬಹುದು ಎಂಬ ಅಭಿಪ್ರಾಯವನ್ನು ಭಾಗಶಃ ಒಪ್ಪಬಹುದು. ಕೇದಾರೇಶ್ವರ ದೇವಾಲಯದ ಯತಿಗಳನ್ನು 'ಮೂವರ ಕೋಣೆಯ ಸಂತತಿ'ಯವರು ಎಂದು ಕರೆದಿರುವುದರಲ್ಲಿ ಪ್ರಥಮತ್ವದ ಜೊತೆಗೆ ದರ್ಶನದ ಹಿನ್ನೆಲೆ ಇದೆ. ನೈಯಾಯಿಕಾಗ್ರೇಸರರಾದ (ಪುಟ ೧೪೬ರಲ್ಲಿ ವಿವವರಣೆ ಇದೆ) ಕೇದಾರೇಶ್ವರ ದೇವಾಲಯದ ಯತಿ ಪರಂಪರೆಯವರು ಒಪ್ಪಿ ನಡೆದ ನ್ಯಾಯದರ್ಶನದ ದಾರ್ಶನಿಕ ನೋಟದ ಭೌತಿಕ ರೂಪವೇ ಈ ದೇವಾಲಯ. ನ್ಯಾಯದರ್ಶನ ಪ್ರತಿಪಾದಿಸುವ ಈಶ್ವರನ ಅನಿತ್ಯ ರೂಪಗಳಾದ ಸೃಷ್ಟಿ(ಬ್ರಹ್ಮ), ಸ್ಥಿತಿ(ವಿಷ್ಣು), ಮತ್ತು ಲಯ(ಮಹೇಶ್ವರ)ಗಳನ್ನು ಪ್ರತ್ಯೇಕವಾದ ಮೂರು ಗರ್ಭಗೃಹಗಳಲ್ಲಿ ಪೂಜಿಸಿರುವ ಕಾರಣದಿಂದ ಈ ಯತಿಪರಂಪರೆಯನ್ನು 'ಮೂವರ ಕೋಣೆಯ ಸಂತತಿ'ಯವರೆಂದು ಶಾಸನಗಳು ದಾಖಲಿಸಿವೆ. ಈಶ್ವರನ ಮೂರು ಅನಿತ್ಯ ರೂಪಗಳನ್ನು ಪ್ರತ್ಯೇಕವಾಗಿ ಪೂಜಿಸುವಲ್ಲಿ ತ್ರಿಕೂಟ ವಿನ್ಯಾಸದ ದೇವಾಲಯವನ್ನು ಬಳಸಿಕೊಂಡಿರುವುದು ಸಮಂಜಸ. ಕೇದಾರೇಶ್ವರ ದೇವಾಲಯದ ಯತಿಗಳು ತಮ್ಮ ಪ್ರಭಾವವನ್ನು ಹರಡಲು ಮತ್ತು ದಾರ್ಶನಿಕ ನೋಟವನ್ನು ಬಿಂಬಿಸಲು ಈಶ್ವರನ ಅನಿತ್ಯ ರೂಪಗಳನ್ನು ಒಳಗೊಂಡ ತ್ರಿಕೂಟ ದೇವಾಲಯಗಳನ್ನು ಬೇರೆಬೇರೆ ಗ್ರಾಮಗಳಲ್ಲಿ ಸ್ಥಳೀಯರ ಸಹಕಾರದೊಂದಿಗೆ ನಿರ್ಮಿಸಿದರು. ಇಂಥ ದೇವಾಲಯಗಳೇ ನ್ಯಾಯದರ್ಶನ/ತ್ರಿಮೂರ್ತಿ ದೇವಾಲಯಗಳು.




## ನಕ್ಷೆ ೫

## ನ್ಯಾಯದರ್ಶನ/ತ್ರಿಮೂರ್ತಿ ದೇವಾಲಯಗಳು ಇರುವ ಸ್ಥಳಗಳು

ಶಿಗ್ಗಾಂವ
ಸವಣೂರು
ಹಾನಗಲ್ಲ
ಧರ್ಮಾ ನದಿ
ಹಾವೇರಿ
ವರದಾ ನದಿ
ಬ್ಯಾಡಗಿ
ರಾಣೆಬೆನ್ನೂರು
ಹಿರೇಕೆರೂರು
ಕುಮುದ್ವತಿ ನದಿ
ತುಂಗಭದ್ರಾ ನದಿ

ತಾಲೂಕು ಸ್ಥಳ
ದೇವಾಲಯ
ಜಿಲ್ಲಾ ಗಡಿರೇಖೆ
ತಾಲೂಕು ಗಡಿರೇಖೆ
ನದಿ

| | | | |
|---|---|---|---|
| ೧. | ಅಂತರವಳ್ಳಿ | ೯. | ಗುಡಗೂರು |
| ೨. | ಅಕ್ಕಿಆಲೂರು | ೧೦. | ಗುಡ್ಡದ ಆನವೇರಿ |
| ೩. | ಆಲದಗೇರಿ | ೧೧. | ಮತ್ತಿಹಳ್ಳಿ |
| ೪. | ಕಡೂರು | ೧೨. | ಮತ್ತೂರು |
| ೫. | ಕಿರಗೇರಿ | ೧೩. | ಸಿಡೇನೂರು |
| ೬. | ಕುಂಚೂರು | ೧೪. | ಹಿರೇಕೊಣತಿ |
| ೭. | ಕುಡುಪಲಿ | ೧೫. | ಹಿರೇಮಾಗನೂರು |
| ೮. | ಗುಂಡೂರು | ೧೬. | ಹೊನ್ನತ್ತಿ |

೨೦ ೧೦ ೦ ೧೦ ೨೦ ಕಿ.ಮೀ.

ಬಳ್ಳಿಗಾವೆಯ ಕೇದಾರೇಶ್ವರ ದೇವಾಲಯವು ವಾಸ್ತುವಿನ್ಯಾಸದಲ್ಲಿ ಉತ್ತರ, ದಕ್ಷಿಣ ಮತ್ತು ಪಶ್ಚಿಮ ದಿಕ್ಕುಗಳಲ್ಲಿ ಗರ್ಭಗೃಹಗಳನ್ನು ಹೊಂದಿದಂತೆ ಮಧ್ಯದಲ್ಲಿ ಒಂದು ನವರಂಗವಿದೆ. ನವರಂಗದ ಪೂರ್ವ ದಿಕ್ಕಿನಲ್ಲಿ ಕಕ್ಷಾಸನವನ್ನು ಹೊಂದಿದ ಮುಖಮಂಟಪವಿದೆ. ಪಶ್ಚಿಮ ದಿಕ್ಕಿನ ಗರ್ಭಗೃಹವು ಮುಖ್ಯಗೃಹವಾಗಿದ್ದು ಈ ಗರ್ಭಗೃಹವು ಮಾತ್ರ ಅರ್ಧಮಂಟಪವನ್ನು ಹೊಂದಿದೆ. ಉಳಿದೆರಡು ಗೃಹಗಳು ನೇರವಾಗಿ ನವರಂಗಕ್ಕೆ ಜೋಡಣೆಗೊಂಡಿವೆ. ದಕ್ಷಿಣದಿಕ್ಕಿನ ಗೃಹವು ವೃತ್ತಾಕಾರದ ಯೋನಿಪೀಠದಲ್ಲಿ ಸಣ್ಣ ರುದ್ರಭಾಗವನ್ನು ಹೊಂದಿದ ಬ್ರಹ್ಮಲಿಂಗವನ್ನು, ಮಧ್ಯಗರ್ಭಗೃಹದಲ್ಲಿ ಎತ್ತರವಾದ ರುದ್ರಭಾಗವನ್ನು ಒಳಗೊಂಡ ಲಿಂಗವನ್ನು ಮತ್ತು ಉತ್ತರದಿಕ್ಕಿನ ಗರ್ಭಗೃಹದಲ್ಲಿ ವಿಷ್ಣುಮೂರ್ತಿಯನ್ನು ಕಾಣುತ್ತೇವೆ. ಇದೇ ರೀತಿ ವಾಸ್ತು ರಚನೆ ಮತ್ತು ಶಿಲ್ಪಗಳನ್ನು ಒಳಗೊಂಡ ಹದಿನಾರು ತ್ರಿಕೂಟ ದೇವಾಲಯಗಳನ್ನು ಹಾವೇರಿ ಜಿಲ್ಲೆಯಲ್ಲಿ ಕಂಡುಬಂದಿದೆ. ಈ ದೇವಾಲಯಗಳು ಜಿಲ್ಲೆಯ ದಕ್ಷಿಣ ಭಾಗದಲ್ಲಿ ಹೆಚ್ಚಾಗಿರುವುದು ಬಳ್ಳಿಗಾವೆಯ ಕೇದಾರೇಶ್ವರ ದೇವಾಲಯದ ಪ್ರಭಾವವೇ ಕಾರಣ ಎಂದು ಸ್ಪಷ್ಟವಾಗುತ್ತದೆ.

ಹಾವೇರಿ ಜಿಲ್ಲೆಯಲ್ಲಿ ಈ ಕೆಳಗಿನಂತೆ ೧೬ ನ್ಯಾಯದರ್ಶನ ದೇವಾಲಯಗಳನ್ನು ಗುರುತಿಸಲಾಗಿದೆ(ನಕ್ಷೆ-೨೪).

|  |  |  |  |
|---|---|---|---|
| ೧. ಅಂತರವಳ್ಳಿ | ೨. ಅಕ್ಕಿಆಲೂರು | ೩. ಆಲದಗೇರಿ | ೪. ಕಡೂರು |
| ೫. ಕಿರಗೇರಿ | ೬. ಕುಂಚೂರು | ೭. ಕುಡುಪಲಿ | ೮. ಗುಂಡೂರು |
| ೯. ಗುಡಗೂರು | ೧೦. ಗುಡ್ಡದ ಆನವೇರಿ | ೧೧. ಮತ್ತಿಹಳ್ಳಿ | ೧೨. ಮತ್ತೂರು |
| ೧೩. ಸಿಡೇನೂರು | ೧೪. ಹಿರೇಕೊಣತಿ | ೧೫. ಹಿರೇಮಾಗನೂರು | ೧೬. ಹೊನ್ನತ್ತಿ |

ಊರು : ಅಂತರವಳ್ಳಿ (ತಾ.ರಾಣೆಬೆನ್ನೂರು)

ಸ್ಥಳ : ಊರ ನಡುವೆ

ಹೆಸರು : ಈಶ್ವರ ಗುಡಿ

ಅಭಿಮುಖ : ಪೂರ್ವ

ನಿವೇದನೆ : ಈಶ್ವರ

ಕಾಲ : ಕ್ರಿ.ಶ.ಸು.೧೨ನೇ ಶತಮಾನ

ಶೈಲಿ : ಕಲ್ಯಾಣ ಚಾಲುಕ್ಯ

ಬಳಸಿದ ವಸ್ತು : ನೀಲಿ ಛಾಯೆಯ ಕಪ್ಪು ಕಲ್ಲು

### ದೇವಾಲಯ ವಾಸ್ತುಶಿಲ್ಪ

ತಳವಿನ್ಯಾಸ : (ತಳವಿನ್ಯಾಸ ರೇಖಾಚಿತ್ರ-೧೫) ಮೂರು ಗರ್ಭಗೃಹಗಳು, ಒಂದು ಅರ್ಧಮಂಟಪ, ನವರಂಗ, ಪೂರ್ವ ದಿಕ್ಕಿನಲ್ಲಿ ಪ್ರವೇಶದ್ವಾರ.

ಊರ್ಧ್ವಮುಖ ರಚನೆ : ರಾಣೆಬೆನ್ನೂರಿನಿಂದ ದಕ್ಷಿಣಕ್ಕೆ ೧೩ ಕಿ.ಮೀ. ದೂರದಲ್ಲಿರುವ ಈ ದೇವಾಲಯದ ಹೊರಮೈ ಮಣ್ಣಿನಿಂದ ಆವೃತವಾಗಿದೆ.




ತಳವಿನ್ಯಾಸ ರೇಖಾಚಿತ್ರ-೧೫, ಕಲ್ಮೇಶ್ವರ ದೇವಾಲಯ, ಅಂತರವಳ್ಳಿ (ತಾ.ರಾಣೆಬೆನ್ನೂರು)
೧. ಗರ್ಭಗೃಹ, ೨. ಅರ್ಧಮಂಟಪ, ೩. ನವರಂಗ

**ತಿರ್ಯಙ್ಮುಖ ರಚನೆಗಳು :** ಪೂರ್ವಾಭಿಮುಖವಾದ ಮುಖ್ಯ ಗರ್ಭಗೃಹವು, ೮ x ೮ ಅಡಿ ವಿಸ್ತಾರದಲ್ಲಿದೆ. ನಾಲ್ಕು ಮೂಲೆ ಕಂಬಗಳ ಮಧ್ಯದಲ್ಲಿ ರಚನೆಗೊಂಡ ಭಿತ್ತಿಯಲ್ಲಿ ಅರ್ಧಅಡಿ ಅಗಲ, ಐದು ಅಡಿ ಉದ್ದದ ಕಲ್ಲು ಫಲಕಗಳನ್ನು ಬಳಸಲಾಗಿದೆ. ಪಶ್ಚಿಮ ಮತ್ತು ಉತ್ತರ ದಿಕ್ಕಿನ ಭಿತ್ತಿಯಲ್ಲಿ ಅರ್ಧಅಡಿ ಮುಂಚಾಚಿದ ಫಲಕಗಳಿವೆ. ಛತ್ತಿನಲ್ಲಿ ಸಮತಲದಲ್ಲಿ ಕಮಲದ ಅಲಂಕರಣವಿದೆ. ಈ ಗೃಹವು ನಾಲ್ಕು ಅಡಿ ಎತ್ತರದ, ಚೌಕಾಕಾರದ ಯೋನಿಪೀಠವನ್ನು ಹೊಂದಿದ ಲಿಂಗವನ್ನು ಹೊಂದಿದೆ. ಲಿಂಗದ ರುದ್ರಭಾಗವು ಎರಡು ಅಡಿ ಎತ್ತರವಾಗಿದೆ. ದ್ವಾರಬಂಧವು ಅರ್ಧಅಡಿ ಎತ್ತರದ ಹೊಸ್ತಿಲ ಮೇಲೆ ಪಂಚಶಾಖೆಗಳಿಂದ ಕೂಡಿದೆ. ಮಧ್ಯದ ಸ್ತಂಭ ಶಾಖೆಯು ಪ್ರಧಾನವಾಗಿದ್ದು ಎಲ್ಲಕ್ಕಿಂತ ಹೆಚ್ಚು ಮುಂಚಾಚಿದೆ. ಈ ಶಾಖೆಯ ಪಾದ ಫಲಕದಲ್ಲಿ ತೋರಣದ ಅಡಿಯಲ್ಲಿ ತ್ರಿಭಂಗಿಯಲ್ಲಿ ನಿಂತ ದ್ವಾರಪಾಲಕರ ಉಬ್ಬುಶಿಲ್ಪಗಳಿವೆ. ಸ್ತಂಭಶಾಖೆ ಒಂದನ್ನು ಬಿಟ್ಟು ಉಳಿದ ಎಲ್ಲ ಶಾಖೆಗಳೂ ಲಲಾಟದಲ್ಲಿ ಮುಂದುವರೆದಿವೆ. ಮಧ್ಯದ ಫಲಕದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ(ಛಾಯಾಚಿತ್ರ-೩೭). ಗರ್ಭಗೃಹದ ಮುಂದಿನ ರಚನೆಯಾದ ಅರ್ಧಮಂಟಪವು ವಿಸ್ತೀರ್ಣದಲ್ಲಿ ಗರ್ಭಗೃಹವನ್ನು ಹೋಲುತ್ತದೆ. ಇದರ ಛತ್ತಿನಲ್ಲಿಯೂ ಕಮಲದ ಅಲಂಕರಣವಿದೆ. ಬಾಗಿಲುವಾಡವು ಸಹ ಮುಖ್ಯಗರ್ಭಗೃಹದಂತೆ ಅರ್ಧಅಡಿ ಎತ್ತರದ ಹೊಸ್ತಿಲ ಮೇಲೆ ಪಂಚಶಾಖೆಗಳಿಂದ ಕೂಡಿದೆ. ಮಧ್ಯದ ಸ್ತಂಭಶಾಖೆಯು ಪ್ರಧಾನವಾಗಿದ್ದು ಎಲ್ಲಕ್ಕಿಂತ ಹೆಚ್ಚು ಮುಂಚಾಚಿದೆ. ಕ್ರಮವಾಗಿ ಹಿಂದೆ ಸರಿದ ಉಳಿದ ಶಾಖೆಗಳು ಲಲಾಟದಲ್ಲಿಯೂ ಮುಂದುವರೆದಿವೆ. ಕೊನೆಯ ಶಾಖೆಯು ಜಾಲಂದ್ರಗಳನ್ನು ಹೊಂದಿದೆ. ಈಗ ಸುಣ್ಣದಲ್ಲಿ ಮುಚ್ಚಿವೆ. ಲಲಾಟದಲ್ಲಿಯ ಫಲಕವು ಅರ್ಧಅಡಿ ಮುಂಚಾಚಿದೆ. ಇಲ್ಲಿ ಪಾಶಾಂಕುಶ, ಪುಸ್ತಕ, ಮಣಿಮಾಲೆಗಳನ್ನು ತನ್ನ ನಾಲ್ಕು ಕೈಗಳಲ್ಲಿ ಧರಿಸಿ ಪದ್ಮಾಸನದಲ್ಲಿ ಕುಳಿತ ಸರಸ್ವತಿಯ ಉಬ್ಬುಶಿಲ್ಪವಿರುವುದು ವಿಶೇಷ(ಛಾಯಾಚಿತ್ರ-೩೭). ಫಲಕದ ಅಕ್ಕಪಕ್ಕದಲ್ಲಿ ಅಧೋಮುಖ ಕಮಲಮೊಗ್ಗಿನ ರಚನೆಗಳು ಇದ್ದು ಈಗ ಹಾಳಾಗಿವೆ.

ಅಕ್ಕಪಕ್ಕದ ಗರ್ಭಗೃಹಗಳಲ್ಲಿ ದಕ್ಷಿಣದಿಕ್ಕಿನ ಗೃಹವನ್ನು ದುರಸ್ತಿಕಾರ್ಯದಲ್ಲಿ ಕೈ ಬಿಡಲಾಗಿದೆ. ಉತ್ತರದಿಕ್ಕಿನ ಗೃಹವು ವಿಸ್ತೀರ್ಣದಲ್ಲಿ ಮುಖ್ಯಗರ್ಭಗೃಹಕ್ಕಿಂತ ಚಿಕ್ಕದಾಗಿದೆ. ಇದರ ದ್ವಾರಬಂಧವು ಆಧುನಿಕ ರೀತಿಯಲ್ಲಿ ದುರಸ್ತಿಗೊಂಡಿದೆ.

ನವರಂಗವು ೧೯x೧೯ ಅಡಿ ವಿಸ್ತೀರ್ಣದಲ್ಲಿದೆ. ಮಧ್ಯದ ಚೌಕಾಕಾರದ ವೇದಿಕೆಯ ತುದಿಗಳಲ್ಲಿ ತಿರುಗಣೆ ಯಂತ್ರದಿಂದ ತಯಾರಿಸಿದ ಕಂಬಗಳಿವೆ. ಚೌಕಾಕಾರದ ಪೀಠದ ಮೇಲೆ ಪಾದಭಾಗವೂ ಚೌಕಾಕಾರದಲ್ಲಿದೆ. ದಂಡಭಾಗದಲ್ಲಿ ಅಡ್ಡಕೋಯ್ತದ ಬಳೆಗಳ ಅಲಂಕರಣ, ಗಂಟಾರಚನೆಗಳಿವೆ ಮತ್ತು ವಜ್ರಾಕೃತಿಯ ಅಲಂಕರಣವನ್ನು ಹೊಂದಿದ ಪಟ್ಟಿಕೆಯನ್ನು ಕಾಣುತ್ತೇವೆ. ದಂಡಾಗ್ರದಲ್ಲಿ ಕಳಶ, ಘಟ, ಮಂಡಿ, ಫಲಕ ಭಾಗಗಳಿವೆ(ರೇಖಾಚಿತ್ರ-೧೫). ಮೇಲೆ ತ್ರಿಕೋನ ಮಾದರಿಯ ಚತುರ್ಮುಖ ಬೋದಿಗೆಗಳಿವೆ. ನವರಂಗದ ಎಲ್ಲ ಭಿತ್ತಿಕಂಬಗಳು, ಮಧ್ಯದ ವೇದಿಕೆ ಕಂಬಗಳು ಒಂದು ಅಡಿ ಅಗಲ, ದಪ್ಪಗಾತ್ರದ ಉತ್ತರ ಭಾಗಗಳಿಂದ ಜೋಡಣೆಗೊಂಡಿವೆ. ಮಧ್ಯದ ವಿತಾನದಲ್ಲಿ ಸಮತಲದಲ್ಲಿ ಕಮಲದ ಅಲಂಕರಣವಿದೆ. ಉಳಿದ ಅಂಕಣಗಳು ಅಲಂಕಾರ ರಹಿತವಾಗಿವೆ. ಭಿತ್ತಿಯಲ್ಲಿ ಐದು ಕೋಷ್ಟಗಳಿವೆ. ಇವು ಹೆಚ್ಚು ಅಗಲವಾಗಿದ್ದು ಕಪೋತ ಛತ್ತನ್ನು ಹೊಂದಿವೆ. ವೇದಿಕೆಯ ಮಧ್ಯದಲ್ಲಿ ಮುಖ್ಯಕ್ಕೆ ಎದುರಾಗಿ ಕುಳಿತ ಬೃಹತ್ ನಂದಿ ಶಿಲ್ಪವಿದೆ.




ರೇಖಾಚಿತ್ರ-೧೫, ಕಲ್ಮೇಶ್ವರ ದೇವಾಲಯದ ನವರಂಗದ ಕಂಬ, ಅಂತರವಳ್ಳಿ (ತಾ.ರಾಣೆಬೆನ್ನೂರು)
೧. ಪೀಠ, ೨. ಪಾದ, ೩. ದಂಡ, ೪. ಘಟ, ೫. ಫಲಕ, ೬. ಬೋದಿಗೆ

ನವರಂಗದ ಪೂರ್ವದಿಕ್ಕಿನಲ್ಲಿರುವ ಮುಖಮಂಟಪವನ್ನು ಮತ್ತು ಪ್ರವೇಶ ದ್ವಾರವನ್ನು ಆಧುನಿಕ ರೀತಿಯಲ್ಲಿ ದುರಸ್ತಿ ಮಾಡಲಾಗಿದೆ.

**ಶಾಸನಗಳಿಂದ ಹೆಚ್ಚಿನ ಮಾಹಿತಿ :** ಶಾಸನಗಳು ಈ ಗ್ರಾಮವನ್ನು ಅನ್ತರವಳ್ಳಿ[೨೯೧] ಎಂದು ಉಲ್ಲೇಖಿಸಲಾಗಿದೆ. ದೇವಾಲಯಕ್ಕೆ ಸಂಬಂಧಪಟ್ಟಂತೆ ಶಾಸನಗಳು ಲಭ್ಯವಿಲ್ಲ.

| | | |
|---|---|---|
| ಊರು | : | ಅಕ್ಕಿಆಲೂರು (ತಾ.ಹಾನಗಲ್ಲ) |
| ಸ್ಥಳ | : | ಕೆರೆದಂಡೆ |
| ಹೆಸರು | : | ಕಲ್ಮೇಶ್ವರ |
| ಅಭಿಮುಖ | : | ಪೂರ್ವ |
| ನಿವೇದನೆ | : | ಬ್ರಹ್ಮಲಿಂಗ, ಮಹದೇವ, ವಿಷ್ಣು |
| ಕಾಲ | : | ಕ್ರಿ.ಶ.ಸು.೧೧ನೇ ಶತಮಾನ |
| ಶೈಲಿ | : | ರಾಷ್ಟ್ರಕೂಟ |
| ಬಳಸಿದ ವಸ್ತು | : | ನೀಲಿ ಛಾಯೆಯ ಕಪ್ಪು ಕಲ್ಲು |

## ದೇವಾಲಯ ವಾಸ್ತುರಚನೆ

**ತಳವಿನ್ಯಾಸ :** (ತಳವಿನ್ಯಾಸ ರೇಖಾಚಿತ್ರ-೧೬) ಮೂರು ಗರ್ಭಗೃಹಗಳು, ಮೂರು ತೆರೆದ ಅರ್ಧಮಂಟಪ ಗಳು, ನವರಂಗ, ಮುಖಮಂಟಪ.

**ಊರ್ಧ್ವಮುಖ ರಚನೆ :** ಹಾನಗಲ್ಲಿನಿಂದ ಆಗ್ನೇಯಕ್ಕೆ ೧೦ ಕಿ.ಮೀ. ದೂರದಲ್ಲಿರುವ ಈ ದೇವಾಲಯದ ಹೊರಮೈ ಮಣ್ಣಿನಿಂದ ಆವೃತವಾಗಿದೆ. ಮುಂಭಾಗದಲ್ಲಿರುವ ಮುಖಮಂಟಪವು ಮಾತ್ರ ಸ್ಪಷ್ಟವಾಗಿ ಕಾಣುತ್ತದೆ.

**ತಿರ್ಯಙ್ಮುಖ ರಚನೆಗಳು :** ಈ ದೇವಾಲಯವು ಕಲ್ಯಾಣ ಚಾಲುಕ್ಯರ ಕಾಲಘಟ್ಟಕ್ಕೆ ಒಳಪಟ್ಟರೂ, ತ್ರಿಕೋನ ಅಲಂಕರಣೆಯಿಂದ ಕೂಡಿದ ಗಿಡ್ಡಕಂಬಗಳು ಮತ್ತು ಗಿಡ್ಡ ಬಾಗಿಲುವಾಡಗಳಂತಹ ರಾಷ್ಟ್ರಕೂಟ ಶೈಲಿಯನ್ನು ಅಲಂಕರಿಸಿಕೊಂಡಿದೆ. ಮುಖ್ಯಗರ್ಭಗೃಹವು ಪೂರ್ವಾಭಿಮುಖವಾಗಿದೆ. ನಾಲ್ಕು ಮೂಲೆ ಕಂಬಗಳಿಂದ ರಚನೆಗೊಂಡ ಮುಖ್ಯಗರ್ಭಗೃಹವು ಪೂರ್ವ-ಪಶ್ಚಿಮ, ಉತ್ತರ-ದಕ್ಷಿಣ ೮x೬ ಅಡಿ ಅಗಲವಾಗಿದ್ದು, ಮಧ್ಯದಲ್ಲಿ ೨.೭ ಅಡಿ ಎತ್ತರದ ಚೌಕಾಕಾರದ ಪೀಠವನ್ನು ಹೊಂದಿದ ಲಿಂಗವಿದೆ. ಮೇಲೆ ಛತ್ತಿನಲ್ಲಿ ಸಮತಲದಲ್ಲಿ ಕಮಲದ ಅಲಂಕರಣವಿದೆ. ಗರ್ಭಗೃಹದ ಬಾಗಿಲವಾಡವು ಕಂಡುಬರುವುದಿಲ್ಲ. ಇದರ ಮುಂದಿನ ರಚನೆಯಾದ ಅರ್ಧಮಂಟಪವು ೬.೬ ಅಡಿ ವಿಸ್ತೀರ್ಣದಲ್ಲಿದೆ. ಇದೂ ತೆರೆದ ಅರ್ಧಮಂಟಪ ವಾಗಿದ್ದು ಇತ್ತೀಚೆಗೆ ಕಟ್ಟಿಗೆಯ ಬಾಗಿಲನ್ನು ಕೂಡಿಸಲಾಗಿದೆ.

ಉತ್ತರ ಮತ್ತು ದಕ್ಷಿಣ ದಿಕ್ಕಿನ ಗರ್ಭಗೃಹಗಳು ವಿಸ್ತಾರದಲ್ಲಿ ಮುಖ್ಯಗರ್ಭಗೃಹಕ್ಕಿಂತ ಚಿಕ್ಕದಾಗಿದ್ದು, ಪೂರ್ವ-ಪಶ್ಚಿಮ, ಉತ್ತರ-ದಕ್ಷಿಣ ೫x೭ ಅಡಿ ವಿಸ್ತೀರ್ಣದಲ್ಲಿವೆ. ದಕ್ಷಿಣ ದಿಕ್ಕಿನ ಗರ್ಭಗೃಹವು ಬಿದ್ದಿದೆ.




ತಳವಿನ್ಯಾಸ ರೇಖಾಚಿತ್ರ-೧೬, ಕಲ್ಮೇಶ್ವರ ದೇವಾಲಯ, ಅಕ್ಕಿಆಲೂರು (ತಾ.ಹಾನಗಲ್ಲ)
೧. ಗರ್ಭಗೃಹ, ೨. ಅರ್ಧಮಂಟಪ, ೩. ನವರಂಗ, ೪. ಮುಖಮಂಟಪ




ರೇಖಾಚಿತ್ರ-೧೬, ಕಲ್ಮೇಶ್ವರ ದೇವಾಲಯದ ನವರಂಗದಲ್ಲಿರುವ ಕಂಬ, ಅಕ್ಕಿಆಲೂರು (ತಾ.ಹಾನಗಲ್ಲ)
೧. ಪೀಠ, ೨. ಪಾದ, ೩. ದಂಡ, ೪. ಘಟ, ೫. ಬೋದಿಗೆ

ಎರಡೂ ಗರ್ಭಗೃಹಗಳು ಖಾಲಿಯಾಗಿವೆ. ಆದರೆ ಮುಖಮಂಟಪದಲ್ಲಿ ಇರಿಸಲಾದ ವಿಷ್ಣುಪೀಠವು ಮತ್ತು ಲಿಂಗವು ಅನುಕ್ರಮವಾಗಿ ಉತ್ತರ ಮತ್ತು ದಕ್ಷಿಣದಿಕ್ಕಿನ ಗರ್ಭಗೃಹಗಳಿಗೆ ಸಂಬಂಧಪಟ್ಟಿದ್ದವೆಂದು ಹೇಳಬಹುದು. ಈ ಎರಡೂ ಗರ್ಭಗೃಹಗಳ ದ್ವಾರಬಂಧವು ಕಾಲು ಅಡಿ ಎತ್ತರದ ಹೊಸ್ತಿಲ ಮೇಲೆ ನಾಲ್ಕು ಅಡಿ ಎತ್ತರವಾಗಿದ್ದು ಗಿಡ್ಡದಾಗಿ ಇವೆ. ದ್ವಾರಬಂಧವು ಪಂಚಶಾಖೆಗಳಿಂದ ಕೂಡಿದೆ. ಆದರೆ ಶಾಖೆಗಳು ಸ್ಪಷ್ಟವಾಗಿ ಕಾಣುವುದಿಲ್ಲ. ಸುಣ್ಣವನ್ನು ಬಳಿಯಲಾಗಿದೆ. ಮೊದಲ ಎರಡು ಶಾಖೆಗಳು ಲಲಾಟದಲ್ಲಿ ಮುಂದುವರೆದಿವೆ. ಲಲಾಟಫಲಕದಲ್ಲಿ ಯಾವ ಬಿಂಬವೂ ಇಲ್ಲ. ಪಾದಫಲಕದಲ್ಲೂ ಯಾವ ಶಿಲ್ಪಗಳಿಲ್ಲ. ಎರಡೂ ಗರ್ಭಗೃಹಗಳು ತೆರೆದ ಅರ್ಧಮಂಟಪವನ್ನು ಹೊಂದಿವೆ. ಇವು ವಿಸ್ತಾರದಲ್ಲಿ ಮುಖ್ಯಗರ್ಭಗೃಹ ಅರ್ಧಮಂಟಪದಷ್ಟೇ ಇವೆ.

ಮೂರೂ ದಿಕ್ಕಿನ ರಚನೆಗಳನ್ನು ಒಂದೆಡೆ ಸೇರಿಸುವ ನವರಂಗವು ೧೪.೩ x ೧೨.೬ ಅಡಿ ಪೂರ್ವ-ಪಶ್ಚಿಮ, ಉತ್ತರ-ದಕ್ಷಿಣ ವಿಸ್ತಾರದಲ್ಲಿದೆ. ಮಧ್ಯದಲ್ಲಿ ತೆಳುವಾದ ಚೌಕಾಕಾರದ ವೇದಿಕೆ ಇದೆ. ವೇದಿಕೆಯ ತುದಿಗಳಲ್ಲಿ ರಾಷ್ಟ್ರಕೂಟ ಶೈಲಿಯ ನಾಲ್ಕು ಕಂಬಗಳಿವೆ. ಈ ಕಂಬಗಳು ೪.೫ ಅಡಿ ಎತ್ತರವಾಗಿದ್ದು, ಛತ್ತು ಕೈಗೆ ಎಟಕುವಷ್ಟು ಗಿಡ್ಡದಾಗಿ ಇವೆ. ಈ ಕಂಬಗಳು ಚೌಕಾಕಾರದ ಪೀಠದ ಮೇಲೆ ಪಾದ ಭಾಗದಿಂದ ದಂಡಾಗ್ರಭಾಗದ ಘಟಭಾಗದವರೆಗೂ ಚೌಕಾಕಾರವಾಗಿಯೇ ಇದೆ. ಮಧ್ಯದಲ್ಲಿ ತ್ರಿಕೋನ ಮಾದರಿಯ ಲಂಬರೇಖೆಗಳ ಅಲಂಕರಣವಿದೆ(ರೇಖಾಚಿತ್ರ-೧೬). ಈ ಕಂಬ ರಚನೆಯಲ್ಲಿ ಫಲಕಭಾಗವು ಕಾಣುವುದಿಲ್ಲ. ಘಟಭಾಗದ ಮೇಲೆ ಬೋದಿಗೆ ಇದೆ. ಬೋದಿಗೆಗಳು ತ್ರಿಕೋನ ಮಾದರಿಯಲ್ಲಿದ್ದು ತೆಳುವಾಗಿವೆ. ಮಧ್ಯದ ನಾಲ್ಕು ಕಂಬಗಳಿಗೂ ನವರಂಗದ ಭಿತ್ತಿ ಕಂಬಗಳಿಗೂ ಮುಕ್ಕಾಲು ಅಡಿ ದಪ್ಪದ ತೊಲೆಗಳಿಂದ ಜೋಡಣೆ ಮಾಡಲಾಗಿದೆ. ಮಧ್ಯದ ವಿತಾನದಲ್ಲಿ ಕಮಲದ ಅಲಂಕರಣವಿದೆ. ನವರಂಗದ ಭಿತ್ತಿಯಲ್ಲಿ ಕೋಷ್ಟ ರಚನೆಗಳಿಲ್ಲ. ಇದರ ಪೂರ್ವದಿಕ್ಕಿನಲ್ಲಿ ಪ್ರವೇಶವಿದ್ದು ದ್ವಾರಬಂಧವು ಬಿದ್ದಿದೆ. ಇದರ ಮುಂದಿನ ರಚನೆಯಾಗಿ ನಾಲ್ಕುಜೊತೆ ಕಂಬಗಳನ್ನು ಬಳಸಿ ಉದ್ದನೆಯ ಮುಖಮಂಟಪವನ್ನು ರಚಿಸಲಾಗಿದೆ. ಇದು ಪೂರ್ವ-ಪಶ್ಚಿಮ, ಉತ್ತರ-ದಕ್ಷಿಣ ೧೯.೫ x ೭.೫ ಅಡಿ ವಿಸ್ತಾರವಿದ್ದು ತೆರೆದ ಮಾದರಿಯಲ್ಲಿದೆ. ಇಲ್ಲಿಯ ಕಂಬಗಳು ರಾಷ್ಟ್ರಕೂಟ ಶೈಲಿಯಲ್ಲಿದ್ದುಮೂರು ರೀತಿಯಲ್ಲಿ ಅಲಂಕೃತಗೊಂಡಿವೆ. ಮೊದಲ ಜೊತೆ ಕಂಬಗಳು ಚೌಕಾಕಾರದ ಪೀಠದ ಮೇಲೆ ಪಾದಭಾಗದಿಂದ ಬೊದಿಗೆಯವರೆಗೂ ಚೌಕಾಕಾರವಾಗಿದ್ದು ಅಲಂಕಾರರಹಿತವಾಗಿ ಸಾದಾ ಮಾದರಿಯಲ್ಲಿವೆ. ಎರಡನೇ ಜೊತೆ ಕಂಬಗಳು ಚೌಕಾಕಾರದ ಪೀಠದ ಮೇಲೆ ಚೌಕಾಕಾರದ ಪಾದಭಾಗವಿದ್ದು ಮೇಲೆ ಹದಿನಾರು ಮುಖಗಳಿಂದ ಅಲಂಕೃತಗೊಂಡು ರುದ್ರಕಾಂತಸ್ತಂಭ ಮಾದರಿಗೆ ಸೇರಿವೆ. ಲಂಬರೇಖೆಗಳ ಪಾದಭಾಗದಲ್ಲಿ ಊರ್ಧ್ವಮುಖ ಕಮಲದಳಗಳ ಅಲಂಕರಣವಿದೆ. ಮೂರು ಮತ್ತು ನಾಲ್ಕನೇ ಜೊತೆ ಕಂಬಗಳು ಒಂದೇ ಮಾದರಿಯಲ್ಲಿದ್ದು, ಈ ಕಂಬಗಳು ತಿರುಗಣಿ ಯಂತ್ರದಲ್ಲಿ ತಯಾರಿಸಿದ ಕಂಬಗಳಾಗಿವೆ. ಈ ನಾಲ್ಕು ಕಂಬಗಳು ನಂದಿ ಮಂಟಪವನ್ನು ರಚಿಸಿವೆ. ಮಂಟಪದ ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಮುಖ್ಯಗೃಹಕ್ಕೆ ಎದುರಾಗಿ ಕುಳಿತ ನಂದಿಶಿಲ್ಪವಿದೆ(ಛಾಯಾಚಿತ್ರ-೩೮).

**ಶಾಸನಗಳಿಂದ ಹೆಚ್ಚಿನ ವಿವರ :** ಈ ಗ್ರಾಮದ ವೀರಗಲ್ಲು ಶಾಸನಗಳು ಈ ಗ್ರಾಮವನ್ನು ಆಲೂರು ಎಂದು ಉಲ್ಲೇಖಿಸಿವೆ. ದೇವಾಲಯಕ್ಕೆ ಸಂಬಂಧಪಟ್ಟಂತೆ ಶಾಸನಗಳು ಲಭ್ಯವಿಲ್ಲ.

| | | |
|---|---|---|
| ಊರು | : | ಆಲದಗೇರಿ (ತಾ.ಹಿರೇಕೆರೂರು) |
| ಸ್ಥಳ | : | ಊರ ಈಶಾನ್ಯಕ್ಕೆ |
| ಹೆಸರು | : | ಈಶ್ವರ ದೇವಾಲಯ |
| ಅಭಿಮುಖ | : | ಪೂರ್ವ |
| ನಿವೇದನೆ | : | ಬ್ರಹ್ಮಲಿಂಗ, ಈಶ್ವರ, ವಿಷ್ಣು |
| ಕಾಲ | : | ಕ್ರಿ.ಶ.ಸು.೧೨ನೇ ಶತಮಾನ |
| ಶೈಲಿ | : | ಕಲ್ಯಾಣ ಚಾಲುಕ್ಯ |
| ಬಳಸಿದ ವಸ್ತು | : | ನೀಲಿ ಛಾಯೆಯ ಕಪ್ಪು ಕಲ್ಲು |

## ದೇವಾಲಯ ವಾಸ್ತುಶೈಲಿ

**ತಳವಿನ್ಯಾಸ :** (ತಳವಿನ್ಯಾಸ ರೇಖಾಚಿತ್ರ-೧೭) ಮೂರು ಗರ್ಭಗೃಹಗಳು, ಒಂದು ಅರ್ಧಮಂಟಪ, ಒಂದು ನವರಂಗ, ಪೂರ್ವದಿಕ್ಕಿಗೆ ಪ್ರವೇಶ್ವದ್ವಾರ, ಒಂದು ನಂದಿಮಂಟಪ.

**ಊರ್ಧ್ವಮುಖ ರಚನೆ :** ದೇವಾಲಯದ ಅಧಿಷ್ಠಾನವು ಮಣ್ಣಿನಿಂದ ಮುಚ್ಚಿದೆ. ಮುಖ್ಯಗರ್ಭಗೃಹದ ಈಶಾನ್ಯ ಮೂಲೆಯಲ್ಲಿ ಕಾಣಸಿಗುವ ಅಧಿಷ್ಠಾನದ ಭಾಗಗಳಿಂದ ಅದರ ಮಾದರಿಯನ್ನು ಗುರುತಿಸಬಹುದು. ಇದು ೨.೫ ಅಡಿ ಎತ್ತರವಾಗಿದ್ದು ಜಗತಿ, ಪದ್ಮ, ತ್ರಿಪಟ್ಟಕುಮುದ, ಹಿಂದೆ ಸರಿದ ಕಪೋತ ಮತ್ತು ದಂತಮಾದರಿಯ ಅಲಂಕರಣ, ಪ್ರಧಾನ ಅಂಗಗಳ ನಡುವೆ ಒಳಸರಿದ ಕಂಪ-ಗಳ-ಕಂಪ ರಚನೆಗಳಿಂದ ಕೂಡಿದ್ದು ಪಾದಬಂಧ ಪ್ರಭೇದಕ್ಕೆ ಸೇರುತ್ತದೆ. ಅಧಿಷ್ಠಾನವು ಭದ್ರಭಾಗದಲ್ಲಿ ಮಾತ್ರ ಒಂದು ಹಂತದಲ್ಲಿ ಮುಂಚಾಚಿದೆ. ಉಳಿದಂತೆ ದೇವಾಲಯವು ದುರಸ್ತಿಗೊಂಡಿದೆ. ಶಿಖರಭಾಗಗಳು ಕಂಡುಬರುವುದಿಲ್ಲ.

**ತಿರ್ಯಙ್ಮುಖ ರಚನೆಗಳು :** ಪೂರ್ವಾಭಿಮುಖವಾದ ಮುಖ್ಯಗರ್ಭಗೃಹವು ೬x೬ ಅಡಿ ವಿಸ್ತೀರ್ಣದಲ್ಲಿದೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಗರ್ಭಗೃಹದಲ್ಲಿ ಎರಡು ಅಡಿ ಎತ್ತರದ ಚೌಕಾಕಾರದ ಪೀಠವಿರುವ ಲಿಂಗವಿದೆ. ಪಶ್ಚಿಮ ದಿಕ್ಕಿನ ಭಿತ್ತಿಯ ಮಧ್ಯಭಾಗದಲ್ಲಿ ಅರ್ಧಅಡಿ ಮುಂಚಾಚಿದ ೪ ಅಡಿ ಉದ್ದನೆಯ ಕಲ್ಲು ಫಲಕವಿದೆ. ಗರ್ಭಗೃಹದ ಬಾಗಿಲವಾಡವು ಅರ್ಧಅಡಿ ಎತ್ತರದ ಹೊಸ್ತಿಲ ಮೇಲೆ ಸಾದಾಮಾದರಿಯ ತ್ರಿಶಾಖೆಯಿಂದ ಕೂಡಿದೆ. ಲಲಾಟಫಲಕದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಈ ಮುಖ್ಯಗರ್ಭಗೃಹವು ಮಾತ್ರ ಅರ್ಧಮಂಟಪವನ್ನು ಹೊಂದಿದೆ. ಅರ್ಧಮಂಟಪವು ವಿಸ್ತೀರ್ಣದಲ್ಲಿ ಗರ್ಭಗೃಹಕ್ಕಿಂತ ಚಿಕ್ಕದಾಗಿದ್ದು ೫x೫ ಅಡಿ ವಿಸ್ತೀರ್ಣದಲ್ಲಿದೆ. ಇದರ ಬಾಗಿಲವಾಡವು ಒಂದು ಪಟ್ಟಿಕೆಯನ್ನು ಹೊಂದಿದ್ದು ಅದು ಲಲಾಟದಲ್ಲಿಯೂ ಮುಂದುವರಿದಿದೆ. ಲಲಾಟಫಲಕವಿದ್ದು ಅದರಲ್ಲಿ ಯಾವ ಬಿಂಬವೂ ಇಲ್ಲ. ಬಾಗಿಲುವಾಡದ ಅಕ್ಕಪಕ್ಕದ ಜಾಲಂದ್ರಗಳು ಲಲಾಟ ಭಾಗದಲ್ಲಿಯೂ ಮುಂದುವರಿದಿದೆ(ಛಾಯಾಚಿತ್ರ ೩೯).

ಉತ್ತರ ಮತ್ತು ದಕ್ಷಿಣದಿಕ್ಕಿನ ಗರ್ಭಗೃಹಗಳು ವಿಸ್ತೀರ್ಣದಲ್ಲಿ ಮುಖ್ಯ ಗೃಹದಷ್ಟೇ ಇವೆ. ಛತ್ತಿನಲ್ಲಿ ಕಮಲದ ಅಲಂಕರಣವನ್ನು ಹೊಂದಿವೆ. ದಕ್ಷಿಣದಿಕ್ಕಿನ ಗರ್ಭಗೃಹದಲ್ಲಿ ೧.೭ ಅಡಿ ಎತ್ತರದ ವೃತ್ತಾಕಾರದ ಯೋನಿಪೀಠದಲ್ಲಿ ಬ್ರಹ್ಮಲಿಂಗವಿದೆ. ಗರ್ಭಗೃಹದ ಬಾಗಿಲುವಾಡವು ಮುಖ್ಯಗರ್ಭಗೃಹದಂತೆ ಸಾದಾಮಾದರಿ




ತಳವಿನ್ಯಾಸ ರೇಖಾಚಿತ್ರ-೧೭, ಕಲ್ಮೇಶ್ವರ ದೇವಾಲಯ, ಆಲದಗೇರಿ (ತಾ.ಹಿರೇಕೆರೂರು)
೧. ಗರ್ಭಗೃಹ, ೨. ಅರ್ಧಮಂಟಪ, ೩. ನವರಂಗ, ೪. ನಂದಿಮಂಟಪ




ರೇಖಾಚಿತ್ರ-೧೭, ಕಲ್ಮೇಶ್ವರ ದೇವಾಲಯದ ನವರಂಗದ ಕಂಬ, ಆಲದಗೇರಿ (ತಾ.ಹಿರೇಕೆರೂರು)
೧. ಪೀಠ, ೨. ಪಾದ, ೩. ದಂಡ, ೪. ಘಟ, ೫. ಮಂಡಿ, ೬. ಫಲಕ, ೭. ಬೋದಿಗೆ

ಯಲ್ಲಿ ರಚನೆಗೊಂಡಿದೆ. ಇದಕ್ಕೆ ಅರ್ಧಮಂಟಪ ಇರದೆ ಗರ್ಭಗೃಹವು ನೇರವಾಗಿ ನವರಂಗಕ್ಕೆ ಜೋಡಣೆಗೊಂಡಿದೆ. ಉತ್ತರದಿಕ್ಕಿನ ಗೃಹವು ಮಧ್ಯದಲ್ಲಿ ಗರುಡ ಲಾಂಛನ ಇರುವ ೧.೨ ಅಡಿ ಎತ್ತರದ ಪೀಠವನ್ನು ಹೊಂದಿದೆ. ಇದರ ಬಾಗಿಲುವಾಡವು ಕಲಾತ್ಮಕವಾಗಿದೆ. ಪಂಚಶಾಖೆಗಳಿಂದ ಕೂಡಿದ್ದು ಮಧ್ಯದ ಸ್ತಂಭ ಶಾಖೆಯು ಪ್ರಧಾನವಾಗಿದೆ. ಮೊದಲ ಎರಡು ಶಾಖೆಗಳು ಲಲಾಟದಲ್ಲಿಯೂ ಮುಂದುವರೆದಿವೆ. ಲಲಾಟಫಲಕವು ಬರಿದಾಗಿದೆ. ಅಕ್ಕಪಕ್ಕದಲ್ಲಿ ಅಧೋಮುಖ ಕಮಲಮೊಗ್ಗಿನ ಅಲಂಕರಣವಿದೆ. ಈ ಗರ್ಭಗೃಹವೂ ಅರ್ಧಮಂಟಪವನ್ನು ಹೊಂದಿರದೆ ನೇರವಾಗಿ ನವರಂಗಕ್ಕೆ ಜೋಡಣೆಗೊಂಡಿದೆ.

ಮಧ್ಯದ ನವರಂಗವು ೧೪x೧೪ ಅಡಿ ವಿಸ್ತೀರ್ಣದಲ್ಲಿದೆ. ಮಧ್ಯದಲ್ಲಿ ಎತ್ತರವಾದ ಚೌಕಾಕಾರದ ವೇದಿಕೆ ಇದೆ. ಇದರ ಮೇಲಿನ ನಾಲ್ಕು ಕಂಬಗಳು ಐದು ಅಡಿ ಎತ್ತರವಾಗಿದೆ. ಅರ್ಧಅಡಿ ಎತ್ತರದ ಚೌಕಾಕಾರದ ಪೀಠದ ಮೇಲೆ ಪಾದ ಭಾಗವೂ ಚೌಕಾಗಿದೆ. ದಂಡ ಭಾಗದಲ್ಲಿ ಹದಿನಾರು ಮುಖ ಪಟ್ಟಿಕೆ, ಎಂಟು ಮುಖ ಪಟ್ಟಿಕೆ, ಹದಿನಾರು ಮುಖ ಪಟ್ಟಿಕೆಗಳ ಅಲಂಕರಣ ಇದ್ದು ಮೇಲೆ ಚೌಕಾಕಾರದ ರಚನೆ ಇದೆ. ದಂಡಾಗ್ರದಲ್ಲಿ ತೆಳುವಾದ ಕಳಸ ಭಾಗವಿದ್ದು ಘಟ, ಮಂಡಿ, ಫಲಕ ಭಾಗಗಳನ್ನು ಹೊಂದಿವೆ. ಗ್ರೀವ ಭಾಗವು ಎತ್ತರವಾಗಿದ್ದು ತ್ರಿಕೋನ ಮಾದರಿಯ ನಾಲ್ಕು ಮುಖ ಬೋದಿಗೆಯನ್ನು ಹೊಂದಿವೆ(ರೇಖಾಚಿತ್ರ-೧೭). ಬೋದಿಗೆಗಳು ಮುಕ್ಕಾಲು ಅಡಿ ದಪ್ಪದ ತೊಲೆಗಳಿಂದ ಗೋಡೆ ಕಂಬಗಳೊಂದಿಗೆ ಜೋಡಣೆಗೊಂಡಿದೆ. ಮಧ್ಯದ ವಿತಾನದಲ್ಲಿ ಕಮಲದ ಅಲಂಕರಣವಿದೆ. ನವರಂಗದ ಭಿತ್ತಿಯಲ್ಲಿ ಆರು ಕೋಷ್ಠಗಳು ಇರುವಂತೆ ತೋರುತ್ತದೆ. ದುರಸ್ತಿ ಕಾರ್ಯದಲ್ಲಿ ಅವುಗಳನ್ನು ಮುಚ್ಚಲಾಗಿದ್ದು ಈಗ ಮೂರು ಕೋಷ್ಠಗಳು ಕಾಣಿಸಿಕೊಳ್ಳುತ್ತವೆ. ಮುಖ್ಯದ ಅರ್ಧಮಂಟಪದ ಅಕ್ಕಪಕ್ಕದಲ್ಲಿ ಇರುವ ಕೋಷ್ಠಗಳು ಷಡ್ವರ್ಗಗಳನ್ನು ಹೊಂದಿ ಅಲ್ಪ ವಿಮಾನದಂತೆ ತೋರುತ್ತವೆ. (ಛಾಯಾಚಿತ್ರ-೪೦) ನವರಂಗದ ದ್ವಾರಬಂಧವು ಸಾದಾಮಾದರಿಯಲ್ಲಿದ್ದು ಪ್ರಧಾನ ಪಟ್ಟಿಯು ಲಲಾಟದಲ್ಲಿಯೂ ಮುಂದುವರೆದಿದೆ. ಲಲಾಟಫಲಕದಲ್ಲಿ ಯಾವ ಬಿಂಬವೂ ಇಲ್ಲ. ನವರಂಗದ ಪೂರ್ವದಿಕ್ಕಿನಲ್ಲಿ ಆರು ಅಡಿ ಅಂತರದಲ್ಲಿ ನಂದಿ ಮಂಟಪವಿದೆ. ಈ ಮಂಟಪವು ಇತ್ತೀಚಿನ ರಚನೆಯಾಗಿದೆ.

**ಶಾಸನಗಳಿಂದ ಹೆಚ್ಚಿನ ಮಾಹಿತಿ : ಲಭ್ಯವಿಲ್ಲ.**

| | | |
|---|---|---|
| ಊರು | : | ಕಡೂರು (ತಾ.ಹಿರೇಕೆರೂರು) |
| ಸ್ಥಳ | : | ಊರಿನ ಉತ್ತರಕ್ಕೆ |
| ಹೆಸರು | : | ಈಶ್ವರ ದೇವಾಲಯ |
| ಅಭಿಮುಖ | : | ಪೂರ್ವ |
| ನಿವೇದನೆ | : | ಈಶ್ವರ |
| ಕಾಲ | : | ಕ್ರಿ.ಶ.ಸು.೧೨ನೇ ಶತಮಾನ |
| ಶೈಲಿ | : | ಕಲ್ಯಾಣ ಚಾಲುಕ್ಯ |
| ಬಳಸಿದ ವಸ್ತು | : | ನೀಲಿ ಛಾಯೆಯ ಕಪ್ಪು ಕಲ್ಲು |

**ದೇವಾಲಯ ವಾಸ್ತುಶೈಲಿ**

**ತಳವಿನ್ಯಾಸ :** (ತಳವಿನ್ಯಾಸ ರೇಖಾಚಿತ್ರ-೧೮) ಮೂರು ಗರ್ಭಗೃಹಗಳು, ಒಂದು ಅರ್ಧಮಂಟಪ, ನವರಂಗ, ಮುಖಮಂಟಪ.

**ಊರ್ಧ್ವಮುಖ ರಚನೆ :** ಹಿರೇಕೆರೂರಿನಿಂದ ಆಗ್ನೇಯಕ್ಕೆ ೨೦ ಕಿ.ಮೀ ದೂರದಲ್ಲಿರುವ ಈ ದೇವಾಲಯದ ಹೊರಮೈ ಮಣ್ಣಿನಿಂದ ಆವೃತವಾಗಿದೆ.

**ತಿರ್ಯಙ್ಮುಖ ರಚನೆಗಳು :** ಪೂರ್ವಾಭಿಮುಖವಾದ ಮುಖ್ಯಗರ್ಭಗೃಹವು ೬x೬ ಅಡಿ ವಿಸ್ತೀರ್ಣದಲ್ಲಿದೆ. ದೇವಾಲಯವು ಇತ್ತೀಚೆಗೆ ದುರಸ್ತಿಗೊಂಡು ಟೈಲ್ಸ್ ಜೋಡಿಸಿ ನವೀಕರಣಗೊಂಡಿದೆ. ಗರ್ಭಗೃಹದ ಮಧ್ಯದಲ್ಲಿ ಎರಡು ಅಡಿ ಎತ್ತರದ ಚೌಕಾಕಾರದ ಪೀಠವಿರುವ ಲಿಂಗವನ್ನು ಕಾಣಬಹುದು. ಛತ್ತಿನ ಸಮತಲದಲ್ಲಿ ಕಮಲದ ಅಲಂಕರಣವಿದೆ. ಬಾಗಿಲುವಾಡವನ್ನು ನವೀಕರಿಸಲಾಗಿದೆ. ಗರ್ಭಗೃಹದ ಮುಂದಿನ ರಚನೆಯಾದ ಅರ್ಧ ಮಂಟಪವು ಗರ್ಭಗೃಹಕ್ಕಿಂತ ಸ್ವಲ್ಪ ಚಿಕ್ಕದಾಗಿದ್ದು ೫.೫ x ೫.೫ ಅಡಿ ವಿಸ್ತೀರ್ಣದಲ್ಲಿದೆ. ಇದರ ದ್ವಾರಬಂಧವು ತ್ರಿಶಾಖೆಯಿಂದ ಕೂಡಿದ್ದು ಅಕ್ಕಪಕ್ಕದಲ್ಲಿ ಜಾಲಂಧ್ರಗಳನ್ನು ಹೊಂದಿವೆ. ಇಲ್ಲಿಯೂ ಸಹ ಆಧುನಿಕ ಟೈಲ್ಸ್‌ಗಳಿಂದ ದುರಸ್ತಿ ಮಾಡಲಾಗಿದೆ.

ಅಕ್ಕಪಕ್ಕಗಳ ಗರ್ಭಗೃಹಗಳು ವಿಸ್ತೀರ್ಣದಲ್ಲಿ ಮುಖ್ಯ ಗರ್ಭಗೃಹವನ್ನು ಹೋಲುತ್ತವೆ. ನಾಲ್ಕುಮೂಲೆ ಕಂಬಗಳ ಮಧ್ಯ ರಚನೆಗೊಂಡ ಭಿತ್ತಿಯನ್ನು ೧/೨ x ೩ ಅಡಿ ಸೈಝ್ ಕಲ್ಲುಗಳಿಂದ ಕಟ್ಟಲಾಗಿದೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ದಕ್ಷಿಣ ಗರ್ಭಗೃಹವು ವೃತ್ತಾಕಾರದ ಪೀಠದಲ್ಲಿ ಸಣ್ಣ ಗಾತ್ರದ ರುದ್ರ ಭಾಗವಿದ್ದ ಬ್ರಹ್ಮಲಿಂಗವನ್ನು ಹೊಂದಿದೆ. ಉತ್ತರ ದಿಕ್ಕಿನ ಗರ್ಭಗೃಹದಲ್ಲಿ ವೃತ್ತಾಕಾರದ ಪೀಠದಲ್ಲಿ ೧.೫ ಅಡಿ ಎತ್ತರದ ರುದ್ರಭಾಗವನ್ನು ಹೊಂದಿದ ಲಿಂಗವಿದೆ. ಎರಡೂ ಗರ್ಭಗೃಹಗಳು ಅರ್ಧಮಂಟಪವನ್ನು ಹೊಂದದೆ ನೇರವಾಗಿ ನವರಂಗದೊಂದಿಗೆ ಜೋಡಣೆಗೊಂಡಿವೆ. ಇವುಗಳ ದ್ವಾರಬಂಧಗಳು ನವೀಕರಣಗೊಂಡಿವೆ.

ನವರಂಗವು ೧೮x೧೮ ಅಡಿ ವಿಸ್ತಾರದಲ್ಲಿದೆ. ಮಧ್ಯದಲ್ಲಿ ಚೌಕಾಕಾರದ ವೇದಿಕೆ ಇದೆ. ಇದರ ತುದಿಗಳಲ್ಲಿ ನಾಲ್ಕು ಕಂಬಗಳಿವೆ. ಕಂಬಗಳು ಐದು ಅಡಿ ಎತ್ತರವಾಗಿದೆ. ಇವುಗಳ ಪೀಠ ಮತ್ತು ಪಾದಭಾಗಗಳೂ ಚೌಕಾಕಾರದಲ್ಲಿವೆ. ದಂಡಭಾಗದಲ್ಲಿ ಅಷ್ಟಮುಖಗಳಿದ್ದ ತಟ್ಟೆ ಆಕಾರದ ರಚನೆಯ ಮೇಲೆ ಹದಿನಾರು ಮುಖದ ಪಟ್ಟಿಕೆಗಳು ಇವೆ. ಮೂರು ಪಟ್ಟಿಕೆಗಳಲ್ಲಿ ಮಧ್ಯ ಪಟ್ಟಿಕೆಯು ಸರಳ ರಚನೆಯಲ್ಲಿದ್ದರೆ ಮೇಲಿನ ಮತ್ತು ಕೆಳಗಿನ ಪಟ್ಟಿಕೆಗಳು ನಿಮ್ನ ರೀತಿಯಲ್ಲಿ ಹದಿನಾರು ಮುಖಗಳನ್ನು ಹೊಂದಿವೆ. ಇದರ ಮೇಲೆ ಚೌಕಾಕಾರದ ಪೆಟ್ಟಿಗೆಯನ್ನು ಹೋಲುವ ರಚನೆ ಇದೆ. ದಂಡಾಗ್ರ ಭಾಗದಲ್ಲಿ ತೆಳುವಾದ ಕಲಶ, ಘಟ, ಮಂಡಿ, ಫಲಕ ಭಾಗಗಳಿವೆ. ಫಲಕದ ಮೇಲೆ ತ್ರಿಕೋನ ಮಾದರಿಯ ಚತುರ್ಮುಖ ಬೋದಿಗೆ ಇದೆ (ರೇಖಾಚಿತ್ರ-೧೮). ಅರ್ಧ ಅಡಿ ದಪ್ಪದ ಕಲ್ಲು ತೊಲೆಗಳು, ಕಂಬದಿಂದ ಕಂಬಕ್ಕೆ ಜೋಡಣೆಗೊಂಡಿವೆ. ಮಧ್ಯದ ವಿತಾನದಲ್ಲಿ ಕಮಲದ ಅಲಂಕರಣವಿದೆ. ವೇದಿಕೆಯ ಮಧ್ಯದಲ್ಲಿ ಮುಖ್ಯಕ್ಕೆ ಎದುರಾಗಿ ನಂದಿ ಶಿಲ್ಪವು ಇದೆ(ಛಾಯಾಚಿತ್ರ-೧೮). ನವರಂಗದ ಭಿತ್ತಿಯಲ್ಲಿ ದುರಸ್ತಿಗೊಂಡ ಮೂರು ಕೋಷ್ಟಗಳಿವೆ. ಅಲ್ಲಿ ಆಧುನಿಕ ಶಿಲ್ಪಗಳನ್ನು ಇರಿಸಲಾಗಿದೆ. ನವರಂಗದ ದ್ವಾರಬಂಧವನ್ನು ಇತ್ತೀತೆಗೆ ದುರಸ್ತಿಗೊಳಿಸಲಾಗಿದೆ.




ತಳವಿನ್ಯಾಸ ರೇಖಾಚಿತ್ರ-೧೮, ಕಲ್ಮೇಶ್ವರ ದೇವಾಲಯ, ಕಡೂರು (ತಾ.ಹಿರೇಕೆರೂರು)
೧. ಗರ್ಭಗೃಹ, ೨. ಅರ್ಧಮಂಟಪ, ೩. ನವರಂಗ, ೪. ಮುಖಮಂಟಪ




ರೇಖಾಚಿತ್ರ-೧೮ಕಲ್ಮೇಶ್ವರ ದೇವಾಲಯದ ನವರಂಗದ ಕಂಬ, ಕಡೂರು (ತಾ.ಹಿರೇಕೆರೂರು)
೧. ಪೀಠ, ೨. ಪಾದ, ೩. ದಂಡ, ೪. ಘಟ, ೫. ಫಲಕ, ೬. ಬೋದಿಗೆ

**ಶಾಸನಗಳಿಂದ ಹೆಚ್ಚಿನ ವಿವರ :** ಶಾಸನಗಳು ಈ ಗ್ರಾಮವನ್ನು 'ಕಡವೂರು' ಎಂದು ಉಲ್ಲೇಖಿಸಿವೆ. ಕಲ್ಯಾಣ ಚಾಲುಕ್ಯ ಎರಡನೇ ಸೋಮೇಶ್ವರನ ಶಾಸನವು[೯೧] ಕಡವೂರ ವರ್ಣನೆಯನ್ನು ಮತ್ತು ಮಹಾಮಂಡಳೇಶ್ವರ ಉದಯಾದಿತ್ಯನನ್ನು ಉಲ್ಲೇಖಿಸುತ್ತದೆ. ಈಶ್ವರ ದೇವಾಲಯಕ್ಕೆ ಸಂಬಂಧಪಟ್ಟಂತೆ ಯಾವ ಶಾಸನಗಳು ಲಭ್ಯವಿಲ್ಲ.

| | | |
|---|---|---|
| ಊರು | : | ಕಿರಗೇರಿ (ತಾ.ಹಿರೇಕೆರೂರು) |
| ಸ್ಥಳ | : | ಊರಿನ ಈಶಾನ್ಯಕ್ಕೆ ತುಂಗಭದ್ರಾ ನದಿ ದಂಡೆಯ ಮೇಲೆ |
| ಹೆಸರು | : | ಕಲ್ಮೇಶ್ವರ (ತ್ರಿಕೂಟೇಶ್ವರ) |
| ಅಭಿಮುಖ | : | ಪೂರ್ವ |
| ನಿವೇದನೆ | : | ಈಶ್ವರ |
| ಕಾಲ | : | ಕ್ರಿ.ಶ.ಸು.೧೨ನೇ ಶತಮಾನ |
| ಶೈಲಿ | : | ಕಲ್ಯಾಣ ಚಾಲುಕ್ಯ |
| ಬಳಸಿದ ವಸ್ತು | : | ನೀಲಿ ಛಾಯೆಯ ಕಪ್ಪು ಕಲ್ಲು |

### ದೇವಾಲಯ ವಾಸ್ತುಶೈಲಿ

**ತಳವಿನ್ಯಾಸ :** (ತಳವಿನ್ಯಾಸ ರೇಖಾಚಿತ್ರ-೧೯) ಮೂರು ಗರ್ಭಗೃಹಗಳು, ಒಂದು ಅರ್ಧಮಂಟಪ, ನವರಂಗ, ಪೂರ್ವ ದಿಕ್ಕಿಗೆ ಪ್ರವೇಶ.

**ಊರ್ಧ್ವಮುಖ ರಚನೆ :** ಹಿರೇಕೆರೂರಿನಿಂದ ಆಗ್ನೇಯಕ್ಕೆ ೨೮ ಕಿ.ಮೀ ದೂರದಲ್ಲಿ ತುಂಗಭದ್ರಾ ನದಿ ದಂಡೆಯ ಮೇಲಿರುವ ಈ ದೇವಾಲಯದ ಹೊರಭಾಗವು ಮಣ್ಣಿನಿಂದ ಮುಚ್ಚಿದೆ.

**ತಿರ್ಯಙ್ಮುಖ ರಚನೆಗಳು :** ಪೂರ್ವಾಭಿಮುಖವಾದ ಮುಖ್ಯಗರ್ಭಗೃಹವು ೬.೯ x ೬.೯ ಅಡಿ ವಿಸ್ತೀರ್ಣವಾಗಿದೆ. ನಾಲ್ಕು ಮೂಲೆ ಕಂಬಗಳ ಮಧ್ಯದಲ್ಲಿ ೩x೭ ಅಡಿ ಉದ್ದದ ಚಪ್ಪಡಿ ಕಲ್ಲುಗಳನ್ನು ಒಂದರ ಮೇಲೊಂದು ಪೇರಿಸಿದಂತೆ ಭಿತ್ತಿಯನ್ನು ರಚಿಸಲಾಗಿದೆ. ಛತ್ತಿನಲ್ಲಿ ಸಮತಲದಲ್ಲಿ ಕಮಲದ ಅಲಂಕರಣವಿದೆ. ಉತ್ತರ ಮತ್ತು ಪಶ್ಚಿಮ ದಿಕ್ಕಿನ ಭಿತ್ತಿಯಲ್ಲಿ ಅರ್ಧಅಡಿ ಮುಂಚಾಚಿದ ಫಲಕಗಳಿವೆ. ಗರ್ಭಗೃಹದ ಮಧ್ಯದಲ್ಲಿ ವೃತ್ತಾಕಾರದ ಪೀಠದ ಮೇಲೆ ಮುಕ್ಕಾಲು ಅಡಿ ಎತ್ತರದ ರುದ್ರಭಾಗವನ್ನು ಹೊಂದಿದ ಲಿಂಗವಿದೆ. ಗರ್ಭಗೃಹದ ದ್ವಾರಬಂಧವು ಎರಡು ಪಟ್ಟಿಕೆಗಳಿಂದ ರಚನೆಗೊಂಡು ಅವು ಲಲಾಟದಲ್ಲಿಯೂ ಮುಂದುವರೆದಿವೆ. ಲಲಾಟಫಲಕದಲ್ಲಿ ಯಾವ ಬಿಂಬವೂ ಇಲ್ಲ. ಮುಖ್ಯ ಗರ್ಭಗೃಹವು ಅರ್ಧಮಂಟಪವನ್ನು ಹೊಂದಿದೆ. ಇದು ವಿಸ್ತಾರದಲ್ಲಿ ೭.೮ x ೭.೮ ಅಡಿ ಇದ್ದು ಗರ್ಭಗೃಹಕ್ಕಿಂತ ದೊಡ್ಡದಾಗಿದೆ. ಇದೂ ಸಹ ಮೂರು ದೊಡ್ಡ ಚಪ್ಪಡಿಕಲ್ಲುಗಳಿಂದ ರಚನೆಗೊಂಡ ಭಿತ್ತಿಯನ್ನು ಹೊಂದಿದ್ದು, ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಇಲ್ಲಿ ಸಣ್ಣ ನಂದಿ ಶಿಲ್ಪವನ್ನು ಇಡಲಾಗಿದೆ. ಇದರ ಬಾಗಿಲುವಾಡವು ಒಂದು ಪಟ್ಟಿಕೆಯಿಂದ ಕೂಡಿದ್ದು ಅದು ಲಲಾಟದಲ್ಲಿಯೂ ಮುಂದುವರೆದಿದೆ. ಬಾಗಿಲುವಾಡದ ಅಕ್ಕಪಕ್ಕದಲ್ಲಿ ಜಾಲಂಧ್ರಗಳನ್ನು ಅಳವಡಿಸಲಾಗಿದೆ. ಜಾಲಂಧ್ರಗಳು ಮೂರು ಉದ್ದ ಪಟ್ಟಿಕೆಗಳಿಂದಲೂ ಹದಿನಾಲ್ಕು ಅಡ್ಡಪಟ್ಟಿಕೆಗಳಿಂದಲೂ ರಚನೆಗೊಂಡಿವೆ. ಲಲಾಟದಲ್ಲಿ ಯಾವ ಬಿಂಬಗಳೂ ಇಲ್ಲ.




ತಳವಿನ್ಯಾಸ ರೇಖಾಚಿತ್ರ-೧೯, ಕಲ್ಮೇಶ್ವರ ದೇವಾಲಯ, ಕಿರಗೇರಿ (ತಾ.ಹಿರೇಕೆರೂರು)
೧. ಗರ್ಭಗೃಹ, ೨. ಅರ್ಧಮಂಟಪ, ೩. ನವರಂಗ

ಅಕ್ಕಪಕ್ಕದ ಗರ್ಭಗೃಹಗಳು ಉತ್ತರ ದಕ್ಷಿಣಾಭಿಮುಖವಾಗಿದ್ದು ವಿಸ್ತಾರದಲ್ಲಿ ಮುಖ್ಯ ಗರ್ಭಗೃಹಕ್ಕಿಂತ ಅರ್ಧಅಡಿ ದೊಡ್ಡದಾಗಿದೆ. ಈ ಗೃಹಗಳ ಭಿತ್ತಿಯೂ ಮೂರು ದೊಡ್ಡ ಫಲಕಗಳನ್ನು ಒಂದರ ಮೇಲೊಂದು ಪೇರಿಸಿದಂತೆ ರಚನೆಗೊಂಡಿವೆ. ದಕ್ಷಿಣ ದಿಕ್ಕಿನ ಗರ್ಭಗೃಹವು ಛತ್ತಿನಲ್ಲಿ ಕಮಲದ ಅಲಂಕರಣವನ್ನು ಮತ್ತು ವೃತ್ತಾಕಾರದ ಪೀಠದಲ್ಲಿ ಸಣ್ಣ ಗಾತ್ರದ ರುದ್ರಭಾಗವನ್ನು ಹೊಂದಿದ ಬ್ರಹ್ಮಲಿಂಗವನ್ನು ಹೊಂದಿದೆ. ಈ ಗರ್ಭಗೃಹದ ಬಾಗಿಲುವಾಡವು ೫.೯ ಅಡಿ ಎತ್ತರವಾಗಿದ್ದು ಒಂದು ಪಟ್ಟಿಕೆಯಿಂದ ಕೂಡಿದೆ. ಪಟ್ಟಿಕೆಯು ಲಲಾಟದಲ್ಲಿಯೂ ಮುಂದುವರೆದಿದೆ. ಲಲಾಟಫಲಕದಲ್ಲಿ ಯಾವ ಬಿಂಬವೂ ಇಲ್ಲ. ಈ ಬಾಗಿಲುವಾಡವು ಜಾಲಂದ್ರಗಳನ್ನು ಹೊಂದಿರುವುದಿಲ್ಲ. ಉತ್ತರದಿಕ್ಕಿನ ಗರ್ಭಗೃಹದ ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಗರ್ಭಗೃಹದ ಮಧ್ಯದಲ್ಲಿ ಪೀಠವಿದೆ. ಆದರೆ ಯಾವ ಶಿಲ್ಪಗಳು ಇಲ್ಲ. ಬೇರೆ ಸ್ಥಳದಿಂದ ರುದ್ರಭಾಗವನ್ನು ಹೋಲುವಂತಹ ಕಲ್ಲನ್ನು ತಂದು ಇಡಲಾಗಿದೆ. ಈ ಗೃಹದ ಬಾಗಿಲುವಾಡವು ೫.೯ ಅಡಿ ಎತ್ತರವಾಗಿದ್ದು ತೆಳುವಾದ ಮೂರು ಶಾಖೆಗಳಿಂದ ಕೂಡಿದೆ. ಮೂರನೆಯ ಶಾಖೆಯು ಅಗಲ ಪಟ್ಟಿಯಂತಿದ್ದು ಅದು ಲಾಲಟದಲ್ಲಿಯೂ ಮುಂದುವರೆದಿದೆ. ಲಲಾಟಫಲಕವು ಎತ್ತರವಾಗಿದ್ದು ದ್ವಾರದ ಉತ್ತರಾಂಗವನ್ನು ವ್ಯಾಪಿಸಿದೆ. ಈ ಫಲಕದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಈ ಶಿಲ್ಪದಲ್ಲಿರುವ ಗಜಗಳು ಲಕ್ಷ್ಮಿಯ ಅಕ್ಕಪಕ್ಕದಲ್ಲಿ ಎರಡು ಕಾಲುಗಳ ಮೇಲೆ ನಿಂತಂತೆ ರಚನೆಗೊಂಡಿವೆ(ಛಾಯಾಚಿತ್ರ-೫೨). ದ್ವಾರದ ಇಕ್ಕೆಲಗಳಲ್ಲಿ ಜಾಲಂದ್ರ ಗಳಿವೆ. ಈ ಜಾಲಂದ್ರಗಳು ಎರಡು ಉದ್ದ ಪಟ್ಟಿಕೆಗಳಿಂದಲೂ ಆರು ಅಡ್ಡಪಟ್ಟಿಕೆಗಳಿಂದಲೂ ರಚನೆಗೊಂಡಿವೆ. ಅಕ್ಕಪಕ್ಕದ ಎರಡೂ ಗೃಹಗಳು ಅರ್ಧಮಂಟಪಗಳನ್ನು ಹೊಂದಿರದೆ ನೇರವಾಗಿ ನವರಂಗಕ್ಕೆ ಜೋಡಣೆ ಗೊಂಡಿವೆ.

ನವರಂಗವು ಪೂರ್ವ-ಪಶ್ಚಿಮ, ಉತ್ತರ-ದಕ್ಷಿಣ ೨೦ x ೧೮.೫ ಅಡಿ ವಿಸ್ತಾರವಾಗಿದೆ. ಮಧ್ಯದಲ್ಲಿ ಚೌಕಾಕಾರದ ವೇದಿಕೆ ಇದೆ. ವೇದಿಕೆಯ ತುದಿಯಲ್ಲಿಯ ಕಂಬಗಳು ಚೌಕಾಕಾರದ ಪೀಠದ ಮೇಲೆ ಚೌಕಾಕಾರದ ಪಾದ ಭಾಗವನ್ನು ಹೊಂದಿವೆ. ಪೀಠಭಾಗದ ನಾಲ್ಕು ಮುಖದಲ್ಲೂ ದಂತ ಮಾದರಿಯ ಅಲಂಕರಣವಿದೆ. ದಂಡಭಾಗದಲ್ಲಿ ತೆಳುವಾದ ಅಷ್ಟಮುಖ ರಚನೆಯ ಮೇಲೆ ಹದಿನಾರುಮುಖ ಪಟ್ಟಿಕೆ, ಅಷ್ಟಮುಖ ಪಟ್ಟಿಕೆ, ಹದಿನಾರು ಮುಖ ಪಟ್ಟಿಕೆ ಮತ್ತೆ ಅಧೋಮುಖವಾಗಿ ತೆಳುವಾದ ಅಷ್ಟಮುಖ ರಚನೆಗಳ ಅಲಂಕರಣವಿದೆ. ಇದರ ಮೇಲೆ ಪೆಟ್ಟಿಗೆ ಮಾದರಿಯ ಅಲಂಕಾರರಹಿತವಾದ ಚೌಕಾಕಾರದ ಭಾಗವಿದೆ. ದಂಡಾಗ್ರದಲ್ಲಿ ತೆಳುವಾದ ಕಳಶ, ಘಟ, ಮಂಡಿ, ಫಲಕ ಭಾಗಗಳಿದ್ದು ಮೇಲೆ ತ್ರಿಕೋನ ಮಾದರಿಯ ಚತುರ್ಮುಖ ಬೋದಿಗೆ ಇದೆ(ರೇಖಾಚಿತ್ರ-೧೯). ಒಂದು ಅಡಿ ಅಗಲ, ದಪ್ಪ ಇರುವ ತೊಲೆಗಳು ವೇದಿಕೆ ಮೇಲಿನ ನಾಲ್ಕು ಕಂಬಗಳನ್ನು ನವರಂಗದ ಭಿತ್ತಿಕಂಬಗಳೊಂದಿಗೆ ಜೋಡಿಸಿವೆ. ಮಧ್ಯದ ವಿತಾನದಲ್ಲಿ ಸಮತಲದಲ್ಲಿ ಕಮಲದ ಅಲಂಕರಣ ವಿದೆ. ನವರಂಗದ ಭಿತ್ತಿಯು ಸಾಕಷ್ಟು ದುರಸ್ತಿಗೆ ಒಳಗಾಗಿದೆ. ಮುಖ್ಯಗರ್ಭಗೃಹಕ್ಕಿರುವ ಅರ್ಧಮಂಟಪದ ಅಕ್ಕಪಕ್ಕದಲ್ಲಿ ದುರಸ್ತಿಯಲ್ಲಿ ಮಾರ್ಪಾಟುಗೊಂಡ ಕೋಷ್ಠಗಳಿವೆ. ನವರಂಗದ ಬಾಗಿಲುವಾಡವು ೫.೯ ಅಡಿ ಎತ್ತರವಾಗಿದ್ದು ಒಂದು ಪಟ್ಟಿಕೆಯಿಂದ ಅಲಂಕೃತಗೊಂಡಿದೆ. ಲಲಾಟಫಲಕದಲ್ಲಿ ಯಾವ ಬಿಂಬವೂ ಕಂಡುಬರುವುದಿಲ್ಲ. ತುಂಗಭದ್ರಾ ನದಿ ದಂಡೆಯ ಮೇಲಿದ್ದ ಈ ತ್ರಿಕೂಟ ದೇವಾಲಯವನ್ನು ಸ್ಥಳಿಯರು ತ್ರಿಕೂಟೇಶ್ವರ ಎಂದು ಗುರುತಿಸುತ್ತಾರೆ.




ರೇಖಾಚಿತ್ರ-೧೯, ಕಲ್ಮೇಶ್ವರ ದೇವಾಲಯದ ನವರಂಗದ ಕಂಬ, ಕಿರಗೇರಿ (ತಾ.ಹಿರೇಕೆರೂರು)
೧. ಪೀಠ, ೨. ಪಾದ, ೩. ದಂಡ, ೪. ಘಟ, ೫. ಫಲಕ, ೬. ಬೋದಿಗೆ

**ಶಾಸನಗಳಿಂದ ಹೆಚ್ಚಿನ ವಿವರ :** ಕ್ರಿ.ಶ.ಸು.೧೨ನೇ ಶತಮಾನಕ್ಕೆ ಸೇರಿದ ವೀರಗಲ್ಲು ಶಾಸನವನ್ನು ಬಿಟ್ಟರೆ ಬೇರೆ ಶಾಸನಗಳು ಲಭ್ಯವಿಲ್ಲ.

| | | |
|---|---|---|
| ಊರು | : | ಕುಂಚೂರು (ತಾ.ಹಿರೇಕೆರೂರು) |
| ಸ್ಥಳ | : | ಉತ್ತರಕ್ಕೆ ಕೆರೆ ದಂಡೆಯ ಮೇಲೆ |
| ಹೆಸರು | : | ಕಲ್ಮೇಶ್ವರ |
| ಅಭಿಮುಖ | : | ಪೂರ್ವ |
| ನಿವೇದನೆ | : | ಈಶ್ವರ |
| ಕಾಲ | : | ಕ್ರಿ.ಶ.ಸು.೧೨ನೇ ಶತಮಾನ |
| ಶೈಲಿ | : | ಕಲ್ಯಾಣ ಚಾಲುಕ್ಯ |
| ಬಳಸಿದ ವಸ್ತು | : | ನೀಲಿ ಛಾಯೆಯ ಕಪ್ಪು ಕಲ್ಲು |

## ದೇವಾಲಯ ವಾಸ್ತುಶೈಲಿ

**ತಳವಿನ್ಯಾಸ :** (ತಳವಿನ್ಯಾಸ ರೇಖಾಚಿತ್ರ-೨೦) ಮೂರು ಗರ್ಭಗೃಹಗಳು, ಒಂದು ಅರ್ಧಮಂಟಪ, ನವರಂಗ, ಪೂರ್ವ ದಿಕ್ಕಿಗೆ ಪ್ರವೇಶದ್ವಾರ.

**ಊರ್ಧ್ವಮುಖ ರಚನೆ :** ಹಿರೇಕೆರೂರಿನಿಂದ ಈಶಾನ್ಯಕ್ಕೆ ೧೪ ಕಿ.ಮೀ. ದೂರದಲ್ಲಿರುವ ಈ ದೇವಾಲಯವು ಈ ಮೊದಲು ಮಣ್ಣಿನಿಂದ ಮುಚ್ಚಲ್ಪಟ್ಟಿತ್ತು. ಇತ್ತೀಚೆಗೆ ಸ್ಥಳೀಯರಿಂದ ಮಣ್ಣು ತೆಗೆಯಲಾಗಿದೆ. ಹೀಗಾಗಿ ಅಧಿಷ್ಠಾನ ಮತ್ತು ಭಿತ್ತಿ ಭಾಗಗಳು ಸ್ಪಷ್ಟವಾಗಿ ಕಾಣುತ್ತವೆ. ಅಧಿಷ್ಠಾನವು ಎರಡು ಅಡಿ ಎತ್ತರವಾಗಿದ್ದು ಉಪಾನ, ಜಗತಿ, ಪದ್ಮ, ತೆಳುವಾದ ತ್ರಿಪಟ್ಟ ಕುಮುದ, ಹಿಂದೆ ಸರಿದ ಕಪೋತಭಾಗದಲ್ಲಿ ದಂತ ಮಾದರಿಯ ಅಲಂಕರಣಗಳಿಂದ ಪ್ರಧಾನ ಅಂಗಗಳ ನಡುವೆ ಕಂಪ-ಗಳ-ಕಂಪ ಭಾಗಗಳು ಇದ್ದು, ಪಾದಬಂಧ ಪ್ರಭೇದಕ್ಕೆ ಸೇರುತ್ತದೆ. ಅಧಿಷ್ಠಾನದ ಭದ್ರಭಾಗವು ಮಾತ್ರ ಒಂದು ಹಂತದಲ್ಲಿ ಮುಂದೆ ಸರಿದಿದೆ. ಅಧಿಷ್ಠಾನದ ಮೇಲೆ ಭಿತ್ತಿಯನ್ನು ೧x೫ ಅಡಿ ಉದ್ದ ಅಗಲದ ಕಲ್ಲುಗಳನ್ನು ಒಳಮುಖದಲ್ಲೂ, ಹೊರಮುಖದಲ್ಲೂ ಹೊಂದಿಸಿ ಮಧ್ಯದಲ್ಲಿ ಕಲ್ಲು ಮಣ್ಣುಗಳನ್ನು ತುಂಬಿ ಮೂರು ಅಡಿ ದಪ್ಪವಾಗಿ ರಚಿಸಲಾಗಿದೆ. ಅಧಿಷ್ಠಾನಕ್ಕೆ ತಕ್ಕಂತೆ ಭದ್ರ ಭಾಗದಲ್ಲಿ ಮುಂಚಾಚು ಇದೆ. ಕೋಷ್ಠಗಳು ಇಲ್ಲ. ಭಿತ್ತಿಯ ಮಧ್ಯ ಭಾಗದಲ್ಲಿರುವ ಅರ್ಧಅಡಿ ಅಗಲದ ಪುಷ್ಪ ಪಟ್ಟಿಕೆಯು ಭಿತ್ತಿಯನ್ನು ಮಟ್ಟಸವಾಗಿ ಇಬ್ಭಾಗಿಸಿದೆ. ಭಿತ್ತಿಯು ಪ್ರಸ್ತರದ ಕೆಳಗೆ ಎರಡು ಹಂತಗಳಲ್ಲಿ ಅಗಲವಾಗುತ್ತ ಪ್ರಸ್ತರವನ್ನು ಕೂಡಿಕೊಂಡಿದೆ. ಭಿತ್ತಿಯಲ್ಲಿಯ ಪುಷ್ಪಪಟ್ಟಿಕೆಯನ್ನು ಬಿಟ್ಟರೆ ಉಳಿದಂತೆ ಭಿತ್ತಿಯು ಸರಳವಾಗಿದೆ. ಪ್ರಸ್ತರ ಭಾಗದಲ್ಲಿ ಕಪೋತ ಭಾಗ ದಂತಮಾದರಿಯ ಅಲಂಕರಣ ಕಂಡುಬರುತ್ತದೆ. ಯಾವ ಗರ್ಭಗೃಹದ ಶಿಖರ ಭಾಗವು ಉಳಿದಿಲ್ಲ (ಛಾಯಾಚಿತ್ರ-೪೩).

**ತಿರ್ಯಙ್ಮುಖ ರಚನೆಗಳು :** ಮುಖ್ಯ ಗರ್ಭಗೃಹವು ಪೂರ್ವಾಭಿಮುಖವಾಗಿದ್ದು ೫.೮ x ೫.೮ ಅಡಿ ವಿಸ್ತೀರ್ಣದಲ್ಲಿದೆ. ನಾಲ್ಕು ಮೂಲೆ ಕಂಬಗಳಿಂದ ಭಿತ್ತಿಯನ್ನು ರಚಿಸಲಾಗಿದೆ. ಪಶ್ಚಿಮ ಮತ್ತು ಉತ್ತರ ದಿಕ್ಕಿನ ಭಿತ್ತಿಗಳಲ್ಲಿ ಅರ್ಧಅಡಿ ಮುಂಚಾಚಿದ ಕಲ್ಲು ಫಲಕಗಳಿವೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ.




ತಳವಿನ್ಯಾಸ ರೇಖಾಚಿತ್ರ-೨೦, ಕಲ್ಮೇಶ್ವರ ದೇವಾಲಯ, ಕುಂಚೂರು (ತಾ.ಹಿರೇಕೆರೂರು)
೧. ಗರ್ಭಗೃಹ, ೨. ಅರ್ಧಮಂಟಪ, ೩. ನವರಂಗ




ರೇಖಾಚಿತ್ರ-೨೦,ಕಲ್ಮೇಶ್ವರ ದೇವಾಲಯದ ನವರಂಗದ ಕಂಬ, ಕುಂಚೂರು (ತಾ.ಹಿರೇಕೆರೂರು)
೧. ಪೀಠ, ೨. ಪಾದ, ೩. ದಂಡ, ೪. ಘಟ, ೫. ಫಲಕ, ೬. ಬೋದಿಗೆ

ಗರ್ಭಗೃಹವು ಸಾಕಷ್ಟು ದುರಸ್ತಿಗೆ ಒಳಗಾಗಿದೆ. ಈ ಗರ್ಭಗೃಹದಲ್ಲಿಯ ಶಿವಲಿಂಗವೂ ಸಹ ಆಧುನಿಕವಾಗಿದೆ. ಗರ್ಭಗೃಹದ ದ್ವಾರಬಂದವು ನಾಲ್ಕು ಶಾಖೆಗಳಿಂದ ಕೂಡಿದ್ದು ಶಾಖೆಗಳು ಅಲಂಕಾರ ರಹಿತವಾಗಿದೆ. ಮೊದಲ ಎರಡು ಶಾಖೆಗಳು ಲಲಾಟದಲ್ಲಿಯೂ ಮುಂದುವರೆದಿವೆ. ಲಲಾಟಫಲಕದಲ್ಲಿ ಯಾವ ಬಿಂಬವೂ ಇಲ್ಲ. ಬಾಗಿಲುವಾಡವು ಅರ್ಧಅಡಿ ಎತ್ತರದ ಅಲಂಕೃತ ಹೊಸ್ತಿಲಿನ ಮೇಲೆ ೪.೪ ಅಡಿ ಎತ್ತರದ್ದಾಗಿದೆ. ಗರ್ಭಗೃಹದ ಮುಂದಿನ ರಚನೆಯಾದ ಅರ್ಧಮಂಟಪವು ವಿಸ್ತೀರ್ಣದಲ್ಲಿ ಗರ್ಭಗೃಹದಷ್ಟೇ ಇದೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಇದರ ಬಾಗಿಲುವಾಡವೂ ಸಹ ೪.೪ ಅಡಿ ಎತ್ತರವಾಗಿದೆ. ಅರ್ಧಅಡಿ ಎತ್ತರದ ಅಲಂಕೃತ ಹೊಸ್ತಿಲ ಮೇಲೆ ತೆಳುವಾದ ಒಂದು ಶಾಖೆಯಿಂದ ರಚನೆಗೊಂಡಿದೆ. ಆ ಶಾಖೆಯು ಲಲಾಟದಲ್ಲಿಯೂ ಮುಂದುವರೆದಿದೆ. ಲಲಾಟಫಲಕದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ದ್ವಾರಬಂಧದ ಇಕ್ಕೆಲಗಳಲ್ಲಿ ಜಾಲಂದ್ರಗಳಿವೆ. ಜಾಲಂದ್ರಗಳು ಎರಡು ಉದ್ದ ಪಟ್ಟಿಯಿಂದಲೂ ಆರು ಅಡ್ಡ ಪಟ್ಟಿಯಿಂದಲೂ ಚೌಕಾಕಾರ ದಲ್ಲಿ ರಚನೆಗೊಂಡಿವೆ. ಇವುಗಳ ಪಾದಭಾಗದಲ್ಲಿ ಅಲಂಕಾರರಹಿತ ಫಲಕ ಇದೆ(ಛಾಯಾಚಿತ್ರ-೮೮).

ಅಕ್ಕಪಕ್ಕದ ಗರ್ಭಗೃಹಗಳಲ್ಲಿ ದಕ್ಷಿಣ ದಿಕ್ಕಿನ ಗರ್ಭಗೃಹವನ್ನು ಈಗ ಮುಚ್ಚಲಾಗಿದೆ. ಈ ಗರ್ಭಗೃಹ ದಲ್ಲಿ ಲಿಂಗವಿದೆ ಎಂದು ಧಾರವಾಡ ಜಿಲ್ಲಾ ಗ್ಯಾಸೆಟಿಯರ್‌ನಲ್ಲಿ ದಾಖಲಿಸಲಾಗಿದೆ. ಉತ್ತರ ಗರ್ಭಗೃಹವು ಗಾತ್ರದಲ್ಲಿ ಮುಖ್ಯ ಗರ್ಭಗೃಹದಷ್ಟೇ ಇದೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಈ ಗರ್ಭಗೃಹದಲ್ಲಿ ನಂತರ ಕಾಲದಲ್ಲಿ ಇಡಲಾದ ವೀರಭದ್ರನ ಶಿಲ್ಪವಿದೆ. ಇದರ ಬಾಗಿಲುವಾಡವೂ ಸಹ ಮುಖ್ಯಗರ್ಭಗೃಹದಂತೆ ಸಾದಾ ಮಾದರಿಯಲ್ಲಿದೆ. ಲಲಾಟದಲ್ಲಿ ಯಾವ ಬಿಂಬವೂ ಇಲ್ಲ. ಎರಡೂ ಗರ್ಭಗೃಹಗಳು ಅರ್ಧಮಂಟಪ ವನ್ನು ಹೊಂದದೆ ನೇರವಾಗಿ ನವರಂಗಕ್ಕೆ ಜೋಡಣೆಗೊಂಡಿವೆ.

ನವರಂಗವು ೧೪.೯ x ೧೪.೯ ಅಡಿ ವಿಸ್ತೀರ್ಣದಲ್ಲಿದೆ. ಮಧ್ಯದ ಚೌಕಾಕಾರದ ವೇದಿಕೆಯ ತುದಿ ಯಲ್ಲಿರುವ ಕಂಬಗಳು ಪೀಠಭಾಗ ಹಾಗೂ ಪಾದ ಭಾಗದಲ್ಲೂ ಚೌಕಾಕಾರದಲ್ಲಿವೆ. ದಂಡಭಾಗದಲ್ಲಿ ಅಷ್ಟಮುಖ, ಷೋಡಶಮುಖ ಪಟ್ಟಿಕೆಗಳ ಅಲಂಕರಣವು ಮತ್ತು ಚೌಕಾಕಾರದ ಅಲಂಕಾರರಹಿತ ಪೆಟ್ಟಿಗೆ ಮಾದರಿಯ ರಚನೆಗಳಿವೆ. ದಂಡಾಗ್ರದಲ್ಲಿ ಕಳಶ, ಘಟ, ಮಂಡಿ ಫಲಕಗಳಿದ್ದು ಮೇಲೆ ತ್ರಿಕೋನ ಮಾದರಿಯ ಚತುರ್ಮುಖ ಬೋದಿಗೆ ಇದೆ(ರೇಖಾಚಿತ್ರ-೨೦). ಬೋದಿಗೆಗಳ ಒಂದು ಅಡಿ ಅಗಲ ದಪ್ಪದ ತೊಲೆಗಳನ್ನು ಹೊತ್ತಿವೆ. ಮಧ್ಯದ ವಿತಾನದಲ್ಲಿ ಕಮಲದ ಅಲಂಕರಣವಿದೆ. ನವರಂಗದ ಭಿತ್ತಿಯಲ್ಲಿ ಆರು ಕೋಷ್ಟಗಳನ್ನು ಕಾಣುತ್ತೇವೆ. ಈ ಕೋಷ್ಟಗಳು ಆಳವಾಗಿದ್ದು ಸಾದಾ ಮಾದರಿಯಲ್ಲಿವೆ. ಇವುಗಳ ದ್ವಾರಬಂಧವು ತ್ರಿಶಾಖೆಗಳಿಂದ ಕೂಡಿದ್ದು ಲಲಾಟಫಲಕವನ್ನು ಹೊಂದಿವೆ. ನವರಂಗದ ವೇದಿಕೆಯ ಮಧ್ಯದಲ್ಲಿ ಮುಖ್ಯಕ್ಕೆ ಎದುರಾಗಿ ನಂದಿ ಶಿಲ್ಪವಿದೆ. ನವರಂಗದ ಪೂರ್ವದಿಕ್ಕಿನಲ್ಲಿರುವ ದ್ವಾರಬಂಧವು ತ್ರಿಶಾಖೆಯಿಂದ ಕೂಡಿದ್ದು ಮೂರೂ ಶಾಖೆಗಳು ಲಲಾಟದಲ್ಲಿ ಮುಂದುವರೆದಿವೆ. ಲಲಾಟಫಲಕದಲ್ಲಿ ಯಾವ ಬಿಂಬವೂ ಇಲ್ಲ.

**ಶಾಸನಗಳಿಂದ ಹೆಚ್ಚಿನ ವಿವರ : ಲಭ್ಯವಿಲ್ಲ.**

ಊರು : ಕುಡಪಲಿ (ತಾ.ಹಿರೇಕೆರೂರು)

ಸ್ಥಳ : ಊರ ಮಧ್ಯದಲ್ಲಿ

| | | |
|---|---|---|
| ಹೆಸರು | : | ಕಲ್ಮೇಶ್ವರ (ತ್ರಿಕೂಟೇಶ್ವರ) |
| ಅಭಿಮುಖ | : | ಪೂರ್ವ |
| ನಿವೇದನೆ | : | ಈಶ್ವರ |
| ಕಾಲ | : | ಕ್ರಿ.ಶ.೧೨ನೇ ಶತಮಾನ |
| ಶೈಲಿ | : | ಕಲ್ಯಾಣ ಚಾಲುಕ್ಯ |
| ಬಳಸಿದ ವಸ್ತು | : | ನೀಲಿ ಛಾಯೆಯ ಕಪ್ಪು ಕಲ್ಲು |

**ದೇವಾಲಯ ವಾಸ್ತುಶೈಲಿ**

**ತಳವಿನ್ಯಾಸ :** (ತಳವಿನ್ಯಾಸ ರೇಖಾಚಿತ್ರ-೨೧) ಮೂರು ಗರ್ಭಗೃಹಗಳು, ಒಂದು ಅರ್ಧಮಂಟಪ, ನವರಂಗ.

**ಊರ್ಧ್ವಮುಖ ರಚನೆ :** ಹಿರೇಕೆರೂರಿನಿಂದ ಪೂರ್ವಕ್ಕೆ ೨೦ ಕಿ.ಮೀ. ದೂರದಲ್ಲಿರುವ ಈ ದೇವಾಲಯದ ಹೊರಭಾಗವನ್ನು ಮಣ್ಣಿನಿಂದ ಮುಚ್ಚಲಾಗಿತ್ತು. ಇತ್ತೀಚೆಗೆ ಸ್ಥಳೀಯರಿಂದ ದುರಸ್ತಿಗೊಂಡಿದೆ. ಪ್ರಸ್ತುತ ಹೊರಮೈ ಕಾಣಸಿಗುತ್ತದೆ. ಸಾದಾಮಾದರಿಯಲ್ಲಿ ಅಧಿಷ್ಠಾನವಿದ್ದು, ಭಿತ್ತಿಯನ್ನು ಆಧುನಿಕ ರೀತಿಯಲ್ಲಿ ದುರಸ್ತಿ ಮಾಡಲಾಗಿದೆ.

**ತಿರ್ಯಙ್ಮುಖ ರಚನೆಗಳು :** ಪೂರ್ವಾಭಿಮುಖ ಮುಖ್ಯಗರ್ಭಗೃಹವು ಪೂರ್ವ-ಪಶ್ಚಿಮ, ಉತ್ತರ-ದಕ್ಷಿಣ ೬.೪ x ೬.೧೦ ಅಡಿ ವಿಸ್ತೀರ್ಣದಲ್ಲಿದೆ. ನಾಲ್ಕು ಮೂಲೆ ಕಂಬಗಳ ಮಧ್ಯದಲ್ಲಿ ರಚಿಸಿದ ಭಿತ್ತಿಯನ್ನು ಒಂದು ಅಡಿ ಅಗಲ ಏಳು ಅಡಿ ಉದ್ದದ ಛಪ್ಪಡಿ ಕಲ್ಲುಗಳನ್ನು ಒಂದರ ಮೇಲೊಂದು ಇಟ್ಟು ಕಟ್ಟಲಾಗಿದೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಗರ್ಭಗೃಹದಲ್ಲಿ ಚೌಕಾಕಾರದ ಪೀಠದಲ್ಲಿ ಮುಕ್ಕಾಲುಅಡಿ ಎತ್ತರದ ರುದ್ರಭಾಗವನ್ನು ಹೊಂದಿದ ಲಿಂಗವಿದೆ. ಗರ್ಭಗೃಹದ ದ್ವಾರಬಂಧವು ಒಂದು ಪಟ್ಟಿಯಿಂದ ಅಲಂಕೃತ ಗೊಂಡಿದ್ದು ಲಲಾಟದಲ್ಲಿಯೂ ಆ ಪಟ್ಟಿಯು ಮುಂದುವರೆದಿದೆ. ಲಲಾಟಫಲಕದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಈ ಮುಖ್ಯಗರ್ಭಗೃಹವು ಮಾತ್ರ ಅರ್ಧಮಂಟಪವನ್ನು ಹೊಂದಿದೆ. ಇದು ಗಾತ್ರದಲ್ಲಿ ೭ x ೬.೧೦ ಅಡಿ ಇದ್ದು ಗರ್ಭಗೃಹಕ್ಕಿಂತ ಸ್ವಲ್ಪ ದೊಡ್ಡದಾಗಿದೆ. ಇದರ ದ್ವಾರಬಂಧವು ತೆಳುವಾದ ಮೂರು ಶಾಖೆಗಳಿಂದ ಕೂಡಿದ್ದು, ಕ್ರಮವಾಗಿ ವಜ್ರಪಟ್ಟಿಕೆ, ಬಳ್ಳಿಗಳಲ್ಲಿ ಅಲಂಕರಣಗೊಂಡ ಎರಡು ಶಾಖೆಗಳಿವೆ. ಮೊದಲ ಎರಡು ಶಾಖೆಗಳು ಲಲಾಟದಲ್ಲಿ ಮುಂದುವರೆದಿದ್ದು, ಲಲಾಟಫಲಕದಲ್ಲಿ ಗಜಲಕ್ಷ್ಮಿಯ ಉಬ್ಬು ಶಿಲ್ಪವಿದೆ. ಬಾಗಿಲುವಾಡದ ಇಕ್ಕೆಲಗಳಲ್ಲಿ ಜಾಲಂಧ್ರಗಳನ್ನು ಅಳವಡಿಸಲಾಗಿದೆ.

ಅಕ್ಕಪಕ್ಕದ ಗರ್ಭಗೃಹಗಳು ಉತ್ತರ ದಕ್ಷಿಣಾಭಿಮುಖವಾಗಿದ್ದು ಗಾತ್ರದಲ್ಲಿ ಮುಖ್ಯ ಗರ್ಭಗೃಹಕ್ಕಿಂತ ಚಿಕ್ಕದಾಗಿ ೫x೫ ಅಡಿ ವಿಸ್ತೀರ್ಣದಲ್ಲಿದೆ. ಇಲ್ಲಿಯ ಭಿತ್ತಿ ರಚನೆಯೂ ಸಹ ಮುಖ್ಯಗರ್ಭಗೃಹದಂತೆ ಇದೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ದಕ್ಷಿಣದಿಕ್ಕಿನಲ್ಲಿ ಸಣ್ಣ ರುದ್ರಭಾಗವನ್ನು ಹೊಂದಿದ ಬ್ರಹ್ಮಲಿಂಗವನ್ನು ಕಾಣುತ್ತೇವೆ. ಉತ್ತರದಿಕ್ಕಿನ ಗರ್ಭಗೃಹವು ಬರಿದಾಗಿದೆ. ಆದರೆ ಇಲ್ಲಿಯೂ ಲಿಂಗ ಇತ್ತೆಂದು ಸ್ಥಳೀಯರು ಹೇಳುತ್ತಾರೆ. ಅದಕ್ಕಾಗಿ ಇದನ್ನು ತ್ರಿಕೂಟೇಶ್ವರ ಎಂದು ಕರೆಯಲಾಗುತ್ತದೆ. ಅಕ್ಕಪಕ್ಕದ ಎರಡು ಗರ್ಭಗೃಹಗಳು




ತಳವಿನ್ಯಾಸ ರೇಖಾಚಿತ್ರ-೨೧, ಕಲ್ಮೇಶ್ವರ ದೇವಾಲಯ, ಕುಡುಪಲಿ (ತಾ.ಹಿರೇಕೆರೂರು)
೧. ಗರ್ಭಗೃಹ, ೨. ಅರ್ಧಮಂಟಪ, ೩. ನವರಂಗ

ಒಂದು ಪಟ್ಟಿಕೆಯಿಂದ ಕೂಡಿದ ಸರಳ ಮಾದರಿಯ ಬಾಗಿಲುವಾಡವನ್ನು ಹೊಂದಿದೆ. ಲಲಾಟದಲ್ಲಿ ಯಾವ ಬಿಂಬವೂ ಇಲ್ಲ. ಎರಡೂ ಗೃಹಗಳು ಅರ್ಧಮಂಟಪವನ್ನು ಹೊಂದಿರದೆ ನೇರವಾಗಿ ನವರಂಗಕ್ಕೆ ಜೋಡಣೆಗೊಂಡಿವೆ.

ನವರಂಗವು ಪೂರ್ವ-ಪಶ್ಚಿಮ, ಉತ್ತರ-ದಕ್ಷಿಣ ೧೩.೫ x ೧೪.೮ ಅಡಿ ವಿಸ್ತೀರ್ಣದಲ್ಲಿದೆ. ಮಧ್ಯದಲ್ಲಿ ಚೌಕಾಕಾರದ ವೇದಿಕೆ ಇದೆ. ವೇದಿಕೆಯ ತುದಿಯ ಕಂಬಗಳು ಚೌಕಾಕಾರದ ಪೀಠಭಾಗ ಮತ್ತು ಪಾದಭಾಗವನ್ನು ಹೊಂದಿವೆ. ದಂಡಭಾಗದಲ್ಲಿ ತೆಳುವಾದ ಅಷ್ಟಮುಖ ರಚನೆಯ ಮೇಲೆ ಹದಿನಾರು ಮುಖ ಪಟ್ಟಿಕೆ, ಅಷ್ಟಮುಖ ಪಟ್ಟಿಕೆ, ಈ ಪಟ್ಟಿಗಳ ಮೇಲೆ ಅಧೋಮುಖವಾದ ಹಾಗೂ ತೆಳುವಾದ ಅಷ್ಟಮುಖ ರಚನೆಯ ಅಲಂಕರಣವಿದೆ. ಇದರ ಮೇಲೆ ಪೆಟ್ಟಿಗೆ ಮಾದರಿಯ ಚೌಕಾಕಾರದ ಭಾಗವಿದ್ದು ಅಲಂಕಾರರಹಿತವಾಗಿದೆ. ದಂಡಾಗ್ರದಲ್ಲಿ ಕಳಶ, ಘಟ, ಮಂಡಿ, ಫಲಕ ಭಾಗಗಳಿದ್ದು ಮೇಲೆ ತ್ರಿಕೋನ ಮಾದರಿಯ ಚತುರ್ಮುಖ ಬೋದಿಗೆ ಇದೆ. ನವರಂಗದ ವೇದಿಕೆ ಕಂಬಗಳು ಭಿತ್ತಿ ಕಂಬಗಳು ಒಂದು ಅಡಿ ಅಗಲ ದಪ್ಪ ಇರುವ ತೊಲೆಗಳಿಂದ ಜೋಡಣೆಗೊಂಡಿವೆ. ಮಧ್ಯದ ವಿತಾನದಲ್ಲಿ ಕಮಲದ ಅಲಂಕರಣವಿದೆ. ನವರಂಗದ ಭಿತ್ತಿಯನ್ನು ದುರಸ್ತಿ ಮಾಡಲಾಗಿದೆ. ನವೀಕರಣಗೊಂಡ ನಾಲ್ಕು ಕೋಷ್ಠಗಳನ್ನು ಕಾಣಬಹುದು. ದುರಸ್ತಿ ಕಾರ್ಯದಲ್ಲಿ ನವರಂಗದ ದ್ವಾರಬಂಧವನ್ನು ಬಿಚ್ಚಲಾಗಿದ್ದು ಅದಕ್ಕೆ ಹೊಂದಿಕೊಂಡು ಮುಖಮುಂಟಪವನ್ನು ಇತ್ತೀಚೆಗೆ ಕಟ್ಟಲಾಗಿದೆ.

**ಶಾಸನಗಳಿಂದ ಹೆಚ್ಚಿನ ವಿವರ :** ಲಭ್ಯವಿಲ್ಲ.

| | | |
|---|---|---|
| ಊರು | : | ಗುಂಡೂರು (ತಾ.ಸವಣೂರು) |
| ಸ್ಥಳ | : | ಗ್ರಾಮದ ವಾಯವ್ಯಕ್ಕೆ (ಮಂತ್ರವಾಡಿ ರಸ್ತೆ) |
| ಹೆಸರು | : | ಮೂರು ದೇವರ ಗುಡಿ |
| ಅಭಿಮುಖ | : | ಪೂರ್ವ |
| ನಿವೇದನೆ | : | ಈಶ್ವರ |
| ಕಾಲ | : | ಕ್ರಿ.ಶ.ಸು.೧೦ನೇ ಶತಮಾನ |
| ಶೈಲಿ | : | ರಾಷ್ಟ್ರಕೂಟ |
| ಬಳಸಿದ ವಸ್ತು | : | ನೀಲಿ ಛಾಯೆಯ ಕಪ್ಪು ಕಲ್ಲು |

## ದೇವಾಲಯ ವಾಸ್ತುಶೈಲಿ

**ತಳವಿನ್ಯಾಸ :** (ತಳವಿನ್ಯಾಸ ರೇಖಾಚಿತ್ರ-೨೨) ಮೂರು ಗರ್ಭಗೃಹಗಳು ದೇವಾಲಯವು ಹಾಳಾಗಿದೆ.

**ಊರ್ಧ್ವಮುಖ ರಚನೆ :** ಸವಣೂರಿನಿಂದ ದಕ್ಷಿಣಕ್ಕೆ ಮೂರು ಕಿ.ಮೀ. ದೂರದಲ್ಲಿರುವ ಈ ದೇವಾಲಯವು ಕನಿಷ್ಠ ಸ್ಥಿತಿಯಲ್ಲಿದೆ. ಅಧಿಷ್ಠಾನ ಭಾಗಗಳು ನೆಲದಲ್ಲಿ ಹೂತಿವೆ. ಭಿತ್ತಿಯು ಹಾಳಾಗಿದ್ದು ಮುಖ್ಯ ಗರ್ಭಗೃಹ ವನ್ನು ಮಾತ್ರ (ಪೂರ್ವಾಭಿಮುಖ) ಸ್ಥಳೀಯರು ಇತ್ತೀಚೆಗೆ ದುರಸ್ತಿಗೊಳಿಸಿದ್ದಾರೆ. ಶಿಖರ ಭಾಗಗಳೂ ಕಣ್ಮರೆಯಾಗಿವೆ(ಛಾಯಾಚಿತ್ರ-೪೫).




ತಳವಿನ್ಯಾಸ ರೇಖಾಚಿತ್ರ-೨೨, ಮೂರು ದೇವರಗುಡಿ ದೇವಾಲಯ, ಗುಂಡೂರು (ತಾ.ಸವಣೂರು)
೧. ಗರ್ಭಗೃಹ, ೨. ಅರ್ಧಮಂಟಪ, ೩. ನವರಂಗ

**ತಿರ್ಯಙ್ಮುಖ ರಚನೆಗಳು :** ಪೂರ್ವಾಭಿಮುಖ ಗರ್ಭಗೃಹವು ಪೂರ್ವ-ಪಶ್ಚಿಮ, ಉತ್ತರ-ದಕ್ಷಿಣ ೭.೪ x ೭.೪ ಅಡಿ ವಿಸ್ತೀರ್ಣದಲ್ಲಿದೆ. ನಾಲ್ಕು ಮೂಲೆ ಕಂಬಗಳ ಮಧ್ಯದಲ್ಲಿ ಭಿತ್ತಿಯನ್ನು ಒಂದು ಅಡಿ ಅಗಲ ಏಳು ಅಡಿ ಉದ್ದದ ಛಪ್ಪಡಿ ಕಲ್ಲುಗಳನ್ನು ಬಳಸಿ ಕಟ್ಟಲಾಗಿದೆ. ಛತ್ತಿನಲ್ಲಿ ಕಮಲದ ಅಲಂಕರಣ ವಿದೆ. ಈ ಗರ್ಭಗೃಹದಲ್ಲಿಯ ಲಿಂಗವು ಚೌಕಾಕಾರದ ಪೀಠವನ್ನು ಹೊಂದಿದ್ದು ರುದ್ರಭಾಗವು ನೆಲಮಟ್ಟದಿಂದ ೧.೬ ಅಡಿ ಎತ್ತರವಾಗಿದೆ. ಬಾಗಿಲುವಾಡವು ಪಂಚಶಾಖೆಗಳಿಂದ ಕೂಡಿದ್ದು ಅಲಂಕಾರರಹಿತವಾಗಿವೆ. ಮೊದಲ ಮೂರೂ ಶಾಖೆಗಳು ಲಲಾಟದಲ್ಲಿ ಮುಂದುವರೆದಿವೆ. ಲಲಾಟಫಲಕದಲ್ಲಿ ಯಾವ ಬಿಂಬವೂ ಇಲ್ಲ. ಉತ್ತರದಿಕ್ಕಿನ ಗರ್ಭಗೃಹವು ೭.೭ x ೭.೭ ಅಡಿ ವಿಸ್ತಾರದಲ್ಲಿದ್ದು ಭಿತ್ತಿ ರಚನೆಯಲ್ಲಿ ಮುಖ್ಯ ಗರ್ಭಗೃಹವನ್ನು ಹೋಲುತ್ತದೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಇಲ್ಲಿ ಒಂದು ಅಡಿ ಎತ್ತರದ ವೇದಿಕೆಯ ಮೇಲೆ ವೃತ್ತಾಕಾರದ ಪೀಠದಲ್ಲಿ ೦.೪ ಅಡಿ ವ್ಯಾಸವುಳ್ಳ ಸಣ್ಣ ಗಾತ್ರದ ರುದ್ರಭಾಗವನ್ನು ಹೊಂದಿದ ಲಿಂಗವನ್ನು ಕಾಣುತ್ತೇವೆ. ಈ ಗರ್ಭಗೃಹದ ದ್ವಾರಬಂಧವು ಮುಖ್ಯದಂತೆ ಪಂಚಶಾಖೆಗಳಿಂದ ಕೂಡಿದೆ. ಲಲಾಟದಲ್ಲಿ ಯಾವ ಬಿಂಬವೂ ಇಲ್ಲ. ದಕ್ಷಿಣ ದಿಕ್ಕಿನ ಗರ್ಭಗೃಹವು ೬.೩ x ೬.೩ ಅಡಿ ವಿಸ್ತಾರ ದಲ್ಲಿದೆ. ಇದು ಸಾಕಷ್ಟು ಶಿಥಿಲಗೊಂಡಿದೆ. ಇಲ್ಲಿ ವೃತ್ತಾಕಾರದ ಪೀಠದಲ್ಲಿ ಮುಕ್ಕಾಲು ಅಡಿ ವ್ಯಾಸದ ರುದ್ರಭಾಗವನ್ನು ಹೊಂದಿದ ಲಿಂಗವನ್ನು ಕಾಣುತ್ತೇವೆ.

ಮೂರು ಗರ್ಭಗೃಹಗಳು ಅರ್ಧಮಂಟಪವನ್ನು ಹೊಂದಿರುವಂತೆ ಮತ್ತು ಇವುಗಳಿಗೆ ಹೊಂದಿಕೊಂಡಂತೆ ನವರಂಗ ರಚನೆಯು ಇದ್ದಿರಬಹುದೆಂದು ಊಹಿಸಲು ಸ್ಪಷ್ಟವಾದ ಕುರುಹುಗಳಿವೆ. ಈಗ ಈ ರಚನೆಗಳು ಕಂಡುಬರುವುದಿಲ್ಲ. ಸ್ಥಳೀಯರು ಈ ದೇವಾಲಯವನ್ನು ಬ್ರಹ್ಮ, ವಿಷ್ಣು, ಮಹೇಶ್ವರರ ಗುಡಿಗಳೆಂದು ಕರೆಯುತ್ತಾರೆ. ಈಶ್ವರನ ಮೂರು ಅನಿತ್ಯ ರೂಪಗಳನ್ನು ಲಿಂಗರೂಪದಲ್ಲಿಯೇ ಮೂರು ಗರ್ಭಗೃಹಗಳಲ್ಲಿ ಪ್ರತಿಷ್ಠಾಪಿಸಿರುವುದು ಕಂಡುಬರುತ್ತದೆ. ಇಲ್ಲಿಯ ಮೂರೂ ಲಿಂಗಗಳ ರುದ್ರಭಾಗದಲ್ಲಿಯ ಭಿನ್ನತೆಯನ್ನು ಗಮನಿಸಬಹುದು.

**ಶಾಸನಗಳಿಂದ ಹೆಚ್ಚಿನ ಮಾಹಿತಿ :** ಕ್ರಿ.ಶ.೯೭೩-೭೪ರ ಕಾಲಮಾನಕ್ಕೆ ಸೇರಿದ ರಾಷ್ಟ್ರಕೂಟ ಶಾಸನವು ರಾಷ್ಟ್ರಕೂಟ ದೊರೆ ಕಕ್ಕಲದೇವನನ್ನು ಹೆಸರಿಸುತ್ತದೆ.[೫೨] ಈ ಶಾಸನದಲ್ಲಿ ಶ್ರೀಮುಖ ಸಂವತ್ಸರ, ಆಷಾಡಮಾಸ ದಕ್ಷಿಣಾಯನ ಸಂಕ್ರಾಂತಿ, ಆದಿತ್ಯವಾರದಂದು ಬೋಳಯ್ಯ, ವೋಬಯ್ಯ ಮತ್ತು ರಾಜಯ್ಯ ಎಂಬ ಮೂರು ಜನ ಸೇರಿಕೊಂಡು ಕಡೆಕೇರಿ ಮಹದೇವನಿಗೆ ಏಳು ಮತ್ತರ ಕರಿನೆಲ ಮತ್ತು ಒಂದು ಮತ್ತರ ಗದ್ದೆಯನ್ನು ದಾನವಾಗಿ ಕೊಟ್ಟ ಪ್ರಸ್ತಾಪವಿದೆ. ಕೆರೆಯ ದಂಡೆಯ ಮೇಲಿರುವ ಈ ಮೂರು ದೇವರ ಗುಡಿಯು ಶಾಸನೋಕ್ತ ಮಹದೇವ ದೇವಾಲಯ ಇರಬಹುದು.

| | | |
|---|---|---|
| ಊರು | : | ಗುಡಗೂರು (ತಾ.ಹಿರೇಕೆರೂರು) |
| ಸ್ಥಳ | : | ಊರ ನಡುವೆ |
| ಹೆಸರು | : | ಕಲ್ಮೇಶ್ವರ |
| ಅಭಿಮುಖ | : | ಪೂರ್ವ |

ನಿವೇದನೆ : ಬ್ರಹ್ಮಲಿಂಗ, ಈಶ್ವರ

ಕಾಲ : ಕ್ರಿ.ಶ.೧೨ನೇ ಶತಮಾನ

ಶೈಲಿ : ಕಲ್ಯಾಣ ಚಾಲುಕ್ಯ

ಬಳಸಿದ ವಸ್ತು : ನೀಲಿ ಛಾಯೆಯ ಕಪ್ಪು ಕಲ್ಲು

## ದೇವಾಲಯ ವಾಸ್ತುಶೈಲಿ

**ತಳವಿನ್ಯಾಸ :** (ತಳವಿನ್ಯಾಸ ರೇಖಾಚಿತ್ರ-೨೩) ಮೂರು ಗರ್ಭಗೃಹಗಳು, ಒಂದು ಅರ್ಧಮಂಟಪ, ನವರಂಗ, ಮುಖ ಚತುಷ್ಕಿ, ಪೂರ್ವದಿಕ್ಕಿನಲ್ಲಿ ಪ್ರವೇಶ.

**ಊರ್ಧ್ವಮುಖ ರಚನೆ :** ರಾಣೆಬೆನ್ನೂರಿನಿಂದ ಉತ್ತರಕ್ಕೆ ೧೭ ಕಿ.ಮೀ. ದೂರದಲ್ಲಿರುವ ಈ ದೇವಾಲಯವು ಈ ಮೊದಲು ಮಣ್ಣಿನಿಂದ ಮುಚ್ಚಲ್ಪಟ್ಟಿತ್ತು. ಸ್ಥಳೀಯರು ಇತ್ತೀಚೆಗೆ ಮಣ್ಣನ್ನು ತೆಗೆದು ದುರಸ್ತಿ ಕಾರ್ಯವನ್ನು ಕೈಗೊಂಡಿದ್ದಾರೆ. ಗರ್ಭಗೃಹಗಳ ಅಧಿಷ್ಠಾನ ಭಾಗವು ಮೂರು ಅಡಿ ಎತ್ತರವಾಗಿದೆ. ಉಪಾನ, ಜಗತಿ, ಪದ್ಮ, ತ್ರಿಪಟ್ಟ ಕುಮುದ ಮತ್ತು ವೇದಿಕೆಯಂತಹ ರಚನೆಯನ್ನು ಹೊಂದಿದ್ದು ಪ್ರಧಾನ ಭಾಗಗಳ ಮಧ್ಯೆ ಒಳ ಸರಿದಂತೆ ಕಂಪ-ಗಳ-ಕಂಪ ಭಾಗಗಳಿವೆ(ರೇಖಾಚಿತ್ರ-೨೧). ಮುಖ್ಯ ಗರ್ಭಗೃಹದ ಅಧಿಷ್ಠಾನವು ಭದ್ರಭಾಗದಲ್ಲಿ ಎರಡು ಹಂತದಲ್ಲಿ ಮುಂದೆ ಸರಿದಿದೆ. ಅಕ್ಕಪಕ್ಕದ ಗೃಹಗಳ ಅಧಿಷ್ಠಾನವು ಭದ್ರಭಾಗದಲ್ಲಿ ಮುಂಜರಿತವಿಲ್ಲದೆ ನೇರವಾಗಿವೆ. ಮೂರೂ ಗರ್ಭಗೃಹಗಳು ಅಧಿಷ್ಠಾನದಲ್ಲಿಯ ಜಗತಿ ಭಾಗದಲ್ಲಿ ಪ್ರಣಾಳಗಳನ್ನು ಹೊಂದಿವೆ. ಭಿತ್ತಿ ಭಾಗವು ದುರಸ್ತಿಯಲ್ಲಿ ಮಾರ್ಪಾಡು ಹೊಂದಿದೆ. ಅಲ್ಲಲ್ಲಿ ಕಾಣುವ ಕುರುಹುಗಳಿಂದ ಇಲ್ಲಿಯ ಭಿತ್ತಿಯು ಚೌಕಾಕಾರದ ಕಲ್ಲುಗಳಿಂದ ರಚನೆಗೊಂಡು ಮೂರು ಅಡಿ ದಪ್ಪವಾಗಿದೆ, ಮತ್ತು ಭಿತ್ತಿಯ ಮಧ್ಯ ಭಾಗದಲ್ಲಿ ಅರ್ಧಅಡಿ ಅಗಲದ ಪುಷ್ಪ ಪಟ್ಟಿಕೆಯ ಅಲಂಕರಣವಿದ್ದು ಭಿತ್ತಿಯನ್ನು ಮಟ್ಟಸವಾಗಿ ಇಬ್ಭಾಗಿಸಿತ್ತು ಎಂದು ಹೇಳಬಹುದು(ಛಾಯಾಚಿತ್ರ-೪೬). ಗರ್ಭಗೃಹಗಳ ಮೇಲ್ಕಟ್ಟಡಗಳು ಕಂಡುಬರುವುದಿಲ್ಲ. ಮುಖ ಚತುಷ್ಕಿಯ ಅಧಿಷ್ಠಾನವೂ ಸಹ ಮೂರು ಅಡಿ ಎತ್ತರವಾಗಿದ್ದು ಉಪಾನ, ಜಗತಿ, ಪದ್ಮ, ತ್ರಿಪಟ್ಟ ಕುಮುದ, ಹಿಂಜರಿದ ಕಪೋತದಲ್ಲಿ ದಂತ ಮಾದರಿಯ ಅಲಂಕರಣವನ್ನು ಹಾಗೂ ಕಂಪ-ಗಳ-ಕಂಪ ರಚನೆಗಳು ಪ್ರಧಾನ ಭಾಗಗಳ ಮಧ್ಯದಲ್ಲಿ ಒಳ ಸರಿದಂತೆ ಇದ್ದು ಪಾದಬಂಧ ಪ್ರಭೇದಕ್ಕೆ ಸೇರುತ್ತದೆ. ಮುಖ ಚತುಷ್ಕಿಯು ತೆರೆದ ಮಾದರಿಯಲ್ಲಿದ್ದು ಕಕ್ಷಾಸನವನ್ನು ಹೊಂದಿದೆ. ಕಕ್ಷಾಸನದ ಬೆನ್ನು ಎರಡು ಹಂತದಲ್ಲಿ ರೂಪಗೊಂಡಿದ್ದು ಯಾವುದೇ ಅಲಂಕರಣವನ್ನು ಹೊಂದದೆ ಸಾದಾ ಮಾದರಿಯಲ್ಲಿದೆ. ಮುಖಚತುಷ್ಕಿಯ ಅಧಿಷ್ಠಾನ ಭಾಗವು ಚತುಷ್ಕಿಯ ದ್ವಾರದ ಇಕ್ಕೆಲಗಳಲ್ಲೂ ಮೂರು ಅಡಿ ಮುಂದುವರೆದು ದೇವಾಲಯದ ಸೌಂದರ್ಯವನ್ನು ಹೆಚ್ಚಿಸಿವೆ(ಛಾಯಾಚಿತ್ರ-೪೬).

**ತಿರ್ಯಙ್ಮುಖ ರಚನೆಗಳು :** ಮುಖ್ಯ ಗರ್ಭಗೃಹವು ಪೂರ್ವಾಭಿಮುಖವಾಗಿ ಪೂರ್ವ-ಪಶ್ಚಿಮ, ಉತ್ತರ-ದಕ್ಷಿಣ ೭.೭ x ೭.೭ ಅಡಿ ವಿಸ್ತೀರ್ಣದಲ್ಲಿದೆ. ನಾಲ್ಕು ಮೂಲೆ ಕಂಬಗಳಿಂದ ರಚನೆಗೊಂಡ ಭಿತ್ತಿಯಲ್ಲಿ ಬೇರೆ ಬೇರೆ ಅಳತೆ ಕಲ್ಲುಗಳನ್ನು ಉಪಯೋಗಿಸಲಾಗಿದೆ. ಪಶ್ಚಿಮದಿಕ್ಕಿನ ಭಿತ್ತಿಯಲ್ಲಿ ೧/೨ x ೭ ಅಡಿ ಉದ್ದನೆಯ ಕಲ್ಲುಗಳನ್ನು ಬಳಸಿದರೆ ಉತ್ತರ ದಕ್ಷಿಣ ದಿಕ್ಕಿನ ಭಿತ್ತಿಯಲ್ಲಿ ೧x೩ ಅಡಿ ಆಯತಾಕಾರದ




ತಳವಿನ್ಯಾಸ ರೇಖಾಚಿತ್ರ-೨೩, ಕಲ್ಮೇಶ್ವರ ದೇವಾಲಯ, ಗುಡಗೂರು (ತಾ.ರಾಣೆಬೆನ್ನೂರು)
೧. ಗರ್ಭಗೃಹ, ೨. ಅರ್ಧಮಂಟಪ, ೩. ನವರಂಗ, ೪. ಮುಖಮಂಟಪ




ರೇಖಾಚಿತ್ರ-೨೧, ಕಲ್ಮೇಶ್ವರ ದೇವಾಲಯದ ಅಧಿಷ್ಠಾನ, ಗುಡಗೂರು (ತಾ.ರಾಣೆಬೆನ್ನೂರು)
೧. ಉಪಾನ, ೨. ಜಗತಿ, ೩. ಕಂಪ, ೪. ಕುಮುದ, ೫. ಕಪೋತ

ಕಲ್ಲುಗಳನ್ನು ಬಳಸಲಾಗಿದೆ. ಪಶ್ಚಿಮ ಮತ್ತು ಉತ್ತರ ದಿಕ್ಕಿನ ಭಿತ್ತಿಯಲ್ಲಿ ಅರ್ಧಅಡಿ ಮುಂಚಾಚಿದ ಫಲಕಗಳಿವೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಗರ್ಭಗೃಹದಲ್ಲಿ ವೃತ್ತಾಕಾರದ ಪೀಠದಲ್ಲಿ ಅರ್ಧಅಡಿ ಎತ್ತರದ ರುದ್ರಭಾಗವನ್ನು ಹೊಂದಿದ ಲಿಂಗವಿದೆ. ಈ ಗರ್ಭಗೃಹದ ಬಾಗಿಲುವಾಡವು ಕಲಾತ್ಮಕವಾದ ಮೂರು ಮುಂಚಾಚುಗಳನ್ನು ಹೊಂದಿದ ಅರ್ಧಅಡಿ ಎತ್ತರದ ಹೊಸ್ತಿಲ ಮೇಲೆ, ಪಂಚಶಾಖೆಯಲ್ಲಿ ರಚನೆಗೊಂಡಿದೆ. ಶಾಖೆಗಳು ಅಲಂಕಾರ ರಹಿತವಾಗಿವೆ. ಮಧ್ಯದ ಸ್ತಂಭಶಾಖೆಯು ಹೆಚ್ಚು ಮುಂಚಾಚಿದ್ದು ಅಕ್ಕಪಕ್ಕದ ಎರಡು ಶಾಖೆಗಳು ಕ್ರಮವಾಗಿ ಹಿಂದೆ ಸರಿದಿವೆ. ಮೊದಲ ಎರಡು ಶಾಖೆಗಳು ಲಾಲಟದಲ್ಲಿಯೂ ಮುಂದುವರೆದಿವೆ. ಲಲಾಟಫಲಕದಲ್ಲಿ ಯಾವ ಬಿಂಬವೂ ಇಲ್ಲ. ಗರ್ಭಗೃಹದ ಮುಂದಿನ ರಚನೆಯಾದ ಅರ್ಧಮಂಟಪವು ವಿಸ್ತೀರ್ಣದಲ್ಲಿ ಗರ್ಭಗೃಹಕ್ಕಿಂತ ಅರ್ಧ ಅಡಿಯಷ್ಟು ದೊಡ್ಡದಾಗಿದೆ. ಇದರ ದ್ವಾರಬಂಧವು ಕಲಾತ್ಮಕವಾದ ಮೂರು ಮುಂಚಾಚುಗಳನ್ನು ಹೊಂದಿದ ಅರ್ಧಅಡಿ ಎತ್ತರದ ಹೊಸ್ತಿಲ ಮೇಲೆ ಪಂಚಶಾಖೆಯಲ್ಲಿದೆ. ಶಾಖೆಗಳು ಅಲಂಕಾರ ರಹಿತವಾಗಿವೆ. ಮೊದಲ ಎರಡು ಶಾಖೆಗಳು ತೆಳು ಪಟ್ಟಿಗಳಾಗಿದ್ದು, ನಂತರ ಸ್ತಂಭ, ಜಾಲಂದ್ರ ಮತ್ತು ಅಗಲ ಪಟ್ಟಿಕೆ ರೀತಿಯಲ್ಲಿವೆ. ಸ್ತಂಭಶಾಖೆ ಮತ್ತು ಕೊನೆಯ ಪಟ್ಟಿಶಾಖೆ ಹೆಚ್ಚು ಮುಂಚಾಚಿವೆ. ಮೊದಲ ಎರಡು ಶಾಖೆಗಳು ಮತ್ತು ಕೊನೆಯ ಪಟ್ಟಿಶಾಖೆಯು ಲಲಾಟದಲ್ಲಿಯೂ ಮುಂದುವರೆದಿವೆ. ಸಣ್ಣ ಜಾಲಂದ್ರಗಳು ಲತಾ ಸುರುಳಿಗಳಲ್ಲಿ ಮಾನವ ಆಕೃತಿಗಳನ್ನು ಕೊರೆದಂತೆ ರಚನೆಗೊಂಡಿವೆ(ಛಾಯಾಚಿತ್ರ-೪೭). ಉತ್ತರಾಂಗದಲ್ಲಿ ನಾಗರ ಶೈಲಿಯ ಮೂರು ಶಿಖರಗಳು ಇವೆ. ಇವುಗಳ ಮಧ್ಯದಲ್ಲಿ ಚೌಕಾಕಾರದ ಅಲಂಕರಣಗಳಿವೆ.

ಅಕ್ಕಪಕ್ಕದ ಗರ್ಭಗೃಹಗಳು ಉತ್ತರ ದಕ್ಷಿಣಾಭಿಮುಖವಾಗಿ ಇದ್ದು ವಿಸ್ತೀರ್ಣದಲ್ಲಿ ಮುಖ್ಯ ಗರ್ಭಗೃಹಕ್ಕಿಂತ ಎರಡು ಅಡಿಯಷ್ಟು ದೊಡ್ಡದಾಗಿವೆ. ಈ ಗರ್ಭಗೃಹಗಳ ಭಿತ್ತಿಯನ್ನು ನಾಲ್ಕು ಮೂಲೆ ಕಂಬಗಳ ಮಧ್ಯದಲ್ಲಿ ೩x೪ ಅಡಿ ಉದ್ದ ಅಗಲದ ಮೂರು ಛಪ್ಪಡಿ ಕಲ್ಲುಗಳನ್ನು ಒಂದರ ಮೇಲೊಂದು ಏರಿಸಿ ನಿರ್ಮಿಸಲಾಗಿದೆ. ಭಿತ್ತಿಯಲ್ಲಿ ಅರ್ಧ ಅಡಿ ಮುಂಚಾಚಿದ ಫಲಕಗಳಿವೆ. ಛತ್ತಿನಲ್ಲಿ ರಚಿಸಿದ ಕಮಲದ ಅಲಂಕರಣವಿದೆ. ಎರಡೂ ಗರ್ಭಗೃಹಗಳ ಬಾಗಿಲುವಾಡವು ಮುಖ್ಯದಂತೆ ಪಂಚಶಾಖೆಯಿಂದ ಕೂಡಿ ಮಧ್ಯದ ಸ್ತಂಭಶಾಖೆಯು ಹೆಚ್ಚು ಮುಂಚಾಚಿದೆ. ಅಕ್ಕಪಕ್ಕದ ಶಾಖೆಗಳು ಕ್ರಮವಾಗಿ ಹಿಂದೆ ಸರಿದಿವೆ. ಮೊದಲ ಎರಡು ಶಾಖೆಗಳು ಲಲಾಟದಲ್ಲಿಯೂ ಮುಂದುವರೆದಿವೆ. ಲಲಾಟಫಲಕದಲ್ಲಿ ಯಾವ ಬಿಂಬವೂ ಇಲ್ಲ. ದಕ್ಷಿಣ ದಿಕ್ಕಿನ ಗರ್ಭಗೃಹದಲ್ಲಿ ವೃತ್ತಾಕಾರದ ಪೀಠದಲ್ಲಿ ಸಣ್ಣ ಗಾತ್ರದ ರುದ್ರಭಾಗವನ್ನು ಹೊಂದಿದ ಬ್ರಹ್ಮಲಿಂಗವಿದೆ. ರುದ್ರಭಾಗದಲ್ಲಿ ಜಟೆ ಕಟ್ಟಿದಂತೆ ಕಾಣುವ ರಚನೆ ಇರುವುದು ಇಲ್ಲಿಯ ವಿಶೇಷ. ಉತ್ತರ ದಿಕ್ಕಿನ ಗರ್ಭಗೃಹವು ಬರಿದಾಗಿದೆ. ಅಕ್ಕಪಕ್ಕದ ಗರ್ಭಗೃಹಗಳು ಅರ್ಧಮಂಟಪವನ್ನು ಹೊಂದದೆ ನೇರವಾಗಿ ನವರಂಗಕ್ಕೆ ಜೋಡಣೆಗೊಂಡಿವೆ.

ನವರಂಗವು ಪೂರ್ವ-ಪಶ್ಚಿಮ, ಉತ್ತರ-ದಕ್ಷಿಣ ೧೫.೩ x ೧೬.೩ ಅಡಿ ವಿಸ್ತೀರ್ಣದಲ್ಲಿದೆ. ಮಧ್ಯದಲ್ಲಿ ಅರ್ಧ ಅಡಿ ಎತ್ತರದ ಚೌಕಾಕಾರದ ವೇದಿಕೆ ಇದೆ. ವೇದಿಕೆಯ ತುದಿಯಲ್ಲಿ ನಾಲ್ಕು ಕಂಬಗಳಿವೆ. ಇವುಗಳ ಪೀಠ ಮತ್ತು ಪಾದಭಾಗಗಳು ಚೌಕಾಕಾರದಲ್ಲಿವೆ. ದಂಡ ಭಾಗದಲ್ಲಿ ಷೋಡಶಮುಖ, ಅಷ್ಟಮುಖ ಪಟ್ಟಿಕೆಗಳ




ರೇಖಾಚಿತ್ರ-೨೨, ಕಲ್ಮೇಶ್ವರ ದೇವಾಲಯದ ನವರಂಗದ ಕಂಬ, ಗುಡಗೂರು (ತಾ.ರಾಣೆಬೆನ್ನೂರು)
೧. ಪೀಠ, ೨. ಪಾದ, ೩. ದಂಡ, ೪. ಘಟ, ೫. ಮಂಡಿ, ೬. ಫಲಕ, ೭. ಬೋದಿಗೆ




ರೇಖಾಚಿತ್ರ-೨೩, ಕಲ್ಮೇಶ್ವರ ದೇವಾಲಯದ ಕಕ್ಷಾಸನದ ಕಂಬ, ಗುಡಗೂರು (ತಾ.ರಾಣೆಬೆನ್ನೂರು)
೧. ಪೀಠ, ೨. ದಂಡ, ೩. ಬೋದಿಗೆ

ಅಲಂಕರಣವಿದೆ. ಷೋಡಶ ಮುಖ ಪಟ್ಟಿಕೆಗಳು ನಿಮ್ನ ರೀತಿಯಲ್ಲಿ ರಚನೆಗೊಂಡಿವೆ. ಈ ಅಲಂಕರಣದ ಮೇಲೆ ಚೌಕಾಕಾರದ ಪೆಟ್ಟಿಗೆಯಂತಹ ಭಾಗವಿದೆ. ಇದು ಅಲಂಕಾರರಹಿತವಾಗಿದೆ. ದಂಡಾಗ್ರದಲ್ಲಿ ಕಳಶ, ಘಟ, ಮಂಡಿ, ಫಲಕ ರಚನೆಗಳಿವೆ. ಈ ಕಂಬಗಳು ತ್ರಿಕೋನ ಮಾದರಿಯ ಚತುರ್ಮುಖ ಬೋದಿಗೆಯನ್ನು ಹೊಂದಿವೆ(ರೇಖಾಚಿತ್ರ-೨೨). ಒಂದು ಅಡಿ ಅಗಲ ಒಂದು ಅಡಿ ದಪ್ಪದ ತೊಲೆಗಳು ಬೋದಿಗೆಯಿಂದ ಬೋದಿಗೆಗೆ ಜೋಡಣೆಗೊಂಡಿವೆ. ಇವುಗಳ ಮೇಲೆ ಮಧ್ಯದಲ್ಲಿ ಎರಡು ಸುತ್ತಿನ ಹೂವಿನ ಅಲಂಕರಣವಿದೆ. ಮಧ್ಯದ ವಿತಾನದಲ್ಲಿ ಕಮಲದ ಅಲಂಕರಣವಿದೆ. ಇಲ್ಲಿ ಮೂಲೆ ಕತ್ತರಿಸಿದ ಪ್ರತಿಫಲಕವೂ ಒಳಮುಖದಲ್ಲಿ ಅರ್ಧವೃತ್ತಾಕಾರದಲ್ಲಿದ್ದು ಅಲಂಕರಣಗೊಂಡಿವೆ. ಭಿತ್ತಿಯಲ್ಲಿ ಮುಖ್ಯಗರ್ಭಗೃಹದ ಅರ್ಧಮಂಟಪದ ಅಕ್ಕಪಕ್ಕದಲ್ಲಿ ಎರಡು ಕೋಷ್ಠಗಳು ಇವೆ. ಈ ಕೋಷ್ಠಗಳು ಆಳವಾಗಿವೆ. ಇವುಗಳ ದ್ವಾರಬಂಧವು ನಾಲ್ಕು ಶಾಖೆಗಳಿಂದ ಕೂಡಿವೆ. ಮೊದಲ ಎರಡು ಶಾಖೆಗಳು ಮತ್ತು ಕೊನೆಯ ಶಾಖೆಯು ಲಲಾಟದಲ್ಲಿ ಮುಂದುವರೆದಿವೆ. ನವರಂಗದ ವೇದಿಕೆಯ ಮಧ್ಯದಲ್ಲಿ ಮುಖ್ಯಕ್ಕೆ ಎದುರಾಗಿ ನಂದಿ ಶಿಲ್ಪವಿದೆ. ಪೂರ್ವ ದಿಕ್ಕಿನಲ್ಲಿ ಪ್ರವೇಶದ್ವಾರವಿದೆ. ನವರಂಗದ ದ್ವಾರಬಂಧವು ತೆಳುವಾದ ತ್ರಿಶಾಖೆಗಳಿಂದ ಕೂಡಿದ್ದು ಮೊದಲ ಎರಡು ಶಾಖೆಗಳು ಲಲಾಟದಲ್ಲಿಯೂ ಮುಂದುವರೆದಿವೆ. ಲಲಾಟಫಲಕವು ಖಾಲಿಯಾಗಿದೆ.

ನವರಂಗದ ಪೂರ್ವದಿಕ್ಕಿನಲ್ಲಿ ಮುಖಚತುಷ್ಕಿಯ ರಚನೆ ಇದೆ. ಇದು ೬x೬ ಅಡಿ ವಿಸ್ತೀರ್ಣದಲ್ಲಿದ್ದು ಸುತ್ತಲೂ ಕಕ್ಷಾಸನವನ್ನು ಹೊಂದಿದೆ. ಚತುಷ್ಕಿಯ ಪೂರ್ವದಿಕ್ಕಿನಲ್ಲಿ ಎರಡು ಗಿಡ್ಡ ಕಂಬಗಳು ಕಕ್ಷಾಸನದ ಮೇಲೆ ನಿಂತು ಚತುಷ್ಕಿಯ ಛತ್ತನ್ನು ಎತ್ತಿ ಹಿಡಿದಿವೆ. ಈ ಗಿಡ್ಡ ಕಂಬಗಳು ಚೌಕಾಕಾರದ ಪೀಠದೊಂದಿಗೆ ಹಾಗೂ ಮೇಲಿನ ಭಾಗವು ವೃತ್ತಾಕಾರದಲ್ಲಿದ್ದು ಹದಿನಾರು ಮುಖಗಳಿಂದ ಅಲಂಕೃತಗೊಂಡಿವೆ. ಇವುಗಳ ಪಾದಭಾಗದಲ್ಲಿ ನಿಮ್ನ ಮುಖದಲ್ಲಿ ಪದಕಗಳ ಅಲಂಕರಣವಿದೆ. ದಂಡಾಗ್ರದಲ್ಲಿ ತಾಟಿಕಾ, ಘಟ ಭಾಗಗಳಿದ್ದು ಇವುಗಳ ಮೇಲಿನ ಚತುರ್ಮುಖ ಬೋದಿಗೆಯು ಪ್ರಧಾನವಾಗಿ ಎದ್ದು ಕಾಣುತ್ತದೆ(ರೇಖಾಚಿತ್ರ-೨೩). ಬೋದಿಗೆಯ ಎರಡು ಹೊರಮುಖಗಳು ಹೆಚ್ಚು ಮುಂಚಾಚಿವೆ. ಇದರಿಂದ ಚತುಷ್ಕಿಯ ಇಳಿಜಾರು ಛತ್ತನ್ನು ಎತ್ತಿ ಹಿಡಿಯಲು ಅನುಕೂಲವಾಗಿದೆ. ಬೋದಿಗೆಯಿಂದ ಬೋದಿಗೆಗೆ ಜೋಡಣೆಗೊಂಡ ತೊಲೆಗಳು ಮಧ್ಯದಲ್ಲಿ ಎರಡು ಸುತ್ತಿನಲ್ಲಿ ಹೂವಿನ ಅಲಂಕರಣವನ್ನು ಒಳಮುಖದಲ್ಲಿ ಮೆಟ್ಟಸ ರೇಖೆಗಳ ಅಲಂಕರಣ ವನ್ನು ಹೊಂದಿವೆ. ಛತ್ತಿನಲ್ಲಿ ಅಂಕಣದ ತುಂಬ ಹಬ್ಬಿಕೊಂಡ ಚಿತ್ತಾರವು ಆಕರ್ಷಕವಾಗಿದೆ. ಏಳು ಸುತ್ತುಗಳನ್ನು ಒಳಗೊಂಡ ಈ ಅಲಂಕರಣವು ನಾಲ್ಕು ದಳ ಹೂವುಗಳನ್ನು ಹೊಂದಿದೆ. ಕೊನೆಯ ಮೂರು ಸುತ್ತುಗಳು ಹಂತಹಂತವಾಗಿ ಒಳ ಸರಿಯುತ್ತ ಮಧ್ಯದಲ್ಲಿ ಅಧೋಮುಖ ಕಮಲ ಮೊಗ್ಗನ್ನು ಹೊಂದಿದೆ. ಅಂಕಣದ ನಾಲ್ಕು ಮೂಲೆಯಲ್ಲಿ ಕೀರ್ತಿಮುಖಗಳನ್ನು ಬಿಡಿಸಲಾಗಿದೆ(ಛಾಯಾಚಿತ್ರ-೪೮).

**ಶಾಸನಗಳಿಂದ ಹೆಚ್ಚಿನ ವಿವರ :** ಕ್ರಿ.ಶ.ಸು.೧೦ನೇ ಶತಮಾನಕ್ಕೆ ಸೇರಬಹುದಾದ ಶಾಸನವೊಂದು ಪುಣ್ಯಮಂತಿಯ ನಾಡನ್ನು ರಾಜಸಿಂಗ ಆಳುತ್ತಿದ್ದಾಗ ವ್ಯಕ್ತಿಯೊಬ್ಬ ಗೋಸಾಸ ನಿಲ್ಲಿಸಿದ್ದನ್ನು ದಾಖಲಿಸಿದೆ.[೨೯] ಇದರಿಂದ ಈ ಗ್ರಾಮವು ಹೊನ್ನತ್ತಿ ೧೨ರ ವಿಭಾಗಕ್ಕೆ ಸೇರಿತ್ತೆಂದು, ರಾಷ್ಟ್ರಕೂಟರ ಕಾಲದಲ್ಲಿ ಈ ಗ್ರಾಮವು ಜನವಸತಿ ಕೇಂದ್ರವಾಗಿತ್ತೆಂದು ಊಹಿಸಬಹುದು. ದೇವಾಲಯಕ್ಕೆ ಸಂಬಂಧಪಟ್ಟಂತೆ ಯಾವ ಶಾಸನಗಳೂ ಲಭ್ಯವಿಲ್ಲ.

ಊರು : ಗುಡ್ಡದ ಆನವೇರಿ (ತಾ.ರಾಣೆಬೆನ್ನೂರು)

ಸ್ಥಳ : ಊರ ನಡುವೆ

ಹೆಸರು : ಕಲ್ಮೇಶ್ವರ (ಮಲ್ಲಿಕಾರ್ಜುನ)

ಅಭಿಮುಖ : ಪೂರ್ವ

ನಿವೇದನೆ : ಈಶ್ವರ

ಕಾಲ : ಕ್ರಿ.ಶ.೧೧೮೩

ಶೈಲಿ : ಕಲ್ಯಾಣ ಚಾಲುಕ್ಯ

ಬಳಸಿದ ವಸ್ತು : ನೀಲಿ ಛಾಯೆಯ ಕಪ್ಪು ಕಲ್ಲು

## ದೇವಾಲಯ ವಾಸ್ತುಶೈಲಿ

**ತಳವಿನ್ಯಾಸ :** (ತಳವಿನ್ಯಾಸ ರೇಖಾಚಿತ್ರ-೨೪) ಮೂರು ಗರ್ಭಗೃಹಗಳು, ಒಂದು ಅರ್ಧಮಂಟಪ, ನವರಂಗ, ಪೂರ್ವದಿಕ್ಕಿನಲ್ಲಿ ಪ್ರವೇಶ.

**ಊರ್ಧ್ವಮುಖ ರಚನೆ :** ರಾಣೆಬೆನ್ನೂರಿನಿಂದ ಉತ್ತರಕ್ಕೆ ಐದು ಕಿ.ಮೀ. ದೂರದಲ್ಲಿರುವ ಈ ದೇವಾಲಯವು ಕಾಲಕಾಲಕ್ಕೆ ದುರಸ್ತಿಗೊಂಡಿದೆ. ಮುಖ್ಯ ಗರ್ಭಗೃಹದ ಅಧಿಷ್ಠಾನ ಭಾಗ ೧ ೧/೨ ಅಡಿ ಎತ್ತರವಾಗಿದೆ. ಜಗತಿ, ಪದ್ಮ, ಊರ್ಧ್ವಕಂಪ ಭಾಗಗಳನ್ನು ಮಾತ್ರ ಹೊಂದಿದೆ. ಅಕ್ಕಪಕ್ಕದ ಗೃಹಗಳ ಅಧಿಷ್ಠಾನವು ಕೇವಲ ಜಗತಿ ಭಾಗವನ್ನು ಹೊಂದಿ ಸರಳ ಮಾದರಿಯಲ್ಲಿವೆ. ಮುಖ್ಯಗರ್ಭಗೃಹದ ಭಿತ್ತಿಯನ್ನು ೧x೪ ಅಡಿ ಉದ್ದ ಅಗಲದ ಚಪ್ಪಡಿ ಕಲ್ಲುಗಳನ್ನು ಬಳಸಿ ಮೂರು ಅಡಿ ದಪ್ಪವಾಗಿ ರಚಿಸಲಾಗಿದೆ. ದೇವಾಲಯದ ಮೇಲ್ಕಟ್ಟಡದಲ್ಲಿ ಮುಖ್ಯ ಗರ್ಭಗೃಹವು ಮಾತ್ರ ಕದಂಬನಾಗರ ಶೈಲಿಯ ಶಿಖರವನ್ನು ಹೊಂದಿದೆ. ಇದಕ್ಕೆ ಸೇರಿದಂತೆ ಶುಕನಾಸವಿದೆ. ಇದರ ಮುಖ ಫಲಕದಲ್ಲಿ ಯಾವ ಬಿಂಬವೂ ಇಲ್ಲ(ಛಾಯಾಚಿತ್ರ-೪೯).

**ತಿರ್ಯಙ್ಮುಖ ರಚನೆಗಳು :** ಪೂರ್ವಾಭಿಮುಖವಾದ ಮುಖ್ಯ ಗರ್ಭಗೃಹವು ೭x೭ ಅಡಿ ವಿಸ್ತೀರ್ಣದಲ್ಲಿದೆ. ಗರ್ಭಗೃಹವು ದುರಸ್ತಿ ಕಾರ್ಯದಲ್ಲಿ ಬದಲಾವಣೆಗಳನ್ನು ಕಂಡಿದೆ. ಛತ್ತಿನಲ್ಲಿ ಕಮಲದ ಅಲಂಕರಣ ಕಂಡುಬರುವುದಿಲ್ಲ. ವೃತ್ತಾಕಾರದ ಪೀಠದ ಮೇಲೆ ಅರ್ಧಅಡಿ ಎತ್ತರದ ಲಿಂಗವನ್ನು ಕಾಣುತ್ತೇವೆ. ಗರ್ಭಗೃಹದ ದ್ವಾರಬಂಧವು ತೆಳುವಾದ ಹೊಸ್ತಿಲ ಮೇಲೆ ಪಂಚಶಾಖೆಗಳಿಂದ ನಿರ್ಮಾಣಗೊಂಡಿದೆ. ಶಾಖೆಗಳು ಕ್ರಮವಾಗಿ ಲತಾಸುರುಳಿ, ವಜ್ರಪಟ್ಟಿಕೆ, ಸ್ತಂಭ, ಲತಾ ಸುರುಳಿ, ಕಮಲದಳಗಳ ಅಲಂಕರಣ ಹೊಂದಿವೆ. ಕೊನೆಯ ಶಾಖೆಯು ಸುಣ್ಣದಿಂದ ಮುಚ್ಚಿದೆ. ಮಧ್ಯದ ಸ್ತಂಭಶಾಖೆಯು ಹೆಚ್ಚು ಮುಂಚಾಚಿದ್ದು ಅಡ್ಡ ಗೆರೆಗಳ ಅಲಂಕರಣದಿಂದ ಕೂಡಿದೆ. ಅಕ್ಕಪಕ್ಕದ ಶಾಖೆಗಳು ಕ್ರಮವಾಗಿ ಹಿಂದೆ ಸರಿದಿವೆ. ಮಧ್ಯದ ಮೂರು ಶಾಖೆಗಳನ್ನು ಒಳಗೊಂಡಂತೆ ಚೌಕಾಕಾರದ ಪಾದ ಫಲಕದಲ್ಲಿ ಕೀರ್ತಿಮುಖ ತೋರಣದ ಅಡಿಯಲ್ಲಿ ತ್ರಿಭಂಗಿಯಲ್ಲಿ ನಿಂತ ದ್ವಾರಪಾಲಕರ ಉಬ್ಬುಶಿಲ್ಪಗಳಿವೆ. ಮೊದಲ ಎರಡು ಶಾಖೆಗಳು ಲಲಾಟದಲ್ಲಿಯೂ ಮುಂದುವರೆದಿವೆ. ಲಲಾಟಫಲಕವು ಹೆಚ್ಚು ಅಗಲವಾಗಿದ್ದು ಗಜಲಕ್ಷ್ಮಿಯ ಉಬ್ಬುಶಿಲ್ಪವನ್ನು ಹೊಂದಿದೆ(ಛಾಯಾಚಿತ್ರ-೫೦). ಗರ್ಭಗೃಹದ ಮುಂದಿನ ರಚನೆಯಾದ ಅರ್ಧಮಂಟಪವು ವಿಸ್ತೀರ್ಣದಲ್ಲಿ ಗರ್ಭಗೃಹಕ್ಕಿಂತ ಒಂದು ಅಡಿ




ತಳವಿನ್ಯಾಸ ರೇಖಾಚಿತ್ರ-೨೪, ಕಲ್ಮೇಶ್ವರ ದೇವಾಲಯ, ಗುಡ್ಡದ ಆನವೇರಿ (ತಾ.ರಾಣೆಬೆನ್ನೂರು)
೧. ಗರ್ಭಗೃಹ, ೨. ಅರ್ಧಮಂಟಪ, ೩. ನವರಂಗ

ಚಿಕ್ಕದಾಗಿದೆ. ಇಲ್ಲಿ ಅಸ್ಪಷ್ಟವಾದ ಚಂದ್ರಶಿಲಾ ಫಲಕವನ್ನು ಕಾಣಬಹುದು. ಅರ್ಧಮಂಟಪದ ದ್ವಾರಬಂಧವು ತೆಳುವಾದ ಎರಡು ಶಾಖೆಗಳನ್ನು ಅಕ್ಕಪಕ್ಕದಲ್ಲಿ ಜಾಲಂದ್ರಗಳನ್ನು ಹೊಂದಿದೆ. ಲಲಾಟದಲ್ಲಿ ಯಾವ ಬಿಂಬವೂ ಇಲ್ಲ. ಈ ದ್ವಾರಬಂಧವು ವಿಜಯನಗರೋತ್ತರ ಕಾಲದಲ್ಲಿ ದುರಸ್ತಿಗೊಂಡಿದೆ.

ಅಕ್ಕಪಕ್ಕದ ಗರ್ಭಗೃಹಗಳು ಉತ್ತರ ದಕ್ಷಿಣಾಭಿಮುಖವಾಗಿದ್ದು ವಿಸ್ತಾರದಲ್ಲಿ ಮುಖ್ಯ ಗರ್ಭಗೃಹದಷ್ಟೇ ಇವೆ. ಛತ್ತಿನಲ್ಲಿ ಕಮಲದ ಅಲಂಕರಣವನ್ನು ಹೊಂದಿವೆ. ದಕ್ಷಿಣ ದಿಕ್ಕಿನ ಗೃಹವು ಬರಿದಾಗಿದೆ. ಇದರ ದ್ವಾರಬಂದವೂ ಬಿದ್ದಿದೆ. ಉತ್ತರ ದಿಕ್ಕಿನ ಗೃಹವು ಇತ್ತೀಚೆಗೆ ಕಟ್ಟಿದ ಪೀಠವನ್ನು ಹೊಂದಿದೆ. ನವರಂಗದಲ್ಲಿ ಇರಿಸಲಾದ ಗರುಡ ಲಾಂಛನವಿರುವ ಪೀಠವು ಅದರ ಮೇಲಿನ ವಿಷ್ಣುಶಿಲ್ಪವು (ಈಗ ಶಿಲ್ಪವಿಲ್ಲ) ಈ ಗೃಹಕ್ಕೆ ಸಂಬಂಧಿಸಿದ್ದಾಗಿರಬಹುದು. ಉತ್ತರ ದಿಕ್ಕಿನ ಗೃಹದ ದ್ವಾರಬಂಧವು ಒಂದು ಪಟ್ಟಿಕೆಯಿಂದ ಕೂಡಿದ್ದು ಸಾದಾ ಮಾದರಿಯಲ್ಲಿದೆ. ಪಟ್ಟಿಕೆಯು ಲಲಾಟದಲ್ಲಿಯೂ ಮುಂದುವರೆದಿದೆ. ಲಲಾಟಫಲಕದಲ್ಲಿ ಯಾವ ಬಿಂಬವೂ ಇಲ್ಲ. ಎರಡೂ ಗರ್ಭಗೃಹಗಳು ಅರ್ಧಮಂಟಪವನ್ನು ಹೊಂದಿರದೆ ನೇರವಾಗಿ ನವರಂಗಕ್ಕೆ ಜೋಡಣೆಗೊಂಡಿವೆ.

ನವರಂಗವು ೧೫.೪ x ೧೫.೪ ಅಡಿ ವಿಸ್ತೀರ್ಣದಲ್ಲಿದೆ. ಮಧ್ಯದಲ್ಲಿ ಚೌಕಾಕಾರದ ವೇದಿಕೆ ಇದೆ. ಇಲ್ಲಿ ಮುಖ್ಯಗರ್ಭಗೃಹಕ್ಕೆ ಎದುರಾಗಿ ನಂದಿ ಶಿಲ್ಪವಿದೆ. ವೇದಿಕೆಯ ತುದಿಯ ಕಂಬಗಳು ಚೌಕಾಕಾರದ ಪೀಠದ ಮೇಲೆ, ಪಾದಭಾಗವು ಆಯತಾಕಾರದ ಪೆಟ್ಟಿಗೆಯ ಮಾದರಿಯಲ್ಲಿದೆ. ದಂಡಭಾಗದಲ್ಲಿ ಷೋಡಶಮುಖ, ಅಷ್ಟಮುಖ, ಷೋಡಶಮುಖ ಹೀಗೆ ಕ್ರಮವಾಗಿ ಪಟ್ಟಿಕೆ ಅಲಂಕರಣವಿದೆ. ಅಷ್ಟಮುಖ ಪಟ್ಟಿಯಲ್ಲಿ ವಜ್ರಾಕೃತಿ ಗಳನ್ನು ಬಿಡಿಸಲಾಗಿದೆ. ನಂತರದಲ್ಲಿ ಚೌಕಾಕಾರದ ರಚನೆ ಇದ್ದು ಅಲಂಕಾರರಹಿತವಾಗಿದೆ. ದಂಡಾಗ್ರದಲ್ಲಿ ಕಳಶ, ಘಟ, ಮಂಡಿ, ಫಲಕಗಳಿದ್ದು ತ್ರಿಕೋನ ಮಾದರಿಯ ಚತುರ್ಮುಖ ಬೋದಿಗೆ ಇದೆ(ಛಾಯಾಚಿತ್ರ-೪೩). ಒಂದು ಅಡಿ ಅಗಲ ದಪ್ಪದ ತೊಲೆಗಳು ಮಧ್ಯದ ಕಂಬಗಳನ್ನು ಭಿತ್ತಿ ಕಂಬಗಳನ್ನು ಜೋಡಿಸಿವೆ. ಮಧ್ಯದ ವಿತಾನವು ಕಮಲದ ಅಲಂಕರಣ ಹೊಂದಿದೆ. ಉಳಿದ ಅಂಕಣಗಳು ಅಲಂಕಾರ ರಹಿತವಾದ ಛಪ್ಪಡಿ ಕಲ್ಲುಗಳಿಂದ ಮುಚ್ಚಲ್ಪಟ್ಟಿವೆ. ನವರಂಗದ ಭಿತ್ತಿಯಲ್ಲಿ ನಾಲ್ಕು ಕೋಷ್ಟಗಳು ಕಂಡುಬರುತ್ತವೆ. ಮುಖ್ಯ ಅರ್ಧಮಂಟಪದ ಅಕ್ಕಪಕ್ಕದಲ್ಲಿ ಮತ್ತು ಉತ್ತರ ದಕ್ಷಿಣಾಭಿಮುಖವಾಗಿ ಒಂದೊಂದು ಕೋಷ್ಟಗಳಿವೆ. ಇವು ದುರಸ್ತಿಗೊಂಡಿವೆ. ಇಲ್ಲಿ ಗಣಪತಿ, ಮಹಿಷಮರ್ದಿನಿ, ಸಪ್ತಮಾತೃಕೆ ಪಟ್ಟಿ, ಗರುಡ ಪೀಠವನ್ನು ಕಾಣಬಹುದು. ನವರಂಗದ ದ್ವಾರಬಂಧವು ಅರ್ಧಅಡಿ ಹೊಸ್ತಿಲ ಮೇಲೆ ಪಂಚಶಾಖೆಗಳಿಂದ ಕೂಡಿದೆ. ಮಧ್ಯದ ಸ್ತಂಭಶಾಖೆಯು ಹೆಚ್ಚು ಮುಂಚಾಚಿದೆ. ಅಕ್ಕಪಕ್ಕದ ಅಲಂಕಾರರಹಿತವಾದ ಶಾಖೆಗಳು ಕ್ರಮವಾಗಿ ಹಿಂದೆ ಸರಿದಿವೆ. ಪಾದ ಫಲಕದಲ್ಲಿ ಯಾವ ಬಿಂಬಗಳೂ ಇಲ್ಲ. ಮೊದಲ ಎರಡು ಶಾಖೆಗಳು ಲಲಾಟ ದಲ್ಲಿಯೂ ಮುಂದುವರೆದಿವೆ. ಅರ್ಧಅಡಿ ಮುಂಚಾಚಿದ ಅಕ್ಕಪಕ್ಕದಲ್ಲಿ ಸಣ್ಣ ಅಧೋಮುಖ ಕಮಲ ಮೊಗ್ಗುಗಳಿವೆ. ಸ್ತಂಭಶಾಖೆಗಳು ಮೇಲಿನ ಉತ್ತರಾಂಗವನ್ನು ಹೊತ್ತಿವೆ. ಇಲ್ಲಿ ಅರ್ಧಚಂದ್ರಾಕಾರದೊಳಗೆ ಗಜಲಕ್ಷ್ಮಿಯ ಉಬ್ಬುಶಿಲ್ಪವು ಇದೆ(ಛಾಯಾಚಿತ್ರ-೪೯). ದೇವಾಲಯದ ಎದುರಿನಲ್ಲಿ ಸಣ್ಣ ಚಕ್ಕೆ ಕಲ್ಲುಗಳಿಂದ ಕಟ್ಟಿದ ಗೋಡೆಯನ್ನು ಹೊಂದಿದ ಮಂಟಪವಿದೆ.

## ಪಟ್ಟಿ ೧೫

| ಕ್ರ. ಸಂ. | ಊರು | ದೇವಾಲಯ ಹೆಸರು | ದಾನ ನೀಡಿದವರು | ದಾನ ಸ್ವೀಕರಿಸಿದವರು | ದಾನದ ವಿವರ | ಕ್ರಿ.ಶ. | ದಾನದ ವಿನಿಯೋಗ | ದಾನ ನೀಡಿದ ಸಂದರ್ಭ (ಶಾಸನದಲ್ಲಿ ಉಲ್ಲೇಖಿಸಿದಂತೆ) | ಉಲ್ಲೇಖ |
|---|---|---|---|---|---|---|---|---|---|
| ೧. | ಗುಡ್ನದ ಆನವೇರಿ | ಕಲ್ಮೇಶ್ವರ ಶಾಸನನೋಕ್ತ ಮಲ್ಲಿಕಾರ್ಜುನ | ವಾಸುದೇವ ದಂಡನಾಯಕ | ಸೋಮೇಶ್ವರ ಪಂಡಿತದೇವರು | ಬಾಡದಾಲೂರು ಗ್ರಾಮದಲ್ಲಿಯ ಭೂಮಿ ದಾನ ಶಾಸನ ತ್ರುಟಿತಗೊಂಡಿದೆ. | ೧೧೮೨ | ದೇವಾಲಯವನ್ನು ಜೀರ್ಣೋದ್ಧಾರವಾಗಿ ಕಲುವೆಸನ ಮಾಡಲು, ದೇವರ ಅಂಗಭೋಗ, ರಂಗಭೋಗ, ನಿತ್ಯ ಪೂಜೆ, ನೈವೇದ್ಯ, ನಂದಾದೀವಿಗೆಗೆ, ಚೈತ್ರಪವಿತ್ರ ಪರ್ವಗಳಿಗೆ | ಶುಭ ಕ್ರಿತ್ಸಂವತ್ಸರದ ಮಾರ್ಗಶಿರ ಶುದ್ಧ ಪೌರ್ಣಮಿ ಬ್ರಹಸ್ಪತಿವಾರ ಸೋಮಗ್ರಹಣ, ಉತ್ತರಾಯಣ ಸಂಕ್ರಮಣ, ಬ್ಯತೀಪಾತಂ ಕೂಡಿಬಂದ ಮಹಾಪುಣ್ಯತಿಥಿ | ಸೌ.ಇಂ.ಇನ್. ಸಂ. XVIII ನಂ. ೧೯೨ |
| ೨. | | ಮಲ್ಲಿಕಾರ್ಜುನ ಮತ್ತು ಬ್ರಹ್ಮಪುರಿಯ ಶ್ರೀಯೋಗೇಸ್ವರ ದೇವರ್ಗ್ಗೆ | ಶ್ರೀಮನ್ಮಹಾಪ್ರಚಂಡ ದಂಡನಾಯಕ ಮಲ್ಲುಗಿ ದೇವರಸ ಆಜ್ಞೆಯ ಮೇರೆಗೆ ಸುಂಕವೆರ್ಗ್ಗಡೆ ನಾಗರಸ, ಡಾವರಸ | .......... | ಎಳ್ಳು, ಹತ್ತಿಮಳವೆ, ದವಸರಾಣೋಗ, ಎರಡು ಗಾಣ, ಯೆಲೆ ಯೋಕ್ಕಲೆರಡು | ೧೧೮೩ | ದೇವರ ಅಂಗಭೋಗ, ರಂಗಭೋಗ | ..... | ಅದೇ ನಂ. ೩೪೯ |
| ೩. | | ಮಲ್ಲಿಕಾರ್ಜುನ ಮತ್ತು ಬ್ರಹ್ಮಪುರಿಯ ಶ್ರೀಯೋಗೇಸ್ವರ ದೇವರ್ಗ್ಗೆ | ಜೋಯಿದೇವರಸ ಆಜ್ಞೆಯ ಮೇರೆಗೆ ಸುಂಕವೆರ್ಗ್ಗಡೆ ಸೋವರಸ | ........ | ಎಳ್ಳು, ಹತ್ತಿಮಳವೆ, ಒಂದು ಗಾಣ, ಯೆಲೆ ಯವೋಕ್ಕಲೊಂದ, ಸುಂಕ | ೧೧೮೩ | ದೇವರ ಅಂಗಭೋಗ, ನಂದಾದೀವಿಗೆಗೆ | ..... | ಅದೇ ನಂ. ೩೪೯ |

ಪಟ್ಟಿ ೧೫

| ಕ್ರ. ಸಂ. | ಊರು | ದೇವಾಲಯ ಹೆಸರು | ದಾನ ನೀಡಿದವರು | ದಾನ ಸ್ವೀಕರಿಸಿದವರು | ದಾನ ವಿವರ | ಕ್ರಿ.ಶ. | ದಾನದ ವಿನಿಯೋಗ | ದಾನ ನೀಡಿದ ಸಂದರ್ಭ (ಶಾಸನದಲ್ಲಿ ಉಲ್ಲೇಖಿಸಿದಂತೆ) | ಉಲ್ಲೇಖ |
|---|---|---|---|---|---|---|---|---|---|
| ೪. | ಗುಡ್ಡದ ಆನವೇರಿ | ಮಲ್ಲಿಕಾರ್ಜುನ ಮತ್ತು ಬ್ರಹ್ಮಪುರಿಯ ಶ್ರೀಯೋಗೇಸ್ವರ ದೇವರ್ಗ್ಗೆ | ವಾಸುದೇವ ದಂಡನಾಯಕ, ಕೇಶವ ದಂಡನಾಯಕ, ನಾರಣ ದಂಡನಾಯಕ | ......... | ಮದುವೆ ಸೋಭನಕ್ಕೆ ಕೊಟ್ಟ ಲವುಕಿಕದ ಹೊಂಗೆ ಹಣವೊದು, ಒಂದು ಹಸು | ೧೧೮೩ | ದೇವರ ಅಂಗಭೋಗ, ನಂದಾದೀವಿಗೆಗೆ | ....... | ಸೌ.ಇಂ.ಇನ್. ಸಂ. XVIII ನಂ. ೧೯೨ |

**ಶಾಸನಗಳಿಂದ ಹೆಚ್ಚಿನ ಮಾಹಿತಿ :** ಕಳಚೂರಿ ಅಹವಮಲ್ಲನ ಕಾಲದ ಎರಡು ಶಾಸನಗಳು ಲಭ್ಯವಿದ್ದು ಅದರಲ್ಲಿ ಈ ಊರನ್ನು 'ಬಾಡದಾಲೂರು'[೨೯೪] 'ಆಲೂರು'[೨೯೫] ಎಂದು ಉಲ್ಲೇಖಿಸಿವೆ. ಈ ಗ್ರಾಮವು ಬಿನ್ನವೂರ-೧೨ಕ್ಕೆ ಸೇರಿತ್ತೆಂದು ತಿಳಿದುಬರುತ್ತದೆ. ಈ ಎರಡೂ ಶಾಸನಗಳು ಕ್ರಿ.ಶ.೧೧೮೬ರ ಕಾಲಕ್ಕೆ ಸೇರಿವೆ. ಇವುಗಳಲ್ಲಿ ಒಂದಾದ ದೇವಾಲಯದ ಎದುರಿಗೆ ನಿಲ್ಲಿಸಿದ ಶಾಸನವು, ಗುತ್ತ ವಿಕ್ರಮಾದಿತ್ಯ ಮತ್ತು ಜೋಯಿ ದೇವರಸರು ಮಲ್ಲಿಕಾರ್ಜುನ ದೇವಾಲಯಕ್ಕೆ ದಾನಕೊಟ್ಟ ವಿಷಯವನ್ನು ಹೇಳಿದೆ. ಅಲ್ಲದೆ ಮೂಲಸ್ಥಾನದ ಕಲಿದೇವರಿಗೆ ಹಾಗೂ ಕೇಶವದೇವರಿಗೆ ಕೂಡ ಭೂದಾನ ಮಾಡಿದ ಅಂಶವನ್ನು ಹೇಳುತ್ತದೆ.

ಇನ್ನೊಂದು ಶಾಸನವು ಅರ್ಧಮಂಟಪದ ಬಾಗಿಲುವಾಡದ ಮೇಲಿದ್ದು, ಮಲ್ಲಿಕಾರ್ಜುನ ಹಾಗೂ ಬ್ರಹ್ಮಪುರಿಯ ಯೋಗೇಶ್ವರ ದೇವರಿಗೆ ವಿವಿಧ ಅಧಿಕಾರಿಗಳು ಪ್ರತ್ಯೇಕವಾಗಿ ಮೂರು ದಾನಗಳನ್ನು ಕೊಟ್ಟ ವಿಷಯವನ್ನು ಉಲ್ಲೇಖಿಸುತ್ತದೆ. ಇದರಿಂದ ಈ ಕಲ್ಲೇಶ್ವರ ದೇವಾಲಯವು ಶಾಸನೋಕ್ತ ಮಲ್ಲಿಕಾರ್ಜುನ ದೇವಾಲಯವಾಗಿದೆ. ಶಾಸನೋಕ್ತ ಮೂಲಸ್ಥಾನದ ಕಲಿದೇವ ಮತ್ತು ಕೇಶವದೇವರು ಈ ತ್ರಿಕೂಟ ದೇವಾಲಯದ ಇನ್ನೆರಡು ಗರ್ಭಗೃಹದಲ್ಲಿನ ದೇವರಾಗಿರಬಹುದು. ದೇವಾಲಯದ ಎದುರು ನಿಲ್ಲಿಸಿದ ಶಾಸನದಲ್ಲಿ ಗುತ್ತ ವಿಕ್ರಮಾದಿತ್ಯನು ಈ ದೇವಾಲಯಕ್ಕೆ ದಾನ ಕೊಡುವಾಗ

> 'ಮಲ್ಲಿಕಾರ್ಜುನ ದೇವರ ದೇವಾಲಯದ ಜೀರ್ಣೋದ್ಧಾರವಂ ಸಿಪ್ಪಿಯಾದಿಯಾಗಿ
> ಕಲುವೆಸನಂ ಪುನರ್ಬ್ಬರಣವಾಗಿ ಸ ಪತಿಷ್ಠಿತಂ ಮಾಡಿ ಯಾದೇವರ್ಗ್ಗೆ
> ಯಂಗಭೋಗ... ಸೋಮೇಶ್ವರಪಂಡಿತರ್ಗ್ಗೆ
> ಸ್ಥಾನಾಚಾರ್ಯ್ಯತ್ವಮಂ ಸುಪ್ರತಿಷ್ಠಿತಂ ಮಾಡಿಕೊಟ್ಟು....'

ಎಂದು ಉಲ್ಲೇಖಿಸುತ್ತದೆ. ಈ ಮೊದಲು ಜೀರ್ಣವಾಗಿದ್ದ ದೇವಾಲಯವನ್ನು 'ಕಲುವೆಸನಂ' ಮಾಡಿ ಈ ಸ್ಥಾನಕ್ಕೆ ಸೋಮೇಶ್ವರ ಪಂಡಿತರನ್ನು ಸ್ಥಾನಾಚಾರ್ಯರನ್ನಾಗಿ ಮಾಡಿದ್ದಾಗಿ ಶಾಸನ ಹೇಳುತ್ತದೆ.

| | | |
|---|---|---|
| ಊರು | : | ಮತ್ತಿಹಳ್ಳಿ (ತಾ.ಹಿರೇಕೆರೂರು) |
| ಸ್ಥಳ | : | ಊರ ಮಧ್ಯದಲ್ಲಿ |
| ಹೆಸರು | : | ಸ್ವಯಂಭೂ ಸೋಮೇಶ್ವರ ದೇವಾಲಯ |
| ಅಭಿಮುಖ | : | ಪೂರ್ವ |
| ನಿವೇದನೆ | : | ಬ್ರಹ್ಮ, ಈಶ್ವರ, ವಿಷ್ಣು |
| ಕಾಲ | : | ಕ್ರಿ.ಶ.೧೦೪೪ |
| ಶೈಲಿ | : | ಕಲ್ಯಾಣ ಚಾಲುಕ್ಯ |
| ಬಳಸಿದ ವಸ್ತು | : | ನೀಲಿ ಛಾಯೆಯ ಕಪ್ಪು ಕಲ್ಲು |

## ದೇವಾಲಯ ವಾಸ್ತುಶೈಲಿ

**ತಳವಿನ್ಯಾಸ :** (ತಳವಿನ್ಯಾಸ ರೇಖಾಚಿತ್ರ-೨೫) ಮೂರು ಗರ್ಭಗೃಹಗಳು, ಮೂರು ಅರ್ಧಮಂಟಪಗಳು ನವರಂಗ, ಒಂದು ಮುಖಮಂಟಪ.




ತಳವಿನ್ಯಾಸ ರೇಖಾಚಿತ್ರ-೨೫, ಕಲ್ಮೇಶ್ವರ ದೇವಾಲಯ, ಮತ್ತಿಹಳ್ಳಿ (ತಾ.ಹಿರೇಕೆರೂರು)

೧. ಗರ್ಭಗೃಹ, ೨. ಅರ್ಧಮಂಟಪ, ೩. ನವರಂಗ, ೪. ಮುಖಮಂಟಪ




ರೇಖಾಚಿತ್ರ-೨೪, ಸೋಮೇಶ್ವರ ದೇವಾಲಯದ ಅಧಿಷ್ಠಾನ, ಮತ್ತಿಹಳ್ಳಿ (ತಾ.ಹಿರೇಕೆರೂರು)
೧. ಉಪಾನ, ೨. ಜಗತಿ, ೩. ಪದ್ಮ, ೪. ಕುಮುದ, ೫. ಕಪೋತ

**ಊರ್ಧ್ವಮುಖ ರಚನೆ :** ಹಿರೇಕೆರೂರಿನಿಂದ ನೈರುತ್ಯಕ್ಕೆ ೧೩ ಕಿ.ಮೀ. ದೂರದಲ್ಲಿರುವ ಈ ದೇವಾಲಯದ ಮುಖ್ಯ ಗರ್ಭಗೃಹವು ಮಾತ್ರ ಸುಂದರವಾದ ಅಧಿಷ್ಠಾನವನ್ನು ಹೊಂದಿದೆ. ಇದು ೩.೫ ಅಡಿ ಎತ್ತರವಾಗಿದ್ದು ಜಗತಿ, ಪದ್ಮ, ತ್ರಿಪಟ್ಟ ಕುಮುದ ಹಿಂದೆ ಸರಿದ ಕಪೋತ ಭಾಗದಲ್ಲಿ ದಂತ ಮಾದರಿಯ ಅಲಂಕರಣವನ್ನು ಹೊಂದಿ ಪಾದಬಂಧ ಪ್ರಭೇದಕ್ಕೆ ಸೇರುತ್ತದೆ(ರೇಖಾಚಿತ್ರ-೨೪). ಪ್ರಧಾನ ಭಾಗಗಳ ಮಧ್ಯೆ ಒಳ ಸರಿದ ಕಂಪ-ಗಳ-ಕಂಪ ರಚನೆಗಳಿವೆ. ಅಧಿಷ್ಠಾನದ ಕರ್ಣಭಾಗವು ಒಂದು ಹಂತದಲ್ಲಿ ಮುಂದೆ ಸರಿದರೆ ಭದ್ರಭಾಗವು ಮೂರು ಹಂತದಲ್ಲಿ ಮುಂದೆ ಸರಿದಿದೆ. ಕರ್ಣ, ಭದ್ರಗಳ ಮಧ್ಯದಲ್ಲಿ ಹಿಂಜರಿತ ಏರ್ಪಟ್ಟಿದೆ. ಅಧಿಷ್ಠಾನದ ಮೇಲಿನ ಭಿತ್ತಿ ಭಾಗ, ಪ್ರಸ್ತರ, ಶಿಖರ ಭಾಗಗಳು ದುರಸ್ತಿಗೊಂಡು ಆಧುನಿಕ ರೀತಿಯಲ್ಲಿ ರಚನೆಗೊಂಡಿವೆ (ಛಾಯಾಚಿತ್ರ-೫೧). ಅಕ್ಕಪಕ್ಕದ ಗರ್ಭಗೃಹಗಳ ಭಿತ್ತಿಯೂ ದುರಸ್ತಿಗೊಂಡಿವೆ. ಇವುಗಳ ಮೇಲೆ ಶಿಖರ ಭಾಗವು ಕಂಡುಬರುವುದಿಲ್ಲ.

**ತಿರ್ಯಙ್ಮುಖ ರಚನೆಗಳು :** ಮುಖ್ಯ ಗರ್ಭಗೃಹವು ಪೂರ್ವಾಭಿಮುಖವಾಗಿದ್ದು ೮x೮ ಅಡಿ ವಿಸ್ತೀರ್ಣವಾಗಿದೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಗರ್ಭಗೃಹವು ಸ್ವಯಂಭೂ ಲಿಂಗವನ್ನು ಹೊಂದಿದೆ(ನೆಲದ ಮಟ್ಟದಲ್ಲಿ ಪೀಠ). ಇದರ ಬಾಗಿಲುವಾಡವು ಪಂಚ ಶಾಖೆಗಳಿಂದ ಕೂಡಿದೆ. ಮಧ್ಯದ ಸ್ತಂಭ ಶಾಖೆಯು ಎಲ್ಲ ಶಾಖೆ ಗಳಿಗಿಂತ ಹೆಚ್ಚು ಮುಂಚಾಚಿದೆ. ಅಲಂಕಾರ ರಹಿತವಾದ ಅಕ್ಕಪಕ್ಕದ ಶಾಖೆಗಳು ಕ್ರಮವಾಗಿ ಹಿಂದೆ ಸರಿದಿವೆ. ಮೊದಲ ಎರಡು ಶಾಖೆಗಳು ಲಲಾಟದಲ್ಲಿಯೂ ಮುಂದುವರೆದಿವೆ. ಲಲಾಟಫಲಕದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಗರ್ಭಗೃಹದ ಮುಂದಿನ ರಚನೆಯಾದ ಅರ್ಧಮಂಟಪವು ಗಾತ್ರದಲ್ಲಿ ಗರ್ಭಗೃಹಕ್ಕಿಂತ ಚಿಕ್ಕದಾಗಿದೆ. ಪೂರ್ವ-ಪಶ್ಚಿಮ, ಉತ್ತರ-ದಕ್ಷಿಣ ೫x೮ ಅಡಿ ವಿಸ್ತೀರ್ಣದಲ್ಲಿದೆ. ಇದರ ಬಾಗಿಲುವಾಡವು ಅರ್ಧಅಡಿ ಎತ್ತರದ ಮೂರು ಮುಂಚಾಚುಗಳನ್ನು ಹೊಂದಿದ ಹೊಸ್ತಿಲ ಮೇಲೆ ತೆಳುವಾದ ಮೂರು ಶಾಖೆಗಳನ್ನು ಹೊಂದಿದೆ. ಮೂರೂ ಶಾಖೆಗಳು ಲಲಾಟದಲ್ಲಿ ಮುಂದುವರೆದಿವೆ. ಲಲಾಟಫಲಕದಲ್ಲಿ ಸಣ್ಣ ಗಾತ್ರದ ಗಜಲಕ್ಷ್ಮಿಯ ಉಬ್ಬುಶಿಲ್ಪವು ಅದರ ಮೇಲಿನ ಪಟ್ಟಿಕೆಯ ಭಾಗದಲ್ಲಿ ಸಣ್ಣ ನಂದಿ ಶಿಲ್ಪವನ್ನು ಕೊರೆಯಲಾಗಿದೆ. ಬಾಗಿಲುವಾಡದ ಇಕ್ಕೆಲಗಳಲ್ಲಿ ಆರು ಅಡಿ ಎತ್ತರದ ಜಾಲಂದ್ರಗಳನ್ನು ಅಳವಡಿಸಲಾಗಿದೆ. ಈ ಜಾಲಂದ್ರಗಳು ಮೂರು ಲಂಬ ಪಟ್ಟಿಗಳನ್ನು ಹನ್ನೆರಡು ಅಡ್ಡಪಟ್ಟಿಗಳನ್ನು ಹೊಂದಿದ್ದು ಮಧ್ಯದಲ್ಲಿ ಪುಷ್ಪಗಳ ಅಲಂಕರಣವಿದೆ. ಉತ್ತರಾಂಗದಲ್ಲಿ ಮಕರತೋರಣದ ಅಡಿಯಲ್ಲಿ ಗಣಪತಿ, ಚತುರ್ಮುಖ ಬ್ರಹ್ಮ, ಶಿವ, ವಿಷ್ಣು ಮತ್ತು ಮಹಿಷಮರ್ದಿನಿಯರ ಉಬ್ಬುಶಿಲ್ಪಗಳನ್ನು ಬಿಡಿಸಲಾಗಿದೆ. ಮಕರಗಳು ಸವಾರರನ್ನು ಹೊತ್ತಿವೆ(ಛಾಯಾಚಿತ್ರ-೫೨).

ಅಕ್ಕಪಕ್ಕದ ಗರ್ಭಗೃಹಗಳು ಉತ್ತರ ದಕ್ಷಿಣಾಭಿಮುಖವಾಗಿವೆ. ವಿಸ್ತೀರ್ಣದಲ್ಲಿ ಮುಖ್ಯ ಗರ್ಭಗೃಹದಷ್ಟೇ ಇವೆ. ಛತ್ತಿನಲ್ಲಿ ಕಮಲದ ಅಲಂಕರಣವನ್ನು ಹೊಂದಿವೆ. ಈ ಗರ್ಭಗೃಹಗಳು ದುರಸ್ತಿ ಕಾರ್ಯದಲ್ಲಿ ಬಹಳಷ್ಟು ಬದಲಾವಣೆಯನ್ನು ಕಂಡಿವೆ. ಉತ್ತರ ಗರ್ಭಗೃಹವು ನಾಲ್ಕು ಅಡಿ ಎತ್ತರದ ವಿಷ್ಣುಶಿಲ್ಪವನ್ನು ಹೊಂದಿದ್ದರೆ ದಕ್ಷಿಣ ಗರ್ಭಗೃಹವು ನಾಲ್ಕು ಅಡಿ ಎತ್ತರದ ಚತುರ್ಮುಖ ಬ್ರಹ್ಮನ ಶಿಲ್ಪವನ್ನು ಹೊಂದಿವೆ. ಈ ಶಿಲ್ಪಗಳು ಇತ್ತೀಚಿನವು. ಈ ಸ್ಥಳದಲ್ಲಿ ಇದ್ದ ಪ್ರಾಚೀನ ವಿಷ್ಣುಶಿಲ್ಪ ಮತ್ತು ಬ್ರಹ್ಮಶಿಲ್ಪಗಳು ಧಾರವಾಡದ ಕನ್ನಡ

ಸಂಶೋಧನಾ ಸಂಸ್ಥೆಯಲ್ಲಿವೆ. ಪ್ರಾಚೀನ ವಿಷ್ಣುಶಿಲ್ಪದ ಪೀಠದ ಮೇಲೆ ದಾಸೋಜ ಶಿಲ್ಪಿಯ ಹೆಸರನ್ನು ಬರೆಯಲಾಗಿದೆ. ಈ ಎರಡೂ ಗೃಹಗಳ ದ್ವಾರಬಂಧವು ಪಂಚಶಾಖೆಗಳಿಂದ ಕೂಡಿವೆ. ಮೂರನೆಯ ಸ್ತಂಭಶಾಖೆ ಮತ್ತು ಕೊನೆಯ ಪಟ್ಟಿ ಶಾಖೆಗಳು ಹೆಚ್ಚು ಮುಂಚಾಚಿದ್ದು ಅಲಂಕಾರರಹಿತವಾದ ಉಳಿದ ಶಾಖೆಗಳು ಕ್ರಮವಾಗಿ ಹಿಂದೆ ಸರಿದಿವೆ. ಮೊದಲ ಎರಡು ಶಾಖೆಗಳು ಮತ್ತು ನಾಲ್ಕನೆಯ ಶಾಖೆಯು ಲಲಾಟದಲ್ಲಿಯೂ ಮುಂದುವರೆದಿವೆ. ಮೂರು ಹಂತದಲ್ಲಿ ರಚನೆಗೊಂಡ ಲಲಾಟಫಲಕದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಎರಡು ಗರ್ಭಗೃಹಗಳು ತೆರೆದ ಅರ್ಧಮಂಟಪ ರಚನೆಯನ್ನು ಹೊಂದಿವೆ. ಅರ್ಧಮಂಟಪಗಳು ವಿಸ್ತೀರ್ಣದಲ್ಲಿ ಗರ್ಭಗೃಹವನ್ನು ಹೋಲುತ್ತವೆ.

ಮೂರೂ ದಿಕ್ಕಿನ ವಾಸ್ತು ರಚನೆಗಳನ್ನು ಒಂದೆಡೆ ಸೇರಿಸುವ ನವರಂಗವು ೧೮.೧೦ x ೧೮.೧೦ ಅಡಿ ವಿಸ್ತಾರವಾಗಿದೆ. ನವರಂಗವು ಮಧ್ಯದಲ್ಲಿ ಚೌಕಾಕಾರದ ವೇದಿಕೆಯನ್ನು ಮತ್ತು ಅದರ ಮೇಲೆ ವೃತ್ತಾಕಾರದ ಇನ್ನೊಂದು ವೇದಿಕೆಯನ್ನು ಹೊಂದಿರುವುದು ಈ ದೇವಾಲಯದ ವಿಶೇಷವಾಗಿದೆ. ಚೌಕಾಕಾರದ ವೇದಿಕೆಯ ತುದಿಯಲ್ಲಿ ಚೌಕಾಕಾರದ ಕಂಬಗಳಿವೆ. ಈ ನಾಲ್ಕೂ ಕಂಬಗಳ ಒಳ ಮೂಲೆಯನ್ನು ಸ್ಪರ್ಶಿಸಿಕೊಂಡು ವೃತ್ತಾಕಾರದ ವೇದಿಕೆಯು ರಚನೆಗೊಂಡಿದೆ. ನವರಂಗದ ನಾಲ್ಕು ಮಧ್ಯ ಕಂಬಗಳು ತಿರುಗಣಿ ಯಂತ್ರದ ರಚನೆಗಳಾಗಿವೆ. ಪೀಠಭಾಗವು ಚೌಕಾಕಾರದಲ್ಲಿದ್ದು ಪಾದಭಾಗವು ಆಯತಾಕಾರದ ಪೆಟ್ಟಿಗೆಯ ರಚನೆಯಂತಿದೆ. ದಂಡಭಾಗದಲ್ಲಿ ಬಳೆಗಳ ಅಲಂಕರಣ, ಘಂಟಾ ಭಾಗಗಳಿವೆ. ಘಂಟಾ ಭಾಗದಲ್ಲಿ ಅಧೋಮುಖ ಎಲೆಗಳ ಅಲಂಕರಣವಿದೆ. ದಂಡಾಗ್ರದಲ್ಲಿ ಕಳಶ, ಘಟ, ಮಂಡಿ, ಫಲಕ ರಚನೆಗಳಿದ್ದು ಮೇಲೆ ತ್ರಿಕೋನ ಮಾದರಿಯ ಚತುರ್ಮುಖ ಬೋದಿಗೆ ಇದೆ. ನವರಂಗದ ಮಧ್ಯ ಕಂಬಗಳು ಭಿತ್ತಿ ಕಂಬಗಳು ಒಂದು ಅಡಿ ದಪ್ಪ ಅಗಲದ ತೊಲೆಗಳಿಂದ ಜೋಡಣೆಗೊಂಡಿವೆ. ಮಧ್ಯದ ವಿತಾನದಲ್ಲಿ ಕಮಲದ ಅಲಂಕರಣವಿದೆ. ನವರಂಗ ಭಿತ್ತಿಯನ್ನು ಇತ್ತೀಚೆಗೆ ದುರಸ್ತಿಗೊಳಿಸಲಾಗಿದೆ.

ನವರಂಗದ ಪೂರ್ವಕ್ಕೆ ೮x೩೦ ಅಡಿ ಉದ್ದನೆಯ ಮುಖಮಂಟಪ ಇರುವುದು ಇಲ್ಲಿಯ ಇನ್ನೊಂದು ವಿಶೇಷ. ಇದರ ಭಿತ್ತಿ ದ್ವಾರಗಳು ಆಧುನಿಕ ರೀತಿಯಲ್ಲಿವೆ. ದೇವಾಲಯದ ಅಂಗಳದಲ್ಲಿ ಶಂಖ, ಪದ್ಮಗಳನ್ನು ಒಳಗೊಂಡ ಸುಂದರವಾದ ಚಂದ್ರಶಿಲಾ ಫಲಕವು ಇದೆ. ಬಹುಶಃ ಇದು ಮುಖ್ಯ ಗೃಹದ ಅರ್ಧಮಂಟಪಕ್ಕೆ ಸೇರಿದ್ದಾಗಿರಬಹುದು.

ನ್ಯಾಯದರ್ಶನದ ಗುಂಪಿಗೆ ಸೇರಿದ ದೇವಾಲಯಗಳಲ್ಲಿ ಗರ್ಭಗೃಹಗಳ ಬಾಗಿಲುವಾಡದ ಉತ್ತರಾಂಗದಲ್ಲಿ ತ್ರಿಮೂರ್ತಿಗಳ ಶಿಲ್ಪಗಳನ್ನು ಮತ್ತು ಗರ್ಭಗೃಹಗಳಲ್ಲಿ ಸ್ವಯಂಭೂ ಲಿಂಗವನ್ನು ಕಾಣುವುದಿಲ್ಲ. ಇದೇ ನ್ಯಾಯದರ್ಶನ ದೇವಾಲಯಗಳ ಪ್ರತ್ಯೇಕತೆ. ಆದರೆ ಮತ್ತಿಹಳ್ಳಿಯ ಈ ದೇವಾಲಯದಲ್ಲಿ ಮುಖ್ಯಗರ್ಭಗೃಹದ ಅರ್ಧಮಂಟಪದ ಬಾಗಿಲುವಾಡದ ಉತ್ತರಾಂಗದಲ್ಲಿ ತ್ರಿಮೂರ್ತಿಗಳ ಉಬ್ಬುಶಿಲ್ಪವನ್ನು ಕಾಣುತ್ತೇವೆ. ಮತ್ತು ಮುಖ್ಯ ಗರ್ಭಗೃಹದಲ್ಲಿ ಸ್ವಯಂಭೂ ಲಿಂಗವನ್ನು ಕಾಣುತ್ತೇವೆ. ಈ ಆಧಾರದ ಮೇಲಿಂದ ಸ್ವಯಂಭೂ ಸೋಮೇಶ್ವರ ದೇವಾಲಯವು ಮೊದಲು ಏಕಕೂಟವಾಗಿದ್ದು ನಂತರದಲ್ಲಿ ತ್ರಿಕೂಟವಾಗಿ ಮಾರ್ಪಟ್ಟಿದೆ ಎಂದು ಹೇಳಬಹುದು.

ಪಟ್ಟಿ ೧೬

| ಕ್ರ. ಸಂ. | ಊರು | ದೇವಾಲಯ ಹೆಸರು | ದಾನ ನೀಡಿದವರು | ದಾನ ಸ್ವೀಕರಿಸಿದವರು | ದಾನ ವಿವರ | ಕ್ರಿ.ಶ. | ದಾನದ ವಿನಿಯೋಗ | ದಾನ ನೀಡಿದ ಸಂದರ್ಭ (ಶಾಸನದಲ್ಲಿ ಉಲ್ಲೇಖಿಸಿದಂತೆ) | ಉಲ್ಲೇಖ |
|---|---|---|---|---|---|---|---|---|---|
| ೧. | ಮತ್ತಿಹಳ್ಳಿ | ಮುದಿಯನಪಳ್ಳಿ ಸ್ವಯಂಭೂ ಸೋಮೇಶ್ವರ | ಪೆರ್ಗ್ಗಡೆ ನಾರಣಯ್ಯ | ಚೆಲ್ಲಪಜೀಯರು | ಎರಡು ಪತ್ತ್ರು ಭೂಮಿ ದಾನ | ೧೦೪೪-೬೮ | ದೇವರ ಸ್ನಾನ, ನೈವೇದ್ಯ, ಗಂಧ, ಧೂಪ, ದೀಪಕ್ಕೆ | .... | ಕ. ಇನ್ಸ್. ಸಂ. VI ಶಾ. ಸಂ. ೩೪ |
| ೨. | | ...... | ಮಹಾಪ್ರಧಾನ ದಂಡನಾಯಕ ಉದಯಾದಿತ್ಯ | ........... | ಮೊದಲು ಕೊಟ್ಟ ದಾನದ ಪುನರ್ದತ್ತಿಯೊಂದಿಗೆ ಗದ್ದೆ ದಾನ (ತ್ರುಟಿತ) | ೧೧೮೩ | ದೇವರ ಸ್ನಾನ, ನೈವೇದ್ಯ, ಗಂಧ, ಧೂಪ, ದೀಪಕ್ಕೆ | ಪ್ರಮಾದೀಚ ಸಂವತ್ಸರದ ಶ್ರಾವಣ ಸುದ್ಧ ೧೪ ಆದಿತ್ಯವಾರ ಸಿಂಹ ಸಂಕ್ರಾನ್ತಿಯಪರ್ವ್ವದೊಳ್ | ಅದೇ. |

**ಶಾಸನಗಳಿಂದ ಹೆಚ್ಚಿನ ವಿವರ :** ಕ್ರಿ.ಶ.೧೦೭೩ರ ಎರಡನೇ ಸೋಮೇಶ್ವರನ ಶಾಸನವು ಈ ಊರನ್ನು 'ಮುದಿಯನಪಳ್ಳಿ' ಎಂದು ಉಲ್ಲೇಖಿಸಿದೆ.[೨೮] ಇದೇ ಶಾಸನದಲ್ಲಿ ಬಳ್ಳಿಗಾವೆಯನ್ನು ತನ್ನ ಮುಖ್ಯ ಸ್ಥಳವನ್ನಾಗಿ ಮಾಡಿಕೊಂಡಿದ್ದ ದಂಡನಾಯಕ ಉದಯಾದಿತ್ಯನು ಈ ಮೊದಲು ದಾನವಾಗಿ ಕೊಟ್ಟ ಭೂಮಿಯನ್ನು ಪುನರ್ವೃತ್ತಿಯಾಗಿ ಮಾಡಿಕೊಡುತ್ತಾನೆ. ಕೊಡುವ ಸಂದರ್ಭದಲ್ಲಿ

.... ಬೆರ್ದ್ದಲೆ ಮತ್ತರೊನ್ದು ದೇವರ ಸ್ನಾನ ನೇವೇದ್ಯ ಗಂಧ
ಧೂಪದೀಪಾ.... ನಕ್ಕೆ ನೆಟೆಯದೆನ್ದು ಮತ್ತಮಾ ದೇವರ ನಿ
ದ್ಯಕ್ಕೆ ಸಕವರ್ಷ....

ಈ ಮೊದಲು ಕೊಟ್ಟ ದಾನವು ದೇವರ ಸ್ನಾನ, ನೈವೇದ್ಯ, ಗಂಧ, ಧೂಪ, ದೀಪಕ್ಕೆಂದು ಸಾಲದು ಎಂದು ಇನ್ನಷ್ಟು ಭೂಮಿಯನ್ನು ಸೇರಿಸಿ ದಾನ ಬಿಡುತ್ತಾನೆ.

ಈ ದೇವಾಲಯವು ಮೊದಲು ಏಕಕೂಟವಾಗಿದ್ದು ನಂತರದಲ್ಲಿ ತ್ರಿಕೂಟವಾಗಿ ಮಾರ್ಪಟ್ಟಂತೆ ತೋರುತ್ತದೆ. ಕೆಲವು ವಾಸ್ತುಶಿಲ್ಪ ಲಕ್ಷಣಗಳಿಂದ ಇದನ್ನು ಗುರುತಿಸಬಹುದು. ಮೇಲೆ ಉಲ್ಲೇಖಿಸಿದ ಶಾಸನ ಪಾಠದಿಂದ ದೇವರ ಸಂಖ್ಯೆಯು ಹೆಚ್ಚಾಗಿದ್ದರಿಂದ ಗಂಧ, ಧೂಪ, ದೀಪಕ್ಕೆಂದು ಮೊದಲು ಕೊಟ್ಟ ದಾನದ ಮೊತ್ತವು ಸಾಲದಾಗಿ ಉದಯಾದಿತ್ಯನು ಹೆಚ್ಚಿಗೆ ಭೂದಾನ ಮಾಡಿದನೆಂದು ಊಹಿಸಬಹುದು. ಅಂದರೆ ಮೊದಲನೆ ಸೋಮೇಶ್ವರನ ಕಾಲದಲ್ಲಿ ಸ್ವಯಂಭೂ ಸೋಮೇಶ್ವರ ಏಕಕೂಟ ದೇವಾಲಯವಾಗಿದ್ದು ಎರಡನೇ ಸೋಮೇಶ್ವರನ ಕಾಲದಲ್ಲಿ ಇದು ತ್ರಿಕೂಟವಾಗಿ ಮಾರ್ಪಟ್ಟಿತು ಎಂದು ಸ್ಪಷ್ಟವಾಗುತ್ತದೆ.

| | | |
|---|---|---|
| ಊರು | : | ಮತ್ತೂರು (ತಾ.ಬ್ಯಾಡಗಿ) |
| ಸ್ಥಳ | : | ಲಿಂಗಾಪುರ ರಸ್ತೆ ಎಡಬದಿಗೆ |
| ಹೆಸರು | : | ಕಲ್ಲೇಶ್ವರ |
| ಅಭಿಮುಖ | : | ಪೂರ್ವ |
| ನಿವೇದನೆ | : | ಈಶ್ವರ, ವಿಷ್ಣು |
| ಕಾಲ | : | ಕ್ರಿ.ಶ.ಸು.೧೨ನೇ ಶತಮಾನ |
| ಶೈಲಿ | : | ಕಲ್ಯಾಣ ಚಾಲುಕ್ಯ |
| ಬಳಸಿದ ವಸ್ತು | : | ನೀಲಿ ಛಾಯೆಯ ಕಪ್ಪು ಕಲ್ಲು |

### ದೇವಾಲಯ ವಾಸ್ತುಶೈಲಿ

**ತಳವಿನ್ಯಾಸ :** (ತಳವಿನ್ಯಾಸ ರೇಖಾಚಿತ್ರ-೨೬) ಮೂರು ಗರ್ಭಗೃಹಗಳು, ಒಂದು ಅರ್ಧಮಂಟಪ, ನವರಂಗ, ಪೂರ್ವದಿಕ್ಕಿನಲ್ಲಿ ಪ್ರವೇಶದ್ವಾರ.

**ಊರ್ಧ್ವಮುಖ ರಚನೆ :** ಬ್ಯಾಡಗಿಯಿಂದ ನೈರುತ್ಯಕ್ಕೆ ೧೨ ಕಿ.ಮೀ. ದೂರದಲ್ಲಿರುವ ಈ ದೇವಾಲಯದ ಹೊರಮೈ ಮಣ್ಣಿನಿಂದ ಆವೃತವಾಗಿದೆ.




ತಳವಿನ್ಯಾಸ ರೇಖಾಚಿತ್ರ-೨೬, ಕಲ್ಮೇಶ್ವರ ದೇವಾಲಯ, ಮತ್ತೂರು (ತಾ.ಬ್ಯಾಡಗಿ)
೧. ಗರ್ಭಗೃಹ, ೨. ಅರ್ಧಮಂಟಪ, ೩. ನವರಂಗ

**ತಿರ್ಯಙ್ಮುಖ ರಚನೆಗಳು :** ಪೂರ್ವಾಭಿಮುಖವಾದ ಮುಖ್ಯ ಗರ್ಭಗೃಹವು ೭.೧೦ x ೭.೧೦ ಅಡಿ ವಿಸ್ತಾರದಲ್ಲಿದೆ. ನಾಲ್ಕು ಮೂಲೆ ಕಂಬಗಳ ಮಧ್ಯದಲ್ಲಿನ ಭಿತ್ತಿಯನ್ನು ಅರ್ಧ ಅಡಿ ಅಗಲ ಏಳು ಅಡಿ ಉದ್ದ ಛಪ್ಪಡಿ ಕಲ್ಲುಗಳನ್ನು ಬಳಸಿ ಕಟ್ಟಲಾಗಿದೆ. ಪಶ್ಚಿಮ ಮತ್ತು ಉತ್ತರ ದಿಕ್ಕಿನ ಭಿತ್ತಿಯಲ್ಲಿ ಅರ್ಧಅಡಿ ಮುಂಚಾಚಿದ ಕಲ್ಲು ಫಲಕಗಳಿವೆ. ಛತ್ತಿನಲ್ಲಿ ಸಮತಲದಲ್ಲಿ ಕಮಲದ ಅಲಂಕರಣವಿದೆ. ಈ ಗೃಹವು ಚೌಕಾಕಾರದ ಯೋನಿಪೀಠವನ್ನು ಹೊಂದಿದ ಎರಡು ಅಡಿ ಎತ್ತರದ ಲಿಂಗವನ್ನು ಹೊಂದಿದೆ. ಮುಖ್ಯ ಗೃಹದ ದ್ವಾರಬಂಧವು ಅರ್ಧಅಡಿ ಹೊಸ್ತಿಲ ಮೇಲೆ ತ್ರಿಶಾಖೆಯಿಂದ ಕೂಡಿದೆ. ಮೊದಲ ಎರಡು ಶಾಖೆಗಳು ಲಲಾಟದಲ್ಲಿಯೂ ಇವೆ. ಲಲಾಟಫಲಕದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಇದರ ಮುಂದಿನ ರಚನೆಯಾದ ಅರ್ಧಮಂಟಪವು ವಿಸ್ತೀರ್ಣದಲ್ಲಿ ಗರ್ಭಗೃಹವನ್ನೇ ಹೋಲುತ್ತದೆ. ಈ ಭಾಗದಲ್ಲಿ ಮಸುಕಾದ ಚಂದ್ರಶಿಲಾ ಭಾಗವನ್ನು ಕಾಣಬಹುದು. ಇಲ್ಲಿ ಗರ್ಭಗೃಹಕ್ಕೆ ಎದುರಾಗಿ ನಂದಿಶಿಲ್ಪವನ್ನು ಇಡಲಾಗಿದೆ. ಅರ್ಧಮಂಟಪದ ದ್ವಾರಬಂಧವು ತೆಳುವಾದ ಎರಡು ಶಾಖೆಗಳಿಂದಲೂ ಪ್ರಧಾನವಾದ ಸ್ತಂಭಶಾಖೆಯಿಂದಲೂ ಕೂಡಿದೆ. ಮೊದಲ ಎರಡು ತೆಳು ಶಾಖೆಗಳು ಲಲಾಟದಲ್ಲಿಯೂ ಮುಂದುವರೆದಿವೆ. ಸ್ತಂಭಶಾಖೆಯ ಪಾದಫಲಕದಲ್ಲಿ ಕೀರ್ತಿಮುಖ ತೋರಣದಡಿಯಲ್ಲಿ ತ್ರಿಭಂಗಿಯಲ್ಲಿ ನಿಂತ ದ್ವಾರಪಾಲಕರ ಉಬ್ಬು ಶಿಲ್ಪಗಳಿವೆ. ಉತ್ತರಾಂಗದಲ್ಲಿ ತ್ರಿಮೂರ್ತಿಗಳ ಉಬ್ಬುಶಿಲ್ಪಗಳನ್ನು ಕೊರೆಯಲಾಗಿದೆ. ಬಾಗಿಲುವಾಡವು ಜಾಲಂಧ್ರಗಳನ್ನು ಹೊಂದಿದೆ. ಜಾಲಂಧ್ರಗಳು ಎರಡು ಲಂಬ ಪಟ್ಟಿಕೆಗಳನ್ನು ಎಂಟು ಅಡ್ಡ ಪಟ್ಟಿಕೆಗಳಿಂದ ರಚನೆಗೊಂಡಿವೆ. ಪಟ್ಟಿಕೆಗಳು ಹೆಚ್ಚು ಅಗಲವಾಗಿದ್ದರಿಂದ ಮಧ್ಯದಲ್ಲಿ ವಜ್ರಾಕೃತಿಯಲ್ಲಿ ನಾಲ್ಕು ದಳಗಳ ಅಗಲವಾದ ಪುಷ್ಪಗಳನ್ನು ಕೊರೆಯಲಾಗಿದೆ.

ಅಕ್ಕಪಕ್ಕದ ಗರ್ಭಗೃಹಗಳು ಉತ್ತರ ದಕ್ಷಿಣಾಭಿಮುಖವಾಗಿವೆ. ವಿಸ್ತೀರ್ಣದಲ್ಲಿ ಮುಖ್ಯಗೃಹಕ್ಕಿಂತ ಒಂದು ಅಡಿಯಷ್ಟು ಚಿಕ್ಕದಾಗಿವೆ. ಇವುಗಳ ಭಿತ್ತಿ ರಚನೆಯು ಮುಖ್ಯಗರ್ಭಗೃಹದಂತೆ ಇದೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ದಕ್ಷಿಣ ದಿಕ್ಕಿನ ಗೃಹವು ನೆಲಮಟ್ಟದಿಂದ ಅರ್ಧಅಡಿ ಎತ್ತರದಲ್ಲಿ ಚೌಕಾಕಾರದ ಪೀಠವನ್ನು ಹೊಂದಿದ ಲಿಂಗವನ್ನು ಹೊಂದಿದೆ. ಉತ್ತರದಿಕ್ಕಿನ ಗೃಹವು ಒಂದು ಅಡಿ ಎತ್ತರದ ಪೀಠದ ಮೇಲೆ ನಾಲ್ಕು ಅಡಿ ಎತ್ತರದ ವಿಷ್ಣು ಶಿಲ್ಪವನ್ನು ಹೊಂದಿದೆ. ಈ ಎರಡೂ ಗೃಹಗಳ ಬಾಗಿಲುವಾಡವು ಕಲಾತ್ಮಕವಾದ ಮೂರು ಮುಂಚಾಚುಗಳನ್ನು ಮತ್ತು ಒಳಸರಿದ ಭಾಗಗಳಲ್ಲಿ ಆನೆಯ ಶಿಲ್ಪಗಳನ್ನು ಹೊಂದಿದ ಮುಕ್ಕಾಲು ಅಡಿ ಎತ್ತರದ ಹೊಸ್ತಿಲ ಮೇಲೆ, ಪಟ್ಟಶಾಖೆ, ಸ್ತಂಭಶಾಖೆಗಳಿಂದ ಕೂಡಿದೆ(ಛಾಯಾಚಿತ್ರ-೫೩). ಮೊದಲ ಪಟ್ಟಶಾಖೆಯು ಲಲಾಟದಲ್ಲಿ ಮುಂದುವರೆದಿದೆ. ಲಲಾಟಫಲಕದಲ್ಲಿ ಯಾವ ಶಿಲ್ಪವೂ ಇಲ್ಲ. ಬಾಗಿಲುವಾಡಗಳು ಇಕ್ಕೆಲಗಳಲ್ಲಿ ಜಾಲಂಧ್ರಗಳನ್ನು ಹೊಂದಿವೆ. ಈ ಜಾಲಂಧ್ರಗಳಲ್ಲಿ ಮುಖ್ಯದಂತೆ ವಜ್ರಾಕೃತಿಯಲ್ಲಿ ಪುಷ್ಪಗಳ ಅಲಂಕರಣವನ್ನು ಕೊರೆಯಲಾಗಿದೆ. ಅಕ್ಕಪಕ್ಕದ ಗೃಹಗಳು ಅರ್ಧಮಂಟಪವನ್ನು ಹೊಂದಿರದೆ ನೇರವಾಗಿ ನವರಂಗಕ್ಕೆ ಜೋಡಣೆಗೊಂಡಿವೆ.

ನವರಂಗವು ೧೭.೫ x ೧೭.೫ ಅಡಿ ವಿಸ್ತೀರ್ಣದಲ್ಲಿದ್ದು ಚೌಕಾಕಾರದಲ್ಲಿದೆ. ಮಧ್ಯದಲ್ಲಿಯ ವೇದಿಕೆಯು ಚೌಕ ಮತ್ತು ವೃತ್ತ ಎರಡೂ ಆಕೃತಿಗಳನ್ನು ಅಳವಡಿಸಿಕೊಂಡಿದೆ. ಚೌಕಾಕಾರದ ವೇದಿಕೆಯು, ಮಧ್ಯ ಕಂಬಗಳ ಹೊರಮೂಲೆಗಳನ್ನು ಬಳಸಿಕೊಂಡು ರಚನೆಗೊಂಡರೆ ವೃತ್ತಾಕೃತಿಯು ಮಧ್ಯ ಕಂಬಗಳ ಒಳಮೂಲೆಗಳನ್ನು

ಬಳಸಿಕೊಂಡು ರಚನೆಗೊಂಡಿದೆ. ಮಧ್ಯ ಕಂಬಗಳು ಚೌಕಾಕಾರದ ಪೀಠದ ಮೇಲೆ ಆಯತಾಕಾರದ ಪಾದಭಾಗವನ್ನು ಹೊಂದಿವೆ. ದಂಡ ಭಾಗದಲ್ಲಿ ಷೋಡಶಮುಖ, ಅಷ್ಟಮುಖಗಳ ಅಲಂಕರಣವನ್ನು ಪೆಟ್ಟಿಗೆ ಆಕಾರದ ರಚನೆಗಳನ್ನು ಕಾಣುತ್ತೇವೆ. ದಂಡಾಗ್ರದಲ್ಲಿ ಕಳಶ, ಘಟ, ಮಂಡಿ, ಫಲಕ ಭಾಗಗಳಿವೆ. ಗ್ರೀವದ ಮೇಲೆ ತ್ರಿಕೋನ ಮಾದರಿಯ ಚತುರ್ಮುಖ ಬೋದಿಗೆಗಳಿವೆ. ಬೋದಿಗೆಯಿಂದ ಬೋದಿಗೆಗೆ ಉತ್ತರ ಭಾಗಗಳು ಚಾಚಿಕೊಂಡಿವೆ. ಮಧ್ಯದ ವಿತಾನದಲ್ಲಿ ಸಮತಲದಲ್ಲಿ ಕಮಲದ ಅಲಂಕರಣವನ್ನು ಕಾಣುತ್ತೇವೆ. ನವರಂಗದ ಭಿತ್ತಿಯಲ್ಲಿ ನಾಲ್ಕು ಕೋಷ್ಟಗಳಿವೆ. ಮುಖ್ಯದ ಅಕ್ಕಪಕ್ಕದಲ್ಲಿ, ಉತ್ತರ ದಕ್ಷಿಣಾಭಿಮುಖವಾಗಿ ಒಂದೊಂದು ಕೋಷ್ಟಗಳನ್ನು ಇಡಲಾಗಿದೆ. ಈ ಕೋಷ್ಟಗಳು ಸ್ತಂಭ ಶಾಖೆಯ ಬಾಗಿಲುವಾಡವನ್ನು, ಕಪೋತ ಛತ್ತನ್ನು ಹೊಂದಿವೆ. ಕೋಷ್ಟಗಳಲ್ಲಿ ಗಣಪತಿ, ಮಹಿಷಮರ್ದಿನಿ, ಚಂದ್ರಮೌಳೇಶ್ವರ ಶಿಲ್ಪಗಳನ್ನು ಕಾಣಬಹುದು. ನವರಂಗದ ದ್ವಾರಬಂಧವು ಸಾದಾ ಮಾದರಿಯ ತ್ರಿಶಾಖೆಗಳನ್ನು ಹೊಂದಿದ್ದು ಲಲಾಟಫಲಕದಲ್ಲಿ ಯಾವ ಶಿಲ್ಪವೂ ಇಲ್ಲ.

**ಶಾಸನಗಳಿಂದ ಹೆಚ್ಚಿನ ಮಾಹಿತಿ :** ಗ್ರಾಮದ ವೀರಗಲ್ಲು ಶಾಸನಗಳು ಈ ಗ್ರಾಮವನ್ನು 'ಮತ್ತೂರು' ಎಂದು ಉಲ್ಲೇಖಿಸಿವೆ. ದೇವಾಲಯಕ್ಕೆ ಸಂಬಂಧಪಟ್ಟಂತೆ ಯಾವ ಶಾಸನಗಳೂ ಲಭ್ಯವಿಲ್ಲ.

| | | |
|---|---|---|
| ಊರು | : | ಸಿಡೇನೂರು (ತಾ.ಬ್ಯಾಡಗಿ) |
| ಸ್ಥಳ | : | ಹಂಸಬಾವಿ ರಸ್ತೆ ಎಡಬದಿಗೆ |
| ಹೆಸರು | : | ವೀರಭದ್ರ ದೇವಾಲಯ |
| ಅಭಿಮುಖ | : | ಪೂರ್ವ |
| ನಿವೇದನೆ | : | ಈಶ್ವರ |
| ಕಾಲ | : | ಕ್ರಿ.ಶ.ಸು.೧೨ನೇ ಶತಮಾನ |
| ಶೈಲಿ | : | ಕಲ್ಯಾಣ ಚಾಲುಕ್ಯ |
| ಬಳಸಿದ ವಸ್ತು | : | ನೀಲಿ ಛಾಯೆಯ ಕಪ್ಪು ಕಲ್ಲು |

## ದೇವಾಲಯ ವಾಸ್ತುಶೈಲಿ

**ತಳವಿನ್ಯಾಸ :** (ತಳವಿನ್ಯಾಸ ರೇಖಾಚಿತ್ರ-೨೭) ಮೂರು ಗರ್ಭಗೃಹಗಳು, ಒಂದು ಅರ್ಧಮಂಟಪ, ಗೂಢಮಂಟಪ, ಪೂರ್ವದಿಕ್ಕಿನಲ್ಲಿ ಪ್ರವೇಶದ್ವಾರ.

**ಊರ್ಧ್ವಮುಖ ರಚನೆ :** ಬ್ಯಾಡಗಿಯಿಂದ ನೈರುತ್ಯಕ್ಕೆ ನಾಲ್ಕು ಕಿ.ಮೀ. ದೂರದಲ್ಲಿರುವ ಈ ದೇವಾಲಯದ ಹೊರಮೈ ಮಣ್ಣಿನಿಂದ ಆವೃತವಾಗಿದೆ. ಮುಖ್ಯ ಗರ್ಭಗೃಹದ ಮೇಲ್ಕಟ್ಟಡ ಭಾಗವು ಮಾತ್ರ ಕಂಡು ಬರುತ್ತದೆ(ಛಾಯಾಚಿತ್ರ-೫೪). ಇದು ಕದಂಬನಾಗರ ಶೈಲಿಗೆ ಸೇರಿದ್ದು ಒಂಬತ್ತು ಹಂತಗಳಲ್ಲಿ ಮೇಲೇರುತ್ತ, ಹಂತಹಂತವಾಗಿ ಕಿರಿದಾಗುತ್ತ ಸಾಗಿದೆ. ಚೌಕಾಕಾರದ ಮುಗುಚಿದ ಬೋಗುಣಿ ಆಕಾರದ ಶಿಖರವನ್ನು ಹೊಂದಿದೆ. ಶಿಖರದ ನಾಲ್ಕು ಮುಖಗಳಲ್ಲಿ ಸಣ್ಣ ನಾಸಿಗಳಿವೆ. ಶಿಖರದ ಮೇಲೆ ಸ್ತೂಪಿ ಭಾಗವಿದೆ. ಮೇಲ್ಕಟ್ಟಡದ ಮುಂಭಾಗದಲ್ಲಿ ಶುಕನಾಸಿಯ ರಚನೆ ಇದ್ದು ಅರ್ಧ ಮಣ್ಣಿನಲ್ಲಿ ಮುಚ್ಚಿದೆ. ಇದರ ಮುಖ ಫಲಕದಲ್ಲಿ ಯಾವ ಬಿಂಬವೂ ಇಲ್ಲ.




ತಳವಿನ್ಯಾಸ ರೇಖಾಚಿತ್ರ-೨೭, ಕಲ್ಮೇಶ್ವರ ದೇವಾಲಯ, ಸಿಡೇನೂರು (ತಾ.ಬ್ಯಾಡಗಿ)

೧. ಗರ್ಭಗೃಹ, ೨. ಅರ್ಧಮಂಟಪ, ೩. ನವರಂಗ

**ತಿರ್ಯಙ್ಮುಖ ರಚನೆಗಳು :** ಪೂರ್ವಾಭಿಮುಖವಾದ ಮುಖ್ಯಗರ್ಭಗೃಹವು ವಿಸ್ತೀರ್ಣದಲ್ಲಿ ೬.೪ x ೬.೪ ಅಡಿಯಾಗಿದ್ದು ಚೌಕಾಕಾರದಲ್ಲಿದೆ. ಭಿತ್ತಿಯಲ್ಲಿ ನಾಲ್ಕು ಮೂಲೆ ಕಂಬಗಳ ಮಧ್ಯ ಅರ್ಧ ಅಡಿ ಅಗಲ ಏಳು ಅಡಿ ಉದ್ದದ ಕಲ್ಲು ಚಪ್ಪಡಿಗಳನ್ನು ಉಪಯೋಗಿಸಲಾಗಿದೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಈ ಗೃಹದ ದ್ವಾರಬಂಧವು ತ್ರಿಶಾಖೆಗಳಿಂದ ಕೂಡಿದೆ. ಪಾದಫಲಕವು ಅಗಲವಾಗಿದ್ದು ಅಲಂಕಾರರಹಿತವಾಗಿದೆ. ಹೊಸ್ತಿಲ ಭಾಗದ ಮಧ್ಯದ ಮುಂಚಾಚು ಕಲಾತ್ಮಕವಾಗಿದೆ. ಮಧ್ಯದ ಪಟ್ಟಿ ಶಾಖೆಯು ಲಲಾಟದಲ್ಲಿಯೂ ಮುಂದುವರೆದಿದೆ. ಲಲಾಟಫಲಕದಲ್ಲಿ ಯಾವ ಬಿಂಬವೂ ಇಲ್ಲ. ಈ ಗರ್ಭಗೃಹವು ಚೌಕಾಕಾರದ ಪೀಠವನ್ನು ಹೊಂದಿದ ಎರಡು ಅಡಿ ಎತ್ತರದ ಲಿಂಗವನ್ನು ಹೊಂದಿದೆ. ಮುಂದಿನ ರಚನೆಯಾದ ಅರ್ಧಮಂಟಪವು ವಿಸ್ತೀರ್ಣದಲ್ಲಿ ಮುಖ್ಯದಷ್ಟೇ ಇದೆ. ಛತ್ತಿನಲ್ಲಿ ಸಮತಲದಲ್ಲಿ ಕಮಲದ ಅಲಂಕರಣವಿದೆ. ಗರ್ಭಗೃಹಕ್ಕೆ ಎದುರಾಗಿ ಸಣ್ಣ ಗಾತ್ರದ ನಂದಿಶಿಲ್ಪವನ್ನು ಇಲ್ಲಿ ಕಾಣಬಹುದು. ಅರ್ಧಮಂಟಪದ ಬಾಗಿಲುವಾಡವು ಒಂದು ಪಟ್ಟಿಶಾಖೆಯಿಂದ ಮತ್ತು ಜಾಲಂದ್ರ ಫಲಕಗಳಿಂದ ಕೂಡಿದೆ. ಜಾಲಂದ್ರಗಳು ಮೂರು ಉದ್ದ ಪಟ್ಟಿಕೆಗಳಿಂದ, ಆರು ಅಡ್ಡಪಟ್ಟಿಕೆಗಳಿಂದ ರಚನೆಗೊಂಡು, ಮಧ್ಯದಲ್ಲಿ ಚೌಕಾಕಾರದ ಪುಷ್ಪಗಳನ್ನು ಕೊರೆಯಲಾಗಿದೆ. ಪಾದ ಫಲಕವು ಅಗಲವಾಗಿದ್ದು ಅಲಂಕಾರ ರಹಿತವಾಗಿವೆ. ಲಲಾಟಫಲಕ ಬರಿದಾಗಿದೆ.

ಅಕ್ಕಪಕ್ಕದ ಗರ್ಭಗೃಹಗಳು ಉತ್ತರ ದಕ್ಷಿಣಾಭಿಮುಖವಾಗಿವೆ. ಗಾತ್ರದಲ್ಲಿ ಈ ಗೃಹಗಳು ಮುಖ್ಯ ಗರ್ಭಗೃಹವನ್ನೇ ಹೋಲುತ್ತವೆ. ಭಿತ್ತಿ ರಚನೆಯಲ್ಲಿಯೂ ಮುಖ್ಯಗರ್ಭಗೃಹದಂತೆ ಇದೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ದಕ್ಷಿಣ ದಿಕ್ಕಿನ ಗರ್ಭಗೃಹವು ವೀರಭದ್ರ ಶಿಲ್ಪವನ್ನು ಹೊಂದಿದೆ. ಉತ್ತರ ದಿಕ್ಕಿನ ಗೃಹವು ಖಾಲಿಯಾಗಿದೆ. ಇದರ ಬಾಗಿಲುವಾಡವೂ ಬಿದ್ದಿದೆ. ದಕ್ಷಿಣ ದಿಕ್ಕಿನ ಬಾಗಿಲುವಾಡವು ಕಲಾತ್ಮಕವಾದ ಮೂರು ಮುಂಚಾಚುಗಳನ್ನು ಹೊಂದಿದ ಅರ್ಧಅಡಿ ಎತ್ತರದ ಹೊಸ್ತಿಲ ಮೇಲೆ ಪಂಚಶಾಖೆಗಳಿಂದ ಕೂಡಿದೆ. ಮಧ್ಯದ ಸ್ತಂಭ ಶಾಖೆಯು ಮತ್ತು ಕೊನೆಯ ಪಟ್ಟಿ ಶಾಖೆಯು ಹೆಚ್ಚು ಮುಂಚಾಚಿವೆ. ಅಲಂಕಾರರಹಿತವಾದ ಉಳಿದ ಶಾಖೆಗಳು ಹಂತಹಂತವಾಗಿ ಹಿಂದೆ ಸರಿದಿವೆ. ಸ್ತಂಭ ಶಾಖೆಯನ್ನು ಬಿಟ್ಟು ಉಳಿದ ಎಲ್ಲ ಶಾಖೆಗಳು ಲಲಾಟದಲ್ಲಿ ಮುಂದುವರೆದು ದ್ವಾರದ ಉತ್ತರಾಂಗವನ್ನು ವ್ಯಾಪಿಸಿವೆ. ಮಧ್ಯದ ಲಲಾಟಫಲಕವು ಅರ್ಧಅಡಿ ಮುಂಚಾಚಿದ್ದು ಕೆಳಗಿನಿಂದ ಹಂತಹಂತವಾಗಿ ವಿಕಾಸಗೊಳ್ಳುತ್ತ ಉತ್ತರಾಂಗವನ್ನು ವ್ಯಾಪಿಸಿ ಪ್ರಧಾನವಾಗಿ ಎದ್ದು ಕಾಣುತ್ತದೆ. ಅಕ್ಕಪಕ್ಕದಲ್ಲಿ ಸ್ತಂಭಶಾಖೆಗೆ ಬೋದಿಗೆ ಭಾಗಗಳಿವೆ(ಛಾಯಾಚಿತ್ರ-೫೪). ಅಕ್ಕಪಕ್ಕದ ಎರಡು ಗರ್ಭಗೃಹಗಳು ಅರ್ಧಮಂಟಪವನ್ನು ಹೊಂದಿರದೆ ನೇರವಾಗಿ ಗೂಢಮಂಟಪಕ್ಕೆ ಜೋಡಣೆ ಗೊಂಡಿವೆ.

ಗೂಢಮಂಟಪವು ಆರು ಕಂಬಗಳಿಂದ ಕೂಡಿದ್ದು ಪೂರ್ವ-ಪಶ್ಚಿಮ, ಉತ್ತರ-ದಕ್ಷಿಣದಲ್ಲಿ ೨೪.೮ x ೧೭.೫ ಅಡಿ ವಿಸ್ತೀರ್ಣದಲ್ಲಿ ಆಯತಾಕಾರದ ರಚನೆಯಾಗಿದೆ. ಮಧ್ಯದ ನಾಲ್ಕು ಕಂಬಗಳನ್ನು ಬಳಸಿದಂತೆ ಚೌಕಾಕಾರದ ವೇದಿಕೆ ಇದೆ. ಇಲ್ಲಿಯ ಕಂಬಗಳು ಚೌಕಾಕಾರದ ಪೀಠದ ಮೇಲೆ ಆಯತಾಕಾರದ ಪಾದಭಾಗವನ್ನು ಹೊಂದಿವೆ. ದಂಡಭಾಗದಲ್ಲಿ ಷೋಡಶಮುಖ, ಅಷ್ಟಮುಖ ಪಟ್ಟಿಕೆಗಳನ್ನು ಮತ್ತು ಚೌಕಾಕಾರದ ಪೆಟ್ಟಿಗೆ ರಚನೆಗಳಿವೆ. ದಂಡಾಗ್ರದಲ್ಲಿ ಕಳಶ, ಘಟ, ಮಂಡಿ ಫಲಕಗಳು ಇವೆ. ಗ್ರೀವದ ಮೇಲೆ ತ್ರಿಕೋನ ಮಾದರಿಯ ಚತುರ್ಮುಖ ಬೋದಿಗೆಗಳಿವೆ. ಇವುಗಳ ಮೇಲೆ ಉತ್ತರ ಭಾಗಗಳು ಚಾಚಿಕೊಂಡಿವೆ. ಮಧ್ಯದ ವಿತಾನದಲ್ಲಿ

ಮತ್ತು ಪ್ರವೇಶ ದ್ವಾರದ ಹತ್ತಿರದ ಮೊದಲ ಅಂಕಣದ ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಉಳಿದ ಅಂಕಣಗಳ ಛತ್ತುಗಳು ಅಲಂಕಾರ ರಹಿತವಾಗಿವೆ. ಗೂಢಮಂಟಪದ ಭಿತ್ತಿಯಲ್ಲಿ ಮೂರು ಕೋಷ್ಠಗಳನ್ನು ಕೂಡಿಸಲಾಗಿದೆ. ಗೂಢಮಂಟಪದ ದ್ವಾರಬಂಧವು ಪಂಚಶಾಖೆಗಳಿಂದ ಕೂಡಿದೆ. ಮಧ್ಯದ ಸ್ತಂಭಶಾಖೆಯು ಪ್ರಧಾನವಾಗಿದ್ದು ಹೆಚ್ಚು ಮುಂಚಾಚಿದೆ. ಮೂರು ಮುಂಚಾಚುಗಳನ್ನು ಹೊಂದಿದ ಹೊಸ್ತಿಲ ಭಾಗವು ಕಲಾತ್ಮಕವಾಗಿದೆ. ಸ್ತಂಭಶಾಖೆಯನ್ನು ಬಿಟ್ಟು ಉಳಿದ ಎಲ್ಲ ಶಾಖೆಗಳೂ ಲಲಾಟದಲ್ಲಿ ಮುಂದುವರೆದಿವೆ. ಅರ್ಧಅಡಿ ಮುಂಚಾಚಿದ ಲಲಾಟಫಲಕವು ಕೆಳಗಿನಿಂದ ಹಂತಹಂತವಾಗಿ ವಿಕಾಸಗೊಳ್ಳುತ್ತ ಪ್ರಧಾನವಾಗಿ ಎದ್ದು ಕಾಣುತ್ತದೆ. ಅಕ್ಕಪಕ್ಕದಲ್ಲಿ ಸ್ತಂಭಶಾಖೆಯ ಬೋದಿಗೆ ರಚನೆಗಳಿವೆ(ಛಾಯಾಚಿತ್ರ-೫೪).

**ಶಾಸನಗಳಿಂದ ಹೆಚ್ಚಿನ ಮಾಹಿತಿ :** ಇಲ್ಲಿಯ ವೀರಗಲ್ಲು ಶಾಸನಗಳು ಈ ಗ್ರಾಮವನ್ನು 'ಸಿಡಿಯನೂರು' ಎಂದು ಉಲ್ಲೇಖಿಸಿವೆ. ದೇವಾಲಯಕ್ಕೆ ಸಂಬಂಧಪಟ್ಟಂತೆ ಯಾವ ಶಾಸನಗಳೂ ಲಭ್ಯವಿಲ್ಲ.

| | | |
|---|---|---|
| ಊರು | : | ಹಿರೇಕೋಣತಿ (ತಾ.ಹಿರೇಕೆರೂರು) |
| ಸ್ಥಳ | : | ಊರ ಮಧ್ಯದಲ್ಲಿ ಕೆರೆ ದಂಡೆ ಮೇಲೆ |
| ಹೆಸರು | : | ಕಲ್ಮೇಶ್ವರ |
| ಅಭಿಮುಖ | : | ಪೂರ್ವ |
| ನಿವೇದನೆ | : | ಈಶ್ವರ, ವಿಷ್ಣು |
| ಕಾಲ | : | ಕ್ರಿ.ಶ.ಸು.೧೧-೧೨ನೇ ಶತಮಾನ |
| ಶೈಲಿ | : | ಕಲ್ಯಾಣ ಚಾಲುಕ್ಯ |
| ಬಳಸಿದ ವಸ್ತು | : | ನೀಲಿ ಛಾಯೆಯ ಕಪ್ಪು ಕಲ್ಲು |

## ದೇವಾಲಯ ವಾಸ್ತುಶೈಲಿ

**ತಳವಿನ್ಯಾಸ :** (ತಳವಿನ್ಯಾಸ ರೇಖಾಚಿತ್ರ-೨೮) ದೇವಾಲಯವು ಹಾಳಾಗಿದ್ದರಿಂದ ಈಗ ಎರಡು ಗರ್ಭಗೃಹಗಳು, ಒಂದು ಅರ್ಧಮಂಟಪಗಳನ್ನು ಕಾಣುತ್ತೇವೆ. ನವರಂಗ ಮತ್ತು ಇನ್ನೊಂದು ಗರ್ಭಗೃಹಗಳು ಇದ್ದಿರಬಹುದಾದ ಸ್ಪಷ್ಟ ಅವಶೇಷಗಳನ್ನು ಕಾಣಬಹುದು.

**ಊರ್ಧ್ವಮುಖ ರಚನೆ :** ಹಿರೇಕೆರೂರಿನಿಂದ ನೈರುತ್ಯಕ್ಕೆ ೧೫ ಕಿ.ಮೀ. ದೂರದಲ್ಲಿರುವ ಈ ದೇವಾಲಯವು ಮಣ್ಣಿನಿಂದ ಮುಚ್ಚಿದೆ. ಉತ್ತರ ದಿಕ್ಕಿನ ಗರ್ಭಗೃಹದ ಬಿದ್ದ ಭಾಗದಿಂದ ದೇವಾಲಯ ಭಿತ್ತಿಯನ್ನು ತಿಳಿಯಬಹುದು. ೩x೮ ಅಡಿ ಉದ್ದದ ಕಲ್ಲು ಫಲಕಗಳನ್ನು ಭಿತ್ತಿಯ ಒಳಮುಖದಲ್ಲಿ ಮತ್ತು ಹೊರಮುಖದಲ್ಲಿ ಹೊಂದಿಸಿ ಮಧ್ಯದ ಖಾಲಿ ಸ್ಥಳವನ್ನು ಮಣ್ಣು ಕಲ್ಲುಗಳಿಂದ ತುಂಬಿ ಮೂರು ಅಡಿ ದಪ್ಪವಾಗಿ ರಚಿಸಲಾಗಿದೆ.

**ತಿರ್ಯಙ್ಮುಖ ರಚನೆಗಳು :** ಮುಖ್ಯ ಗರ್ಭಗೃಹವು ಪೂರ್ವಾಭಿಮುಖವಾಗಿದ್ದು ೬.೫ x ೬.೫ ಅಡಿ ವಿಸ್ತೀರ್ಣವನ್ನು ಹೊಂದಿದೆ. ನಾಲ್ಕು ಮೂಲೆ ಕಂಬಗಳ ಮಧ್ಯದಲ್ಲಿ ಮೂರು ಚಪ್ಪಡಿ ಕಲ್ಲುಗಳನ್ನು ಒಂದರ ಮೇಲೊಂದು ಏರಿಸಿ ಭಿತ್ತಿ ರಚನೆಗೊಂಡಿದೆ. ಪಶ್ಚಿಮ ಮತ್ತು ಉತ್ತರ ದಿಕ್ಕಿನ ಭಿತ್ತಿಯಲ್ಲಿ ಅರ್ಧಅಡಿ




ತಳವಿನ್ಯಾಸ ರೇಖಾಚಿತ್ರ-೨೮, ಕಲ್ಮೇಶ್ವರ ದೇವಾಲಯ, ಹಿರೇಕೊಣತಿ (ತಾ.ಹಿರೇಕೆರೂರು)
೧. ಗರ್ಭಗೃಹ, ೨. ಅರ್ಧಮಂಟಪ, ೩. ನವರಂಗ

ಮುಂಚಾಚಿದ ಕಲ್ಲು ಫಲಕಗಳಿವೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಮಧ್ಯದಲ್ಲಿ ಚೌಕಾಕಾರದ ಪೀಠವನ್ನು ಹೊಂದಿದ ಮೂರು ಅಡಿ ಎತ್ತರದ ಲಿಂಗವಿದೆ. ಗರ್ಭಗೃಹದ ದ್ವಾರಬಂಧವು ತೆಳುವಾದ ಹೊಸ್ತಿಲ ಮೇಲ ಮೂರು ಶಾಖೆಗಳನ್ನು ಹೊಂದಿದೆ. ಮೊದಲ ಎರಡು ಶಾಖೆಗಳು ಲಲಾಟದಲ್ಲಿಯೂ ಮುಂದುವರೆದಿವೆ. ಲಲಾಟಫಲಕದಲ್ಲಿ ಯಾವ ಬಿಂಬವೂ ಇಲ್ಲ. ಗರ್ಭಗೃಹದ ಮುಂದಿನ ರಚನೆಯಾಗಿ ಅರ್ಧಮಂಟಪವಿದೆ. ಇದು ಗರ್ಭಗೃಹದಷ್ಟೇ ವಿಸ್ತೀರ್ಣವನ್ನು ಹೊಂದಿದೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಇದರ ಬಾಗಿಲುವಾಡವು ಬಿದ್ದಿದೆ.

ಅಕ್ಕಪಕ್ಕದ ಗರ್ಭಗೃಹಗಳು ಉತ್ತರ ದಕ್ಷಿಣಾಭಿಮುಖವಾಗಿವೆ. ದಕ್ಷಿಣ ದಿಕ್ಕಿನ ಗೃಹವು ಪೂರ್ತಿ ಬಿದ್ದಿದೆ. ಅದರ ತಳವಿನ್ಯಾಸವನ್ನು ಗಮನಿಸಬಹುದು. ಉತ್ತರ ದಿಕ್ಕಿನ ಗೃಹವು ಶಿಥಿಲಾವಸ್ಥೆಯಲ್ಲಿದೆ. ಈ ಗೃಹವು ವಿಸ್ತೀರ್ಣದಲ್ಲಿ ಮುಖ್ಯ ಗರ್ಭಗೃಹಕ್ಕಿಂತ ಚಿಕ್ಕದಾಗಿ ೫x೫ ಅಡಿ ವಿಸ್ತೀರ್ಣದಲ್ಲಿದೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಈ ಗೃಹದಲ್ಲಿ ಗರುಡನ ಉಬ್ಬುಶಿಲ್ಪವನ್ನು ಹೊಂದಿದ ಪೀಠದ ಮೇಲೆ ವೀರಭದ್ರನ ಶಿಲ್ಪವನ್ನು ಇಡಲಾಗಿದೆ. ಇದರ ಬಾಗಿಲುವಾಡವು ಮುಖ್ಯದಂತೆ ತ್ರಿಶಾಖೆಯಿಂದ ಕೂಡಿದ್ದು ಮೊದಲ ಎರಡು ಶಾಖೆಗಳು ಲಲಾಟದಲ್ಲಿ ಮುಂದುವರೆದಿವೆ. ಲಲಾಟಫಲಕದಲ್ಲಿ ಯಾವ ಬಿಂಬವೂ ಇಲ್ಲ. ಮೂರೂ ದಿಕ್ಕಿನ ರಚನೆಗಳನ್ನು ಒಂದೆಡೆ ಸೇರಿಸುವ ನವರಂಗವು ಪೂರ್ತಿ ನೆಲಸಮಗೊಂಡಿದೆ(ಛಾಯಾಚಿತ್ರ-೫೬).

**ಶಾಸನಗಳಿಂದ ಹೆಚ್ಚಿನ ವಿವರ :** ಇಲ್ಲಿಯ ಶಾಸನಗಳು ಈ ಗ್ರಾಮವನ್ನು 'ಕೋಣವತ್ತಿ' ಎಂದು ಉಲ್ಲೇಖಿಸಿವೆ. ಈ ಗ್ರಾಮದಲ್ಲಿ ಪ್ರಾಚೀನ ಅವಶೇಷಗಳು ಚದುರಿದಂತೆ ಕಂಡುಬರುತ್ತವೆ. ಇದೇ ಗ್ರಾಮದ ನಾರಾಯಣಗುಡಿಯ ಗರ್ಭಗೃಹದಲ್ಲಿ ಸಿಂಹಲಾಂಛನ ಇರುವ ಪೀಠದ ಮೇಲೆ ಚಾಲುಕ್ಯಶೈಲಿಯ ಕೇಶವನ ಶಿಲ್ಪವಿದೆ. ಈ ಶಿಲ್ಪವು ತ್ರಿಕೂಟ ದೇವಾಲಯದ ಉತ್ತರ ದಿಕ್ಕಿನ ಗರ್ಭಗೃಹಕ್ಕೆ ಸೇರಿದ್ದಾಗಿರಬೇಕು.

| | | |
|---|---|---|
| ಊರು | : | ಹಿರೇಮಾಗನೂರು (ತಾ.ರಾಣೆಬೆನ್ನೂರು) |
| ಸ್ಥಳ | : | ನದಿ ದಂಡೆ ಮೇಲೆ |
| ಹೆಸರು | : | ಕಲ್ಮೇಶ್ವರ |
| ಅಭಿಮುಖ | : | ಪೂರ್ವ |
| ನಿವೇದನೆ | : | ಈಶ್ವರ, ವಿಷ್ಣು |
| ಕಾಲ | : | ಕ್ರಿ.ಶ.೯೧೬ |
| ಶೈಲಿ | : | ರಾಷ್ಟ್ರಕೂಟ |
| ಬಳಸಿದ ವಸ್ತು | : | ನೀಲಿ ಛಾಯೆಯ ಕಪ್ಪು ಕಲ್ಲು |

## ದೇವಾಲಯ ವಾಸ್ತುಶೈಲಿ

**ತಳವಿನ್ಯಾಸ :** (ತಳವಿನ್ಯಾಸ ರೇಖಾಚಿತ್ರ-೨೯) ಎರಡು ಗರ್ಭಗೃಹಗಳು, ಅರ್ಧಮಂಟಪ, ನವರಂಗ, ಪೂರ್ವದಿಕ್ಕಿನಲ್ಲಿ ಪ್ರವೇಶದ್ವಾರ.




ತಳವಿನ್ಯಾಸ ರೇಖಾಚಿತ್ರ-೨೯, ಕಲ್ಮೇಶ್ವರ ದೇವಾಲಯ, ಹಿರೇಮಾಗನೂರು (ತಾ.ರಾಣೆಬೆನ್ನೂರು)
೧. ಗರ್ಭಗೃಹ, ೨. ಅರ್ಧಮಂಟಪ, ೩. ಗೂಢಮಂಟಪ

**ಊರ್ಧ್ವಮುಖ ರಚನೆ :** ರಾಣೇಬೆನ್ನೂರಿನಿಂದ ದಕ್ಷಿಣಕ್ಕೆ ೧೮ ಕಿ.ಮೀ ದೂರದಲ್ಲಿರುವ ಈ ದೇವಾಲಯದ ಹೊರಭಾಗವನ್ನು ಮಣ್ಣಿನಿಂದ ಮುಚ್ಚಲಾಗಿದೆ.

**ತಿರ್ಯಙ್ಮುಖ ರಚನೆಗಳು :** ರಾಷ್ಟ್ರಕೂಟರ ದೊರೆ ಮೂರನೇ ಇಂದ್ರನ ಕಾಲಕ್ಕೆ ನಿರ್ಮಾಣಗೊಂಡ ಈ ದೇವಾಲಯವು ತ್ರಿಕೋನ ಅಲಂಕರಣವುಳ್ಳ ಗಿಡ್ಡ ಕಂಬಗಳನ್ನು ಮತ್ತು ಗಿಡ್ಡ ಬಾಗಿಲುವಾಡಗಳಂತಹ ರಾಷ್ಟ್ರಕೂಟ ಶೈಲಿಗಳನ್ನು ಅಳವಡಿಸಿಕೊಂಡಿದೆ. ಮುಖ್ಯ ಗರ್ಭಗೃಹವು ಪೂರ್ವಾಭಿಮುಖವಾಗಿದ್ದು ೫.೧೦ x ೫.೧೦ ಅಡಿ ವಿಸ್ತೀರ್ಣದಲ್ಲಿದೆ. ನಾಲ್ಕು ಮೂಲೆ ಕಂಬಗಳ ಮಧ್ಯದಲ್ಲಿ ರಚನೆಯಾದ ಭಿತ್ತಿಯನ್ನು ಅರ್ಧ ಅಡಿ ಅಗಲ ಮೂರು ಅಥವಾ ಐದು ಅಡಿ ಉದ್ದದ ಕಲ್ಲು ಚಪ್ಪಡಿಗಳನ್ನು ಬಳಸಿ ಕಟ್ಟಲಾಗಿದೆ. ಪಶ್ಚಿಮ ಮತ್ತು ಉತ್ತರ ದಿಕ್ಕಿನ ಭಿತ್ತಿಯಲ್ಲಿ ಅರ್ಧ ಅಡಿ ಮುಂಚಾಚಿದ ಕಲ್ಲು ಫಲಕಗಳನ್ನು ಕಾಣುತ್ತೇವೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಗರ್ಭಗೃಹದ ಮಧ್ಯದಲ್ಲಿ ೨.೪ ಅಡಿ ಎತ್ತರದ ಚೌಕಾಕಾರದ ಪೀಠವನ್ನು ಹೊಂದಿದ ಲಿಂಗವಿದೆ. ಗರ್ಭಗೃಹದ ಬಾಗಿಲುವಾಡವು ನಾಲ್ಕು ಅಡಿಯಷ್ಟಿದ್ದು ಗಿಡ್ಡದಾಗಿವೆ. ತ್ರಿಶಾಖೆಗಳಿಂದ ಕೂಡಿದ್ದು ಮೊದಲ ಎರಡು ಶಾಖೆಗಳು ಲಲಾಟದಲ್ಲಿಯೂ ಮುಂದುವರೆದಿವೆ. ಲಲಾಟಫಲಕದಲ್ಲಿ ಯಾವ ಬಿಂಬವೂ ಇಲ್ಲ. ಅರ್ಧಮಂಟಪವು ಗಾತ್ರದಲ್ಲಿ ಗರ್ಭಗೃಹಕ್ಕಿಂತ ಪೂರ್ವ-ಪಶ್ಚಿಮವಾಗಿ ಎರಡು ಅಡಿ ದೊಡ್ಡದಾಗಿದೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಇದರ ಬಾಗಿಲುವಾಡವು ತೆಳುವಾದ ಎರಡು ಶಾಖೆಗಳಿಂದಲೂ ಜಾಲಂದ್ರಗಳಿಂದಲೂ ಕೂಡಿದೆ. ಮೊದಲ ಎರಡು ಶಾಖೆಗಳು ಲಾಲಟದಲ್ಲಿಯೂ ಮುಂದು ವರೆದಿವೆ. ಲಲಾಟಫಲಕದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಬಾಗಿಲುವಾಡದ ಅಕ್ಕಪಕ್ಕದಲ್ಲಿ ಜಾಲಂದ್ರ ಗಳಿದ್ದು, ಮೂರು ಲಂಬ ಪಟ್ಟಿಕೆಗಳು ಎಂಟು ಅಡ್ಡಪಟ್ಟಿಕೆಗಳಿಂದ ರಚನೆಗೊಂಡಿವೆ. ಮಧ್ಯದಲ್ಲಿ ಚೌಕಾಕಾರದ ಪುಷ್ಪಗಳ ಕೆತ್ತನೆ ಇದೆ. ಜಾಲಂದ್ರಗಳ ಪಾದಫಲಕವು ಅಲಂಕಾರ ರಹಿತವಾಗಿದೆ.

ಅಕ್ಕಪಕ್ಕದ ಗರ್ಭಗೃಹಗಳಲ್ಲಿ ದಕ್ಷಿಣ ದಿಕ್ಕಿನ ಗೃಹವನ್ನು ದುರಸ್ತಿಕಾರ್ಯದಲ್ಲಿ ಕೈಬಿಟ್ಟಂತೆ ಕಾಣುತ್ತದೆ. ಉತ್ತರದಿಕ್ಕಿನ ಗರ್ಭಗೃಹವು ವಿಸ್ತೀರ್ಣದಲ್ಲಿ ಮತ್ತು ಭಿತ್ತಿ ರಚನೆಯಲ್ಲಿಯೂ ಮುಖ್ಯಗರ್ಭಗೃಹವನ್ನೇ ಹೋಲುತ್ತದೆ. ಈ ಗೃಹವು ಗರುಡ ಲಾಂಛನವಿರುವ ಪೀಠವನ್ನು ಹೊಂದಿದ್ದು ಈಗ ಅದರ ಮೇಲೆ ಲಿಂಗದ ರುದ್ರಭಾಗವನ್ನು ಇಡಲಾಗಿದೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಈ ಗರ್ಭಗೃಹದ ಬಾಗಿಲುವಾಡವು ಅರ್ಧ ಅಡಿ ಎತ್ತರದ ಹೊಸ್ತಿಲ ಮೇಲೆ ಪಂಚಶಾಖೆಗಳಿಂದ ಕೂಡಿದೆ. ಮಧ್ಯದ ಸ್ತಂಭಶಾಖೆ ಮತ್ತು ಕೊನೆಯ ಪಟ್ಟಶಾಖೆಯು ಎಲ್ಲ ಶಾಖೆಗಳಿಗಿಂತ ಹೆಚ್ಚು ಮುಂಚಾಚಿವೆ. ಉಳಿದ ಶಾಖೆಗಳು ಕ್ರಮವಾಗಿ ಹಿಂದೆ ಸರಿದಿವೆ. ಮೊದಲ ಎರಡು ಶಾಖೆಗಳು ಲಲಾಟದಲ್ಲಿ ಮುಂದುವರೆದಿವೆ. ಲಲಾಟಫಲಕದಲ್ಲಿ ಯಾವ ಬಿಂಬವೂ ಇಲ್ಲ.

ಮಧ್ಯದ ಗೂಢಮಂಟಪವು ಮೂರು ಜೊತೆ ಕಂಬಗಳಿಂದ ನಿರ್ಮಾಣಗೊಂಡಿದೆ. ೧೬x೧೪ ಅಡಿ ವಿಸ್ತೀರ್ಣದಲ್ಲಿದ್ದು ಆಯತಾಕಾರದಲ್ಲಿದೆ. ಮಧ್ಯದ ನಾಲ್ಕು ಕಂಬಗಳು ರಾಷ್ಟ್ರಕೂಟ ಶೈಲಿಯಲ್ಲಿವೆ (ಛಾಯಾಚಿತ್ರ-೫೭) ಚೌಕಾಕಾರದ ಪೀಠದ ಮೇಲೆ ತ್ರಿಕೋನಾಕೃತಿಯ ರಚನೆಗಳನ್ನು ಹೊಂದಿದ ಪಾದ ಮತ್ತು ದಂಡ ಭಾಗಗಳಿವೆ. ತ್ರಿಕೋನದ ಅಕ್ಕಪಕ್ಕದಲ್ಲಿ ಲಂಬರೇಖೆಗಳಿವೆ. ದಂಡಾಗ್ರದಲ್ಲಿ ಕಳಶ, ಘಟ, ಮಂಡಿ, ಫಲಕ ಭಾಗಗಳನ್ನು ಕಾಣುತ್ತೇವೆ. ಕಂಬದ ಮೇಲೆ ತ್ರಿಕೋನ ಮಾದರಿಯ ಚತುರ್ಮುಖ ಬೋದಿಗೆ ಇದೆ




ರೇಖಾಚಿತ್ರ-೨೫ ಮತ್ತು ೨೬, ಕಲ್ಮೇಶ್ವರ ದೇವಾಲಯದ ನವರಂಗದ ಕಂಬಗಳು, ಹಿರೇಮಾಗನೂರು

(ತಾ.ರಾಣೆಬೆನ್ನೂರು)

೧. ಪೀಠ, ೨. ಪಾದ, ೩. ದಂಡ, ೪ ಘಟ, ೫. ಫಲಕ, ೬. ಬೋದಿಗೆ

(ರೇಖಾಚಿತ್ರ-೨೫). ಪ್ರವೇಶ ದ್ವಾರಕ್ಕೆ ಹತ್ತಿರವಿದ್ದ ಒಂದು ಜೊತೆ ಕಂಬಗಳೂ ಸಹ ರಾಷ್ಟ್ರಕೂಟ ಶೈಲಿಯಲ್ಲಿವೆ. ಚೌಕಾಕಾರದ ಪೀಠದ ಮೇಲೆ ಪಾದಭಾಗವು ಅಲಂಕಾರರಹಿತವಾದ ಆಯತಾಕಾರದ ರಚನೆಯನ್ನು ಹೊಂದಿದೆ. ದಂಡಭಾಗವು ಹದಿನಾರು ಮುಖಗಳಿಂದ ಅಲಂಕೃತಗೊಂಡು ರುದ್ರಕಾಂತಸ್ತಂಭ ಮಾದರಿಗೆ ಸೇರಿವೆ. ದಂಡಾಗ್ರದಲ್ಲಿ ತೆಳುವಾದ ಕಳಶ, ಘಟ, ಮಂಡಿ, ಫಲಕ ರಚನೆಗಳು ಕಂಡುಬರುತ್ತವೆ. ಫಲಕದ ಮೇಲೆ ತ್ರಿಕೋನ ಮಾದರಿಯ ಚತುರ್ಮುಖ ಬೋದಿಗೆಗಳು ಇವೆ(ರೇಖಾಚಿತ್ರ-೨೬). ಮಧ್ಯದ ಆರೂ ಕಂಬಗಳು, ಭಿತ್ತಿಯ ಕಂಬಗಳು ಒಂದು ಅಡಿ ಅಗಲ ದಪ್ಪ ಇವರು ತೊಲೆಗಳಿಂದ ಜೋಡಣೆಗೊಂಡು ಹನ್ನೆರಡು ಅಂಕಣಗಳನ್ನು ಒಳಗೊಂಡಂತೆ ಗೂಢಮಂಟಪವು ರಚನೆಗೊಂಡಿದೆ. ಮಧ್ಯದ ವಿತಾನವನ್ನು ಒಂಬತ್ತು ಭಾಗಗಳನ್ನಾಗಿ ವಿಂಗಡಿಸಲಾಗಿದೆ. ಮಧ್ಯಪಟ್ಟಿಗಳು ಒಂದನ್ನೊಂದು ಸಂಧಿಸಿದ ಚೌಕದಲ್ಲಿ ಹೂವಿನ ಅಲಂಕರಣಗಳಿವೆ. ಪಟ್ಟಿಗಳ ಜೋಡಣೆ ಮರಗೆಲಸದಲ್ಲಿ ಮಾಡಿದಂತೆ ತೋರುತ್ತದೆ. ಮಧ್ಯದ ಚೌಕದಲ್ಲಿ ಅಷ್ಟಭುಜ ನಟರಾಜನ ಶಿಲ್ಪವಿದೆ. ಗಣಪತಿ, ವಾದ್ಯಮೇಳ ಮತ್ತು ಶಿವಗಣಗಳ ಸಣ್ಣಸಣ್ಣ ಉಬ್ಬುಶಿಲ್ಪಗಳನ್ನು ಇಲ್ಲಿ ಕೊರೆಯಲಾಗಿದೆ. ಉಳಿದ ಎಂಟು ಚೌಕಗಳಲ್ಲಿ ಅಷ್ಟದಿಕ್ಪಾಲಕರನ್ನು ಅವರವರ ವಾಹನಗಳೊಂದಿಗೆ ಸಹ ಪತ್ನಿಕರನ್ನಾಗಿ ಕೊರೆಯಲಾಗಿದೆ(ಛಾಯಾಚಿತ್ರ-೫೮). ಗೂಢಮಂಟಪದ ಪಶ್ಚಿಮ ದಿಕ್ಕಿನ ಭಿತ್ತಿಯಲ್ಲಿ ಎರಡು ಕೋಷ್ಟಗಳನ್ನು ಕಾಣಬಹುದು. ಇವುಗಳ ದ್ವಾರಬಂಧವು ಒಂದು ಪಟ್ಟಿಕೆಯಿಂದ ಅಲಂಕೃತಗೊಂಡಿದೆ. ಆ ಪಟ್ಟಿಕೆಯು ಲಲಾಟದಲ್ಲಿಯೂ ಮುಂದುವರೆದಿದೆ. ಕೋಷ್ಟಗಳು ಕದಂಬನಾಗರ ಶೈಲಿಯ ಶಿಖರವನ್ನು ಹೊಂದಿದ್ದವೆಂದು ಕಾಣುತ್ತದೆ. ದುರಸ್ತಿಕಾರ್ಯದಲ್ಲಿ ಭಾಗಶಃ ಶಿಖರಗಳು ಮುಚ್ಚಿವೆ. ವೇದಿಕೆಯ ಮಧ್ಯದಲ್ಲಿ ಮುಖ್ಯಕ್ಕೆ ಎದುರಾಗಿ ನಂದಿ ಶಿಲ್ಪವಿದೆ. ಗೂಢಮಂಟಪ ದ್ವಾರಬಂಧವು ಲಲಾಟಫಲಕದಲ್ಲಿ ಮತ್ತು ದ್ವಾರಶಾಖೆಯ ಕೆಳಫಲಕಗಳಲ್ಲಿ ದೊಡ್ಡ ಗಾತ್ರದ ಅರಳಿದ ಕಮಲಪುಷ್ಪದ ಅಲಂಕರಣವನ್ನು ಹೊಂದಿದೆ.[೨೯೭]

**ಶಾಸನಗಳಿಂದ ಹೆಚ್ಚಿನ ವಿವರ :** ರಾಷ್ಟ್ರಕೂಟ ಮೂರನೇ ಇಂದ್ರನ ಶಾಸನವು ಕ್ರಿ.ಶ.೯೧೬ರ ಕಾಲಮಾನಕ್ಕೆ ಸೇರಿದ್ದಾಗಿದ್ದು, ಈ ಗ್ರಾಮವನ್ನು 'ಮಾಗುನ್ನುರು' ಎಂದು ಉಲ್ಲೇಖಿಸಿದೆ.[೨೯೮] ಇದೇ ಶಾಸನದಲ್ಲಿ ಮಾಗುನ್ನುರ ಗೌಡನು (ಹೆಸರು ತೃಟಿತಗೊಂಡಿದೆ) ಕೆರೆಯೂರು ಹಾಗೂ ತಾಣಗುನ್ನೂರು (ತಾಳಗುಂದ) ಮಹಾಜನರ ಅನುಗ್ರಹದಿಂದ 'ಚಿತ್ರಗೋಸಾಸ ಮಿಳ್ದು', ಎರಡು ಕೆರೆಯ ಕಟ್ಟಿಸಿ, ದೇವಾಲಯ ಕಟ್ಟಿಸಿ ಲಿಂಗ ಪ್ರತಿಷ್ಠಾಪನೆ ಗೈದನೆಂದು ಹೇಳಿದೆ. ಈ ದೇವಾಲಯದ ಆವರಣದಲ್ಲಿ ಒಂಬತ್ತು ಗೋಸಾಸನ ಕಲ್ಲುಗಳಿವೆ.

ಊರು : ಹೊನ್ನತ್ತಿ (ತಾ.ರಾಣೆಬೆನ್ನೂರು)
ಸ್ಥಳ : ಗ್ರಾಮದ ವಾಯವ್ಯಕ್ಕೆ
ಹೆಸರು : ಕಲ್ಮೇಶ್ವರ ದೇವಾಲಯ
ಅಭಿಮುಖ : ಪೂರ್ವ
ನಿವೇದನೆ : ಈಶ್ವರ
ಕಾಲ : ಕ್ರಿ.ಶ.ಸು.೧೧ನೇ ಶತಮಾನ
ಶೈಲಿ : ಕಲ್ಯಾಣಚಾಲುಕ್ಯ
ಬಳಸಿದ ವಸ್ತು : ನೀಲಿ ಛಾಯೆಯ ಕಪ್ಪು ಕಲ್ಲು

**ತಳವಿನ್ಯಾಸ :** (ತಳವಿನ್ಯಾಸ ರೇಖಾಚಿತ್ರ-೩೦) ಮೂರು ಗರ್ಭಗೃಹಗಳು, ಮೂರು ಅರ್ಧಮಂಟಪಗಳು, ನವರಂಗ, ಪೂರ್ವದಿಕ್ಕಿನಲ್ಲಿ ಪ್ರವೇಶದ್ವಾರ.

**ಊರ್ಧ್ವಮುಖ ರಚನೆ :** ದೇವಾಲಯದ ಹೊರಭಾಗವು ಮಣ್ಣಿನಲ್ಲಿ ಮುಚ್ಚಿದೆ.

**ತಿರ್ಯಙ್ಮುಖ ರಚನೆಗಳು :** ಮುಖ್ಯ ಗರ್ಭಗೃಹವು ಪೂರ್ವಾಭಿಮುಖವಾಗಿದೆ. ವಿಸ್ತೀರ್ಣದಲ್ಲಿ ೭x೭ ಅಡಿ ಆಗಿದ್ದು ಚೌಕಾಕಾರವಾಗಿದೆ. ನಾಲ್ಕು ಮೂಲೆ ಕಂಬಗಳೊಂದಿಗೆ ರಚನೆಗೊಂಡ ಭಿತ್ತಿಯನ್ನು ಮುಕ್ಕಾಲು ಅಡಿ ಅಗಲ ಏಳು ಅಡಿ ಉದ್ದದ ಕಲ್ಲು ಚಪ್ಪಡಿಗಳನ್ನು ಬಳಸಿ ರಚಿಸಲಾಗಿದೆ. ಪಶ್ಚಿಮ ಮತ್ತು ಉತ್ತರ ದಿಕ್ಕಿನ ಭಿತ್ತಿಗಳಲ್ಲಿ ಅರ್ಧಅಡಿ ಮುಂಚಾಚಿದ ಕಲ್ಲು ಫಲಕಗಳಿವೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ಈ ಗೃಹವು ನಾಲ್ಕು ಅಡಿ ಎತ್ತರದ ಚೌಕಾಕಾರದ ಪೀಠದಲ್ಲಿ ಲಿಂಗವನ್ನು ಹೊಂದಿದೆ. ದ್ವಾರಬಂಧವು ಅರ್ಧ ಅಡಿ ಎತ್ತರದ ಹೊಸ್ತಿಲ ಮೇಲೆ ಪಂಚಶಾಖೆಗಳಿಂದ ಕೂಡಿದೆ. ಮಧ್ಯಶಾಖೆಯಾದ ಸ್ತಂಭಶಾಖೆಯು ಅಡ್ಡಗೆರೆಗಳಿಂದ ಅಲಂಕೃತಗೊಂಡಿದ್ದು ಎಲ್ಲ ಶಾಖೆಗಳಿಗಿಂತ ಹೆಚ್ಚು ಮುಂಚಾಚಿದೆ. ಅಲಂಕಾರರಹಿತವಾದ ಉಳಿದ ಶಾಖೆಗಳು ಕ್ರಮವಾಗಿ ಒಂದೆ ಸರಿದಿವೆ. ಮೊದಲ ಎರಡು ಶಾಖೆಗಳು ಲಲಾಟದಲ್ಲಿ ಮುಂದುವರೆದಿವೆ. ಲಲಾಟಫಲಕವು ಅರ್ಧಅಡಿ ಮುಂಚಾಚಿದ್ದು ಚೌಕಾಕಾರದ ಪೆಟ್ಟಿಗೆಯಂತಿದೆ. ಗಜಲಕ್ಷ್ಮಿಯ ಉಬ್ಬುಶಿಲ್ಪವನ್ನು ಹೊಂದಿದೆ. ಫಲಕದ ಇಕ್ಕೆಲಗಳಲ್ಲಿ ಅಧೋಮುಖ ಕಮಲಮೊಗ್ಗಿನ ರಚನೆಗಳಿವೆ. ಗರ್ಭಗೃಹದ ಮುಂದಿನ ರಚನೆಯಾದ ಅರ್ಧಮಂಟಪವು ವಿಸ್ತೀರ್ಣದಲ್ಲಿ ಮುಖ್ಯಗರ್ಭಗೃಹದಷ್ಟೇ ಇದೆ. ಇಲ್ಲಿಯ ನಾಲ್ಕು ಮೂಲೆ ಕಂಬಗಳು ಕಲಾತ್ಮಕವಾಗಿರುವುದು ಇಲ್ಲಿಯ ವಿಶೇಷ. ಈ ಕಂಬಗಳು ದಂಡಭಾಗದಲ್ಲಿ ನಿಮ್ನ ಅಲಂಕರಣವನ್ನು ಮತ್ತು ಪೀಠ ಭಾಗದಿಂದ ಬೋದಿಗೆಯವರೆಗೂ ಲಂಬರೇಖೆಗಳ ಅಲಂಕರಣವನ್ನು ಹೊಂದಿದೆ. ಛತ್ತಿನಲ್ಲಿ ಕಮಲವನ್ನು ಬಿಡಿಸಲಾಗಿದೆ. ಅರ್ಧಮಂಟಪದ ಬಾಗಿಲುವಾಡವು, ಕಲಾತ್ಮಕವಾಗಿ ಮೂರು ಮುಂಚಾಚುಗಳನ್ನು ಹೊಂದಿದ ಅರ್ಧಅಡಿ ಎತ್ತರದ ಹೊಸ್ತಿಲ ಮೇಲೆ ಮೂರು ಶಾಖೆಗಳಿಂದ ಕೂಡಿದೆ. ಮೊದಲ ಎರಡು ಶಾಖೆಗಳು ಸೂಕ್ಷ್ಮವಾದ ಕುಸುರಿ ರೇಖೆಗಳನ್ನು ಹೊಂದಿದ್ದು ಲಲಾಟದಲ್ಲಿಯೂ ಮುಂದುವರೆದಿವೆ. ಮೂರನೇ ಶಾಖೆಯು ಸ್ತಂಭಶಾಖೆಯಾಗಿದ್ದು ಹೆಚ್ಚು ಮುಂಚಾಚಿದೆ. ಲಲಾಟದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪ ಮತ್ತು ಅಧೋಮುಖ ಕಮಲಮೊಗ್ಗಿನ ರಚನೆಗಳಿವೆ. ಬಾಗಿಲುವಾಡವು ಇಕ್ಕೆಲಗಳಲ್ಲಿ ಜಾಲಂಧ್ರಗಳನ್ನು ಹೊಂದಿದೆ. ಇವು ಅರ್ಧಅಡಿ ಅಗಲವಾಗಿದ್ದು, ಲತಾ ಸುರುಳಿಗಳಲ್ಲಿ ಸಣ್ಣ ಗಾತ್ರದ ಮನುಷ್ಯ ಶಿಲ್ಪಗಳನ್ನು ಕಂಡರಿಸಲಾಗಿದೆ. ಇವುಗಳ ಪಾದಫಲಕದಲ್ಲಿ ತ್ರಿಭಂಗಿಯಲ್ಲಿ ನಿಂತ ದ್ವಾರಪಾಲಕರ ಉಬ್ಬುಶಿಲ್ಪಗಳಿವೆ. ಬಾಗಿಲುವಾಡದ ಉತ್ತರಾಂಗದಲ್ಲಿ ನಾಗರ ಶೈಲಿಯ ಮೂರು ಕಿರು ಶಿಖರಗಳಿವೆ(ಛಾಯಾಚಿತ್ರ-೫೯).

ಅಕ್ಕಪಕ್ಕದ ಗರ್ಭಗೃಹಗಳು ಉತ್ತರ ದಕ್ಷಿಣಾಭಿಮುಖವಾಗಿದ್ದು ಗಾತ್ರದಲ್ಲಿ ಮುಖ್ಯಗರ್ಭಗೃಹದಷ್ಟೇ ಇವೆ. ಈ ಗೃಹಗಳ ಭಿತ್ತಿಯನ್ನು ನಾಲ್ಕು ಮೂಲೆ ಕಂಬಗಳೊಂದಿಗೆ ೧.೫ x ೭ ಅಡಿ ಉದ್ದ ಅಗಲದ ಕಲ್ಲು ಫಲಕಗಳನ್ನು ಬಳಸಿ ಕಟ್ಟಲಾಗಿದೆ. ಛತ್ತಿನಲ್ಲಿ ಕಮಲದ ಅಲಂಕರಣವಿದೆ. ದಕ್ಷಿಣ ದಿಕ್ಕಿನ ಗೃಹದಲ್ಲಿ ಒಂದು ಅಡಿ ಎತ್ತರದಲ್ಲಿ, ವೃತ್ತಾಕಾರದ ಪೀಠವನ್ನು, ಸಣ್ಣ ಗಾತ್ರದ ರುದ್ರಭಾಗವನ್ನು ಹೊಂದಿದ ಬ್ರಹ್ಮಲಿಂಗವಿದೆ.




ತಳವಿನ್ಯಾಸ ರೇಖಾಚಿತ್ರ-೩೦, ಕಲ್ಮೇಶ್ವರ ದೇವಾಲಯ, ಹೊನ್ನತ್ತಿ (ತಾ.ರಾಣೆಬೆನ್ನೂರು)
೧ ಗರ್ಭಗೃಹ, ೨. ಅರ್ಧಮಂಟಪ, ೩. ನವರಂಗ




ರೇಖಾಚಿತ್ರ-೨೭, ಕಲ್ಮೇಶ್ವರ ದೇವಾಲಯದ ನವರಂಗದ ಕಂಬ, ಹೊನ್ನತ್ತಿ (ತಾ.ರಾಣೆಬೆನ್ನೂರು)
೧. ಪೀಠ, ೨. ಪಾದ, ೩. ದಂಡ, ೪. ಘಟ, ೫. ಫಲಕ, ೬. ಬೋದಿಗೆ

ಉತ್ತರ ದಿಕ್ಕಿನ ಗೃಹದಲ್ಲಿಯೂ ಇದೇ ಗಾತ್ರದ ಲಿಂಗವಿದೆ. ಈ ಗೃಹಗಳ ದ್ವಾರಬಂಧವು ಸಹ ಕಲಾತ್ಮಕವಾದ ಮೂರು ಮುಂಚಾಚುಗಳನ್ನು ಹೊಂದಿವೆ. ಅರ್ಧಅಡಿ ಎತ್ತರದ ಹೊಸ್ತಿಲ ಮೇಲೆ ಪಂಚಶಾಖೆಗಳನ್ನು ಒಳಗೊಂಡಿವೆ. ಮಧ್ಯದ ಸ್ತಂಭಶಾಖೆಯು ಅಲಂಕೃತಗೊಂಡಿದ್ದು ಹೆಚ್ಚು ಮುಂಚಾಚಿದೆ. ಅಲಂಕಾರ ರಹಿತವಾದ ಉಳಿದ ಶಾಖೆಗಳು ಕ್ರಮವಾಗಿ ಹಿಂದೆ ಸರಿದಿವೆ. ಲಲಾಟದಲ್ಲಿ ಮೊದಲ ಎರಡು ಶಾಖೆಗಳು ಮುಂದುವರೆದಿವೆ. ಲಲಾಟಫಲಕದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವನ್ನು ಕಾಣುತ್ತೇವೆ. ಫಲಕದ ಅಕ್ಕಪಕ್ಕದಲ್ಲಿ ಅಧೋಮುಖ ಕಮಲಮೊಗ್ಗಿನ ರಚನೆಗಳಿವೆ. ಈ ಗೃಹಗಳಿಗೆ ಹೊಂದಿಕೊಂಡ ಅರ್ಧಮಂಟಪಗಳು ವಿಸ್ತೀರ್ಣದಲ್ಲಿ ಮುಖ್ಯಗರ್ಭಗೃಹದ ಅರ್ಧಮಂಟಪವನ್ನೇ ಹೋಲುತ್ತವೆ. ಇಲ್ಲಿಯ ಮೂಲೆ ಕಂಬಗಳು ಸಹ ನಿಮ್ನ ರೀತಿಯ ಅಲಂಕರಣವನ್ನು ಪೀಠದಿಂದ ಬೋದಿಗೆಯವರೆಗೂ ಲಂಬರೇಖೆಗಳನ್ನು ಹೊಂದಿವೆ. ಅರ್ಧಮಂಟಪಗಳ ಬಾಗಿಲುವಾಡವು ಸಹ ವಿನ್ಯಾಸದಲ್ಲಿ ಮುಖ್ಯ ಅರ್ಧಮಂಟಪವನ್ನು ಹೋಲುತ್ತವೆ.

ಮೂರೂ ದಿಕ್ಕಿನ ರಚನೆಗಳನ್ನು ಒಂದೆಡೆ ಸೇರಿಸುವ ನವರಂಗವು ೧೬x೧೬ ವಿಸ್ತೀರ್ಣವನ್ನು ಹೊಂದಿದ್ದು ಚೌಕಾಕಾರದಲ್ಲಿದೆ. ಮಧ್ಯದ ಚೌಕಾಕಾರದ ವೇದಿಕೆಯ ತುದಿಗಳಲ್ಲಿ ತಿರುಗುಣಿ ಯಂತ್ರದಿಂದ ತಯಾರಿಸಿದ ನಾಲ್ಕು ಕಂಬಗಳಿವೆ. ಈ ಕಂಬಗಳು ಪೀಠ ಭಾಗದ ನಾಲ್ಕೂ ಮುಖಗಳಲ್ಲಿ ದಂತ ಮಾದರಿಯ ಅಲಂಕರಣವನ್ನು ಹೊಂದಿವೆ. ಪಾದಭಾಗವು ಆಯತಾಕಾರದ ಪೆಟ್ಟಿಗೆಯ ರಚನೆಯಾಗಿದೆ. ದಂಡಭಾಗದಲ್ಲಿ ಬಳೆಗಳನ್ನು, ನಿಮ್ನ ರಚನೆಯನ್ನು ಕೊರೆಯಲಾಗಿದೆ. ದಂಡಾಗ್ರದಲ್ಲಿ ಕಳಶ, ಘಟ, ಮಂಡಿ, ಫಲಕಗಳಿವೆ. ಫಲಕದ ಮೇಲೆ ಚತುರ್ಮುಖ ಬೋದಿಗೆಯನ್ನು ಕಾಣಬಹುದು(ರೇಖಾಚಿತ್ರ-೨೭). ಬೋದಿಗೆಗಳು ಒಂದು ಅಡಿ ಅಗಲ ಒಂದು ಅಡಿ ದಪ್ಪದ ತೊಲೆಗಳನ್ನು ಹೊತ್ತಿವೆ. ಬೋದಿಗೆಯಿಂದ ಬೋದಿಗೆಗೆ ಚಾಚಿಕೊಂಡ ತೊಲೆಗಳ ಮಧ್ಯದಲ್ಲಿ ಮೂರು ಸುತ್ತಿನ ಪುಷ್ಪಾಲಂಕಾರಗಳಿವೆ. ಮಧ್ಯದ ವಿತಾನದಲ್ಲಿ ಹಂತಹಂತವಾಗಿ ಕಮಲದ ಅಲಂಕರಣವಿದೆ. ಉಳಿದ ಅಂಕಣಗಳ ಛತ್ತುಗಳು ಅಲಂಕಾರರಹಿತವಾಗಿವೆ. ನವರಂಗದ ಭಿತ್ತಿಯಲ್ಲಿ ನಾಲ್ಕು ಕೋಷ್ಟಗಳನ್ನು ಕಾಣುತ್ತೇವೆ. ಮುಖ್ಯಅರ್ಧಮಂಟಪದ ಅಕ್ಕಪಕ್ಕದಲ್ಲಿ ಮತ್ತು ಉತ್ತರ ದಕ್ಷಿಣಾಭಿಮುಖವಾಗಿ ಒಂದೊಂದು ಕೋಷ್ಟಗಳನ್ನು ರಚಿಸಲಾಗಿದೆ. ಈ ಕೋಷ್ಟಗಳು ಅಲ್ಪವಿಮಾನದಂತೆ ತೋರುತ್ತವೆ. ದ್ವಾರ ಬಂಧವು ತ್ರಿಶಾಖೆಯಿಂದ ಕೂಡಿದ್ದು ಸ್ತಂಭ ಶಾಖೆಯು ಪ್ರಧಾನವಾಗಿ ಹೆಚ್ಚು ಮುಂಚಾಚಿದೆ. ಲಲಾಟದಲ್ಲಿ ಮೂರುಪಟ್ಟಿಕೆಗಳಿದ್ದು, ಮಧ್ಯದಲ್ಲಿ ಲಲಾಟಫಲಕವಿದೆ. ಇಲ್ಲಿ ಯಾವ ಬಿಂಬವೂ ಇಲ್ಲ(ಛಾಯಾಚಿತ್ರ-೬೦). ದ್ವಾರ ಬಂಧದ ಇಕ್ಕೆಲಗಳಲ್ಲಿ ವಜ್ರಾಕೃತಿಯಲ್ಲಿ ಪುಷ್ಪಗಳನ್ನು ಕೊರೆಯಲಾದ ಪಟ್ಟಿಕೆಗಳಿವೆ. ಮೇಲ್ಕಟ್ಟಡ ದಲ್ಲಿ ಕಪೋತ ಛತ್ತು, ಕಂಟಕಗಳು ಮತ್ತು ಮುಗುಚಿದ ಬೋಗುಣಿ ಆಕಾರದ ಶಿಖರ ಭಾಗಗಳನ್ನು ಸಣ್ಣಸ್ತೂಪಿಯನ್ನು ಕಾಣಬಹುದು. ಆಳವಾದ ಈ ಕೋಷ್ಟಗಳು ಈಗ ಬರಿದಾಗಿವೆ. ವೇದಿಕೆಯ ಮಧ್ಯದಲ್ಲಿ ಮುಖ್ಯಕ್ಕೆ ಎದುರಾಗಿ ಕುಳಿತ ನಂದಿಶಿಲ್ಪವಿದೆ. ಈ ಸ್ಥಳದಲ್ಲಿ ಜೋಡಿ ನಂದಿಗಳಿದ್ದ ಕುರುಹುಗಳಿವೆ. ನವರಂಗದ ದ್ವಾರಬಂಧವು ತ್ರಿಶಾಖೆಗಳಿಂದ ಕೂಡಿದ್ದು ಲಲಾಟದಲ್ಲಿ ಯಾವ ಬಿಂಬವೂ ಇಲ್ಲ.

**ಶಾಸನಗಳಿಂದ ಹೆಚ್ಚಿನ ಮಾಹಿತಿ :** ಇಲ್ಲಿಯ ಶಾಸನಗಳು ಈ ಗ್ರಾಮವನ್ನು 'ಪುನ್ನವನ್ತಿ'[೨೯೯], 'ಹೊನ್ನವರ್ತಿ', 'ಪೊನ್ನವರ್ತಿ' ಎಂದು ಉಲ್ಲೇಖಿಸಿವೆ. ಈ ದೇವಾಲಯಕ್ಕೆ ಸಂಬಂಧಪಟ್ಟಂತೆ ಯಾವ

ಶಾಸನಗಳೂ ಲಭ್ಯವಿಲ್ಲ. ದೇವಾಲಯದ ನವರಂಗದ ಕಂಬ ಒಂದರ ಮೇಲೆ ದೇವನಾಗರಿ ಲಿಪಿಯಲ್ಲಿ ಹರಿಹರರನ್ನು ಸ್ತುತಿಸುವ ಕಿರುಶಾಸನವಿದೆ.

ಈ ಹದಿನಾರು ದೇವಾಲಯಗಳನ್ನು ಗಮನಿಸಿದರೆ ವಾಸ್ತು ಹಿನ್ನೆಲೆಯಲ್ಲಿ ಇಲ್ಲಿಯ ಮೂರು ಗರ್ಭಗೃಹ ಗಳಲ್ಲಿ ಅಕ್ಕಪಕ್ಕದ ಗರ್ಭಗೃಹಗಳು ಅಳತೆಯಲ್ಲಿ ಮುಖ್ಯಗರ್ಭಗೃಹವನ್ನು ಹೋಲುವುದಿಲ್ಲ. ಈ ದೇವಾಲಯಗಳು ವ್ಯಕ್ತಿನಾಮ ಮತ್ತು ತ್ರೈಪುರುಷ ದೇವಾಲಯಗಳಂತೆ ಹೆಚ್ಚಿನ ಸಂಖ್ಯೆಯಲ್ಲಿ ಶಾಸನಗಳನ್ನು ಹೊಂದಿಲ್ಲ. ಹೀಗಾಗಿ ಈ ದೇವಾಲಯಗಳ ಬಗ್ಗೆ ಹೆಚ್ಚಿನ ಮಾಹಿತಿ ದೊರೆಯುವುದಿಲ್ಲ. ಆದರೂ ಈ ದೇವಾಲಯಗಳು ಆಯಾ ಗ್ರಾಮಗಳ ಕೇಂದ್ರಬಿಂದುಗಳಾಗಿದ್ದವು. ಗ್ರಾಮಸ್ಥರನ್ನು ಒಂದೆಡೆ ಸೇರಿಸುವ ಸ್ಥಳಗಳಾಗಿದ್ದವು. ದೇವಾಲಯದಲ್ಲಿ ನಿತ್ಯಪೂಜೆ, ಹಬ್ಬಗಳ ಸಂದರ್ಭಗಳಲ್ಲಿ ವಿಶೇಷ ಪೂಜಾದಿಗಳು ಜರಗುತ್ತಿದ್ದವು. ರಾಣೆಬೆನ್ನೂರು ತಾಲೂಕು ಗುಡ್ಡದಾನವೇರಿ ಗ್ರಾಮದ ಕಲ್ಮೇಶ್ವರ ದೇವಾಲಯ ಶಾಸನವು[೩೦೦] ವಾಸುದೇವ ದಂಡನಾಯಕನು ದೇವರ ಅಂಗಭೋಗ, ರಂಗಭೋಗ, ನಿತ್ಯಪೂಜೆ, ನೈವೇದ್ಯ ನಂದಾದೀವಿಗೆಗೆ ಮತ್ತು ಚೈತ್ರ ಪವಿತ್ರ ಪರ್ವಗಳಿಗಾಗಿ, ಸೋಮೇಶ್ವರ ಪಂಡಿತದೇವರ ಕಾಲಂಕರ್ಚಿ ಭೂದಾನ ಮಾಡಿರುವ ವಿಷಯವನ್ನು ಉಲ್ಲೇಖಿಸುತ್ತದೆ. ಹಾಗೆಯೇ ಮತ್ತಿಹಳ್ಳಿ ಸ್ವಯಂಭೂ ಸೋಮೇಶ್ವರ ದೇವಾಲಯದ ದೇವರ ಸ್ನಾನ, ನೈವೇದ್ಯ, ಗಂಧ, ಧೂಪ, ದೀಪಕ್ಕೆಂದು ಮಹಾಪ್ರಧಾನ ದಂಡನಾಯಕ ಉದಯಾದಿತ್ಯನು ಭೂದಾನ ಮಾಡಿರುವನು.[೩೦೧] ಈ ದೇವಾಲಯಗಳಲ್ಲಿಯ ವಿದ್ಯಾದಾನ ಕಾರ್ಯವು ಹಾಗೂ ಘಟಿಕಾಸ್ಥಾನ ಮತ್ತು ಮಠಗಳಲ್ಲಿ ನಡೆಯುವಂತೆ ಉಚ್ಚಮಟ್ಟದಲ್ಲಿ ನಡೆಯದಿದ್ದರೂ ಗ್ರಾಮದಲ್ಲಿಯ ಪ್ರಾಥಮಿಕ ಮಟ್ಟದ ವಿದ್ಯಾದಾನ ಕಾರ್ಯ ನಡೆಯುತ್ತಿತ್ತು. ಅಂತರವಳ್ಳಿಯ ಕಲ್ಮೇಶ್ವರ ದೇವಾಲಯದಲ್ಲಿ ಮುಖ್ಯಗೃಹದ ಅರ್ಧಮಂಟಪದ ಲಲಾಟಫಲಕದಲ್ಲಿ ಪಾಶ, ಅಂಕುಶ, ಪುಸ್ತಕ, ಮಾಲಾಧಾರಿಯಾದ ಪದ್ಮಾಸನದಲ್ಲಿ ಕುಳಿತ ಸರಸ್ವತಿಯ ಉಬ್ಬುಶಿಲ್ಪವಿರುವುದು ಇಲ್ಲಿ ನಡೆಯುತ್ತಿರುವ ವಿದ್ಯಾದಾನವನ್ನು ಸೂಚಿಸುತ್ತದೆ.

ನ್ಯಾಯದರ್ಶನದ ಹಿನ್ನೆಲೆಯಲ್ಲಿ ರೂಪಗೊಂಡ ಈ ದೇವಾಲಯಗಳು, ನೈಯಾಯಿಕ ದಾರ್ಶನಿಕ ನೋಟವನ್ನು ಬಿಂಬಿಸುತ್ತ ಆಯಾ ಗ್ರಾಮಗಳ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರಬಿಂದುಗಳಾಗಿ ಕಾರ್ಯನಿರ್ವಹಿಸಿದವು ಎಂದು ಹೇಳಬಹುದು. ಇಲ್ಲಿ ಗಮನಿಸಬೇಕಾದ ಒಂದು ಅಂಶವೆಂದರೆ ಈ ಗುಂಪಿಗೆ ಸೇರಿದ ದೇವಾಲಯಗಳ ಹೊರಮೈ ಮಣ್ಣಿನಿಂದ ಆವೃತವಾಗಿವೆ. ಗುಡಗೂರು, ಕುಂಚೂರು, ಕುಡಪಲಿ ದೇವಾಲಯಗಳೂ ಸಹ ಮಣ್ಣಿನಿಂದ ಆವೃತಗೊಂಡಿದ್ದವು. ತೀರ ಇತ್ತೀಚೆಗೆ ಸ್ಥಳೀಯರಿಂದ ಮಣ್ಣು ತೆಗೆಯಲಾಗಿದೆ. ಈ ಭೂಪ್ರದೇಶದ ದೇವಾಲಯಗಳ ಬಗ್ಗೆ ಈಗಾಗಲೇ ಗಮನ ಹರಿಸಿದ ಅ.ಸುಂದರ, ಷಡಕ್ಷರಯ್ಯ ಮತ್ತು ರಾಜಾರಾಮ ಹೆಗಡೆ ಅವರು ಇಲ್ಲಿಯ ಕೆಲವು ದೇವಾಲಯಗಳು ಇಟ್ಟಿಗೆಯನ್ನು ಬಳಸಿ ನಿರ್ಮಾಣಗೊಂಡಿವೆ. ಶಿಖರ ಭಾಗದಲ್ಲೂ ಇಟ್ಟಿಗೆಯನ್ನು ಬಳಸಿರಬೇಕು. ಅವು ಕಾಲ ಕಾಲಕ್ಕೆ ದುರಸ್ತಿಯನ್ನು ಕಾಣದೆ ಶಿಥಿಲಗೊಂಡಾಗ ಹಳ್ಳಿಗರು ದೇವಾಲಯದ ರಕ್ಷಣೆಗೆ ದೇವಾಲಯದ ಹೊರಭಾಗವನ್ನು ಮಣ್ಣಿನಿಂದ ಮುಚ್ಚಿರಬೇಕು ಎಂದು ಅಭಿಪ್ರಾಯಪಡುತ್ತಾರೆ.[೩೦೨] ಇವರುಗಳ ಅಭಿಪ್ರಾಯ ಯೋಗ್ಯವಿದೆ. ಆದರೆ ಇತ್ತೀಚೆಗೆ ಸ್ಥಳೀಯರಿಂದ ಮಣ್ಣುತೆಗೆಯಲ್ಪಟ್ಟ ದೇವಾಲಯಗಳು ಕಲ್ಲಿನಿಂದಲೇ

ನಿರ್ಮಾಣಗೊಂಡಿವೆ ಎಂಬುದು ಗಮನಾರ್ಹ. ಮಳೆ, ಗಾಳಿಗಳಿಂದ ದೇವಾಲಯದ ರಕ್ಷಣೆಯ ಜೊತೆಗೆ, ಅಬ್ಬಲೂರಿನಲ್ಲಿ ಸಂಭವಿಸಿದ ಏಕಾಂತರಾಮಯ್ಯನ ಪವಾಡ, ಶೈವ ಜೈನರ ಹೊಡೆದಾಟ, ಬಸದಿಯನ್ನು ನೆಲಸಮಗೊಳಿಸಿದ ಶೈವರ ಮೇಲುಗೈ ಇವು ಜೈನರನ್ನು ರೊಚ್ಚಿಗೆಬ್ಬಿಸಿರಬೇಕು. ಈ ಉದ್ರಿಕ್ತ ವಾತಾವರಣದಲ್ಲಿ ಹಳ್ಳಿಗರು ತಮ್ಮ ಗ್ರಾಮದಲ್ಲಿಯ ದೇವಾಲಯಗಳನ್ನು ರಕ್ಷಿಸಿಕೊಳ್ಳಲು ಮಣ್ಣಿನಿಂದ ಮುಚ್ಚಿದರು ಎಂದೂ ಊಹಿಸಬಹುದು.

ಈ ದೇವಾಲಯಗಳ ಗರ್ಭಗೃಹಗಳ ಶಿಲ್ಪಗಳತ್ತ ಗಮನಹರಿಸಿದರೆ; ಬಹಳಷ್ಟು ದೇವಾಲಯಗಳಲ್ಲಿ ಉತ್ತರದಿಕ್ಕಿನ ಗೃಹದಲ್ಲಿ ಇರಬೇಕಿದ್ದ ವಿಷ್ಣು ಶಿಲ್ಪವು ಸ್ಥಳಾಂತರಗೊಂಡಿದೆ. ಆ ಸ್ಥಳದಲ್ಲಿ ವೀರಭದ್ರನ ಶಿಲ್ಪವನ್ನು ಕೆಲವು ದೇವಾಲಯಗಳಲ್ಲಿ ಕಾಣುತ್ತೇವೆ. ವಿಷ್ಣು ಶಿಲ್ಪವನ್ನು ನವರಂಗದಲ್ಲಿ ಅಥವಾ ದೇವಾಲಯ ಅಂಗಳದಲ್ಲಿ ಇಡಲಾಗಿದೆ. ಕೆಲವು ಕಡೆ ಗರುಡನ ಉಬ್ಬುಶಿಲ್ಪವಿರುವ ವಿಷ್ಣು ಪೀಠವನ್ನು ಮಾತ್ರ ಕಾಣುತ್ತೇವೆ.

ಇನ್ನು ಕೆಲವು ದೇವಾಲಯಗಳಲ್ಲಿ ವಿಷ್ಣು ಶಿಲ್ಪ ಇರಬೇಕಿದ್ದ ಉತ್ತರದಿಕ್ಕಿನ ಗರ್ಭಗೃಹದಲ್ಲೂ ಲಿಂಗವನ್ನು ಪ್ರತಿಷ್ಠಾಪಿಸಿರುವುದು ಕಂಡುಬರುತ್ತದೆ. ಕುಡುಪಲಿ, ಕಿರಗೇರಿ, ಕಡೂರುಗಳಲ್ಲಿ ಈ ಮಾದರಿಯನ್ನು ಕಾಣಬಹುದು. ಸ್ಥಳೀಯರು ಈ ದೇವಾಲಯಗಳನ್ನು 'ತ್ರಿಕೂಟೇಶ್ವರ' ದೇವಾಲಯ ಎಂದು ಕರೆಯುತ್ತಿರುವುದು ಗಮನಾರ್ಹ ಅಂಶ. ಇಲ್ಲಿ ಪಾಲನ ಕಾರ್ಯವನ್ನು ಮಾಡುವಂತಹ ವಿಷ್ಣುವನ್ನೂ ಸಹ ಲಿಂಗರೂಪದಲ್ಲಿಯೇ ಕಾಣಲಾಗಿದೆ. ಶೈವಪಂಥದ ಪರಮ 'ಪುರುಷ'ನಾದ ಶಿವನೇ ಮೂರು ಕಾರ್ಯಗಳನ್ನು ನಿರ್ವಹಿಸುತ್ತಾನೆ ಎಂಬುದು ಇಲ್ಲಿ ಇನ್ನೂ ಸ್ಪಷ್ಟವಾಗಿ ಗೋಚರಿಸುತ್ತದೆ. ಆಯತಾಕಾರದ ಒಂದೇ ಪಾಣಿಪೀಠದ ಮೇಲೆ ಬ್ರಹ್ಮಲಿಂಗ, ಮಹೇಶ್ವರಲಿಂಗ ಮತ್ತು ವಿಷ್ಣುಲಿಂಗಗಳನ್ನು ಒಳಗೊಂಡ ಗದಗಿನ ತ್ರಿಕೂಟೇಶ್ವರ ದೇವಾಲಯವನ್ನು ಇಲ್ಲಿ ನೆನಪಿಸಿಕೊಳ್ಳಬಹುದು.[೨೦೩] ಗದಗಿನ ತ್ರಿಕೂಟೇಶ್ವರ ದೇವಾಲಯವು ನ್ಯಾಯದರ್ಶನ ದೇವಾಲಯವೂ ಹೌದು ತ್ರೈಪುರುಷ ದೇವಾಲಯವೂ ಹೌದು(ಈಗ ವಿಷ್ಣುಗೃಹ ಕಂಡುಬರುವುದಿಲ್ಲ). ಎಸ್.ಶೆಟ್ಟರ್ ಅವರು ಕರ್ನಾಟಕಕ್ಕೆ ಸಂಬಂಧಪಟ್ಟಂತೆ ಹೊಯ್ಸಳ ವಾಸ್ತುಶಿಲ್ಪದಲ್ಲಿ ತ್ರಿಕೂಟ ಮಾದರಿಯ ದೇವಾಲಯಗಳನ್ನು ವಿವರಿಸುತ್ತ, ಶ್ರೀವೈಷ್ಣವರು ತ್ರಿಕೂಟ ದೇವಾಲಯಗಳ ಮೂರು ಗರ್ಭಗೃಹಗಳಲ್ಲಿ ವಿಷ್ಣುವಿನ ವಿವಿಧ ರೂಪಗಳನ್ನು ಪ್ರತಿಷ್ಠಾಪಿಸಿ ತ್ರಿಕೂಟ ವಿನ್ಯಾಸ ದೇವಾಲಯಗಳನ್ನು ಪ್ರಭಾವ ಪೂರ್ಣವಾಗಿ ಬಳಸಿಕೊಂಡೊತೆ ಶೈವರು ಬಳಸಲಿಲ್ಲ ಎನ್ನುತ್ತಾರೆ.[೨೦೪] ಇಲ್ಲಿ ಶೆಟ್ಟರ್ ಅವರು ಹೊಯ್ಸಳ ವಾಸ್ತು ಶಿಲ್ಪ ಮತ್ತು ಶ್ರೀವೈಷ್ಣವರನ್ನು ಮಾತ್ರ ಗಮನದಲ್ಲಿಟ್ಟುಕೊಂಡು ಹೇಳಿರುವರು. ಅದೇ ಪುಟದಲ್ಲಿ ಅವರು ವರದಾ ಮತ್ತು ವೇದವತಿ ನದಿಗಳ ಮಧ್ಯದ ಭೂಭಾಗದಲ್ಲಿ ಬರುವ ಕಲ್ಯಾಣ ಚಾಲುಕ್ಯ ಶೈಲಿಯ ತ್ರಿಕೂಟ ದೇವಾಲಯಗಳ ಬಗ್ಗೆ ಹೆಚ್ಚಿನ ಅಧ್ಯಯನದ ಅವಶ್ಯಕತೆಯನ್ನು ಸಹ ಸೂಚಿಸಿದ್ದಾರೆ. ಈ ಹಿನ್ನೆಲೆಯಲ್ಲಿ ವರದಾ ಮತ್ತು ತುಂಗಭದ್ರಾ ನದಿಗಳ ಮಧ್ಯದ ಭೂಭಾಗವನ್ನು ಒಳಗೊಂಡ ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳನ್ನು ಅಭ್ಯಸಿಸಿದಾಗ ತ್ರಿಕೂಟ ದೇವಾಲಯಗಳನ್ನು ಶೈವರು ಪ್ರಭಾವಪೂರ್ಣವಾಗಿ ಬಳಸಲಿಲ್ಲ ಎಂಬ ಮಾತನ್ನು ಒಪ್ಪಲಾಗದು. ಶೆಟ್ಟರ್ ಅವರು ತುಂಗಭದ್ರಾ ನದಿಯ ದಕ್ಷಿಣ ಭಾಗದಲ್ಲಿ ಬರುವ ಹೊಯ್ಸಳ ವಾಸ್ತು ಶಿಲ್ಪವನ್ನು ಕುರಿತು ಮೇಲಿನ ಅಭಿಪ್ರಾಯವನ್ನು ಹೇಳಿರುವರು. ಆದರೆ ತುಂಗಭದ್ರೆಯ ಉತ್ತರದ

### ಪಟ್ಟಿ-೧೭ ನ್ಯಾಯದರ್ಶನ ದೇವಾಲಯಗಳು (ವಾಸ್ತು ಹಿನ್ನೆಲೆಯಲ್ಲಿ)

| ಕ್ರ.ಸಂ. | ಊರು | ದೇವಾಲಯ ಹೆಸರು | ಪಶ್ಚಿಮ ದಿಕ್ಕಿನ ಗರ್ಭಗೃಹ (ಅಡಿಗಳಲ್ಲಿ) | ಅರ್ಧಮಂಟಪ (ಅಡಿಗಳಲ್ಲಿ) | ದಕ್ಷಿಣ ದಿಕ್ಕಿನ ಗ.ಗೃ ಗರ್ಭಗೃಹ (ಅಡಿಗಳಲ್ಲಿ) | ಅರ್ಧಮಂಟಪ (ಅಡಿಗಳಲ್ಲಿ) | ಉತ್ತರ ದಿಕ್ಕಿನ ಗ.ಗೃ (ಅಡಿಗಳಲ್ಲಿ) | ಅರ್ಧಮಂಟಪ (ಅಡಿಗಳಲ್ಲಿ) | ನವರಂಗ (ಅಡಿಗಳಲ್ಲಿ) | ಮುಖಮಂಟಪ (ಅಡಿಗಳಲ್ಲಿ) |
|---|---|---|---|---|---|---|---|---|---|---|
| ೧. | ಅಂತರವಳ್ಳಿ | ಕಲ್ಮೇಶ್ವರ | ೮x೮ | ೮x೮ | ೬x೬ | — | ೬x೬ | — | ೧೯x೧೯ | ಇತ್ತೀಚಿನ |
| ೨. | ಅಕ್ಕಿಆಲೂರು | ಕಲ್ಮೇಶ್ವರ | ೮x೬ | ೬x೬ | ೫x೭ | ೫x೭ (ತೆರೆದ) | ೫x೭ | ೫x೭ (ತೆರೆದ) | ೧೪x೧೨ | ೧೯x೭ |
| ೩. | ಆಲದಗೇರಿ | ಕಲ್ಮೇಶ್ವರ | ೬x೬ | ೫x೫ | ೬x೬ | — | ೬x೬ | — | ೧೪x೧೪ | — |
| ೪. | ಕಡೂರು | ಕಲ್ಮೇಶ್ವರ | ೬x೬ | ೫.೫ x ೫.೫ | ೬x೬ | — | ೬x೬ | — | ೧೪x೧೪ | — |
| ೫. | ಕಿರಗೇರಿ | ಕಲ್ಮೇಶ್ವರ | ೬.೯ x ೬.೯ | ೭.೮ x ೭.೮ | ೭.೩ x ೭.೩ | — | ೭.೩ x ೭.೩ | — | ೨೦x೧೫ | — |
| ೬. | ಕುಂಚೂರು | ಕಲ್ಮೇಶ್ವರ | ೫.೮ x ೫.೮ | ೫.೮ x ೫.೮ | ಮುಚ್ಚಲಾಗಿದೆ | — | ೫.೮ x ೫.೮ | — | ೧೪.೯ x೧೪.೯ | — |
| ೭. | ಕುಡುಪಲಿ | ಕಲ್ಮೇಶ್ವರ | ೬.೪ x ೬.೧೦ | ೭ x ೬.೧೦ | ೫x೫ | — | ೫x೫ | — | ೧೩x೧೪ | — |
| ೮. | ಗುಂಡೂರು | ಮೂರು ದೇವರ ಗುಡಿ | ೭.೪ x ೭.೪ | ೭x೭(?) | ೭.೪ x ೭.೪ | ೭x೭ (ತೆರೆದ?) | ೭.೪ x ೭.೪ | ೭x೭ (ತೆರೆದ?) | ಹಾಳಾಗಿದೆ | — |

| ಕ್ರ.ಸಂ. | ಊರು | ದೇವಾಲಯ ಹೆಸರು | ಪಶ್ಚಿಮ ದಿಕ್ಕಿನ ಗರ್ಭಗೃಹ (ಅಡಿಗಳಲ್ಲಿ) | ಅರ್ಧಮಂಟಪ (ಅಡಿಗಳಲ್ಲಿ) | ದಕ್ಷಿಣ ದಿಕ್ಕಿನ ಗ.ಗೃ ಗರ್ಭಗೃಹ (ಅಡಿಗಳಲ್ಲಿ) | ಅರ್ಧಮಂಟಪ (ಅಡಿಗಳಲ್ಲಿ) | ಉತ್ತರ ದಿಕ್ಕಿನ ಗ.ಗೃ (ಅಡಿಗಳಲ್ಲಿ) | ಅರ್ಧಮಂಟಪ (ಅಡಿಗಳಲ್ಲಿ) | ನವರಂಗ (ಅಡಿಗಳಲ್ಲಿ) | ಮುಖಮಂಟಪ (ಅಡಿಗಳಲ್ಲಿ) |
|---|---|---|---|---|---|---|---|---|---|---|
| ೯. | ಗುಡಗೂರು | ಕಲ್ಮೇಶ್ವರ | ೭.೭x೭.೭ | ೮x೮ | ೯x೯ | — | ೯x೯ | — | ೧೫x೧೬ | ೬x೬ |
| ೧೦. | ಗುಡ್ಡದ ಆನವೇರಿ | ಕಲ್ಮೇಶ್ವರ | ೭x೭ | ೬x೬ | ೭x೭ | — | ೭x೭ | — | ೧೫x೧೫ | — |
| ೧೧. | ಮತ್ತಿಹಳ್ಳಿ | ಸೋಮೇಶ್ವರ | ೮x೮ | ೫x೮ | ೮x೮ | ೫x೮ (ತೆರೆದ) | ೮x೮ | ೫x೮ (ತೆರೆದ) | ೧೮x೧೮ | ೮x೩೦ |
| ೧೨. | ಮತ್ತೂರು | ಕಲ್ಮೇಶ್ವರ | ೭x೭ | ೭ x ೭ | ೬x೬ | — | ೬x೬ | — | ೧೭x೧೭ | — |
| ೧೩. | ಸಿಡೇನೂರು | ವೀರಭದ್ರ | ೬.೪ x ೬.೪ | ೬.೪ x ೬.೪ | ೬.೪ x ೬.೪ | — | ೬.೪ x ೬.೪ | — | ೨೪x೧೭ | — |
| ೧೪. | ಹಿರೇಕೋಣತಿ | ಕಲ್ಮೇಶ್ವರ | ೬.೫ x ೬.೫ | ೬.೫ x ೬.೫ | ೫x೫ | — | ೫ x ೫ | — | ಹಾಳಾಗಿದೆ | — |
| ೧೫. | ಹಿರೇಮಾಗನೂರು | ಕಲ್ಮೇಶ್ವರ | ೫.೧೦ x ೫.೧೦ | ೭ x ೫ | — | — | ೫.೧೦x೫.೧೦ | — | ೧೬x೧೪ | — |
| ೧೬. | ಹೊನ್ನತ್ತಿ | ಕಲ್ಮೇಶ್ವರ | ೭ x ೭ | ೭x೭ | ೭ x ೭ | ೭x೭ | ೭ x ೭ | ೭x೭ | ೧೬x೧೬ | — |
| ೧೭. | ನರಸಿಂಹಪುರ | ನರಸಿಂಹ | ೭ x ೭ | ೭x೭ | ೭ x ೭ | — | ೭ x ೭ | — | ೧೫x೧೫ | ೩೦x೪೦ |

ಪಟ್ಟಿ-೧೮ ನ್ಯಾಯದರ್ಶನ ದೇವಾಲಯಗಳು (ಗರ್ಭಗೃಹಗಳಲ್ಲಿಯ ಲಿಂಗ ಹಾಗೂ ಶಿಲ್ಪಗಳ ಆಧಾರದ ಮೇಲೆ)

| ಕ್ರ.ಸಂ. | ಊರು | ದೇವಾಲಯ ಹೆಸರು | ಪಶ್ಚಿಮ ದಿಕ್ಕಿನ ಗರ್ಭಗೃಹ | ದಕ್ಷಿಣ ದಿಕ್ಕಿನ ಗರ್ಭಗೃಹ | ಉತ್ತರ ದಿಕ್ಕಿನ ಗರ್ಭಗೃಹ |
|---|---|---|---|---|---|
| ೧. | ಅಂತರವಳ್ಳಿ | ಕಲ್ಮೇಶ್ವರ | ಚೌಕಾಕಾರ ಪೀಠ ದೊಡ್ಡ ಗಾತ್ರ ರುದ್ರಭಾಗ | ಬರಿದಾಗಿದೆ | ಬರಿದಾಗಿದೆ |
| ೨. | ಅಕ್ಕಿಆಲೂರು | ಕಲ್ಮೇಶ್ವರ | ಚೌಕಾಕಾರ ಪೀಠ ದೊಡ್ಡ ಗಾತ್ರ ರುದ್ರಭಾಗ | ವೃತ್ತಾಕಾರ ಪೀಠ ಸಣ್ಣಗಾತ್ರ ರುದ್ರಭಾಗ | ವಿಷ್ಣುಪೀಠ |
| ೩. | ಆಲದಗೇರಿ | ಕಲ್ಮೇಶ್ವರ | ಚೌಕಾಕಾರ ಪೀಠ ದೊಡ್ಡ ಗಾತ್ರ ರುದ್ರಭಾಗ | ವೃತ್ತಾಕಾರ ಪೀಠ ಸಣ್ಣಗಾತ್ರ ರುದ್ರಭಾಗ | ಬರಿದಾಗಿದೆ |
| ೪. | ಕಡೂರು | ಕಲ್ಮೇಶ್ವರ | ಚೌಕಾಕಾರ ಪೀಠ ದೊಡ್ಡ ಗಾತ್ರ ರುದ್ರಭಾಗ | ವೃತ್ತಾಕಾರ ಪೀಠ ಸಣ್ಣಗಾತ್ರ ರುದ್ರಭಾಗ | ವೃತ್ತಾಕಾರ ಪೀಠ ಎತ್ತರ ರುದ್ರಭಾಗ |
| ೫. | ಕಿರಗೇರಿ | ಕಲ್ಮೇಶ್ವರ | ವೃತ್ತಾಕಾರ ಪೀಠ ದೊಡ್ಡ ಗಾತ್ರ ರುದ್ರಭಾಗ | ವೃತ್ತಾಕಾರ ಪೀಠ ಸಣ್ಣಗಾತ್ರ ರುದ್ರಭಾಗ | ಬರಿದಾಗಿದೆ |
| ೬. | ಕುಂಚೂರು | ಕಲ್ಮೇಶ್ವರ | ಇತ್ತೀಚಿನ ಲಿಂಗ | ವೃತ್ತಾಕಾರ ಪೀಠ ಸಣ್ಣಗಾತ್ರ ರುದ್ರಭಾಗ | ಕ್ರಿ.ಶ.ಸು. ೧೪ನೇ ಶತಮಾನದ ವೀರಭದ್ರಶಿಲ್ಪ |
| ೭. | ಕುಡುಪಲಿ | ಕಲ್ಮೇಶ್ವರ | ಚೌಕಾಕಾರ ಪೀಠ ದೊಡ್ಡ ಗಾತ್ರ ರುದ್ರಭಾಗ | ಬರಿದಾಗಿದೆ | ಬರಿದಾಗಿದೆ |
| ೮. | ಗುಂಡೂರು | ಮೂರು ದೇವರ ಗುಡಿ | ಚೌಕಾಕಾರ ಪೀಠ ದೊಡ್ಡ ಗಾತ್ರ ರುದ್ರಭಾಗ | ವೃತ್ತಾಕಾರ ಪೀಠ ಸಣ್ಣಗಾತ್ರ ರುದ್ರಭಾಗ | ವೃತ್ತಾಕಾರ ಪೀಠ ಎತ್ತರ ರುದ್ರಭಾಗ |

| ಕ್ರ.ಸಂ. | ಊರು | ದೇವಾಲಯ ಹೆಸರು | ಪಶ್ಚಿಮ ದಿಕ್ಕಿನ ಗರ್ಭಗೃಹ | ದಕ್ಷಿಣ ದಿಕ್ಕಿನ ಗರ್ಭಗೃಹ | ಉತ್ತರ ದಿಕ್ಕಿನ ಗರ್ಭಗೃಹ |
|---|---|---|---|---|---|
| ೯. | ಗುಡಗೂರು | ಕಲ್ಮೇಶ್ವರ | ವೃತ್ತಾಕಾರ ಪೀಠ ದೊಡ್ಡ ಗಾತ್ರ ರುದ್ರಭಾಗ | ವೃತ್ತಾಕಾರ ಪೀಠ ಸಣ್ಣಗಾತ್ರ ರುದ್ರಭಾಗ | ಬರಿದಾಗಿದೆ |
| ೧೦. | ಗುಡ್ಡದ ಆನವೇರಿ | ಕಲ್ಮೇಶ್ವರ | ವೃತ್ತಾಕಾರ ಪೀಠ ದೊಡ್ಡ ಗಾತ್ರ ರುದ್ರಭಾಗ | ಬರಿದಾಗಿದೆ | ಬರಿದಾಗಿದೆ |
| ೧೧. | ಮತ್ತಿಹಳ್ಳಿ | ಸೋಮೇಶ್ವರ | ಸ್ವಯಂಭೂ ಲಿಂಗ | ಬ್ರಹ್ಮಶಿಲ್ಪ | ವಿಷ್ಣುಶಿಲ್ಪ |
| ೧೨. | ಮತ್ತೂರು | ಕಲ್ಮೇಶ್ವರ | ಚೌಕಾಕಾರ ಪೀಠ ದೊಡ್ಡ ಗಾತ್ರ ರುದ್ರಭಾಗ | ವೃತ್ತಾಕಾರ ಪೀಠ ಸಣ್ಣಗಾತ್ರ ರುದ್ರಭಾಗ | ವಿಷ್ಣುಶಿಲ್ಪ |
| ೧೩. | ಸಿಡೇನೂರು | ಕಲ್ಮೇಶ್ವರ | ಚೌಕಾಕಾರ ಪೀಠ ದೊಡ್ಡ ಗಾತ್ರ ರುದ್ರಭಾಗ | ಬರಿದಾಗಿದೆ | ವೀರಭದ್ರ ಶಿಲ್ಪ |
| ೧೪. | ಹಿರೇಕೊಣತಿ | ಕಲ್ಮೇಶ್ವರ | ಚೌಕಾಕಾರ ಪೀಠ ದೊಡ್ಡ ಗಾತ್ರ ರುದ್ರಭಾಗ | ಹಾಳಾಗಿದೆ | ವಿಷ್ಣುಪೀಠ |
| ೧೫. | ಹಿರೇಮಾಗನೂರು | ಕಲ್ಮೇಶ್ವರ | ಚೌಕಾಕಾರ ಪೀಠ ದೊಡ್ಡ ಗಾತ್ರ ರುದ್ರಭಾಗ | ಹಾಳಾಗಿದೆ | ವಿಷ್ಣುಪೀಠ |
| ೧೬. | ಹೊನ್ನತ್ತಿ | ಕಲ್ಮೇಶ್ವರ | ಚೌಕಾಕಾರ ಪೀಠ ದೊಡ್ಡ ಗಾತ್ರ ರುದ್ರಭಾಗ | ವೃತ್ತಾಕಾರ ಪೀಠ ಸಣ್ಣಗಾತ್ರ ರುದ್ರಭಾಗ | ವೃತ್ತಾಕಾರ ಪೀಠ ಸಣ್ಣಗಾತ್ರ ರುದ್ರಭಾಗ |
| ೧೭. | ನರಸಿಂಹಪುರ | ನರಸಿಂಹ | ನರಸಿಂಹ ಶಿಲ್ಪ | ಆಂಜನೇಯ ಶಿಲ್ಪ (?) | ವೃತ್ತಾಕಾರ ಪೀಠ ಸಣ್ಣಗಾತ್ರ ರುದ್ರಭಾಗ |

ಭೂಪ್ರದೇಶದಲ್ಲಿ ಬರುವ ಕಲ್ಯಾಣ ಚಾಲುಕ್ಯರ ತ್ರಿಕೂಟ ದೇವಾಲಯಗಳನ್ನು ಗಮನಿಸಿದಾಗ ವೈಷ್ಣವರಿಗಿಂತಲೂ ಶೈವರೇ ತ್ರಿಕೂಟ ಮಾದರಿಯ ದೇವಾಲಯಗಳನ್ನು ಸಮರ್ಪಕವಾಗಿ ಬಳಸಿಕೊಂಡಿರುವುದು ಅಧ್ಯಯನದಿಂದ ತಿಳಿದುಬರುತ್ತದೆ. ಹೊಯ್ಸಳರ ತ್ರಿಕೂಟ ದೇವಾಲಯಗಳು ಹೆಚ್ಚು ಭವ್ಯವಾಗಿ ಮತ್ತು ಅಲಂಕಾರಯುತವಾಗಿದ್ದು ಗಮನಾರ್ಹವಾಗಿದೆ. ಇದಕ್ಕೆ ರಾಜಕೀಯ ಮತ್ತು ಆರ್ಥಿಕ ಹಿನ್ನೆಲೆಗಳು ಕಾರಣವಾಗುತ್ತವೆ. ಹಾವೇರಿ ಜಿಲ್ಲೆಯ ವ್ಯಾಪ್ತಿಯಲ್ಲಿ ಶೈವರು ಬಳಸಿಕೊಂಡ ತ್ರಿಕೂಟ ದೇವಾಲಯಗಳಲ್ಲಿ ಸಾಕಷ್ಟು ದೇವಾಲಯಗಳು ಗಾತ್ರದಲ್ಲಿ ಚಿಕ್ಕವಾಗಿದ್ದು ಮತ್ತು ಕಡಿಮೆ ಅಲಂಕರಣಗಳಿಂದ ಕೂಡಿವೆ. ಆದರೆ ಇಲ್ಲಿ ಗಮನಿಸಬೇಕಾದ ಅಂಶವೆಂದರೆ ದೇವಾಲಯಗಳು ಹೆಚ್ಚಿನ ಸಂಖ್ಯೆಯಲ್ಲಿ ಇರುವುದು ಗಮನಾರ್ಹ. ಜೊತೆಗೆ ತ್ರಿಕೂಟ ದೇವಾಲಯಗಳ ನಿರ್ಮಾಣದ ಹಿನ್ನೆಲೆಯು ಬಹು ಸಮಂಜಸ ಮತ್ತು ಮಾರ್ಮಿಕವಾಗಿದೆ. ಈ ಕಾರಣದಿಂದ ಶೈವರು ತಾತ್ವಿಕ ಹಿನ್ನೆಲೆಯಲ್ಲಿ ವೈಷ್ಣವರಿಗಿಂತಲೂ ಹೆಚ್ಚು ಪ್ರಭಾವಪೂರ್ಣವಾಗಿ ತ್ರಿಕೂಟ ದೇವಾಲಯಗಳನ್ನು ಬಳಸಿಕೊಂಡರು ಎಂದು ಹೇಳಬಹುದು.

## ೩.೪. ವಿಜಯನಗರ ಕಾಲದ ನರಸಿಂಹಪುರದ ನರಸಿಂಹ ದೇವಾಲಯ

ಕರ್ನಾಟಕದಲ್ಲಿ ತ್ರಿಕೂಟ ತಳವಿನ್ಯಾಸವುಳ್ಳ ದೇವಾಲಯ ಮಾದರಿಯನ್ನು ಬಾದಾಮಿ ಚಾಲುಕ್ಯರ ವಾಸ್ತುಶೈಲಿಯಲ್ಲಿಯೇ ಕ್ರಿ.ಶ.೬೯೬ರಲ್ಲಿ ಕಾಣುತ್ತೇವೆ. ಆದರೆ ಹಾವೇರಿ ಜಿಲ್ಲೆಯ ವ್ಯಾಪ್ತಿಯಲ್ಲಿ ಹೇಳುವಾಗ ಬಾದಾಮಿ ಚಾಲುಕ್ಯರ ವಾಸ್ತು ಅವಶೇಷಗಳು ಕಂಡುಬಂದಿರುವುದಿಲ್ಲ. ಕಲ್ಯಾಣ ಚಾಲುಕ್ಯರ ಆಡಳಿತಾವಧಿಯಲ್ಲಿ ತ್ರಿಕೂಟ ದೇವಾಲಯಗಳನ್ನು ಸಾಕಷ್ಟು ಸಂಖ್ಯೆಯಲ್ಲಿ ಕಾಣುತ್ತೇವೆ. ಈವರೆಗೂ ಗಮನಿಸಿದ ಎಲ್ಲ ದೇವಾಲಯಗಳು ಕ್ರಿ.ಶ.೧೧ನೇ ಶತಮಾನದಿಂದ ೧೩ನೇ ಶತಮಾನದ ಕಾಲಾವಧಿಗೆ ಒಳಪಟ್ಟಿರುವವು. ನಂತರದ ಎರಡು ಶತಮಾನಗಳಲ್ಲಿ ತ್ರಿಕೂಟ ದೇವಾಲಯಗಳ ನಿರ್ಮಾಣಕಾರ್ಯ ನಡೆಯಲೇ ಇಲ್ಲವೆಂದು ಸ್ಪಷ್ಟವಾಗಿ ಹೇಳಬಹುದು. ಇದಕ್ಕೆ ಬದಲಾದ ಧಾರ್ಮಿಕ ಸ್ಥಿತಿಗತಿಗಳು ರಾಜಕೀಯ ಏರುಪೇರುಗಳು ಕಾರಣವಾಗಿರಬಹುದು.

ವಿಜಯನಗರ ಅರಸರ ಕಾಲದ ಕ್ರಿ.ಶ.೧೫೫೭ರ ನರಸಿಂಹಪುರ ಶಾಸನವು ದೇವಾಲಯ ನಿರ್ಮಾಣದ ಬಗ್ಗೆ ಉಲ್ಲೇಖಿಸುತ್ತದೆ.[೩೦೫] ಜಿಲ್ಲೆಯಲ್ಲಿ ವಿಜಯನಗರ ಕಾಲದ ದೇವಾಲಯಗಳು ಅಪರೂಪ. ಆದರೆ ಇವರ ಕಾಲಾವಧಿಯಲ್ಲಿ ಸಾಕಷ್ಟು ಪ್ರಾಚೀನ ದೇವಾಲಯಗಳು ಜೀರ್ಣೋದ್ಧಾರಗೊಂಡಿದ್ದನ್ನು ಅಥವಾ ಇನ್ನಷ್ಟು ವಿಸ್ತಾರಗೊಂಡಿದ್ದನ್ನು ಗಮನಿಸಬಹುದಾಗಿದೆ.[೩೦೬] ಹೀಗೆ ಬಹು ಅಪರೂಪ ಎನಿಸುವ ವಿಜಯನಗರ ಸ್ಮಾರಕಗಳಲ್ಲಿ ನರಸಿಂಹಪುರ ದೇವಾಲಯವು ವಿಶೇಷವಾಗಿದೆ. ಇದು ತ್ರಿಕೂಟ ಮಾದರಿಯಲ್ಲಿ ನಿರ್ಮಾಣಗೊಂಡಿರುವುದು ಇನ್ನೂ ವಿಶೇಷ. ಕ್ರಿ.ಶ.೧೫೫೭ರಲ್ಲಿ ಮಹಾನಾಯಕಾಚಾರ್ಯ ಚಿಕಯಲ್ಲಪ್ಪನಾಯಕನು ನರಸಿಂಹ ವಿಗ್ರಹವನ್ನು ಸ್ಥಾಪಿಸಿದನೆಂದು ಶಾಸನವು ಉಲ್ಲೇಖಿಸುತ್ತದೆ. ಕ್ರಿ.ಶ.೧೧-೧೩ನೇ ಶತಮಾನಗಳಲ್ಲಿ ನಿರ್ಮಾಣಗೊಂಡ ಎಲ್ಲ ತ್ರಿಕೂಟ ದೇವಾಲಯಗಳು ಶೈವಧರ್ಮವನ್ನು ಪ್ರತಿನಿಧಿಸುವ ದೇವಾಲಯಗಳಾದರೆ ಎರಡು ಶತಮಾನಗಳ ನಂತರ ನಿರ್ಮಾಣಗೊಂಡ ನರಸಿಂಹಪುರದ ದೇವಾಲಯವು ವೈಷ್ಣವ ಧರ್ಮವನ್ನು ಪ್ರತಿನಿಧಿಸುತ್ತದೆ. ಈ ದೇವಾಲಯದ ವಾಸ್ತು ರಚನೆಯನ್ನು ಗಮನಿಸಿದರೆ, ದೇವಾಲಯವು ಪೂರ್ವಾಭಿ

ಮುಖವಾಗಿದ್ದು ಮುಖ್ಯ ಗರ್ಭಗೃಹವು ಮಾತ್ರ ಅರ್ಧಮಂಟಪವನ್ನು ಹೊಂದಿದೆ. ಈ ಹಿನ್ನೆಲೆಯಲ್ಲಿ ಇದನ್ನು ನ್ಯಾಯದರ್ಶನ ದೇವಾಲಯಗಳ ಗುಂಪಿಗೆ ಸೇರಿಸಬಹುದು.

ತುಂಗಭದ್ರಾ ನದಿ ದಂಡೆಯ ಮೇಲಿರುವ ನರಸಿಂಹಪುರವು ಮೇಲಿಂದ ಮೇಲೆ ಸಂಭವಿಸುವ ನೆರೆಹಾವಳಿಗೆ ತುತ್ತಾಗುತ್ತಿದ್ದುದರಿಂದ ಸ್ಥಳೀಯರು ಗ್ರಾಮವನ್ನು ತೊರೆದು ಬೇರೆಡೆ ನೆಲೆಸಿರುವರು. ಈಗ ಈ ಗ್ರಾಮವು ಹಾಳೂರು ಎಂದು ಗುರುತಿಸಿಕೊಳ್ಳುತ್ತಿದೆ. ಹೀಗಾಗಿ ದೇವಾಲಯವು ಸಂರಕ್ಷಣೆ ಇಲ್ಲದೆ ನಶಿಸುತ್ತಿದೆ.

| | | |
|---|---|---|
| ಊರು | : | ನರಸಿಂಹಪುರ (ತಾ.ಹಾವೇರಿ) |
| ಸ್ಥಳ | : | ಹಾಳೂರು |
| ಹೆಸರು | : | ನರಸಿಂಹ ದೇವಾಲಯ |
| ಅಭಿಮುಖ | : | ಪೂರ್ವ |
| ನಿವೇದನೆ | : | ನರಸಿಂಹ |
| ಕಾಲ | : | ಕ್ರಿ.ಶ.೧೫೫೭ |
| ಶೈಲಿ | : | ವಿಜಯನಗರ |
| ಬಳಸಿದ ವಸ್ತು | : | ಕಣಶಿಲೆ |

### ದೇವಾಲಯ ವಾಸ್ತುಶೈಲಿ

**ತಳವಿನ್ಯಾಸ :** (ತಳವಿನ್ಯಾಸ ರೇಖಾಚಿತ್ರ-೩೧) ಮೂರು ಗರ್ಭಗೃಹಗಳು, ಒಂದು ಅರ್ಧಮಂಟಪ, ನವರಂಗ ಮತ್ತು ಮುಖಮಂಟಪ.

**ಊರ್ಧ್ವಮುಖ ರಚನೆ :** ಹಾವೇರಿಯಿಂದ ಈಶಾನ್ಯಕ್ಕೆ ೨೨ ಕಿ.ಮೀ. ದೂರದಲ್ಲಿ ತುಂಗಭದ್ರಾನದಿ ದಂಡೆಯ ಮೇಲಿರುವ ಈ ದೇವಾಲಯದ ಸುತ್ತಲೂ ಕಸಕಡ್ಡಿಗಳು ಬೆಳೆದಿರುವುದರಿಂದ ಅಧಿಷ್ಠಾನ ಭಾಗವು ಕಾಣ ದಂತಾಗಿದೆ. ಮುಖ್ಯ ಗರ್ಭಗೃಹದ ಅಧಿಷ್ಠಾನದಲ್ಲಿಯ ಪದ್ಮ, ಗಳ, ಕಪೋತ ಭಾಗಗಳನ್ನು ಅಲ್ಲಲ್ಲಿ ಕಾಣುತ್ತೇವೆ. ಭಿತ್ತಿ ಭಾಗವನ್ನು ಒಂದು ಅಡಿ ಅಗಲ ನಾಲ್ಕು ಅಡಿ ಉದ್ದದ ಕಲ್ಲು ಫಲಕಗಳನ್ನು ಬಳಸಿ ನಿರ್ಮಿಸಲಾಗಿದೆ. ದಕ್ಷಿಣ ದಿಕ್ಕಿನ ಗರ್ಭಗೃಹದ ಹೊರಭಿತ್ತಿಯಲ್ಲಿ ರಾಮ, ಲಕ್ಷ್ಮಣ, ಸೀತೆ, ಹನುಮಂತರ ಉಬ್ಬುಶಿಲ್ಪಗಳಿದ್ದು ಅದರ ಮೇಲೆ ಶಾಲಾ, ಕೂಟಗಳ ಮಾದರಿಯ ಪ್ರಭಾವಳಿಯ ಅಲಂಕರಣವಿದೆ. ಮುಖ್ಯ ಗರ್ಭಗೃಹಕ್ಕೆ ಮಾತ್ರ ಶಿಖರವನ್ನು ಕಾಣುತ್ತೇವೆ. ಈ ಕದಂಬನಾಗರ ಶಿಖರ ಒಂಬತ್ತು ಹಂತಗಳಲ್ಲಿ ಮೇಲೇರುತ್ತ ಕಿರಿದಾಗುತ್ತ ಸಾಗಿದೆ. ಚೌಕಾಕಾರದ ಶಿಖರ ಭಾಗವನ್ನು ಹೊಂದಿದ್ದು ಸ್ತೂಪಿ ಭಾಗವು ಕಣ್ಮರೆ ಯಾಗಿದೆ(ಛಾಯಾಚಿತ್ರ-೬೧).

**ತಿರ್ಯಙ್ಮುಖ ರಚನೆಗಳು :** ದೇವಾಲಯದ ಒಳಭಾಗವು ದುಷ್ಕರ್ಮಿಗಳಿಂದ ಬಹಳಷ್ಟು ಹಾಳಾಗಿದೆ. ಮುಖ್ಯಗರ್ಭಗೃಹವು ೭x೭ ಅಡಿ ವಿಸ್ತಾರವಾಗಿದೆ. ಈ ಗರ್ಭಗೃಹದ ದ್ವಾರಬಂಧವು ಸರಳವಾಗಿದ್ದು ಲಲಾಟ ಫಲಕದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಮುಖ್ಯ ಗರ್ಭಗೃಹವು ಮಾತ್ರ ಅರ್ಧಮಂಟಪವನ್ನು ಹೊಂದಿದೆ.




ತಳವಿನ್ಯಾಸ ರೇಖಾಚಿತ್ರ-೩೧, ನರಸಿಂಹ ದೇವಾಲಯ, ನರಸಿಂಹಪುರ (ತಾ.ಹಾವೇರಿ)

೧. ಗರ್ಭಗೃಹ, ೨. ಅರ್ಧಮಂಟಪ, ೩. ನವರಂಗ, ೪. ಮುಖಮಂಟಪ

ಇದು ವಿಸ್ತಾರದಲ್ಲಿ ಗರ್ಭಗೃಹವನ್ನು ಹೋಲುತ್ತದೆ. ಅರ್ಧಮಂಟಪದ ದ್ವಾರಬಂಧವು ಸರಳವಾಗಿದ್ದು ಲಲಾಟಫಲಕದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಉತ್ತರ ಮತ್ತು ದಕ್ಷಿಣ ದಿಕ್ಕಿನಲ್ಲಿರುವ ಗರ್ಭಗೃಹಗಳು ಸಹ ೭x೭ ಅಡಿ ವಿಸ್ತಾರವಾಗಿದ್ದು, ಸರಳವಾದ ದ್ವಾರಬಂಧವನ್ನು, ಲಲಾಟಫಲಕದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವನ್ನು ಹೊಂದಿವೆ.

ಮೂರು ದಿಕ್ಕಿನ ವಾಸ್ತುರಚನೆಗಳನ್ನು ಒಂದೆಡೆ ಸೇರಿಸುವ ನವರಂಗವು ೧೫x೧೫ ಅಡಿ ವಿಸ್ತಾರವಾಗಿದೆ. ಮಧ್ಯದಲ್ಲಿ ಚೌಕಾಕಾರದ ವೇದಿಕೆ ಇದೆ. ವೇದಿಕೆಯ ತುದಿಯಲ್ಲಿರುವ ನಾಲ್ಕು ಕಂಬಗಳು ೧೨ ಅಡಿ ಎತ್ತರವಾಗಿದ್ದು ವಿಜಯನಗರ ಶೈಲಿಯನ್ನು ಬಿಂಬಿಸುತ್ತವೆ. ಚೌಕಾಕಾರದ ಪೀಠವನ್ನು ಹೊಂದಿದ್ದು, ಪಾದಭಾಗವೂ ಚೌಕಾಕಾರದಲ್ಲಿದೆ. ದಂಡಭಾಗದಲ್ಲಿ ಎಂಟು ಮುಖ, ಹದಿನಾರು ಮುಖ ಪಟ್ಟಿಕೆಗಳನ್ನು ಚತುರಶ್ರವನ್ನು ಕಾಣಬಹುದು. ದಂಡಾಗ್ರದಲ್ಲಿ ಕಲಶ, ಘಟ, ಮಂಡಿ, ಫಲಕ ಭಾಗಗಳು ಇವೆ. ಸ್ತಂಭಗಳ ಪಾದ ಭಾಗದಲ್ಲಿ ಉಬ್ಬುಶಿಲ್ಪಗಳನ್ನು ಕಂಡರಿಸಲಾಗಿದೆ. ಇಲ್ಲಿ ವಾದ್ಯಗಾರರ ಮತ್ತು ವಿನೋದ ಶಿಲ್ಪಗಳನ್ನು ಕಾಣಬಹುದು(ಛಾಯಾಚಿತ್ರ-೬೨). ವಿತಾನದಲ್ಲಿ ಕಮಲದ ಅಲಂಕರಣವಿದೆ. ನವರಂಗದ ದ್ವಾರಬಂಧವು ಅಲಂಕೃತ ಹೊಸ್ತಿಲದ ಮೇಲೆ ಪಂಚಶಾಖೆಗಳಿಂದ ಕೂಡಿದೆ. ಮಧ್ಯದ ಶಾಖೆಯು ಪ್ರಧಾನವಾಗಿದ್ದು ಎಲ್ಲ ಶಾಖೆಗಳಿಗಿಂತ ಹೆಚ್ಚು ಮುಂಚಾಚಿದೆ. ಇಲ್ಲಿ ವಿಜಯನಗರ ಶೈಲಿಯ ವಿಶಿಷ್ಟ ಅಲಂಕರಣವಾದ ಕುಂಭಸ್ತಂಭವನ್ನು ಕಾಣುತ್ತೇವೆ. ಶಾಖೆಗಳ ಕೆಳ ಫಲಕದಲ್ಲಿ ಜಯವಿಜಯರನ್ನು ಹಾಗೂ ಚಾಮರ ಧಾರಣಿಯರನ್ನು ಬಿಡಿಸಲಾಗಿದೆ. ದ್ವಾರದ ಲಲಾಟದಲ್ಲಿ ಅಧೋಮುಖ ಕಮಲ ಮೊಗ್ಗುಗಳ ಅಲಂಕರಣವನ್ನು, ಲಲಾಟಫಲಕದಲ್ಲಿ ಗಜಲಕ್ಷ್ಮಿ ಉಬ್ಬುಶಿಲ್ಪವನ್ನು ಕಂಡರಿಸಿರುವರು.

ನವರಂಗಕ್ಕೆ ಹೊಂದಿಕೊಂಡಂತೆ ಪೂರ್ವ ದಿಕ್ಕಿನಲ್ಲಿ ಹದಿನಾರು ಕಂಬಗಳನ್ನು ಬಳಸಿ ನಿರ್ಮಿಸಿದ ಮಹಾಮಂಟಪದ ರಚನೆ ಇದೆ(ಛಾಯಾಚಿತ್ರ-೬೩). ಇಲ್ಲಿಯ ಮಧ್ಯದ ನಾಲ್ಕು ಕಂಬಗಳು ಮಾತ್ರ ಅಲಂಕೃತ ಕಂಬಗಳಾಗಿದ್ದು ಉಳಿದವು ಸಾದಾ ಮಾದರಿಯಲ್ಲಿವೆ. ಮಹಾಮಂಟಪವು ೩೦x೪೦ ಅಡಿ ವಿಸ್ತಾರವಾಗಿದ್ದು ವೇದಿಕೆ ಇದೆ. ಮಧ್ಯದ ವಿತಾನದಲ್ಲಿ ಕಮಲದ ಅಲಂಕರಣವನ್ನು ಮತ್ತು ದಕ್ಷಿಣ ದಿಕ್ಕಿನ ಮಧ್ಯ ಅಂಕಣದ ಛತ್ತಿನಲ್ಲಿ ಕಮಲ ಹಾಗೂ ಇನ್ನೊಂದು ಅಂಕಣದಲ್ಲಿ ಮೀನಿನ ಉಬ್ಬುಶಿಲ್ಪವನ್ನು ಬಿಡಿಸಲಾಗಿದೆ. ಹನ್ನೆರಡು ಅಂಕಣಗಳನ್ನು ಹೊಂದಿದ ಈ ಮಹಾಮಂಟಪವು ಮೂರು ದಿಕ್ಕಿನಲ್ಲಿ ಪ್ರವೇಶವನ್ನು ಹೊಂದಿದ್ದು ತೆರೆದ ವಾಸ್ತು ರಚನೆಯಾಗಿದೆ. ಸಂರಕ್ಷಣೆ ಇಲ್ಲದೆ ದೇವಾಲಯವು ನಶಿಸುತ್ತಿದೆ(ಛಾಯಾಚಿತ್ರ-೬೪).

**ಶಾಸನಗಳಿಂದ ಹೆಚ್ಚಿನ ವಿವರ :** ಕ್ರಿ.ಶ.೧೫೫೭ರ ಶಾಸನವು ಈ ದೇವಾಲಯದ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ. ಶಾಸನವು ಗ್ರಾಮವನ್ನು ಕುರುಬನಹಳ್ಳಿ ಎಂದು ಉಲ್ಲೇಖಿಸಿದೆ. ಮಹಾನಾಯಕಾಚಾರ್ಯ ಚಿಕಯಲ್ಲಪ್ಪ ನಾಯಕನು ನರಸಿಂಹ ವಿಗ್ರಹವನ್ನು ಸ್ಥಾಪಿಸಿದನೆಂದೂ, ಕುರುಬನಹಳ್ಳಿಯನ್ನು ನರಸಿಂಹಪುರ ವೆಂದು ಹೆಸರಿಸಿ ತೊರವನಭಟ್ಟನಿಗೆ ದಾನ ನೀಡಿದನೆಂದೂ ಶಾಸನವು ಉಲ್ಲೇಖಿಸುತ್ತದೆ.



ಛಾಯಾಚಿತ್ರ – ೩೭, ಕಲ್ಮೇಶ್ವರ ದೇವಾಲಯದ ಮುಖ್ಯ ಗರ್ಭಗೃಹ
ಅಂತರವಳ್ಳಿ (ತಾ.ಹಿರೇಕೆರೂರು)



ಛಾಯಾಚಿತ್ರ – ೩೮, ಕಲ್ಮೇಶ್ವರ ದೇವಾಲಯದ ಮುಖಮಂಟಪ
ಅಕ್ಕಿಅಲೂರು (ತಾ.ಹಾನಗಲ್ಲ)



ಛಾಯಾಚಿತ್ರ – ೩೯, ಕಲ್ಮೇಶ್ವರ ದೇವಾಲಯದ ಕಂಬ ಮತ್ತು ಜಾಲಂದ್ರ
ಆಲದಗೇರಿ (ತಾ.ಹಿರೇಕೆರೂರು)



ಛಾಯಾಚಿತ್ರ – ೪೦, ಕಲ್ಮೇಶ್ವರ ದೇವಾಲಯದ ನವರಂಗದಲ್ಲಿರುವ ಕೋಷ್ಠ
ಆಲದಗೇರಿ (ತಾ.ಹಿರೇಕೆರೂರು)



ಛಾಯಾಚಿತ್ರ – ೪೧, ಕಲ್ಮೇಶ್ವರ ದೇವಾಲಯದ ನವರಂಗ, ಕಡೂರು (ತಾ.ಹಿರೇಕೆರೂರು)



ಛಾಯಾಚಿತ್ರ – ೪೨, ಕಲ್ಮೇಶ್ವರ ದೇವಾಲಯದ ಉತ್ತರ ದಿಕ್ಕಿನ ಗರ್ಭಗೃಹ
ಕಿರಗೇರಿ (ತಾ.ಹಿರೇಕೆರೂರು)



ಛಾಯಾಚಿತ್ರ – ೪೩, ಕಲ್ಮೇಶ್ವರ ದೇವಾಲಯದ ಪಾರ್ಶ್ವನೋಟ
ಕುಂಚೂರು (ತಾ.ಹಿರೇಕೆರೂರು)



ಛಾಯಾಚಿತ್ರ – ೪೪, ಕಲ್ಮೇಶ್ವರ ದೇವಾಲಯದ ಮುಖ್ಯ ಗರ್ಭಗೃಹ
ಕುಂಚೂರು (ತಾ.ಹಿರೇಕೆರೂರು)



ಛಾಯಾಚಿತ್ರ - ೪೫, ಮೂರುದೇವರಗುಡಿ ಗುಂಡೂರು (ತಾ.ಸವಣೂರು)



ಛಾಯಾಚಿತ್ರ - ೪೬, ಕಲ್ಮೇಶ್ವರ ದೇವಾಲಯ ಗುಡುಗೂರು (ತಾ.ರಾಣೆಬೆನ್ನೂರು)



ಛಾಯಾಚಿತ್ರ – ೪೭, ಕಲ್ಮೇಶ್ವರ ದೇವಾಲಯದ ಮುಖ್ಯ ಗರ್ಭಗೃಹ
ಗುಡಗೂರು (ತಾ.ರಾಣೆಬೆನ್ನೂರು)



ಛಾಯಾಚಿತ್ರ – ೪೮, ಕಲ್ಮೇಶ್ವರ ದೇವಾಲಯದ ಮುಖಚತುಷ್ಕಿಯ ಛತ್ತು
ಗುಡಗೂರು (ತಾ.ರಾಣೆಬೆನ್ನೂರು)



ಛಾಯಾಚಿತ್ರ – ೪೯, ಕಲ್ಮೇಶ್ವರ ದೇವಾಲಯ ಗುಡ್ಡದ ಆನವೇರಿ (ತಾ.ರಾಣೆಬೆನ್ನೂರು)



ಛಾಯಾಚಿತ್ರ – ೫೦, ಕಲ್ಮೇಶ್ವರ ದೇವಾಲಯದ ಮುಖ್ಯ ಗರ್ಭಗೃಹ
ಗುಡ್ಡದ ಆನವೇರಿ (ತಾ.ರಾಣೆಬೆನ್ನೂರು)



ಛಾಯಾಚಿತ್ರ - ೫೧. ಸ್ವಯಂಭೂ ಸೋಮೇಶ್ವರ ದೇವಾಲಯ ಮತ್ತಿಹಳ್ಳಿ (ತಾ.ಹಿರೇಕೆರೂರು)



ಛಾಯಾಚಿತ್ರ - ೫೨. ಸ್ವಯಂಭೂ ಸೋಮೇಶ್ವರ ದೇವಾಲಯದ ಮುಖ್ಯ ಗರ್ಭಗೃಹ,
ಮತ್ತಿಹಳ್ಳಿ (ತಾ.ಹಿರೇಕೆರೂರು)



ಛಾಯಾಚಿತ್ರ - ೫೩, ಕಲ್ಮೇಶ್ವರ ದೇವಾಲಯದ ದಕ್ಷಿಣ ದಿಕ್ಕಿನ ಗರ್ಭಗೃಹ
ಮತ್ತೂರು (ತಾ.ಬ್ಯಾಡಗಿ)



ಛಾಯಾಚಿತ್ರ - ೫೪, ಕಲ್ಮೇಶ್ವರ ದೇವಾಲಯ ಸಿಡೇನೂರು (ತಾ.ಬ್ಯಾಡಗಿ)



ಛಾಯಾಚಿತ್ರ – ೫೫, ಕಲ್ಮೇಶ್ವರ ದೇವಾಲಯದ, ಉತ್ತರ ದಿಕ್ಕಿನ ಗರ್ಭಗೃಹ
ಸಿಡೇನೂರು (ತಾ.ಬ್ಯಾಡಗಿ)



ಛಾಯಾಚಿತ್ರ – ೫೬, ಕಲ್ಮೇಶ್ವರ ದೇವಾಲಯ ಹಿರೇಕೊಣತಿ (ತಾ.ಹಿರೇಕೆರೂರು)



ಛಾಯಾಚಿತ್ರ – ೫೭, ಕಲ್ಮೇಶ್ವರ ದೇವಾಲಯದ ನವರಂಗದ ಕಂಬ
ಹಿರೇಮಾಗನೂರು (ತಾ.ರಾಣೆಬೆನ್ನೂರು)



ಛಾಯಾಚಿತ್ರ – ೫೮, ಕಲ್ಮೇಶ್ವರ ದೇವಾಲಯದ ನವರಂಗದ ವಿತಾನ
ಹಿರೇಮಾಗನೂರು (ತಾ.ರಾಣೆಬೆನ್ನೂರು)



ಛಾಯಾಚಿತ್ರ - ೫೯, ಕಲ್ಮೇಶ್ವರ ದೇವಾಲಯದ ಮುಖ್ಯ ಗರ್ಭಗೃಹ,
ಹೊನ್ನತ್ತಿ (ತಾ.ರಾಣೆಬೆನ್ನೂರು)



ಛಾಯಾಚಿತ್ರ - ೬೦, ಕಲ್ಮೇಶ್ವರ ದೇವಾಲಯದ ನವರಂಗದ ಕೋಷ್ಠ
ಹೊನ್ನತ್ತಿ (ತಾ.ರಾಣೆಬೆನ್ನೂರು)



ಛಾಯಾಚಿತ್ರ – ೬೧, ನರಸಿಂಹ ದೇವಾಲಯದ ಮುಖ್ಯ ಗರ್ಭಗೃಹದ ಮೇಲ್ಕಟ್ಟಡ
ನರಸಿಂಹಪುರ (ತಾ.ಹಾವೇರಿ)



ಛಾಯಾಚಿತ್ರ – ೬೨, ನರಸಿಂಹ ದೇವಾಲಯದ ನವರಂಗದ ಕಂಬ
ನರಸಿಂಹಪುರ (ತಾ.ಹಾವೇರಿ)



ಛಾಯಾಚಿತ್ರ – ೬೩, ನರಸಿಂಹದೇವಾಲಯದ ಮುಖಮಂಟಪ
ನರಸಿಂಹಪುರ (ತಾ.ಹಾವೇರಿ)



ಛಾಯಾಚಿತ್ರ – ೬೪, ನರಸಿಂಹ ದೇವಾಲಯ, ನರಸಿಂಪುರ (ತಾ. ಹಾವೇರಿ)

## ಅಡಿಟಿಪ್ಪಣಿಗಳು

೧. ಅಲ್ತೇಕರ್ ಎ.ಎಸ್., ರಾಷ್ಟ್ರಕೂಟ್ಸ್ ಆ್ಯಂಡ್ ದೇರ್ ಟೈಮ್ಸ್, ಪು.೨೪೯

೨. ರಾಮಚಂದ್ರರಾವ್ ಎಸ್.ಕೆ., ಭಾರತ ದೇವಾಲಯ ನೆಲೆ ಹಿನ್ನೆಲೆ, ಪು.೧೬

೩. ವೆಂಕಟರಮಣಯ್ಯ ಎನ್., ಒರಿಜಿನ್ ಆಫ್ ದಿ ಸೌತ್ ಇಂಡಿಯನ್ ಟೆಂಪಲ್ಸ್, ಪು.೨

೪. ಗೋಪಾಲ ಬಾ.ರಾ., ಕರ್ನಾಟಕದ ಕಲೆಗಳು, ಸಂ.೪, ವಾಸ್ತು, ಪು.೪

೫. ಅಮರನಾಥ ಖನ್ನಾ, ಆರ್ಕಿಯಾಲಜಿ ಆಫ್ ಇಂಡಿಯಾ, ಪು.೨೫

೬. ಜಾನ್ ಮಾರ್ಷಲ್, ಮೊಹಂಜೊದಾರೊ ಆ್ಯಂಡ್ ಇಂಡಸ್ ಸಿವಿಲಿಝೇಶನ್, ಸಂ-I, ಪು.೬೫

೭. ರಾವ್, ಎಸ್.ಆರ್., ಲೋಥಲ್ ಆ್ಯಂಡ್ ಇಂಡಸ್ ಸಿವಿಲಿಝೇಶನ್, ಪು.೫೮

೮. ಆಚಾರ್ಯ, ಪಿ.ಕೆ., ಹಿಂದೂ ಆರ್ಕಿಟೆಕ್ಚರ್ ಇನ್ ಇಂಡಿಯಾ ಆ್ಯಂಡ್ ಅಬ್ರಾಡ್, ಪು.೫೪

೯. ರೊಮೇಶ್ ಸಿ.ದೂಥ್, ದ ಸಿವಿಲಿಝೇಶನ್ ಆಫ್ ಇಂಡಿಯಾ, ಪು.೪

೧೦. ಆಚಾರ್ಯ, ಪಿ.ಕೆ., ಪೂರ್ವೋಕ್ತ, ಪು.೬೪

೧೧. ರಾಘುವೇಂದ್ರ, ವಿ., ಸೌತ್ ಇಂಡಿಯನ್ ಟೆಂಪಲ್ಸ್, ಕ್ಯೂ.ಜೆ.ಎಂ.ಎಸ್., ಸಂ. XXIII-I ಪು.೬೧

೧೨. ಸದಾಶಿವ ಅಂಬಾದಾಸ್ ಡಾಂಗೆ, ಇಂಡಿಯನ್ ಸಿವಿಲಿಝೇಶನ್ ಆ್ಯಂಡ್ ವೇದಿಕ್ ಕಲ್ಚರ್, ಕ್ಯೂ.ಜೆ.ಎಂ.ಎಸ್., ಸಂ.LXXIV-I, ಪು.೪೯-೬೧

೧೩. ರಾಮಚಂದ್ರರಾವ್ ಎಸ್.ಕೆ., ಮೂರ್ತಿಶಿಲ್ಪ ನೆಲೆ ಹಿನ್ನೆಲೆ, ಪು.೧೧

೧೪. ರಾಮಚಂದ್ರರಾವ್ ಅವರು ಹೊಂದಾಣಿಕೆ ಮತ್ತು ಹಿಂದೂ ಧರ್ಮದ ಬಗ್ಗೆ ವಿವರಿಸುತ್ತ ''ಈ ಸಮನ್ವಯ ಬುದ್ಧಿ ನಮ್ಮ ದೇಶದ ಜನಜೀವನದಲ್ಲಿ ಎಂದಿನಿಂದಲೂ ಹಾಸು ಹೊಕ್ಕಾಗಿ ಸೇರಿ ಬಂದಿವೆ. ಅದರಿಂದಲೇ ವೈದಿಕ ಸಂಸ್ಕೃತಿ ಸೈಂಧವ ಸಂಸ್ಕೃತಿಗಳು ಒಂದು ನೆಲೆಯಲ್ಲಿ ಕಲೆಯುವುದು ಸಾಧ್ಯವಾಯಿತು. ಅದರ ಫಲವೇ ಹಿಂದೂ ಧರ್ಮ'' ಎಂದಿರುವರು. ನೋಡಿ: ರಾಮಚಂದ್ರರಾವ್, ಎಸ್.ಕೆ., ಪೂರ್ವೋಕ್ತ, ಪು.೧೧

೧೫. ಜೇಮ್ಸ್ ಫರ್ಗುಸನ್ ಅಂಡ ಜೇಮ್ಸ್ ಬರ್ಗೆಸ್, ದ ಕೇವ್ಹ ಟೆಂಪಲ್ಸ್ ಆಫ್ ಇಂಡಿಯಾ, ಪು.೪೦

೧೬. ಜಾನ್ ಮಾರ್ಷಲ್, ಪೂರ್ವೋಕ್ತ, ಪು.೬೫

೧೭. ಆನಂದ ಕೆ.ಕುಮಾರಸ್ವಾಮಿ, ಎಸ್ಸೆ ಆನ್ ಅರ್ಲಿ ಇಂಡಿಯನ್ ಆರ್ಕಿಟೆಕ್ಚರ್, ಪು. ೨೦, ಶ್ರೀನಿವಾಸನ್ ಕೆ.ಆರ್., ಟೆಂಪಲ್ಸ್ ಆಫ್ ಸೌತ್ ಇಂಡಿಯಾ, ಪು.೮

೧೮. ಶ್ರೀನಿವಾಸನ್ ಕೆ.ಆರ್., ಪೂರ್ವೋಕ್ತ, ಪು.೮

೧೯. ಪ್ರಮುಖ ರಾಜವಂಶಗಳು ಒಂದೊಂದು ವೃಕ್ಷಗಳೊಂದಿಗೆ ತಮ್ಮನ್ನು ಗುರುತಿಸಿಕೊಂಡಿದ್ದಾರೆ. ಕದಂಬರು-ಕದಂಬವೃಕ್ಷ, ಚಾಲುಕ್ಯರು-ಸಲ್ಲಕ್ಕಿ ಮರವನ್ನು (ಶೀಲಾಕಾಂತ ಪತ್ತಾರ್, ಚಾಲುಕ್ಯ ಮತ್ತು ಕಪ್ಪೆ ಅರಭಟ್ಟ ಎರಡು ಟಿಪ್ಪಣಿಗಳು, ಇ.ದ. ಸಂ. ೧೬ನ್ನು ಹೆಚ್ಚಿನ ವಿವರಕ್ಕೆ ನೋಡಿ) ಚೇರರು-ಪನ್ನೆಮರ(ನೇರಳೆ), ಚೋಳರು-ಅತ್ತಿಮರ, ಪಾಂಡ್ಯರು- ವೆಂಬು ಮರವನ್ನು ಸ್ವೀಕರಿಸಿದ್ದಾರೆ(ಶ್ರೀನಿವಾಸನ್, ಕೆ.ಆರ್. ಪೂರ್ವೋಕ್ತ, ಪು.೧೧).

೨೦. ಆನಂದ ಕೆ.ಕುಮಾರಸ್ವಾಮಿ, ಯಕ್ಷಾಸ್, ಪು. ೭೨, ಸೂಸಾನ್ ಎಲ್. ಹಂಟಿಂಗ್‌ಟನ್, ದ ಆರ್ಟ್ ಆಫ್ ಎನ್ಶೆಂಟ್ ಇಂಡಿಯಾ, ಪು.೬೩

೨೧. ಮೈಕೇಲ್ ಡಬ್ಲು ಮೇಸ್ಟರ್ ಆ್ಯಂಡ್ ಎಂ.ಎ. ಢಾಕೆ (ಸಂ) ಎನ್‌ಸೈಕ್ಲೊಪೀಡಿಯಾ ಆಫ್ ಇಂಡಿಯನ್ ಟೆಂಪಲ್ ಆರ್ಕಿಟೆಕ್ಚರ್ ಸೌತ್ ಇಂಡಿಯನ್ ಲೊವರ್ ದ್ರಾವಿಡ ದೇಶ, ಪು.೧೪-೧೭

೨೨. ಜ್ಞಾನಾನಂದ ಜಿ., ಶಿಲ್ಪಾದರ್ಶ, ಸಂ.೧, ಪು.೮೩

೨೩. ಶರ್ಮಾ ಐ.ಕೆ., ದ ಡೆವಲೆಪ್‌ಮೆಂಟ್ ಆಫ್ ಅರ್ಲಿ ಶೈವ ಆರ್ಟ್ ಆ್ಯಂಡ್ ಆರ್ಕಿಟೆಕ್ಚರ್, ಪು.೫೪

೨೪. ವೆಂಕಟರಮಣಯ್ಯ, ಎನ್. ಒರಿಜಿನ್ ಆಫ್ ದ ಸೌತ್ ಇಂಡಿಯನ್ ಟೆಂಪಲ್ಸ್, ಪು.೮

೨೫. ರಾವ್. ಎಸ್.ಆರ್., ಎ ಪ್ರೊಟೊ ಹಿಸ್ಟಾರಿಕ್ ಇನ್‌ಸ್ಕ್ರಿಪ್‌ಶನ್ ಫ್ರಾಮ್ ದ ಸಿ ನಿಯರ್ ಬೆಟ್ ದ್ವಾರಕಾ, ಜೆ.ಒ.ಇ.ಎಸ್.ಆಯ್., ಸಂ.೧೩, ಪು.೮೨

೨೬. ಸಿಲಾ ತ್ರಿಪಾಟಿ, ಗೌರ್ & ಎಂ.ಎಸ್., ಸರ್ಚ್ ಫಾರ್ ದ್ವಾರಕಾ, ಬಿ.ಯು.ನಾಯಕ & ಎನ್.ಸಿ.ಘೋಷ್, ನ್ಯೂ ಟ್ರೆಂಡ್ಸ್ ಇನ್ ಇಂಡಿಯನ್ ಆರ್ಟ್ ಆ್ಯಂಡ್ ಆರ್ಕಿಯಾಲಜಿ (ಎಸ್.ಆರ್.ರಾವ್ ಫಿಲಿಸಿಟೇಶನ್ ವ್ಯಾಲ್ಯೂಮ್)

೨೭. ಎ.ಇಂ., ಸಂ. XXII, ಪು.೨೦೪

೨೮. ಅದೇ.

'ಕಾರಿತೋಯಂ ರಾಜ್ಞಾ ಭಾಗವತೇನ ಗಜಾಯನೇನ ಪರಾಶರೀಪುತ್ರೇಣ ಸರ್ವತಾತೇನ ಅಶ್ವಮೇಧ, ಯಾಜಿನಾ ಅನಿಹತಾಭ್ಯಾಂ ಸರ್ವೇಶ್ವರಾಭ್ಯಾಂ ವಾಸುದೇವ ಸಂಕರ್ಷಣಾಭ್ಯಾಂ ಪೂಜಾಶಿಲಾಪ್ರಕಾರೋ ನಾರಾಯಣವಟಿಕ'

೨೯. ಸರ್ಕಾರ್ ಡಿ.ಸಿ., ಸೆಲೆಕ್ಟ್ ಇನ್ಸ್‌ಕ್ರಿಪ್‌ಶನ್ಸ್, ಪು.೯೦-೯೧

೩೦. ಸೌಂದರ ರಾಜನ್ ಕೆ.ವಿ., ಇಂಡಿಯನ್ ಟೆಂಪಲ್ಸ್ ಸ್ಟೈಲ್ಸ್, ಪು.೨

೩೧. ಎ.ಇಂ., ಸಂ. XVII, ಪು.೧೪-೧೯

೩೨. ಅದೇ, ಪು.೧೦೧

೩೩. ಸುಂದರ ಅ., ಎಕ್ಸಕವೇಶನ್ ಆ್ಯಟ್ ಸನ್ನತಿ, ೧೯೮೬೮೭, ಪುರಾತತ್ವ ಸಂ.೧೭, ಇಂಡಿಯನ್ ಆರ್ಕಿಯಾಲಾಜಿಕಲ್ ಸೊಸೈಟಿ ದೆಹಲಿ ಹಾಗೂ ಸುಂದರ ಅ., ಸಮ್ ನೋಟವರ್ದಿ ಸ್ಕಲ್ಪರ್ಸ್ ಫ್ರಂ ಸನ್ನತಿ, ಇಂಡಿಯನ್ ಆರ್ಕಿಯಾಜಿಕಲ್ ಹೆರಿಟೇಜ್, ಆಗಮ ಕಲಾಪ್ರಕಾಶನ, ದೆಹಲಿ, ೧೯೯೦

೩೪. ಇಂ.ಆಂ, ಸಂ. XIV, ಪು.೩೩೩

೩೫. ಎ.ಕ. (ಹಳೆಯ) ಸಂ. VIII, ಶಿಕಾ ೨೬೩

೩೬. ಕೃಷ್ಣನ್ ಕೆ.ಜಿ., ಉಟ್ಟಂಕಿತ ಸಂಸ್ಕೃತ ವಿದ್ಯಾ ಅರಣ್ಯ ಎಫಿಗ್ರಾಫ್ಸ್, ಸಂ. ೩, (ಪ್ರಾಕೃತ ಆ್ಯಂಡ್ ಸಂಸ್ಕೃತ ಇನ್ಸ್‌ಕ್ರಿಪ್‌ಶನ್ಸ್, ಕಿ.ಪೂ. ೨೫೭ ಕ್ರಿ.ಶ.೩೨೦) ಶಾ.ಸಂ.೧೭೭-೩೭೬

೩೭. ಸುಂದರ ಅ., ಇಂಡಸ್ ಸರಸ್ವತಿ ಸಿವಿಲಿಝೆಶನ್ ಅರ್ಲಿ ಶೈವ ಕಲ್ಪ, ಶ್ರೀ ಪುಷ್ಪಾಂಜಲಿ, ಸಿ.ಆರ್.ಶ್ರೀನಿವಾಸನ್, ಸಂಸ್ಕರಣ ಗ್ರಂಥ, (ಸಂ) ರಮೇಶ್ ಕೆ.ವಿ. ಮತ್ತು ಇತರರು.

೩೮. ಎ.ಕ. (ಹಳೆಯ) ಸಂ. VIII, ಶಿಕಾ ೧೭೬

೩೯. ಸುಂದರ ಅ., ದ ಅರ್ಲಿ ಕದಂಬ ಟೆಂಪಲ್ ಆರ್ಕಿಟೆಕ್ಚರ್ ರೀಸೆಂಟ್ ನೋಟ್ಸ್, ಕ್ಯೂ.ಜೆ.ಎಂ.ಎಸ್.,LXXV-3, ಪು.೨೬೫

೪೦. ಗೋಪಾಲ ಬಾ.ರಾ., ಕಾ.ಕ. ಇನ್ಸ್ (ಸಿಕೆಬಿ), ನಂ.೨೩, ಪು.೮೧-೮೭

೪೧. ಗೋಪಾಲ ಬಾ.ರಾ., ಬನವಾಸಿ ಕದಂಬರು, ಪು.೨೧

೪೨. ಮೇಲಿನ ಟಿಪ್ಪಣಿ ೩೯ ರಂತೆ

೪೩. ದೇವರಕೊಂಡಾರೆಡ್ಡಿ, ತಲಕಾಡಿನ ಗಂಗರ ಕಾಲದ ದೇವಾಲಯಗಳು ಒಂದು ಅಧ್ಯಯನ, ಪು.೪೨

೪೪. ಪರ್ಸಿಬ್ರೌನ್, ಇಂಡಿಯನ್ ಆರ್ಕಿಟೆಕ್ಚರ್ (ಬುದ್ಧಿಸ್ಟ್ ಅಂಡ್ ಹಿಂದೂ), ಪು.೫೨

೪೫. ಇಂ.ಆಂ., ಸಂ.III, ಪು.೩೦೫

೪೬. ಆಚಾರ್ಯ ಪಿ.ಕೆ., ಇಂಡಿಯನ್ ಆರ್ಕಿಟೆಕ್ಚರ್ ಅಕಾರ್ಡಿಂಗ್ ಟು ಮಾನಸಾರ, ಪು.೪

೪೭. ಬ್ರೂನೊ ಡಗೆನ್ಸ್, (ಸಂ) ಮಯಮತ, ಪು.೩೫

ಅಮರ್ತ್ಯಾಶ್ಚೈವ ಮರ್ತ್ಯಾಶ್ಚ ಯತ್ರಯತ್ರ

ವಸಂತಿ ಹೀ ತದ್ವಸ್ತು ಇತಿಮತಂ

ಪ್ರಾಸಾದಾದೀನಿ ವಾಸ್ತೂನಿ ವಸ್ತುತ್ವಾದ್ ವಸ್ತುಸಂಶ್ರಯಾತ್ ಎಂದು ಮಯಮತದಲ್ಲಿ ಹೇಳಲಾಗಿದೆ.

೪೮. ಗರುಡಪುರಾಣ, ಅಧ್ಯಾಯ ೪೬

ಅವಾಸವಾಸವೇಶ್ಮಾದೌ ಪುರೆ ಗ್ರಾಮೇ ವಣಿಕ್ಸಥೇ

ಪ್ರಾಸಾದಾರಾಮದುರ್ಗೇಷು ದೇವಾಲಯ ಮಠೇಷುಚ ಎಂದು ಗರುಡ ಪುರಾಣದಲ್ಲಿ ಹೇಳಲಾಗಿದೆ.

೪೯. ವಾಸ್ತುಶಾಸ್ತ್ರಕ್ಕೆ ಸಂಬಂಧಿಸಿದ ಶಬ್ದಕೋಶದ ಮುನ್ನುಡಿಯಲ್ಲಿ ವಿದ್ವಾಂಸ ಪಿ.ಕೆ. ಆಚಾರ್ಯ ಅವರು 'ವಾಸ್ತುಶಾಸ್ತ್ರ' ಹಾಗೂ 'ಶಿಲ್ಪಶಾಸ್ತ್ರ' ಪದಗಳನ್ನು ಪರ್ಯಾಯ ಪದಗಳೆಂಬಂತೆ ಬಳಸಿದ್ದಾರೆ.

೫೦. ಜ್ಞಾನಾನಂದ ಜಿ. ಪೂರ್ವೋಕ್ತ, ಸಂ.೧, ಪು.೫

೫೧. ಸ್ಟೆಲ್ಲಾ ಕ್ರಮ್ರಿಶ್, ದ ಹಿಂದೂ ಟೆಂಪಲ್ಸ್, ಸಂ.೧, ಪು.೨೫

೫೨. ಅದೇ, ಪು. ೨೯-೩೯

೫೩. ಗೋಪಾಲ ಬಾ.ರಾ., ಕರ್ನಾಟಕದ ಕಲೆಗಳು, ವಾಸ್ತು, ಪು.೨೩

೫೪. ಶುಕ್ಲಾ ಡಿ.ಎನ್., ವಾಸ್ತುಶಾಸ್ತ್ರ: ಹಿಂದೂ ಸೈನ್ಸ್ ಆಫ್ ಆರ್ಕಿಟೆಕ್ಚರ್, ಸಂ.೧, ಪು.೪೬೦

೫೫. ಸ್ಟೆಲ್ಲಾ ಕ್ರಮ್ರಿಶ್, ಪೂರ್ವೋಕ್ತ, ಪು.೪೮

೫೬. ಅದೇ, ಪು.೬೨

೫೭. ಜ್ಞಾನಾನಂದ ಜಿ., ಪೂರ್ವೋಕ್ತ, ಪು.೨೯೯

೫೮. ಶುಕ್ಲಾ ಡಿ.ಎನ್., ಪೂರ್ವೋಕ್ತ, ಪು.೪೦೦

೫೯. ಅದೇ, ಪು.೧೬೬

೬೦. ಸ್ಟೆಲ್ಲಾ ಕ್ರಮ್ರಿಶ್, ಪೂರ್ವೋಕ್ತ, ಪು.೧೬೧

೬೧. ಅದೇ, ಪು.೧೬೬

೬೨. ಅದೇ, ಪು.೨೮೬-೩೦೦

೬೩. ಢಾಕೆ ಎಂ.ಎ., ದ ಇಂಡಿಯನ್ ಟೆಂಪಲ್ ಫಾರ್ಮ್ಸ್ ಇನ್ ಕರ್ನಾಟಕ ಇನ್ಸ್‌ಕ್ರಿಪ್‌ಷನ್ಸ್ ಆ್ಯಂಡ ಆರ್ಕಿಟೆಕ್ಚರ್ ಪು.೧-೭

ಹೊಳಲು ಗ್ರಾಮದ ಶಾಸನವು (ಎ.ಕ.ಸಂ.VII (ಹಳೆಯ) ಸೊರಬ ಶಾ.ಸಂ.೨೭೫)

ಸ್ವಸ್ತಿ ಸಮಸ್ತಸಿವಪಾದ ಶೇಖರ ಕಲಿಯುಗ ವಿಶ್ವಕರ್ಮ ಚೌಷಷ್ಟಿ ಕಲಾ ವಿದ್ಯಾ ಪ್ರವೀಣ ಚೌಷಷ್ಟಿ ಪ್ರಾಸಾದ ವಿಶಾರದ ನಾಗರ ಕಲಿಂಗ ದ್ರಾವಿಲ ವೇಸರ ಚತುರ್ಜಾತಿ ಪ್ರಾಸಾದ ವಿನಿರ್ಮಿತ ಸೂತ್ರಧಾರಿ ಸೋಗೆಯ ಪಾದೋಜರ ಛಾತ್ರ ಬಮ್ಮೋಜನು ಬೊ[ಒಕೊ]ಕೋಜನ ಪುತ್ರನು ಶ್ರೀಕಾರನಾಮ ಕಂಬಮಗಳ ಮಾಡಿದನ್ ಎಂದು ಸೋಗೆಯಪಾದೋಜನ ಶಿಷ್ಯ ಬಮ್ಮೋಜನನ್ನು ನಾಗರ, ಕಳಿಂಗ, ದ್ರಾವಿಡ, ವೇಸರ, ಚತುರ್ಜಾತಿ ಪ್ರಾಸಾದ ವಿನಿರ್ಮಿತನೆಂದೂ ಚೌಷಷ್ಟಿ ಪ್ರಾಸಾದ ವಿಶಾರದನೆಂದೂ ವರ್ಣಿಸಿದೆ. ದೊಡ್ಡಗದ್ದವಳ್ಳಿ ಶಾಸನದಲ್ಲಿ ವಿಮಾನ, ಸರ್ವತೋಭದ್ರ, ವೃಷಭ, ನಳಿನೀಕ, ಉತ್ತುಂಗ, ವೈರಾಜ, ಗರುಡ, ವರ್ಧಮಾನ, ಶಂಖ, ವೃತ್ತ, ಪುಷ್ಪಕ ಮತ್ತು ಗೃಹರಾಜವೆಂಬ ಭಿನ್ನ ಶೈಲಿಗಳ ಉಲ್ಲೇಖವಿದೆ. ಕುಪ್ಪಟೂರಿನ ಶಾಸನದಲ್ಲಿ ದ್ರಾವಿಡ, ಭೂಮಿಜ ಹಾಗೂ ನಾರಗಗಳೆಂಬ ಶೈಲಿಗಳ ಪ್ರಸ್ತಾಪವಿದೆ.

೬೪. ಕೃಷ್ಣರಾಯ ಡಿ. ಮತ್ತು ಆಪ್ಟೆ ವಿ.ಜಿ., ಕಾಶ್ಯಪ ಶಿಲ್ಪ, ಪು.೫೪

೬೫. ಅದೇ.

೬೬. ಸ್ಟೆಲ್ಲಾ ಕ್ರಮ್ರಿಶ್, ಪೂರ್ವೋಕ್ತ, ಪು.೨೮೦

೬೭. ಅದೇ, ಪು.೨೯೧

೬೮. ಢಾಕೆ, ಎಂ.ಎ., ಪೂರ್ವೋಕ್ತ, ಪು.೨೧

೬೯. ಪ್ರಭಾಕರ ಎಂ.ಎಸ್., ದೇವಾಲಯ ವಾಸ್ತುಚಂದ್ರಿಕೆ, ಪು.೩೯

೭೦. ಢಾಕೆ, ಎಂ.ಎ., ಪೂರ್ವೋಕ್ತ, ಪು.೧೮

೭೧. ಅದೇ, ಪು.೩೬

೭೨. ಸ್ಟೆಲ್ಲಾ ಕ್ರಮ್ರಿಶ್, ಪೂರ್ವೋಕ್ತ, ಸಂ.೨, ಪು.೩೫೬

೭೩. ಅದೇ.

೭೪. ಮೊರೇಸ್ ಜಿ.ಎಂ., ಕದಂಬಕುಲ, ಪು.೩೮

೭೫. ಇಂ.ಆಂ, ಸಂ.VI, ಪು.೨೪-೨೫

೭೬. ಹಲಸಿಯು (ಪಲಾಶಿಕಾ) ಕದಂಬರ ಇನ್ನೊಂದು ರಾಜಧಾನಿ. ಕಾಕುಸ್ಥವರ್ಮನ ಕಾಲದಿಂದಲೂ ಇಲ್ಲಿ ಯಾಪನೀಯ ಪಂಥದ ಜೈನರು ಪ್ರಬಲರಾಗಿದ್ದರು. ಮೃಗೇಶವರ್ಮನು ಈ ಬಸದಿಯನ್ನು ತನ್ನ ತಂದೆ ಶಾಂತಿವರ್ಮನ ಪರೋಕ್ಷ ವಿನಯಕ್ಕಾಗಿ ಕಟ್ಟಿಸಿದನು. ಅಲ್ಲದೆ ಅಲ್ಲಿರುವ ಅರ್ಹಂತರಿಗೂ, ಜೈನ ಸನ್ಯಾಸಿಗಳು ಭೂಮಿಗಳನ್ನು ದಾನವಾಗಿ ಕೊಟ್ಟಿರುವರು.

೭೭. ಸೌಂದರ ರಾಜನ್ ಕೆ.ವಿ., ಅರ್ಲಿ ಟೆಂಪಲ್ ಆರ್ಕಿಟೆಕ್ಚರ್ ಇನ್ ಕರ್ನಾಟಕ ಅಂಡ್ ಇಟ್ಸ್ ರೆಮಿಫಿಕೆಶನ್, ಪು.೭

೭೮. ಸಿಂದಗಿ ರಾಜಶೇಖರ, ಕರ್ನಾಟಕ ವಾಸ್ತುಶಿಲ್ಪ ಮತ್ತು ಚಿತ್ರಕಲೆ, ಪು.೨೦

೭೯. ಮೈಕಲ್ ಡಬ್ಲ್ಯು ಮೆಯಿಸ್ಟರ್ ಮತ್ತು ಎಂ.ಎ. ಢಾಕೆ, (ಸಂ) ಎನ್‌ಸಾಯ್‌ಕ್ಲೊಪೀಡಿಯಾ ಅಪ್ಪರ ದ್ರಾವಿಡ ದೇಶ, ಪು.೫೪

೮೦. **ಕ. ಇನ್ಸ್.**, ಸಂ.I, ಶಾ.ಸಂ.೩

೮೧. ಮೂರು ಗರ್ಭಗೃಹಗಳು ಒಂದೇ ದಿಕ್ಕಿನಲ್ಲಿ ಮುಖ ಮಾಡಿ, ಒಂದು ನವರಂಗವನ್ನು ಹಂಚಿಕೊಂಡಂತೆ ಇರುವ ತ್ರಿಕೂಟ ದೇವಾಲಯಗಳನ್ನು ಕಾಣಬಹುದು. ಆದರೆ ಮುಖಮಂಟಪವನ್ನು ಹಂಚಿಕೊಂಡಂತೆ ಬಹು ಅಪರೂಪ. ಇಲ್ಲಿ ದೇಗಾವೆಯ ಕಂದನಾರಾಯಣ ದೇವಾಲಯವನ್ನು ಉದಾಹರಿಸಬಹುದು.

೮೨. **ಕ.ಇನ್ಸ್.**, ಸಂ.I, ನಂ.೩

೮೩. ಸೌಂದರ ರಾಜನ್ ಕೆ.ವಿ. ಅವರು ಬಾದಾಮಿಯ ಜಂಬುಲಿಂಗ ದೇವಾಲಯವನ್ನು ಕುರಿತು "This temple, because it is dated and fairly ornate, becomes a linchpin for any chronology of Calukya temple" ಎಂದು ಚಾಲುಕ್ಯ ದೇವಾಲಯಗಳ ಕಾಲನಿರ್ಣಯದಲ್ಲಿ ಉಪಯುಕ್ತವಾಗಿದೆ ಎಂದು ಹೇಳಿರುವರು. ನೋಡಿ: ಮೈಕೆಲ್ ಡಬ್ಲ್ಯು ಮೆಯಿಸ್ಟರ್ ಮತ್ತು ಎಂ.ಎ.ಢಾಕಿ (ಸಂ), **ಪೂರ್ವೋಕ್ತ**, ಪು.೫೪

೮೪. **ಕ.ಚ.**, ಸಂ.೧, ಪು.೫೦೩

೮೫. **ಕೃಷ್ಣರಾವ್ ಎಂ.ವಿ., ಮತ್ತು ಕೇಶವಭಟ್ಟ ಎಂ., ಕರ್ನಾಟಕ ಇತಿಹಾಸ ದರ್ಶನ**, ಪು. ೧೦೨೫

೮೬. **ಅದೇ.**

೮೭. ಈಗ ಈ ಬಸದಿಯನ್ನು ವಿಭಾಗಿಸಿ ನಾರಾಯಣ ಮತ್ತು ಸೋಮೇಶ್ವರ ಎಂದು ಎರಡು ದೇವಾಲಯಗಳನ್ನಾಗಿ ಮಾಡಲಾಗಿದೆ.

೮೮. ಸಿಂದಗಿ ರಾಜಶೇಖರ, **ಕರ್ನಾಟಕ ವಾಸ್ತುಶಿಲ್ಪ ಮತ್ತು ಚಿತ್ರಕಲೆ**, ಪು.೪೬

೮೯. **ಅದೇ**, ಪು.೧೩೪

೯೦. **ಶೆಟ್ಟರ್ ಎಸ್., ದ ಹೊಯ್ಸಳ ಟೆಂಪಲ್ಸ್**, ಪು.೧೯೧

೯೧. **ಶ್ರೀಕಂಠಶಾಸ್ತ್ರಿ ಎಸ್., ಹೊಯ್ಸಳ ವಾಸ್ತುಶಿಲ್ಪ**, ಪು.೫೫

೯೨. ಸಿ.ಮಹದೇವ, ಸಿ.ಎಸ್.ವಾಸುದೇವನ್, ರಮೇಶನಾಯ್ಕ, **ಕರ್ನಾಟಕ ದೇವಾಲಯ ಕೋಶ : ಹಾವೇರಿ ಜಿಲ್ಲೆ**, ಪು.೩ ಮತ್ತು ೩೩೭

೯೩. **ಎ.ಇಂ.**, ಸಂ.V, ಪು.೨೪೫-೫೨

೯೪. ರಾಜಾರಾಮ ಹೆಗಡೆ, **ಲೌಕಿಕ ಅಲೌಕಿಕ**, ಪು.೧೪೩

೯೫. **ಎ.ಕ.** (ಹಳೆಯ) ಸಂ.VII, ಶಿಕಾ ೧೦೨, ಕ್ರಿ.ಶ.೧೧೬೨

೯೬. **ಅದೇ**, ಶಾ.ಸಂ.೧೦೦

೯೭. **ಅದೇ**, ಶಾ.ಸಂ.೧೦೨

೯೮. **ಅದೇ**, ಶಾ.ಸಂ.೧೧೮

೯೯. ಚಿದಾನಂದಮೂರ್ತಿ ಎಂ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ** (ಮೂರನೆಯ ಮುದ್ರಣ), ಪು.೧೪೨

೧೦೦. ನೀಲಕಂಠಶಾಸ್ತ್ರಿ, ಕೆ.ಎ., **ಎ ಹಿಸ್ಟರಿ ಆಫ್ ಸೌತ್ ಇಂಡಿಯಾ**, ಪು.೪೨೨

೧೦೧. ಕನ್ನಡ ಶಾಸನಗಳನ್ನು ಅಧ್ಯಯನ ಮಾಡಿದರೆ ಎಲ್ಲಿಯೂ ಕಾಳಾಮುಖರನ್ನು ಕಾಪಾಲಿಕರೆಂದು ಕರೆದಿಲ್ಲ. ಅಲ್ಲದೆ ಅವರು ಪಾಶುಪತ ಲಾಕುಳ ವರ್ಗಕ್ಕೆ ಸೇರಿದವರೆಂಬುದು ಸ್ಪಷ್ಟವಾಗುತ್ತದೆ.

೧೦೨. ಗೋಪಿನಾಥರಾವ್ ಟಿ.ಎ., ಎಲೆಮೆಂಟ್ಸ್ ಆಫ್ ಹಿಂದೂ ಐಕನೊಗ್ರಫಿ, II, ಪು.೧೯

೧೦೩. ವಸುಂಧರಾ ಫಿಲಿಯೋಜಾ, ಕರ್ನಾಟಕದಲ್ಲಿ ಲಾಕುಳಶೈವ ಜಕ್ಕಣಾಚಾರ್ಯರು, ಪು.೩೨

೧೦೪. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೧೪೨

೧೦೫. ಮಹಾಲಿಂಗಂ ಟಿ.ವಿ., ದ ಪಾಶುಪತಾಸ್ ಇನ್ ಸೌತ್ ಇಂಡಿಯಾ, ಜರ್ನಲ್ ಆಫ್ ಇಂಡಿಯನ್ ಹಿಸ್ಟರಿ, ಸಂ.XXVII, ಪು.೫೦

೧೦೬. ಡೆವಿಡ್ ಎನ್. ಲೊರೆಂಜನ್, ದ ಕಾಪಾಲಿಕಾಸ್ ಅಂಡ್ ಕಾಲಾಮುಖಾಸ್, ಪು.೧೭೬

೧೦೭. ಅದೇ, ಪು.೧೭೫

೧೦೮. ಸೌ.ಇಂ.ಇನ್ಸ್, ಸಂ. XX, ಶಾ.ಸಂ.೪೯

೧೦೯. ಅದೇ, ಶಾ.ಸಂ.೧೮

೧೧೦. ಎ.ಕ. (ಹಳೆಯ) ಸಂ.VII, ಶಾ.ಸಂ.೧೩೯

೧೧೧. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೨೪೩

೧೧೨. ಎ.ಕ. (ಹಳೆಯ) ಸಂ. VII, ಶಾ.ಸಂ.೯೪

೧೧೩. ಅದೇ.

೧೧೪. ಅದೇ, ಶಾ.ಸಂ.೯೮

೧೧೫. ಅದೇ, ಶಾ.ಸಂ.೧೦೦

೧೧೬. ಅದೇ, ಶಾ.ಸಂ.೯೨

೧೧೭. ಅದೇ, ಶಾ.ಸಂ.೧೦೨

೧೧೮. ಮೈ.ಆ.ಸ., ೧೯೪೨, ಪು.೧೩೦

೧೧೯. ಎ.ಕ. (ಹಳೆಯ) ಸಂ.VII, ಶಾ.ಸಂ.೧೧೮

೧೨೦. ಅದೇ.

೧೨೧. ಅದೇ, ಶಾ.ಸಂ.೧೦೬

೧೨೨. ಅದೇ, ಶಾ.ಸಂ.೯೯

೧೨೩. ಅದೇ, ಶಾ.ಸಂ.೧೨೩

೧೨೪. ಡೆವಿಡ್ ಎನ್. ಲೊರೆಂಜನ್, ಪೂರ್ವೋಕ್ತ, ಪು.೧೩೮-೪೦

೧೨೫. ಎ.ಕ. (ಹಳೆಯ) ಸಂ.VII, ಶಾ.ಸಂ.೧೨೯

೧೨೬. ಕಲಬುರ್ಗಿ ಎಂ.ಎಂ., ಮಾರ್ಗ-೪, ಪು.೨೯೫

೧೨೭. ಸೌರಾಷ್ಟ್ರದ ಸೋಮನಾಥ ಕರ್ನಾಟಕದಲ್ಲಿ ಪ್ರಸಿದ್ಧಗೊಂಡಿರುವುದರ ಬಗ್ಗೆ ನಾಗಭೂಷಣ ಅವರು 'ಗುಜರಾತಿನ ಸೌರಾಷ್ಟ್ರದ ಸೋಮನಾಥ ಭಾರತದಾದ್ಯಂತ ಜನಮನದಲ್ಲಿ ಭಕ್ತಿಯನ್ನು ಹುಟ್ಟಿಸುವಷ್ಟರ ಮಟ್ಟಿಗೆ ಖ್ಯಾತಿಯನ್ನು ಪಡೆದಿದ್ದಿತು. ಆ ದೇವಾಲಯವನ್ನು ಕ್ರಿ.ಶ.೧೦೨೬ರಲ್ಲಿ ಘಜನಿ ಮಹಮ್ಮದ್ ನಾಶ ಮಾಡಿದ್ದರೂ ಅದರ ನೆನಪು ಹಚ್ಚ ಹಸಿರಾಗಿದ್ದು, ೧೧ನೇ ಶತಮಾನದ ಅಂತ್ಯದ ವೇಳೆಗಾಗಲೇ ಸೌರಾಷ್ಟ್ರ ಸೋಮನಾಥನ ಅಲೆ

ಕರ್ನಾಟಕದಲ್ಲಿಯೂ ವ್ಯಾಪಿಸಿತ್ತು ಎಂದೆನಿಸುತ್ತದೆ. ಆದಯ್ಯನು ಸೌರಾಷ್ಟ್ರದಿಂದ ಸೋಮನಾಥನನ್ನು ಕರೆತಂದು ಪುಲಿಗೆರೆಯಲ್ಲಿ ಪ್ರತಿಷ್ಠಾಪಿಸಿದ ವಿವರ ಹರಿಹರನ 'ಆದಯ್ಯನ ರಗಳೆ', ರಾಘವಾಂಕನ 'ಸೋಮನಾಥ ಚರಿತ್ರೆ' ಹಾಗೂ ಇನ್ನಿತರ ಕೃತಿಗಳಲ್ಲಿ ಒಡಮೂಡಿದೆ. ಎಂದು ಗುರುತಿಸಿದ್ದಾರೆ. (ನೋಡಿ: ನಾಗಭೂಷಣ ಸಿ., ಕನ್ನಡ ಸಾಹಿತ್ಯ ಸಾಂಸ್ಕೃತಿಕ ಶೋಧನೆ, ಪು.೧೨೫) ಏಕಾಂತ ರಾಮಯ್ಯನು ಅಬ್ಬಲೂರಿಗೆ ಬಂದದ್ದು ಪುಲಿಗೆರೆಯ ಸೋಮೇಶ್ವರನ ಆಜ್ಞೆಯ ಮೇರೆಗೆ ಎಂಬುದು ಗಮನಾರ್ಹ.

೧೨೮. ಕಲಬುರ್ಗಿ ಎಂ.ಎಂ., ಪೂರ್ವೋಕ್ತ, ಪು.೨೯೫

೧೨೯. ಸೌ.ಇಂ.ಇನ್ಸ್, ಸಂ.XVIII, ಶಾ.ಸಂ.೨೯೫

೧೩೦. ಕ.ಇನ್ಸ್., ಸಂ.VI, ಶಾ.ಸಂ.೪೪

೧೩೧. ಈ ಪದ್ಧತಿಯು ಬಹು ಪ್ರಾಚೀನವೆಂಬುದರಲ್ಲಿ ಸಂದೇಹವಿಲ್ಲ. ಶ್ರೀರಾಮನು ಪ್ರತಿಷ್ಠಿಸಿದನೆಂದು ನಂಬಿರುವ 'ರಾಮೇಶ್ವರ'ವನ್ನು ಇಲ್ಲಿ ನೆನೆಯಬಹುದು.

೧೩೨. ಎ.ಇಂ., ಸಂ.III, ಪು.೪

೧೩೩. ಅದೇ.

೧೩೪. ಕ.ಇನ್ಸ್., ಸಂ.I, ಶಾ.ಸಂ.೨೫

೧೩೫. ರಾಜಾರಾಮ ಹೆಗಡೆ, ಪೂರ್ವೋಕ್ತ, ಪು.೧೪೩

೧೩೬. ಗೋಪಾಲರಾವ್ ಎಚ್.ಎಸ್., ಕಲ್ಯಾಣ ಚಾಲುಕ್ಯ ದೇವಾಲಯಗಳು, ಪು.೫೪

೧೩೭. ಶೇಷಶಾಸ್ತ್ರಿ ಆರ್., ಕರ್ನಾಟಕದ ವೀರಗಲ್ಲುಗಳು, ಪು.೭೬

೧೩೮. ನಾಗಭೂಷಣ ಸಿ., ಪೂರ್ವೋಕ್ತ, ಪು.೨೧೦

೧೩೯. ಮೇಲಿನ ಅಡಿಟಿಪ್ಪಣಿ ೧೩೬ ರಂತೆ.

೧೪೦. ಸೌ.ಇಂ.ಇನ್ಸ್., ಸಂ.XVIII, ಶಾ.ಸಂ.೨೯೫

೧೪೧. ಕ.ಇನ್ಸ್., ಸಂ.VI, ಶಾ.ಸಂ.೪೪

೧೪೨. ಸಿ.ಮಹದೇವ, ಸಿ.ಎಸ್. ವಾಸುದೇವನ್, ರಮೇಶನಾಯ್ಕ, ಪೂರ್ವೋಕ್ತ, ಪು.೨೬೭

೧೪೩. ಕ.ಇನ್ಸ್., ಸಂ.VI, ಶಾ.ಸಂ.೪೪

೧೪೪. ಸೌ.ಇಂ.ಇನ್ಸ್., ಸಂ.XVIII, ಶಾ.ಸಂ., ೨೯೫

೧೪೫. ಎ.ಇಂ., ಸಂ.V, ಪು.೨೪೫-೫೨

೧೪೬. ವಸುಂಧರಾ ಫಿಲಿಯೋಜಾ, ಪೂರ್ವೋಕ್ತ, ಪು.೫೧

೧೪೭. ಕ.ಇನ್ಸ್., ಸಂ.VI, ಶಾ.ಸಂ.೩೯

೧೪೮. ಅದೇ.

೧೪೯. ಸಿ.ಮಹದೇವ, ಸಿ.ಎಸ್.ವಾಸುದೇವನ್, ರಮೇಶನಾಯ್ಕ, ಪೂರ್ವೋಕ್ತ, ಪು.೨೫೦

೧೫೦. ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಧಾ.ಜಿ.ಗೆ., ಪು.೭೬

೧೫೧. ಕ.ಇನ್ಸ್., ಸಂ.VI, ಶಾ.ಸಂ.೭೪ ಮತ್ತು ೭೫

೧೫೨. ಅಡಿಟಿಪ್ಪಣಿ ೧೫೦ ರಂತೆ.

೧೫೩. ಸೊಟ್ಟಮ್ಮನವರ ವಿ.ಜಿ., ರಾಣೆಬೆನ್ನೂರು ಪ್ರದೇಶದ ದೇವಾಲಯಗಳು ಒಂದು ಅಧ್ಯಯನ, ಕರ್ನಾಟಕ ವಿ.ವಿ. ಧಾರವಾಡಕ್ಕೆ ಸಲ್ಲಿಸಿದ ಅಪ್ರಕಟಿತ ಎಂ.ಫಿಲ್. ಪ್ರಬಂಧ ೧೯೯೮, ಪು. ೯೪

೧೫೪. ಸೌ.ಇಂ.ಇನ್ಸ್., ಸಂ.XVIII, ಶಾ.ಸಂ.೧೭

೧೫೫. ಅದೇ, ಶಾ.ಸಂ.೧೨೪

೧೫೬. ಅದೇ, ಶಾ.ಸಂ.೩೦೨

೧೫೭. ಎ.ರಿ.ಸೌ.ಇಂ.ಎ. ವರದಿ ವರ್ಷ ೧೯೪೭-೪೮, ನಂ.೧೯೩

೧೫೮. ಎ.ಇಂ., ಸಂ.V, ಪು.೨೪೫-೫೨

೧೫೯. ಶೈವ ಮತ್ತು ಜೈನರ ನಡುವಿನ ಹೋರಾಟವನ್ನು ದಾಖಲಿಸುವ ಹಲವಾರು ಶಾಸನಗಳು ಲಭ್ಯವಾಗಿವೆ. ಉದಾಹರಣೆಗೆ ಕ್ರಿ.ಶ. ೧೧೮೪ರ ಅಣ್ಣಿಗೇರಿ ಶಾಸನದಲ್ಲಿ ಗೊಗ್ಗಿದೇವ ಎಂಬ ಶಿವಭಕ್ತ ಸಾಮಂತನು, ಶೈವಧರ್ಮಕ್ಕೆ ತನ್ನ ಧನವನ್ನೆಲ್ಲ ಮೀಸಲಿಟ್ಟವನು ಎಂದು ಹೊಗಳಿ, ಜೈನಮೃಗ ಬೇಂಟೆಕಾರ, ಜೈನ ಕುಠಾರ ಎಂಬ ವಿಶೇಷಣಗಳಿಂದ ಹೊಗಳಿ, ಅವನು ಘಟಾಂತಕಿಯ ಮತ್ತು ಜಿನನ ವಿಗ್ರಹಗಳನ್ನು ಭಂಗ ಮಾಡಿದ ಸಾಹಸವನ್ನು ಕೊಂಡಾಡಲಾಗಿದೆ. ಹಾಗೆಯೇ ವಿಜಾಪುರ ಜಿಲ್ಲೆಯ ತಾಳಿಕೋಟೆಯ ಅದೇ ಕಾಲದ ಶಾಸನವೊಂದು, ವಿರುಪರಸ ದೇವರನ್ನು 'ಜಿನ ಸಮಯವನದಹಸದಾವಾನಳರು' ಎಂದೂ 'ಅನಂತ ದೇಶಾಂತರದಲ್ ಇದಿರಾದ ಪರಸಮಯಿಗಳಂ ಪಡಸ್ಪಡಿಸಿ ಲೋಕಮನಾಕಂಪಂಗೊಳಸಿ ಬಸದಿಗಳಂ ಪೊಸೆದು ಮುಕ್ಕಿ ಶಿವಲಿಂಗ ಸಿಂಹಾಸನಮಂ ಕಣ್ಗೊಳಿಸಿ ಚಲಮಂ ಮೆರೆಯುತ್ತಿದ್ದರೆಂದೂ ಹೊಗಳಿದೆ. ನೋಡಿ : ದೇಸಾಯಿ ಪಿ.ಬಿ., ಜೈನಿಸಮ್ ಇನ್ ಸೌತ್ ಇಂಡಿಯಾ ಆ್ಯಂಡ್ ಸಮ್ ಜೈನ ಎಪಿಗ್ರಾಫ್ಸ್, ಪು.೩೯೭-೯೮

೧೬೦. ಹರಿಹರನ 'ಏಕಾಂತ ರಾಮಿತಂದೆ ರಗಳೆ', ಶಾಂತನಿರಂಜನ 'ಅಬ್ಬಲೂರು ಚರಿತೆ'ಗಳನ್ನು ಇಲ್ಲಿ ಉದಾಹರಿಸಬಹುದು.

೧೬೧. ನಾಗಭೂಷಣ ಸಿ., ಪೂರ್ವೋಕ್ತ, ಪು.೧೫೭

೧೬೨. ವೇದ ಸಂಸ್ಕೃತಿಗಳನ್ನು ನಂಬಿದ, ಅಗ್ನಿಹೋತ್ರಿಗಳಾದ ಒಂದು ಗುಮಪಿನ ಜನ ಮಧ್ಯಕಾಲೀನ ಎಲ್ಲ ಲಾಭದಾಯಕ ಧಾರ್ಮಿಕ ಆಚರಣೆಗಳನ್ನು, ದೇವಾಲಯದಲ್ಲಿನ ಆರಾಧನೆ, ಪವಿತ್ರಸ್ನಾನ, ದಾನಾದಿ ಆಚರಣೆಗಳನ್ನು ಭ್ರಷ್ಟ ಕ್ರಿಯೆಗಳೆಂದು ಅಲ್ಲಗಳೆದರು. ಅಲ್ಲದೆ, ಜನಪ್ರಿಯವೆನಿಸಿದ್ದ ದೇವಾಲಯ ಆಚರಣೆಗಳಿಂದ ಪೂಜಾರಿ ಸಮಾಜದ ಬಹಿಷ್ಕಾರಕ್ಕಾಗಿ ಪ್ರತಿಪಾದಿಸಿದರು. ಬಹಿಷ್ಕಾರಕ್ಕೊಳಗಾದ ಪುರೋಹಿತರ ಬಗೆಗಿನ ಅನಾದರವನ್ನು ತಿರಸ್ಕರಿಸುವುದೂ ಕಾಳಾಮುಖರ ಉದ್ದೇಶವಾಗಿತ್ತು.

೧೬೩. ರಾಜಾರಾಮ ಹೆಗಡೆ, ಪೂರ್ವೋಕ್ತ, ಪು.೧೯೬

೧೬೪. ದೇಸಾಯಿ ಪಿ.ಬಿ., ಪೂರ್ವೋಕ್ತ, ಪು.೩೯೭-೯೮

೧೬೫. ಎ.ಇಂ., ಸಂ.V, ಪು.೨೪೫-೨೫೨

೧೬೬. ಏಕಾಂತರಾಮಯ್ಯನ ಚರಿತ್ರೆಯು ಅಬ್ಬಲೂರು ಶಾಸನ, ಹರಿಹರನ ರಗಳೆ ಮತ್ತು ಅಬ್ಬಲೂರು ಚರಿತೆಗಳಲ್ಲಿ ಪೂರ್ಣ ಪ್ರಮಾಣದಲ್ಲಿ ದೊರೆಯುತ್ತದೆ. ವಿಶೇಷ ಸಂಗತಿ ಎಂದರೆ ರಾಮಯ್ಯನ ವಿವರದ ಬಗೆಗೆ ಅಬ್ಬಲೂರು

ಶಾಸನದಲ್ಲಿನ ಉಲ್ಲೇಖಕ್ಕೂ, ಸಾಹಿತ್ಯ ಕೃತಿಗಳಲ್ಲಿನ ಉಲ್ಲೇಖಕ್ಕೂ ಹೋಲಿಕೆ ಇದೆ. ಈ ರೀತಿ ಶರಣರನ್ನು ಕುರಿತ ಶಾಸನ ಮತ್ತು ಸಾಹಿತ್ಯ ಕೃತಿಗಳಲ್ಲಿನ ವಿವರದಲ್ಲಿ ಒಂದೇ ವಿವರ ಕಂಡು ಬರುವುದು ವಿರಳ.

೧೬೭. ದೇಸಾಯಿ ಪಿ.ಬಿ., ಪೂರ್ವೋಕ್ತ, ಪು.೧೮೩

೧೬೮. ಅದೇ.

೧೬೯. ಎ.ಇಂ., ಸಂ.V, ಪು.೨೪೫-೨೫೨, ಶಾಸನದ ಕೊನೆಯ ಪಂಕ್ತಿ

೧೭೦. ಭೋಜರಾಜ ಪಾಟೀಲ, ನಾಗರಖಂಡ-೭೦ ಒಂದು ಅಧ್ಯಯನ, ಪು.೨೬೭-೨೬೮

೧೭೧. ಮೇಲಿನ ಟಿಪ್ಪಣಿ ೧೬೭ ರಂತೆ

೧೭೨. ಕ.ಇನ್ಸ್., ಸಂ.VI, ಶಾ.ಸಂ.೩೭

೧೭೩. ಅದೇ, ಶಾ.ಸಂ.೩೧

೧೭೪. ಅದೇ, ಶಾ.ಸಂ.೭ (ಹಾವೇರಿ ಜಿಲ್ಲೆಯ ರಾಜಕೀಯ ಅಧ್ಯಾಯದಲ್ಲಿ ಈ ವಿಷಯವನ್ನು ವಿವರಿಸಿದೆ).

೧೭೫. ಕ.ಇನ್ಸ್., ಸಂ.VI, ಶಾ.ಸಂ.೪೪, ೫೦-೫೧ ನೇ ಸಾಲುಗಳು

೧೭೬. ಸೌ.ಇಂ.ಇನ್ಸ್., ಸಂ.IX, ಶಾ.ಸಂ.೧೨೪

೧೭೭. ಎ.ರಿ.ಸೌ.ಇಂ.ಎ., ವರದಿ ವರ್ಷ ೧೯೬೦-೬೧, ನಂ.೪೭೧

೧೭೮. ಕಲಬುರ್ಗಿ ಎಂ.ಎಂ., ಶಾಸನಗಳಲ್ಲಿ ಶಿವಶರಣರು, ಪು. ೧೧೩

೧೭೯. ಕ.ಇನ್ಸ್., ಸಂ.VI, ಶಾ.ಸಂ.೭

೧೮೦. ಅದೇ, ಶಾ.ಸಂ.೪೩

೧೮೧. ಎ.ಇಂ., ಸಂ.V, ಪು.೨೪೬-೫೨

೧೮೨. ಹೆಚ್ಚಿನ ವಿವರಕ್ಕೆ, ನಾಗಭೂಷಣ, ಸಿ., ಪೂರ್ವೋಕ್ತ, ಪು.೧೬೪-೬೬

೧೮೩. ‘ಪುರುಷ’ ಶಬ್ದವು ‘ಪೊ’ ಧಾತುವಿನಿಂದ ಆದುದು. ಅದು ‘ಪಾಲನಪೂರಣಯೋಃ’ ಎಂದರೆ ಕಾಪಾಡುವುದು, ತುಂಬುವುದು ಎಂಬ ಅರ್ಥಗಳಲ್ಲಿ ಉಪಯೋಗವಾಗುವ ಪದಗಳ ಧಾತು. ಎಲ್ಲವನ್ನು ತುಂಬಿ ಅದಕ್ಕೆಲ್ಲ ಸತ್ವವನ್ನು ಕೊಡುವುದು ‘ಪುರುಷ’ ಎಂದು ಅರ್ಥ ಮಾಡಬಹುದು.

೧೮೪. ಸಂಕ್ಷಿಪ್ತ ಕನ್ನಡ ನಿಘಂಟು (ಕನ್ನಡ-ಕನ್ನಡ), ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು.೫೩೬

೧೮೫. ಋಗ್ವೇದ, ೨-೧೫-೩

೧೮೬. ಋಗ್ವೇದ, ೧೦-೫೪-೩

೧೮೭. ಋಗ್ವೇದ, ೬-೧೭-೧೦, ಋ ೧-೧೫೬-೫

೧೮೮. ಋಗ್ವೇದ, ೧೦-೪-೨

೧೮೯. ಬೃಂದಾವನ ಸಿ. ಭಟ್ಟಾಚಾರ್ಯ, ‘ಇಂಡಿಯನ್ ಇಮೇಜ್ಸ್’, ಪು.೪

೧೯೦. ರಾಮಚಂದ್ರರಾವ್ ಅವರು ‘ಆಗಮ’ ಎನ್ನುವ ಮಾತಿಗೆ ಇರುವ ಹಲವಾರು ಅರ್ಥಗಳನ್ನು ಹೇಳಿರುವರು. ವೇದವೆಂದು ಒಂದು ಅರ್ಥ; ಶಾಸ್ತ್ರವೆಂದು ಇನ್ನೊಂದು; ತಂತ್ರವೆಂದು ಮತ್ತೊಂದು. ಗುರಿಯಾದ ಪರಮ ಪದವನ್ನು ಮುಟ್ಟಿಸುವ ಸಾಧನೆಯೆಂದು ಅರ್ಥೈಸಿದ್ದಾರೆ. ನೋಡಿ : ಮೂರ್ತಿಶಿಲ್ಪ ನೆಲೆ ಹಿನ್ನೆಲೆ, ಪು. ೨೧೦

೯೧. ಹಿರೇಮಠ ಆರ್.ಸಿ., **ದುಹಾಯಾತ್ರೆ**, ಪು.೭೯

೯೨. ಆಗಮಿಕ ಕೃಷ್ಣದೀಕ್ಷಿತ, ಆಗಮಗಳು, ಅ.ನ.ಕೃಷ್ಣರಾಯ (ಸಂ) **ಭಾರತೀಯ ಸಂಸ್ಕೃತಿ ದರ್ಶನ**, ಪು.೬೯

೯೩. ವೆಂಕಟಸುಬ್ಬಯ್ಯ, ಎ., ವೆಂಕಣ್ಣಯ್ಯ ಟಿ.ಎಸ್. (ಅನು) ೧೨ನೇ ಶತಮಾನದ ಒಂದು ವಿಶ್ವವಿದ್ಯಾಲಯ, **ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ**, ಸಂ.೧೧, ಪು.೧೬

೯೪. ರಘುನಾಥಭಟ್ಟ, ಎಚ್.ಆರ್., ಸಮ್ ಅಸ್ಪೆಕ್ಟ್ಸ್ ಆಫ್ ಆರ್ಟ್ ಆ್ಯಂಡ್ ಆರ್ಕಿಟೆಕ್ಚರ್ ಆಫ್ ಬಳ್ಳಿಗಾವೆ, ದೇವರಾಜ ಡಿ.ವಿ., ಮತ್ತು ಚನ್ನಬಸಪ್ಪ ಎಸ್. ಪಾಟೀಲ(ಸಂ), **ಆರ್ಟ್ ಆ್ಯಂಡ್ ಆರ್ಕಿಟೆಕ್ಚರ್ ಇನ್ ಕರ್ನಾಟಕ**, ಪು.೨೦೮

೯೫. **ಎ.ಇಂ.**, ಸಂ.V ಪು.೨೨೯

೯೬. **ಇಂ.ಆಂ.**, ಸಂ.೧೦, ಪು.೨೪೯-೨೫೫

೯೭. ಶಿವನ ಪಂಚಮುಖಗಳಲ್ಲಿ ತತ್ಪುರುಷ ಮುಖವು ಪೂರ್ವಾಭಿಮುಖ ಆಗಿರುವುದರಿಂದಲೂ, ಕರ್ಮರೂಪವಾಗಿರುವುದರಿಂದಲೂ ಈ ಮುಖವು ದೇವಾಲಯಗಳಲ್ಲಿ ಯೋಗ್ಯವಾದದ್ದು. ಆದ್ದರಿಂದ ಪೂರ್ವಾಭಿಮುಖವಾದ ಪಶ್ಚಿಮಗೃಹವು ಈಶ್ವರನಿಗೆ ಮೀಸಲಾದ ಗರ್ಭಗೃಹವಾಗಿದೆ. ನೋಡಿ: ವಸುಂಧರಾ ಫಿಲಿಯೋಜಾ, ಪೂರ್ವೋಕ್ತ, ಪು.೨೨

೯೮. ಕ್ರಿಸ್ತಶಕ ಐದನೇ ಶತಮಾನದಲ್ಲಿಯೇ ಅಗ್ರಹಾರಗಳು ಕಾಣಿಸಿಕೊಂಡಿದ್ದವು ಎಂದು ನಂಬಲು ಆಧಾರಗಳಿವೆ. ಕದಂಬರ ಅನೇಕ ತಾಮ್ರಪಟಗಳು, ವೈದಿಕರಿಗೆ ಕೊಟ್ಟ ದತ್ತಿಗಳನ್ನು ಹೇಳುತ್ತವೆ.

೯೯. ಚಿದಾನಂದಮೂರ್ತಿ ಎಂ., **ಪೂರ್ವೋಕ್ತ**, ಪು.೨೩೨

೧೦೦. **ಸೌ.ಇಂ.ಇನ್ಸ್.**, ಸಂ.XVIII, ಶಾ.ಸಂ.೧೨೪

೧೦೧. ರಾಜಾರಾಮ ಹೆಗಡೆ, **ಪೂರ್ವೋಕ್ತ**, ಪು.೧೫೦

೧೦೨. **ಬಾಂಬೆ ಕರ್ನಾಟಕ ಇನ್ಸ್‌ಕ್ರಿಪ್ಶನ್ಸ್**, ಸಂ.I, ಶಾ.ಸಂ.೧೭೪, ಕ್ರಿ.ಶ.೧೧೨೪

೧೦೩. ಚಿದಾನಂದಮೂರ್ತಿ ಎಂ., **ಪೂರ್ವೋಕ್ತ**, ಪು.೨೩೪

೧೦೪. ಲೊರೆಂಜನ್, ಅವರು ಕಾಳಾಮುಖರ ಬಗೆಗಿನ ೬೫ಕ್ಕೂ ಹೆಚ್ಚು ಶಾಸನಗಳನ್ನು ಬೆಳಕಿಗೆ ತಂದಿದ್ದಾರೆ. ಅವುಗಳಲಲ್ಲಿ ೫೦ಕ್ಕೂ ಹೆಚ್ಚು ಬಳ್ಳಿಗಾವೆಯಲ್ಲಿಯೇ ದೊರೆತಿರುವುದು ಗಮನಾರ್ಹ. ಕಾಳಾಮುಖರು ದೇವಾಲಯಗಳನ್ನು ನಿರ್ಮಿಸಿ ಅವುಗಳನ್ನು ವಿದ್ಯಾಕೇಂದ್ರಗಳನ್ನಾಗಿ ಮಾಡಿದ್ದನ್ನು ಅವರು ಗಮನಿಸಿದ್ದಾರೆ. ನೋಡಿ : ಡೆವಿಡ್ ಎನ್. ಲೊರೆಂಜನ್, **ಪೂರ್ವೋಕ್ತ**, ಪು.೭೬

೧೦೫. ರಾಜಾರಾಮ ಹೆಗಡೆ, **ಪೂರ್ವೋಕ್ತ**, ಪು.೧೫೨

೧೦೬. ರಾಜಾರಾಮ ಹೆಗಡೆ ಅವರು ಶಿವ ಮತ್ತು ವಿಷ್ಣುವಿನ ಮಧ್ಯೆ ಪೌರಾಣಿಕ ಹೊಂದಾಣಿಕೆಯನ್ನು ಹೇಳುತ್ತಾ, 'ಶೈವ-ವೈಷ್ಣವ ಹೊಂದಾಣಿಕೆ ಪೌರಾಣಿಕ ಸಾಹಿತ್ಯದಿಂದ ಅಮೂರ್ತ ತಾತ್ವಿಕತೆಯಲ್ಲೂ ಮುಂದುವರೆದಿದನ್ನು ಗಮನಿಸುತ್ತೇವೆ. ಪೌರಾಣಿಕ ಸಾಹಿತ್ಯದಲ್ಲಿ ಬ್ರಹ್ಮ-ವಿಷ್ಣು-ಮಹೇಶ್ವರ ತ್ರಿಮೂರ್ತಿಗಳು ಸೃಷ್ಟಿ, ಸ್ಥಿತಿ, ಲಯಗಳೆಂಬ ಮೂರು ಕಾರ್ಯಗಳನ್ನು ನಿರ್ವಹಿಸುವ ತತ್ವಗಳಾಗಿ ಮೂರು ಸಮಾನ ಪಾರಮ್ಯದಲ್ಲಿ ಕಂಡುಕೊಳ್ಳುತ್ತವೆ. ವೈದಿಕ ಕಾಲದಿಂದಲೂ (ರುದ್ರ) ಶಿವನನ್ನು ಪುರುಷ ಹಾಗೂ ವಿಷ್ಣುವನ್ನು ಸ್ತ್ರೀ ತತ್ವವನ್ನಾಗಿ ಗುರುತಿಸಿಕೊಂಡು

ಬರಲಾಗಿದೆ. ಹಾಗಾಗಿ ಹರಿಹರ ಮೂರ್ತಿಯಲ್ಲಿ ವಿಷ್ಣು ವಾಮ ಭಾಗವಾಗಿರುತ್ತಾನೆ. ದೈತ್ಯ ಸಂಹಾರ ಕಾರ್ಯದಲ್ಲಿ ಹರಿಹರರಿಂದ ಹುಟ್ಟಿದ ಕುಮಾರನ ಪೌರಾಣಿಕ ಕಥೆಯಲ್ಲೂ ಹರಿಯು ಸ್ತ್ರೀ ರೂಪವನ್ನು ತಾಳುತ್ತಾನೆ. ಇದಲ್ಲದೆ ಮಾನುಷಕೃತ ಸ್ಥಾವರಲಿಂಗದ ವಿನ್ಯಾಸದಲ್ಲಿಯೂ ಈ ಮೂರು ತತ್ವಗಳಾದ ಬ್ರಹ್ಮ, ವಿಷ್ಣು, ಮಹೇಶ್ವರರನ್ನು ಸೇರಿಸಿರುವುದು ಬಹು ಮಹತ್ವದ ವಿಷಯ. ಲಿಂಗದ ಚತುರ್ಭುಜ ಭಾಗವು ಬ್ರಹ್ಮಭಾಗವು, ಅಷ್ಟಭುಜ ಭಾಗವು ವಿಷ್ಣು ಭಾಗ ಈ ಭಾಗದಲ್ಲಿ ಲಿಂಗ ಪೀಠವು (ಯೋನಿ) ಬರುತ್ತದೆ. ಮತ್ತು ವೃತ್ತಾಕಾರದ ಮೇಲಿನ ಭಾಗವು ರುದ್ರಭಾಗ ಇಲ್ಲಿಯೂ ಕೂಡ ವಿಷ್ಣು ಸ್ತ್ರೀ ತತ್ವವಾಗಿಯೇ ಕಂಡುಕೊಳ್ಳುತ್ತಾನೆ. ಎಂದು ಅಭಿಪ್ರಾಯಪಟ್ಟಿರುವರು. ನೋಡಿ : ರಾಜಾರಾಮ ಹೆಗಡೆ, ಪೂರ್ವೋಕ್ತ, ಪು.೧೫೨

೨೦೭. ರಾಜಾರಾಮ ಹೆಗಡೆ, ಪೂರ್ವೋಕ್ತ, ಪು.೧೫೩

೨೦೮. ಗೋಪಾಲರಾವ್ ಎಚ್.ಎಸ್. ಪೂರ್ವೋಕ್ತ, ಪು.೧೬೬

೨೦೯. ಲಲಿತಾ ಪ್ರಸಾದ ಪಾಂಡೆ, ಸನ್ ವರ್‌ಷಿಪ್ ಇನ್ ಏನ್ಶಂಟ್ಸ್ ಇಂಡಿಯಾ, ಪು.೧

೨೧೦. ಅದೇ.

೨೧೧. ಶ್ರೀಕಂಠಶಾಸ್ತ್ರಿ ಎಸ್., ಭಾರತೀಯ ಸಂಸ್ಕೃತಿ, ಪು.೧೭೬

೨೧೨. ಅದೇ.

೨೧೩. ಅದೇ.

೨೧೪. ನಂದಿಮಠ ಎಸ್.ಸಿ., ಕರ್ನಾಟಕ ಧರ್ಮಗಳು, ಪು.೧೫೧

೨೧೫. ಮೇಲಿನ ಟಿಪ್ಪಣಿ ೨೦೯ರಂತೆ

೨೧೬. ಅದೇ.

೨೧೭. ಅದೇ.

೨೧೮. ಕ.ಇನ್ಸ್., ಸಂ.VI, ಶಾ.ಸಂ.೮

೨೧೯. ಅದೇ, ಶಾ.ಸಂ.೨೦

೨೨೦. ಅದೇ, ಶಾ.ಸಂ.೧೯

೨೨೧. ಸೌ.ಇಂ.ಇನ್ಸ್., ಸಂ. XVIII, ಶಾ.ಸಂ.೭೩

೨೨೨. ಡೆವಿಡ್ ಎನ್. ಲೊರೆಂಜನ್, ಪೂರ್ವೋಕ್ತ, ಪು.೧೩೧

೨೨೩. ಅದೇ.

೨೨೪. ಕಪಟರಾಳ ಕೃಷ್ಣರಾಯರು, ಕರ್ನಾಟಕ ಲಾಕುಳಶೈವರ ಇತಿಹಾಸ, ಪು. ೮೪

೨೨೫. ಹೆಚ್ಚಿನ ವಿವರಕ್ಕೆ; ನಾಗಭೂಷಣ ಸಿ. ಅವರ ಕನ್ನಡ ಶಾಸನ ಸಾಂಸ್ಕೃತಿಕ ಶೋಧನೆ, ದೀಕ್ಷಿತ್ ವಿ.ಜಿ. ಮತ್ತು ಜ್ಞಾನಾನಂದ ಅವರ ಮೂರು ಜಾವಿ ದೇವರ ಚರಿತ್ರೆ ಮತ್ತು ಕಲಬುರ್ಗಿ ಎಂ.ಎಂ. ಅವರ ಶಾಸನಗಳಲ್ಲಿ ಶಿವಶರಣರು ಪುಸ್ತಕಗಳನ್ನು ಗಮನಿಸಬಹುದು.

೨೨೬. ಎ.ರಿ.ಸೌ.ಇಂ.ಎ., ವರದಿ ವರ್ಷ ೧೯೪೯-೫೦, ಶಾ.ಸಂ.೧೨೯

೨೨೭. ಅದೇ, ಶಾ.ಸಂ.೧೩೦

೨೨೮. ಅದೇ, ಶಾ.ಸಂ.೧೨೮

೨೨೯. ಎ.ಇಂ., ಸಂ.XV, ಪು.೩೩೨

೨೩೦. ಆರ್.ಎಂ.ಷಡಕ್ಷರಯ್ಯ ಅವರು ಈ ದೇವಾಲಯವು ಮೂರು ಗರ್ಭಗೃಹಗಳನ್ನು ಹೊಂದಿದೆ ಮತ್ತು ಮೂರೂ ಗರ್ಭಗೃಹಗಳಿಗೆ ತೆರೆದ ಅಂತರಾಳಗಳಿವೆ ಎಂದು ದಾಖಲಿಸಿರುವರು(ಇ.ದ., ಸಂ.೧೦, ಪು.೫೮).

೨೩೧. ಕ.ಇನ್ಸ್., ಸಂ.VI, ಶಾ.ಸಂ.೮

೨೩೨. ಸಾಮಾನ್ಯವಾಗಿ ಒಂಬತ್ತು ಅಂಕಣಗಳನ್ನು ಒಳಗೊಂಡ ವಾಸ್ತುರಚನೆಯನ್ನು ನವರಂಗ ಎಂದು ಕರೆಯಲಾಗಿದೆ. ನವರಂಗಕ್ಕೆ ನೃತ್ಯಮಂಟಪ, ಮಹಾಮಂಟಪ, ಗೂಢಮಂಟಪ ಎಂಬ ಪರ್ಯಾಯ ಪದಗಳು ಇವೆ. ಪ್ರಸ್ತುತ ಅಧ್ಯಯನದಲ್ಲಿ ನಾಲ್ಕಕ್ಕಿಂತ ಹೆಚ್ಚು ಸ್ತಂಭಗಳನ್ನು ಹೊಂದಿ ಒಂಬತ್ತು ಅಂಕಣಗಳಿಗಿಂತ ಹೆಚ್ಚು ಅಂಕಣಗಳನ್ನು ಒಳಗೊಂಡ ನವರಂಗವನ್ನು ಗೂಢಮಂಟಪ ಎಂದು ಕರೆಯಲಾಗಿದೆ.

೨೩೩. ಸೌ.ಇಂ.ಇನ್ಸ್., ಸಂ.XX, ಶಾ.ಸಂ.೧೨೪

೨೩೪. ಅದೇ, ನಂ.೪೯

೨೩೫. ನಾಗಯ್ಯ ಜಿ.ಎಂ., ಕಲಕೇರಿ, ಪು.೧

೨೩೬. ಎ.ಇಂ., ಸಂ.V, ಪು.೨೪೫

೨೩೭. ಎ.ಕ. (ಹಳೆಯ) ಸಂ.VII, ಶಿಕಾ ಶಾ.ಸಂ.೧೦೨

೨೩೮. ಕ.ಇನ್ಸ್., ಸಂ.V, ಶಾ.ಸಂ.೧೯

೨೩೯. ಧಾ.ಜಿ.ಗ್ಯಾ., ಪು.೯೬೩

೨೪೦. ಇಂ.ಆಂ., ಸಂ. ೧೦, ಪು.೨೪೯

೨೪೧. ಎ.ಇಂ., ಸಂ.V, ಪು.೨೨೯

೨೪೨. ಇಂ.ಆಂ., ಸಂ.೧೦, ಪು.೨೫೩

೨೪೩. ಸೌ.ಇಂ.ಇನ್ಸ್., ಸಂ.XX, ಶಾ.ಸಂ.೪೯

೨೪೪. ಎ.ಕ. (ಹಳೆಯ) ಸಂ.VII, ಶಿಕಾ ೧೦೨, ಕ್ರಿ.ಶ.೧೧೬೭

೨೪೫. ಇಂ.ಆಂ., ಸಂ.೧೦, ಪು.೨೫೩

೨೪೬. ಎ.ಇಂ., ಸಂ.V, ಪು.೨೨೯

೨೪೭. ಸೌ.ಇಂ.ಇನ್ಸ್., ಸಂ. XX, ಶಾ.ಸಂ.೨೨೦

೨೪೮. ಮೇಲಿನ ಅಡಿಟಿಪ್ಪಣಿ ೨೪೬ರಂತೆ.

೨೪೯. ಸೌ.ಇಂ.ಇನ್ಸ್., ಸಂ.XX, ಶಾ.ಸಂ.೩೩೨

೨೫೦. ಗೋಪಾಲರಾವ್ ಎಚ್.ಎಸ್. ಪೂರ್ವೋಕ್ತ, ಪು.೧೬೬

೨೫೧. ಸೌ.ಇಂ.ಇನ್ಸ್., ಸಂ.XV-II, ಶಾ.ಸಂ.೨

೨೫೨. ಅದೇ, ಸಂ.XI,-II, ಶಾ.ಸಂ.೧೩೨

೨೫೩. ಇನ್‌ಸ್ಕ್ರಿಪ್ಷನ್ಸ್ ಫ್ರಂ ನಾಂದೇಡ್ ಡಿಸ್ಟ್ರಿಕ್ಟ್, ಶಾ.ಸಂ.೧೨

೨೫೪. ಸೌ.ಇಂ. ಇನ್ಸ್. ಸಂ.XX, ಶಾ.ಸಂ.೨೨೦

೨೫೫. ಸೆಲೆಕ್ಟ್ ಎಪಿಗ್ರಾಫ್ಸ್ ಆಫ್ ಆಂಧ್ರಪ್ರದೇಶ, ಶಾ.ಸಂ.೮

೨೫೬. ಸೌ.ಇಂ. ಇನ್ಸ್., ಸಂ.XV-II, ಶಾ.ಸಂ.೧೩೪

೨೫೭. ಅದೇ, ಸಂ.XVIII, ಶಾ.ಸಂ.೧೧೮

೨೫೮. ಅದೇ, ಸಂ.XI-I, ಶಾ.ಸಂ.೧೦೩

೨೫೯. ಗೋಪಾಲ ಬಾ.ರಾ., ಚಾಲುಕ್ಯಾಸ್ ಆಫ್ ಕಲ್ಯಾಣ ಆ್ಯಂಡ್ ಕಲಚೂರಿಸ್, ಪು.೪೨೧

೨೬೦. ಚನ್ನಬಸಪ್ಪ ಎಸ್. ಪಾಟೀಲ, ಟೆಂಪಲ್ಸ್ ಆಫ್ ರಾಯಚೂರು ಆ್ಯಂಡ್ ಬಳ್ಳಾರಿ ಡಿಸ್ಟ್ರಿಕ್ಟ್, ಪು.೪೨

೨೬೧. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೧೪೦

೨೬೨. ಸೌ.ಇಂ. ಇನ್ಸ್. ಸಂ.XX, ಶಾ.ಸಂ.೪೯

೨೬೩. ಇಸ್ಮಾಯಿಲ್ ಕೆ., ಕರ್ನಾಟಕ ಟೆಂಪಲ್ಸ್ ದೆಯರ್ ರೋಲ್ ಇನ್ ಸೋಶಿಯಾ ಎಕೆನಾಮಿಕ್ ಲೈಫ್, ಪು.೧೪೧

೨೬೪. ಎ.ಕ.(ಹಳೆಯ), ಸಂ.VII, ಶಿಕಾ ೧೮೫

೨೬೫. ಎ.ಇಂ., ಸಂ.V, ಪು.೨೩೩

೨೬೬. ಸೌ.ಇಂ.ಇನ್ಸ್., ಸಂ.XVIII, ಶಾ.ಸಂ.೨೯೫

೨೬೭. ಎ.ಇಂ., ಸಂ.V, ಪು.೨೧೯

೨೬೮. ಎ.ಕ.(ಹಳೆಯ), ಸಂ.VII, ಶಿಕಾ.೯೨

೨೬೯. ಅಣ್ಣೀಗೇರಿ ಎ.ಎಂ. ಮತ್ತು ಮೇವುಂಡಿ ಮಲ್ಲಾರಿ (ಸಂ), ಶಾಸನ ಸಾಹಿತ್ಯ ಸಂಚಯ, ಪು.೭೯

೨೭೦. ಕನ್ನಡ ರತ್ನಕೋಶ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು, ಪು.೧೧೪

೨೭೧. ದೇವರೇ ಇಲ್ಲ ಎನ್ನುವುದು 'ನಾಸ್ತಿಕರು' ಎನ್ನುವುದು ರೂಢಿಯಲ್ಲಿದೆ. ಆದರೆ ಮನುವಿನ ಪ್ರಕಾರ 'ನಾಸ್ತಿಕೊ ವೇದ ನಿಂದಕಃ' ವೇದ ಪ್ರಮಾಣವನ್ನು ಒಪ್ಪದವರು ನಾಸ್ತಿಕರು, ಒಪ್ಪುವವರು ಆಸ್ತಿಕರು.

೨೭೨. ಕೆ.ರಾಘುವೇಂದ್ರ ಪೈ, ದಾಸ ಸಾಹಿತ್ಯ ಮತ್ತು ಯೋಗದರ್ಶನ ಪಾರಸ್ಪರಿಕ ಅಧ್ಯಯನ(ಡಿ.ಲಿಟ್. ಪದವಿಗಾಗಿ ೨೦೦೫ರಲ್ಲಿ ಕ.ವಿ.ವಿ.ಹಂಪಲಿಗೆ ಸಲ್ಲಿಸಿದ ಮಹಾ ಪ್ರಬಂಧ), ಪು.೯೬

೨೭೩. ಅದೇ.

೨೭೪. ಎದುರ್ಕಳೆ ಕೆ. ಶಂಕರನಾರಾಯಣ ಭಟ್ಟ, ಹಿಂದೂ ಧರ್ಮ ಪರಿಚಯ, ಪು.೯೨-೯೩

೨೭೫. ಅದೇ.

೨೭೬. ಗೌ.ಮ.ಉಮಾಪತಿ ಶಾಸ್ತ್ರಿ (ಸಂ) ವಿವೇಕ ಚಿಂತಾಮಣಿ- ನಿಜಗುಣ ಶಿವಯೋಗಿ ವಿರಚಿತ, ಪು.೧

೨೭೭. ಎದುರ್ಕಳೆ ಕೆ. ಶಂಕರನಾರಾಯಣ ಭಟ್ಟ, ಪೂರ್ವೋಕ್ತ, ಪು.೯೧

೨೭೮. ಎ.ಇಂ., ಸಂ.V, ಪು.೨೧೯

೨೭೯. ಕಪಟರಾಳ ಕೃಷ್ಣರಾಯ, ಕರ್ನಾಟಕ ಲಾಕುಳ ಶೈವರ ಇತಿಹಾಸ, ಪು.೮೨

೨೮೦. ಸೌ.ಇಂ.ಇನ್ಸ್., ಸಂ.XVIII, ಶಾ.ಸಂ.೨೯೫

೨೮೧. ಕಪಟರಾಳ ಕೃಷ್ಣರಾಯ, ಪೂರ್ವೋಕ್ತ, ಪು.೮೨

೨೮೨. ಎದುರ್ಕಳ ಕೆ. ಶಂಕರನಾರಾಯಣ ಭಟ್ಟ, ಪೂರ್ವೋಕ್ತ, ಪು.೯೩

೨೮೩. ಸೌ.ಇಂ.ಇನ್ಸ್., ಸಂ.XV, ಶಾ.ಸಂ.೭೩

೨೮೪. ಕಪಟರಾಳ ಕೃಷ್ಣರಾಯ, ಪೂರ್ವೋಕ್ತ, ಪು.೮೫

೨೮೫. ಸೌ.ಇಂ.ಇನ್ಸ್., ಸಂ.XVIII, ಶಾ.ಸಂ.೨೯೬

೨೮೬. ಎ.ಇಂ., ಸಂ.V, ಶಾ.ಸಂ.೨೧೯

೨೮೭. ಡೆವಿಡ್ ಎನ್. ಲೊರೆಂಜನ್, ಪೂರ್ವೋಕ್ತ, ಪು.೯೯

೨೮೮. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೧೪೬

೨೮೯. ಕಲಬುರ್ಗಿ ಎಂ.ಎಂ., ಮಾರ್ಗ-೪, ಪು.೨೬೪

೨೯೦. ಧಾ.ಜಿ.ಶಾ.ಸೂ., ಪು.೫೪

೨೯೧. ಕ.ಇನ್ಸ್., ಸಂ.VI, ಶಾ.ಸಂ.೧೩

೨೯೨. ಇಂ.ಆಂ., ಸಂ.XII, ಪು.೨೭೦-೭೨

೨೯೩. ಸೌ.ಇಂ.ಇನ್ಸ್., VI, ಶಾ.ಸಂ.೩೨೬

೨೯೪. ಅದೇ, ಶಾ.ಸಂ.೧೯೨

೨೯೫. ಅದೇ, ಶಾ.ಸಂ.೩೪೯

೨೯೬. ಕ.ಇನ್ಸ್., ಸಂ.VI, ಶಾ.ಸಂ.೩೪

೨೯೭. ಡಾ.ಆರ್.ಎಂ.ಷಡಕ್ಷರಯ್ಯನವರು ಈ ದೇವಾಲಯದ ಬಗ್ಗೆ ಬರೆಯುತ್ತಾ ದೇವಾಲಯದ ಎಡಬದಿಗೆ ಅಂಗಳದಲ್ಲಿ ಶೈವದ್ವಾರಪಾಲಕರನ್ನು ಹೊಂದಿದ ಎರಡು ದ್ವಾರಫಲಕಗಳಿವೆ. ಅವು ಈ ದೇವಾಲಯಕ್ಕೆ ಸಂಬಂಧಪಟ್ಟ ಭಾಗಗಳಾಗಿವೆ ಎಂದು ಹೇಳಿರುವರು. (ಇ.ದ., ಸಂ.೧೦, ಪು.೫೭) ಈಗ ಈ ಫಲಕಗಳು ಕಂಡುಬರುವುದಿಲ್ಲ. ಬಹುಶಃ ದಕ್ಷಿಣದಿಕ್ಕಿನ ಗರ್ಭಗೃಹಕ್ಕೆ ಸಂಬಂಧಪಟ್ಟ ಭಾಗಗಳಾಗಿರಬಹುದು.

೨೯೮. ಸೌ.ಇಂ.ಇನ್ಸ್., ಸಂ. XVIII, ಶಾ.ಸಂ.೨೦

೨೯೯. ಅದೇ, ಶಾ.ಸಂ.೧೭

೩೦೦. ಸೌ.ಇಂ.ಇನ್ಸ್., ಸಂ.XVIII, ಶಾ.ಸಂ.೧೯೨

೩೦೧. ಕ.ಇನ್ಸ್., ಸಂ.VI, ಶಾ.ಸಂ.೧೨

೩೦೨. ರಾಜಾರಾಮ ಹೆಗಡೆ, ಇ.ದ., ಸಂ.೧೧, ಪು.೧೪೩

೩೦೩. ಗದುಗಿನ ತ್ರಿಕೂಟೇಶ್ವರ ದೇವಾಲಯವೂ ಸಹ ಕಾಳಾಮುಖ ಶೈವಪಂಥದವರ ಮೇಲ್ವಿಚಾರಣೆಯಲ್ಲಿ ಇದ್ದ ಒಂದು ಸಂಸ್ಥೆ. ಈ ದೇವಾಲಯದಲ್ಲಿ ಕಾಳಾಮುಖರ ದಾರ್ಶನಿಕ ನೋಟವಾದ ಈಶ್ವರನ ಅನಿತ್ಯ ರೂಪವನ್ನು, ಮುಖ್ಯ ಗೃಹದಲ್ಲಿ ಒಂದೇ ಪೀಠದಲ್ಲಿ ಪ್ರತಿಷ್ಠಾಪಿಸಿರುವ ಮೂರು ಲಿಂಗಗಳ ಮುಖಾಂತರ ನೋಡಬಹುದು. ಮತ್ತು ಪೂರ್ವ ದಿಕ್ಕಿನ ಗರ್ಭಗೃಹದಲ್ಲಿ ಸೂರ್ಯನನ್ನು, ನವರಂಗಕ್ಕೆ ಇರುವ ದಕ್ಷಿಣ ದ್ವಾರವನ್ನು ಮತ್ತು ದೇವಾಲಯದ ದಕ್ಷಿಣ ದಿಕ್ಕಿನಲ್ಲಿರುವ ಸರಸ್ವತಿ ಮಂಟಪಗಳನ್ನು ಗಮನಿಸಿದರೆ ಇದು ತ್ರೈಪುರುಷ ದೇವಾಲಯದ

ಮಾದರಿ ಎಂದು ಹೇಳಬಹುದು. ಆದುದರಿಂದ ಗದುಗಿನ ತ್ರಿಕೂಟೇಶ್ವರ ದೇವಾಲಯವು ನ್ಯಾಯದರ್ಶನ ದೇವಾಲಯವು ಹೌದು ತ್ರೈಪುರುಷ ದೇವಾಲಯವೂ ಹೌದು ಎಂಬುದು ಗಮನಾರ್ಹ.

೩೦೪. ಶೆಟ್ಟರ್ ಎಸ್., ಪೂರ್ವೋಕ್ತ, ಪು.೧೯೧

೩೦೫. ಎ.ರಿ.ಸೌ.ಇಂ.ಎ., ೧೯೩೨-೩೩, ನಂ.೧೬೦

೩೦೬. ಹಾನಗಲ್ಲ ತಾಲೂಕು ಹೊಂಬಳಿ ಊರಿನ ರಾಮೇಶ್ವರ ದೇವಾಲಯದ ಅಧಿಷ್ಠಾನ ಪ್ರಾಚೀನ ರಚನೆಯಾಗಿದ್ದು, ವಿಜಯನಗರ ಕಾಲದಲ್ಲಿ ದೇವಾಲಯವನ್ನು ಜೀರ್ಣೋದ್ಧಾರ ಮಾಡಿ ದೇವರನ್ನು ಪುನರ್‌ಪ್ರತಿಷ್ಠಾಪನೆ ಮಾಡಿದ ವಿಷಯವನ್ನು ವಿಜಯನಗರ ಅರಸ ನರಸಿಂಹರಾಯನ ಕಾಲದ ಶಾಸನವು ತಿಳಿಸುತ್ತದೆ.

ಅಧ್ಯಾಯ ೪

# ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳ ಮೂರ್ತಿಶಿಲ್ಪ

ಜಗತ್ತಿನ ಶಿಲ್ಪಕಲೆಯ ಇತಿಹಾಸದಲ್ಲಿ, ಭಾರತೀಯ ಶಿಲ್ಪಕಲೆಯು ಉನ್ನತವಾದ ಸ್ಥಾನಮಾನವನ್ನು ಪಡೆದುಕೊಂಡಿದೆ. ಪ್ರಾಚೀನ ಕಾಲದ ಭಾರತೀಯ ಶಿಲ್ಪಿಗಳು ಶಿಲ್ಪ ರಚನೆಯ ವಿಷಯದಲ್ಲಿ ಉತ್ಕೃಷ್ಟತೆಯನ್ನು ಸಾಧಿಸಿದ್ದಾರೆ. ಇಲ್ಲಿಯ ಶಿಲ್ಪಗಳು ಹೊರಸೂಸುವ ಉತ್ಕಟವಾದ ಭಾವನೆಗಳು, ದೈವತ್ವದ ಹಿನ್ನೆಲೆಯಲ್ಲಿ ಅಗೋಚರ ಶಕ್ತಿಯನ್ನು ಬಿಂಬಿಸುತ್ತವೆ. ಇಂಥ ಶಿಲ್ಪಗಳನ್ನು ಪ್ರಪಂಚದ ಯಾವ ಶಿಲ್ಪಗಳಲ್ಲಿಯೂ ಕಾಣುವುದಿಲ್ಲ.[೧] ಹಾವೆಲ್ ಇ.ಬಿ. ಅವರು "The best Indian sculpture touched a note of deeper feelings and finer sentiments than the best Greek. There is in this art a depth and spirituality which never entered into the soul of Greece" ಎಂದು ಅಭಿಪ್ರಾಯಪಟ್ಟಿದ್ದಾರೆ.[೨] ಶಿಲ್ಪವು ತಪಸ್ಸಿನಿಂದ ಮಾತ್ರವೇ ಸಿದ್ಧಿಸುವಂತಹದ್ದು. ಈ ತಪಸ್ಸಿಗೆ ಮೊದಲು ಸಂಕಲ್ಪ; ಸಂಕಲ್ಪದಿಂದ ಪ್ರೇರಿತವಾದ ಆಲೋಚನೆ, ಧ್ಯಾನ, ಭಾವನೆ ಇತ್ಯಾದಿಗಳನ್ನೆಲ್ಲ ಒಳಗೊಂಡ ಫಲವೇ ಶಿಲ್ಪ.[೩]

'ಶಿಲ್ಪ' ಎನ್ನುವುದು ಮೊದಲು ಅರವತ್ನಾಲ್ಕು ವಿದ್ಯೆಗಳನ್ನು ಒಳಗೊಂಡು ವ್ಯಾಪಕವಾದ ಅರ್ಥವನ್ನು ಪಡೆದಿತ್ತಾದರೂ, ಮುಂದೆ ಇದರ ವ್ಯಾಪ್ತಿ ಪರಿಮಿತಗೊಂಡು 'ಶಿಲ್ಪ' ಎಂದರೆ 'ಮೂರ್ತಿಗಳ ನಿರ್ಮಾಣ' ಎಂಬ ಅರ್ಥಕ್ಕೆ ಸೀಮಿತವಾಯಿತು. 'ಮೂರ್ತಿ' ಎಂಬ ಪದವು ಆ ಪದಕ್ಕೆ ಪರ್ಯಾಯವಾಗಿ ಬಳಸಿದ ಪದಗಳಾದ ಪ್ರತಿಮಾ, ಬಿಂಬ, ಪ್ರತಿಕೃತಿ, ವಿಗ್ರಹ ಮುಂತಾದ ಶಬ್ದಗಳು 'ಅದೊಂದು ಭೌತಿಕವಸ್ತು' ಎಂಬಂತೆ ಅರ್ಥ ಕೊಡುತ್ತವೆ. ನಿರಾಕಾರ ಕಲ್ಪನೆಯನ್ನು ಯಥಾವತ್ತಾಗಿ ಅನುಕರಿಸಿದ ಸಾಕಾರವಸ್ತು ಎಂಬ ಪರಿಕಲ್ಪನೆ ಇದೆ.

ಭಾರತೀಯ ಶಿಲ್ಪಗಳ ಮೇಲೆ ಸುತ್ತಲಿನ ಪ್ರಕೃತಿ ಸೌಂದರ್ಯವು ಹೆಚ್ಚು ಪ್ರಭಾವ ಬೀರಿರುವುದನ್ನು ಕಾಣುತ್ತೇವೆ. ಕಾಡು, ಪ್ರಾಣಿ, ಪಕ್ಷಿ, ನದಿ, ಬೆಟ್ಟ, ಮರ, ಹೂ, ಬಳ್ಳಿ ಹೀಗೆ ಎಲ್ಲವನ್ನು ನಯನ ಮನೋಹರವಾದದ್ದನ್ನು ತಮ್ಮ ಶಿಲ್ಪಗಳಲ್ಲಿ ಕಂಡರಿಸಿದ್ದನ್ನು ಕಾಣುತ್ತೇವೆ. ಶಿಲ್ಪಿಗಳನ್ನು 'ರಸಋಷಿ'ಗಳು ಎಂದರೆ ತಪ್ಪಾಗಲಾರದು. ಹಾವೆಲ್ ಅವರು "Indian artists were not ascetics who shut

themselves out of the world, but mystic who communed with Nature to find the secret of the universal life" ಎಂದು ಭಾರತೀಯ ಶಿಲ್ಪಿಗಳನ್ನು ಕುರಿತು ಹೇಳುತ್ತಾರೆ.[೪]

ಮೂರ್ತಿಶಿಲ್ಪವು ವಾಸ್ತುಶಿಲ್ಪಕ್ಕೆ ಪೂರಕವಾಗಿ ಅದರ ಜೊತೆ ಜೊತೆಯಲ್ಲಿಯೇ ಬೆಳೆದು ಬಂದಿತು. ಇವುಗಳಲ್ಲಿ ಒಂದರ ಸೂತ್ರವನ್ನು ಆದರ್ಶವನ್ನು ಅರಿತವರು ಇನ್ನೊಂದನ್ನು ತಿಳಿದುಕೊಂಡವರಾಗಿ ಒಂದಕ್ಕೊಂದು ಅವಲಂಬಿತವಾಗುವಂತೆ ಎರಡನ್ನೂ ಬೆಳೆಸಿಕೊಂಡು ಬಂದಿದ್ದಾರೆ. "In all greatest periods of there history, architecture and sculputure have gone hand in hand" ಎಂಬ ಮಾತು ಬಹುಮಟ್ಟಿಗೆ ಸತ್ಯವಾದುದು.[೫]

ಶಿಲ್ಪಗಳ ಪ್ರಾಚೀನತೆಯು ಸಿಂಧೂಕೊಳ್ಳದ ನಾಗರಿಕತೆಯಷ್ಟು ಹಿಂದೆ ಹೋಗುತ್ತದೆ. (ಕಿ.ಪೂ. ೨೫೦೦-೧೨೦೦) ಈ ನೆಲೆಯ ಉತ್ಖನನದಲ್ಲಿ ಸುಮಾರು ಎರಡು ಸಾವಿರದಷ್ಟು ಮುದ್ರಿಕೆಗಳು (steatite seals) ದೊರೆತಿವೆ. ಆ ಕಾಲದ ಚಿತ್ರಗಳು ಇತಿಹಾಸವಾಗಿ ಉಳಿದುಬಂದು ಪ್ರಾಚೀನ ಸಂಸ್ಕೃತಿಯನ್ನು ಅರಿಯಲು ನಮಗೆ ಕಿಟಕಿಗಳಾಗಿವೆ.[೬] ಮೊಹೆಂಜೊದಾರೋದಲ್ಲಿ ಜಾನ್ ಮಾರ್ಷಲ್‌ರಿಂದ ಬೆಳಕಿಗೆ ಬಂದ[೭] ಇತ್ತೀಚೆಗೆ 'ಶಿವ'ನೆಂದು ಗುರುತಿಸಲ್ಪಟ್ಟ[೮] ಮುದ್ರಿಕೆಗಳ ಮೇಲಿನ ಮಹಾಯೋಗಿ, ಮನುಷ್ಯರ ಮತ್ತು ಪ್ರಾಣಿಗಳ ರೂಪಗಳು ಗಮನಾರ್ಹವಾದವುಗಳು. ಪ್ರಗತಿಯನ್ನು ಪಡೆದಿದ್ದ ಕಲಾಕೌಶಲ್ಯ ಮತ್ತು ತಾಂತ್ರಿಕ ಕುಶಲತೆಯು ಪ್ರಾಚೀನ ಕಲಾವಿದನಲ್ಲಿ ಇತ್ತು ಎಂದು ಯಾರಾದರೂ ಸುಲಭವಾಗಿ ಗುರುತಿಸಬಹುದು.[೯] ಮೊಹೆಂಜೊದಾರೊದಲ್ಲಿ ಸುಣ್ಣದ ಕಲ್ಲುಗಳಿಂದ (limestone) ಮತ್ತು ಸುಡಾವೆ ಮಣ್ಣಿನ (terracotta) ಪ್ರತಿಮೆಗಳು ದೊರೆತಿವೆ. ಅವುಗಳಲ್ಲಿ ಗಟ್ಟಿ ಮಣ್ಣಿನಿಂದ ತಯಾರಿಸಿದ ೪೨ ಸೆಂ.ಮೀ ಎತ್ತರವಿರುವ ಗಡ್ಡಧಾರಿಯ ಪ್ರತಿಮೆ ಗಮನಾರ್ಹವಾಗಿದೆ. ಹರಪ್ಪ ನೆಲೆಯಲ್ಲಿ ದೊರೆತ ಸುಣ್ಣದ ಕಲ್ಲಿನಲ್ಲಿ ಕೊರೆಯಲಾದ ಕರಶಿರಗಳಿಲ್ಲದ ಮನುಷ್ಯ ದೇಹದ ಪ್ರತಿಮೆಯೂ ಉತ್ತಮ ಉದಾಹರಣೆಯಾಗಿದೆ. ಕಂಚಿನ ಮೂರ್ತಿಗಳಲ್ಲಿ ನೃತ್ಯಗಾರ್ತಿಯ ಪ್ರತಿಮೆ ಮುಖ್ಯವಾದದ್ದು. ನೃತ್ಯಭಂಗಿಯಲ್ಲಿ ಅವಳು ನಿಂತಿದ್ದಾಳೆ. ಅವಳ ಬಲಗೈ ಬಲ ಸೊಂಟದ ಪಾರ್ಶ್ವದ ಮೇಲಿದೆ. ಎಡತೋಳಲ್ಲಿ ಅನೇಕ ಬಳೆಗಳ ಅಲಂಕರಣವಿದೆ. ಕಂಚನ್ನು ಕರಗಿಸಿ ಮೂರ್ತಿಗಳನ್ನು ಎರಕ ಹೊಯ್ಯುವುದನ್ನು ಸಿಂಧೂ ಕಣಿವೆಯ ಶಿಲ್ಪಿಗಳು ತಿಳಿದಿದ್ದರು ಎಂಬುದು ಅವರ ಪ್ರಗತಿಯ ಸೂಚನೆ.

ವೇದಗಳ ಕಾಲದಲ್ಲಿ ವಿಗ್ರಹಗಳಿಗೆ ಪ್ರಾಧಾನ್ಯತೆ ಇರಲಿಲ್ಲವೆಂದೂ, ಪ್ರಕೃತಿ ಶಕ್ತಿಗಳನ್ನೇ ಉಪಾಸಿಸಲಾಗುತ್ತಿತ್ತೆಂದೂ ಹೇಳಲಾಗುತ್ತದೆ. ಇದರಲ್ಲಿ ನಿಜಾಂಶವಿದ್ದರೂ ವಿಗ್ರಹಗಳಿಗೆ ಸ್ಥಾನವಿದ್ದಂತೆ ತೋರುತ್ತದೆ. ಇಂದ್ರ, ವರುಣ, ರುದ್ರ ಮೊದಲಾದ ದೇವತೆಗಳಿಗೆ ಮನುಷ್ಯಾಕಾರದ ಕಲ್ಪನೆ ಕೊಟ್ಟಿರುವುದು ಇಲ್ಲಿ ಕಾಣುತ್ತೇವೆ.[೧೦] ಆದರೂ ಸಿಂಧೂ ಸಂಸ್ಕೃತಿಯ ಪತನದ ನಂತರ ಮೌರ್ಯರ ಕಾಲದವರೆಗಿನ ಚರಿತ್ರೆ ಕತ್ತಲಲ್ಲಿಯೇ ಉಳಿದಿದೆ ಎನ್ನಬಹುದು.[೧೧]

ಭಾರತೀಯ ಮೂರ್ತಿಶಿಲ್ಪವು ಮೌರ್ಯರ ಕಾಲದಲ್ಲಿ (ಕ್ರಿ.ಪೂ.೩೨೪-೧೮೮) ಒಂದು ಹೊಸ ಅಧ್ಯಾಯವನ್ನು ಪ್ರಾರಂಭಿಸಿತು. ಈ ಕಾಲದ ಬಹುಮುಖ್ಯವಾದ ಶಿಲ್ಪಗಳೆಂದರೆ ಅಶೋಕ ಸ್ತಂಭಗಳ ಮೇಲಿನ ಪ್ರಾಣಿಯ ವಿಗ್ರಹಗಳು. ಕಲ್ಲುಕಂಬಗಳನ್ನು ಹೊಳಪುಗೊಳಿಸುವುದರಲ್ಲಿ ಮೌರ್ಯ ಕಾಲದ ಕಸಬುಗಾರರಿಗಿದ್ದ ತಾಂತ್ರಿಕ

ಪರಿಣತಿಯನ್ನು ಅವು ತೋರುತ್ತವೆ. ಪ್ರತಿಯೊಂದು ಸ್ತಂಭವೂ ಮರಳುಗಲ್ಲಿನ (sand stone) ಏಕಶಿಲೆಯಿಂದ ತಯಾರಾದವುಗಳು. ಸೊಗಸಾದ ಸಿಂಹ ಅಥವಾ ಗೂಳಿಯ ಪ್ರತಿಮೆಗಳನ್ನು ಕಡೆದು ಆ ಕಂಬಗಳ ಮೇಲ್ಭಾಗಕ್ಕೆ ಸ್ತಂಭಾಗ್ರವಾಗಿ ಜೋಡಿಸಲಾಗಿದೆ. ಸಂಕಸ್ಯದ ಆನೆ ಮತ್ತು ರಾಂಪೂರ್ವದ ಗೂಳಿಗಳು ಪ್ರಾರಂಭಿಕ ಹಂತಗಳಂತೆ ತೋರಿದರೆ, ಸಾರಾನಾಥ ಮತ್ತು ಸಾಂಚಿಗಳಲ್ಲಿರುವ ನಾಲ್ಕು ಸಿಂಹಗಳಿರುವ ಸ್ತಂಭಗಳು ಈ ವಿಕಾಸದ ಹಾದಿಯ ಅಂತಿಮ ಫಲವೆಂದು ಹೇಳಬಹುದು. ಮೌರ್ಯರ ಕಾಲದ ಪ್ರತಿಮೆಗಳಲ್ಲಿ ಯಕ್ಷ, ಯಕ್ಷಿಯರ ಪ್ರತಿಮೆಗಳು ಮುಖ್ಯವಾದವುಗಳು. ಸೊಂಟದಿಂದ ಕೆಳಗಿರುವ ವಸ್ತ್ರಗಳು ತೊಯ್ದ ವಸ್ತ್ರಗಳಂತೆ ಮೈಗೆ ಅಂಟಿಕೊಂಡಿರುತ್ತವೆ. ಬಿಗಿದಿರುವ ಸೊಂಟದ ಸುತ್ತಲಿನ ವಸ್ತ್ರದ ಮಧ್ಯ ಭಾಗದಿಂದ ಎರಡೂ ಅಂಚುಗಳು ಕೆಳತನಕ ತೂಗಾಡುತ್ತಿರುತ್ತದೆ. ಈ ವಿವರಣೆಯನ್ನು ಪಾಟ್ನಾದ ಎರಡು ಯಕ್ಷಮೂರ್ತಿಗಳಲ್ಲಿ ಗಮನಿಸಬಹುದು.

ಶುಂಗರ ಕಾಲದಲ್ಲಿ (ಕ್ರಿ.ಪೂ. ೧೮೮-೭೬) ಶಿಲ್ಪ ರಚನೆಯು ಪ್ರಾಚೀನತೆಯನ್ನು ಕಳೆದುಕೊಂಡು ಹೊಸ ರೂಪವನ್ನು ಪಡೆಯಿತೆನ್ನಬಹುದು. ಈ ಕಾಲದ ಗಮನಾರ್ಹ ಶಿಲ್ಪಾವಶೇಷಗಳೆಂದರೆ, ಕಲ್ಕತ್ತಾದ ವಸ್ತುಸಂಗ್ರಹಾಲಯದಲ್ಲಿ ಇಡಲಾದ ಕಮಲದ ಸಾಲುಗಳಿಂದ ಅಲಂಕೃತಗೊಂಡ ಬಾರ್‌ಹುತ್‌ದ ಶಿಲಾವೇದಿಕೆ, ಕಮಲಪದಕದಲ್ಲಿ ಮಾನವ ಮುಖ ಮತ್ತು ಜಾತಕ ಶಿಲ್ಪಗಳನ್ನು ಉದಾಹರಿಸಬಹುದು. ಬಾರ್‌ಹುತ್‌ದಲ್ಲಿಯ ಯಕ್ಷಯಕ್ಷಿಣಿಯರ ಶಿಲ್ಪಗಳೂ ಗಮನಾರ್ಹವಾಗಿವೆ. ಬೌದ್ಧ ಧರ್ಮದ ಪ್ರಾರಂಭ ಕಾಲದಲ್ಲಿ ಬುದ್ಧನನ್ನು ಶಿಲ್ಪದಲ್ಲಿ ಚಿತ್ರಿಸುತ್ತಿರಲಿಲ್ಲ. ಬದಲಾಗಿ ಛತ್ರ, ಚಾಮರ, ಭೋದಿವೃಕ್ಷ, ಬರಿದಾದ ಸಿಂಹಾಸನ, ಬುದ್ಧನ ಪಾದಗಳು ಅಥವಾ ಬುದ್ಧ ಸಂಘಧರ್ಮ ಮೂವರನ್ನೂ ಸಂಕೇತಿಸುವಂತೆ ತ್ರಿರತ್ನಗಳಿಂದ ಗುರುತಿಸುತ್ತಿದ್ದರು.[೧೨] ಕುಶಾನರ ಕಾಲವೂ (ಕ್ರಿ,ಪೂ.೨೮ ರಿಂದ ಕ್ರಿ.ಶ.೨೦೦) ಶಿಲ್ಪರಚನೆಯಲ್ಲಿ ಗಮನಾರ್ಹ ಪಾತ್ರವಹಿಸಿದೆ. ಬೌದ್ಧ ಧರ್ಮವು ಹೀನಯಾನದಿಂದ ಮಹಾಯಾನಕ್ಕೆ[೧೩] ಬದಲಾದಾಗ ಬುದ್ಧನ ಮೂರ್ತಿ ಪೂಜೆಯು ರೂಢಿಗೆ ಬಂದಿತು. ಬಹುಜನರ ಬೇಡಿಕೆಯಂತೆ ಬುದ್ಧನ ಮೂರ್ತಿಶಿಲ್ಪವು 'ಗಾಂಧಾರ' ಮತ್ತು 'ಮಥುರಾ' ಶಿಲ್ಪಶೈಲಿಗಳಲ್ಲಿ ಕಾಣಿಸಿಕೊಂಡಿತು.[೧೪] 'ಗಾಂಧಾರ' ಶೈಲಿಗೆ ಗ್ರೀಕ್ ದೇಶವು ಪ್ರೇರಣೆಯಾಗಿ ನಿಂತರೆ 'ಮಥುರಾ' ಶೈಲಿಗೆ ಪ್ರಾಚೀನ ಯಕ್ಷಮೂರ್ತಿಗಳು ಆದರ್ಶವಾದವು ಎಂದು ಬಹು ವಿದ್ವಾಂಸರ ಅಭಿಪ್ರಾಯವಿದೆ.

ಕುಶಾನರ ಕಾಲದಲ್ಲಿ ಬೆಳೆದ 'ಗಾಂಧಾರ' ಮತ್ತು 'ಮಥುರಾ' ಶೈಲಿಗಳು ಗುಪ್ತರ ಕಾಲದಲ್ಲಿ (ಕ್ರಿ.ಶ. ೩೩೫-೪೫೫) ಸಂಪೂರ್ಣ ವಿಕಸಿತಗೊಂಡವು. ಗುಪ್ತರು ಬ್ರಾಹ್ಮಣೀಯ ಮತದ ಅನುಯಾಯಿಗಳಾಗಿದ್ದ ಕಾರಣ ಅವರ ಕಾಲದಲ್ಲಿ ವಿಷ್ಣು, ಶಿವ ಮತ್ತು ಇತರ ಹಿಂದೂ ದೇವತೆಗಳ ವಿಗ್ರಹಗಳು ಕಂಡುಬರುತ್ತವೆ. ಗುಪ್ತ ಶಿಲ್ಪಶೈಲಿಯು ಬಹು ವ್ಯಾಪಕವಾಗಿ ಹರಡಿತು. ನಿಂತಿರುವ, ಕುಳಿತಿರುವ ಬೌದ್ಧ, ವೈಷ್ಣವ, ಜೈನಮೂರ್ತಿಗಳು ಕೊರೆಯಲ್ಪಟ್ಟವು. ಮಥುರಾದ ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿರುವ ವಿಷ್ಣುಮೂರ್ತಿ ಮತ್ತು ಗ್ವಾಲಿಯರ್ ಬಳಿಯ ಸೊಂದನಿಯ ಹತ್ತಿರ ದೊರೆತಿರುವ ಗಂಧರ್ವ ಮತ್ತು ಅಪ್ಸರೆಯರ ಉಬ್ಬುಕೆತ್ತನೆಗಳು ಈ ಕಾಲದ ಬಹುಮುಖ್ಯ ಶಿಲ್ಪಗಳಾಗಿವೆ. ಪುರಾಣಗಳಲ್ಲಿ ಹುಟ್ಟಿಕೊಂಡ ತ್ರಿಮೂರ್ತಿಗಳಾದ ಬ್ರಹ್ಮ, ವಿಷ್ಣು, ಮಹೇಶ್ವರರು ಮತ್ತು ಅವರಿಗೆ ಸಂಬಂಧಪಟ್ಟ ಸಂಸಾರ, ಕಥೆಗಳು, ಸನ್ನಿವೇಶಗಳು, ಹೀಗೆ ದೇವರ ಸಂಖ್ಯೆಗಳೂ ಹೆಚ್ಚಾಗಿ, ಶಿಲ್ಪಿಗಳಿಗೆ ನಾನಾ ರೀತಿಯ ಶಿಲ್ಪಗಳನ್ನು ಕಂಡರಿಸಲು ಮತ್ತು ತಮ್ಮ

ಕಲೆಯನ್ನು ಹೆಚ್ಚು ಅಲಂಕಾರಿಕವಾಗಿ ಭಾವನಾತ್ಮಕವಾಗಿ ಕೊರೆಯಲು ಅವಕಾಶ ಲಭ್ಯವಾಯಿತು. ಗುಪ್ತರ ನಂತರದಲ್ಲೂ ಈ ಶೈಲಿಯು ರಾಜ್ಯದ ಎಲ್ಲೆಯನ್ನು, ಕಾಲಮಾನ ಇತಿಮಿತಿಯನ್ನು ಮೀರಿ ವ್ಯಾಪಿಸಿ ಬೆಳೆಯಿತು. ದೇವಗಢದ ದಶಾವತಾರ ಗುಹಾಲಯ, ಅಜಂತಾ, ಉದಯಗಿರಿಯ ಬಳಿ ಇರುವ ಕಾರ್ಲೆಗಳಲ್ಲಿಯ ಯಕ್ಷ ಶಿಲ್ಪಗಳು ಗುಪ್ತಕಾಲದ ಬಹುಮುಖ್ಯ ಉದಾಹರಣೆಗಳು.

ಕ್ರಿ.ಪೂ.೧೮೭ರ ಹೊತ್ತಿಗೆ ಮೌರ್ಯ ಸಾಮ್ರಾಜ್ಯವು ಅವನತಿ ಹೊಂದಿದ ನಂತರ ಉತ್ತರದಲ್ಲಿ ಕುಶಾನರು ತಲೆ ಎತ್ತಿದರೆ ದಖನ್ನಿನಲ್ಲಿ ಶಾತವಾಹನರು ಮೇಲೆದ್ದರು. ಕರ್ನಾಟಕದಲ್ಲಿ ಶಾತವಾಹನ ಕಾಲದ ಶಿಲ್ಪಗಳು ಇತ್ತೀಚಿನ ವರ್ಷಗಳಲ್ಲಿ ಕೆಲವು ನೆಲೆಗಳಲ್ಲಿ ಕಂಡುಬಂದಿವೆ. ಸನ್ನತಿಯಲ್ಲಿ ಕೈಗೊಂಡ ಉತ್ಖನನದಲ್ಲಿ ಬೌದ್ಧ ಶಿಲ್ಪಾವಶೇಷಗಳು ಲಭ್ಯವಾಗಿವೆ.[೧೫] ವಡಗಾಂವ್-ಮಾಧವಪುರ ಉತ್ಖನನದಲ್ಲಿ ದೊರೆತ ಗೊಂಬೆಗಳನ್ನು ಮತ್ತು ಹಂಪಿ ಉತ್ಖನನದಲ್ಲಿ ಬುದ್ಧನು ಉಪದೇಶ ಕೊಡುತ್ತಿರುವ ಐದು ಚಿತ್ರಫಲಕಗಳನ್ನು ಇಲ್ಲಿ ಉದಾಹರಿಸಬಹುದು.[೧೬] ಬನವಾಸಿಯ ನಾಗಶಿಲ್ಪವು ಈ ಕಾಲದ ಶಿಲ್ಪಕಲೆಯನ್ನು ಸ್ಪಷ್ಟವಾಗಿ ತಿಳಿಸುತ್ತದೆ. ಈ ನಾಗಶಿಲ್ಪ ಶಾಸನದಲ್ಲಿ ಆ ಶಿಲ್ಪವನ್ನು ಕೆತ್ತಿದ ಶಿಲ್ಪಿಯ ಹೆಸರು ಮತ್ತು ಅವನ ಗುರುಪರಂಪರೆಯನ್ನು ಉಲ್ಲೇಖಿಸಿರುವುದು ಗಮನಾರ್ಹ.[೧೭] ಮತ್ತು ಕ್ರಿ.ಶ. ೧೯೭೦-೭೨ ರ ಬನವಾಸಿ ಉತ್ಖನನಗಳಲ್ಲಿ ಶಾತವಾಹನ ಕಾಲದ ಕಾರ್ತಿಕೇಯನೆಂದು ಗುರುತಿಸಬಹುದಾದ ಭಗ್ನ ಶಿಲಾಮೂರ್ತಿಯು ದೊರೆತಿದೆ.[೧೮]

ಆದಿಕದಂಬರ ಶಿಲ್ಪಗಳಾದ ಗೋಕರ್ಣ ಮತ್ತು ಇಡಗುಂಜಿಯಲ್ಲಿಯ ದ್ವಿಭುಜಗಣಪತಿ[೧೯], ಹಲಸಿ, ಕುಬಟೂರುಗಳಲ್ಲಿಯ ನರಸಿಂಹ ಶಿಲ್ಪಗಳು[೨೦], ಶಿರಹಟ್ಟಿ ತಾಲೂಕಿನ ದೇವಿನಹಾಳ ಮಹಿಷಮರ್ಧಿನಿ ಶಿಲ್ಪ[೨೧]ಗಳನ್ನು ಗಮನಿಸಬಹುದು. ದಕ್ಷಿಣ ಕರ್ನಾಟಕದಲ್ಲಿ ಗಂಗರ ಕಾಲದ ಶಿಲ್ಪಗಳು ಸಾಕಷ್ಟು ದೊರೆತಿವೆ. ಗಂಗರ ಶಿಲ್ಪ ಕೊಡುಗೆಯಲ್ಲಿ ಶ್ರವಣಬೆಳಗೊಳದ ಗೊಮ್ಮಟೇಶ್ವರ ಮೂರ್ತಿ ಮಹತ್ವದ್ದಾಗಿದೆ. ವಿಂಧ್ಯದಿಂದ ಕಾವೇರಿಯವರೆಗಿನ ವಿಸ್ತಾರವಾದ ರಾಜ್ಯವನ್ನು ಆಳಿದ ಬಾದಾಮಿ ಚಾಲುಕ್ಯರ ಆಶ್ರಯದಲ್ಲಿ ದೇವಾಲಯ ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಗಳಲ್ಲಿ ಅಸಾಧಾರಣ ಬೆಳವಣಿಗೆಯಾದುದನ್ನು ಗಮನಿಸುತ್ತೇವೆ. ಬನವಾಸಿ ಕದಂಬರ ಕಾಲದಲ್ಲಿ ಆಗಾಗ ಕಾಣಿಸಿಕೊಳ್ಳುತ್ತಿದ್ದ ದೇವಾಲಯ ನಿರ್ಮಾಣ, ಮೂರ್ತಿಶಿಲ್ಪಗಳ ಕೆತ್ತನೆ ಚಾಲುಕ್ಯರ ಕಾಲದಲ್ಲಿ ಖಾಯಂ ಲಕ್ಷಣವೇ ಆಗಿ ಪರಿಣಮಿಸಿತು. ಬಾದಾಮಿ, ಮಹಾಕೂಟ, ಐಹೊಳೆ, ಆಲಂಪುರ ಮತ್ತು ಮಹಾನಂದಿಗಳಲ್ಲಿ ಇವರ ಉತ್ತಮ ಮೂರ್ತಿಶಿಲ್ಪಗಳನ್ನು ಕಾಣಬಹುದು. ರಾಷ್ಟ್ರಕೂಟರ ಕಾಲದ ಶಿಲ್ಪಗಳನ್ನು ಮಹಾರಾಷ್ಟ್ರದ ಎಲಿಫಂಟಾ, ಎಲ್ಲೋರಾಗಳಲ್ಲಿ ಮತ್ತು ಕರ್ನಾಟಕದ ಗದಗ, ರೋಣ, ನಿಡಗುಂದಿ ಮುಂತಾದ ಕಡೆಗಳಲ್ಲಿ ಕಾಣಬಹುದು. ಮುಂದೆ ಕಲ್ಯಾಣ ಚಾಲುಕ್ಯ ಮತ್ತು ಹೊಯ್ಸಳರ ಕಾಲದ ಶಿಲ್ಪಗಳು ಸೂಕ್ಷ್ಮಕೆತ್ತನೆಯಿಂದಲೂ ಹೆಚ್ಚು ಅಲಂಕರಣೆಗಳಿಂದಲೂ ನಯನಮನೋಹರವಾಗಿದೆ. ಇವರ ಕಾಲದ ಶಿಲ್ಪಿಗಳು ಬಳಸಿದ ಮೆದು ಬಳಪದ ಕಲ್ಲು ಅವರ ಸೂಕ್ಷ್ಮಕೆತ್ತನೆಗೆ ಅನುಕೂಲವಾಯಿತು.[೨೨]

ಪ್ರತಿಮೆಗಳು : ವೇದಗಳಲ್ಲಿ, ಸೃಷ್ಟಿಕರ್ತನು ಈ ಜಗತ್ತನ್ನು ನಾಮರೂಪಗಳಿಂದಲೇ ಸೃಷ್ಟಿಸಿದ್ದಾನೆ. ಆ ನಾಮ ರೂಪಗಳಿಂದಲೇ ಆ ಸೃಷ್ಟಿಕರ್ತನನ್ನು ಕಂಡುಕೊಳ್ಳಬೇಕು ಎಂದು ಹೇಳಿದೆ. ಆದುದರಿಂದ ಸೃಷ್ಟಿಕರ್ತನನ್ನು ನಾಮ-ರೂಪಗಳಿಂದ ಬಂಧಿಸುವ ಪ್ರಯತ್ನವನ್ನು ಶಿಲ್ಪಾಗಮಗಳು ಮಾಡುತ್ತವೆ. ಶಿಲ್ಪಿಯಿಂದ ರೂಪಗೊಂಡ

ಶಿಲ್ಪವು ಸಾಧಕನ ಚಂಚಲ ಮನಸ್ಸನ್ನು ಕಟ್ಟಿ ನಿಲ್ಲಿಸುವಷ್ಟು ಪ್ರಭಾವಶಾಲಿಯಾಗಿರಬೇಕು, ಆಕರ್ಷಕವಾಗಿರಬೇಕು, ಹೃದಯ ಮನಸ್ಸುಗಳೆರಡೂ ಪ್ರತಿಮೆಯಲ್ಲಿ ಬೇರೂರುವಂತಿರಬೇಕು. ಇಲ್ಲವಾದಲ್ಲಿ ಶಿಲ್ಪವನ್ನು ಮಾಡಿದವನಿಗೂ, ಮಾಡಿಸಿದನಿಗೂ ಶ್ರೇಯಸ್ಸು ಲಭಿಸುವುದಿಲ್ಲ. ಈ ಕಾರಣದಿಂದಲೇ ಶಿಲ್ಪಿಗೆ ಆಗಮ ಶಾಸ್ತ್ರಗಳು ಸಾಕಷ್ಟು ಸಲಹೆಗಳನ್ನು, ನಿರ್ಬಂಧಗಳನ್ನು ಹೇಳಿವೆ.[೨೩]

ಶಿಲ್ಪಶಾಸ್ತ್ರಗಳು ಸೃಷ್ಟಿಕರ್ತನಾದ ಪರಮಾತ್ಮನ ರೂಪವು (ದೇಹ) ಮೂರು ಬಗೆಗಳಲ್ಲಿರುತ್ತವೆ ಎಂದು ಹೇಳುತ್ತವೆ. ಅವು ಕ್ರಮವಾಗಿ ಸಕಳ, ನಿಷ್ಕಳ ಮತ್ತು ಮಿಶ್ರ.[೨೪] ದೇವತಾಮೂರ್ತಿಗಳಲ್ಲಿ ಮುಖ, ಕೈ, ಕಾಲು ಇತ್ಯಾದಿ ದೇಹದ ಎಲ್ಲ ಅಂಗ-ಪ್ರತ್ಯಂಗಗಳು ಇರುವಂತೆ ರೂಪಿಸಿರುವ ಮೂರ್ತಿಗಳನ್ನು 'ಸಕಳ' ಎನ್ನುತ್ತಾರೆ. ಅಂಗ ಪ್ರತ್ಯಂಗಗಳಿಲ್ಲದೆ ಕೇವಲ ಸಂಕೇತಗಳಾಗಿರುವ ರೂಪಗಳನ್ನು 'ನಿಷ್ಕಳ' ಎಂದೂ, ಕೆಲವು ರೂಪಗಳಲ್ಲಿ ಕೆಲವು ಅಂಗಗಳಿದ್ದು ಉಳಿದವನ್ನು ಸಂಕೇತವಾಗಿ ರೂಪಿಸಬಹುದು ಇವುಗಳನ್ನು 'ಮಿಶ್ರ' ಎಂದು ಕರೆಯಲಾಗಿದೆ. ಪ್ರತಿಮೆಗಳ ವಿಭಜನೆಯು ರೂಪಗಳಲ್ಲದೇ 'ಅಚಲ' ಮತ್ತು 'ಚಲ' ಮೂರ್ತಿಗಳೆಂದೂ ವಿಂಗಡಿಸಲಾಗಿದೆ. ದೇವಾಲಯದ ಗರ್ಭಗುಡಿಯಲ್ಲಿ ಸ್ಥಿರವಾಗಿ ಪ್ರತಿಷ್ಠಿತವಾಗಿರುವ ಪೂಜಾಮೂರ್ತಿಯನ್ನು ಮೂಲಬೇರ ಎನ್ನಲಾಗಿದೆ. ಇದು ಅಚಲವಾದುದು. ಪೂಜಾವಿಧಿಗಳಲ್ಲಿ ದೇವತಾಮೂರ್ತಿಯನ್ನು ಉತ್ಸವದಲ್ಲಿ ಕೊಂಡೊಯ್ಯುವುದು, ಅಭಿಷೇಕವೆಂದು ಸ್ನಾನಮಾಡಿಸುವುದು, ಉಯ್ಯಾಲೆಯಲ್ಲಿ ತೂಗುವುದು, ಶಯನೋತ್ಸವವೆಂದು ಪರ್ಯಂಕ(ಮಂಚ)ದಲ್ಲಿ ಮಲಗಿಸಿ ಉಪಚರಿಸುವುದು ಇತ್ಯಾದಿ ಸೇವೆಯನ್ನು ಮೂಲಮೂರ್ತಿಗೆ ನೇರವಾಗಿ ಸಲ್ಲಿಸಲು ಆಗದು. ಆದ್ದರಿಂದ ಮೂಲಮೂರ್ತಿಗೆ ಪ್ರತಿಯಾಗಿ 'ಚಲ' ಮೂರ್ತಿಗಳನ್ನು ನಿರ್ಮಿಸಿ ಬಳಸಿಕೊಳ್ಳಲಾಗುತ್ತದೆ. ಇವುಗಳನ್ನು ಉತ್ಸವಮೂರ್ತಿಗಳು (ಉತ್ಸವ ಬೇರ) ಎಂದು ಶಿಲ್ಪಾಗಮಗಳು ಹೇಳಿವೆ.[೨೫] 'ಚಲ' ಮತ್ತು 'ಅಚಲ' ಮೂರ್ತಿಗಳನ್ನು ಎಂಟು ಬಗೆಯ ವಸ್ತುಗಳಲ್ಲಿ ತಯಾರಿಸಬಹುದು. ಬಂಗಾರದ ಪ್ರತಿಮೆಯು ಎಲ್ಲಾ ವಿಧದ ಸಮೃದ್ಧಿಯನ್ನುಂಟು ಮಾಡುತ್ತದೆ. ಬೆಳ್ಳಿ ಪ್ರತಿಮೆಯ ಪೂಜೆಯಿಂದ ದ್ರವ್ಯ, ಪಶು, ವಿಜಯ ಮತ್ತು ಜ್ಞಾನ ಪ್ರಾಪ್ತವಾಗುತ್ತದೆ. ತಾಮ್ರಪ್ರತಿಮೆಯ ಆರಾಧನೆಯಿಂದ ಧರ್ಮ, ಅಭಿವೃದ್ಧಿ ಮತ್ತು ಸೌಖ್ಯ ಲಭಿಸುತ್ತದೆ. ಕಲ್ಲಿನ ಪ್ರತಿಮೆಯಿಂದ ದುಃಖನಾಶ, ಮರದ ಮೂರ್ತಿಯಿಂದ ತೇಜೋವೃದ್ಧಿ, ಮಣ್ಣಿನ ಪ್ರತಿಮೆಯಿಂದ ಶುಭ ಹಾಗೂ ಹಿತ್ತಾಳೆಯು ಶತ್ರುನಾಶಕ ಎಂದು ತಂತ್ರಸಾರ ಸಂಗ್ರಹದಲ್ಲಿ ಹೇಳಲಾಗಿದೆ.[೨೬]

ಶಿಲ್ಪಗಳನ್ನು ವಿಭಾಗಿಸುವ ಕ್ರಿಯೆಯಲ್ಲಿ ಶಿಲ್ಪಶಾಸ್ತ್ರಗಳು ಇನ್ನೊಂದು ರೀತಿಯನ್ನು ಹೇಳುತ್ತವೆ. ಅದು 'ಪೂರ್ಣಚಿತ್ರ', 'ಚಿತ್ರಾರ್ಧ' ಮತ್ತು 'ಚಿತ್ರಾಭಾಸ' ಎಂದು ಮೂರು ವಿಧಗಳು. ಮೂರ್ತಿಯ ಉದ್ದ-ಅಗಲ-ದಪ್ಪ-ಎತ್ತರ-ಸುತ್ತಳತೆ-ಅಂತರ ಎಂಬ ಆರೂ ಅಳತೆಗಳನ್ನು ಹೊಂದಿರುವ ಮೂರ್ತಿಯನ್ನು 'ಶಿಲ್ಪ' ಅಥವಾ 'ಪೂರ್ಣಚಿತ್ರ' ಎನ್ನಲಾಗಿದೆ. ಮುಂಭಾಗದಲ್ಲಿ ಕಾಣಿಸುವಷ್ಟೇ ಭಾಗಗಳು ರೂಪಿಸಿದ್ದು ಹಿಂಭಾಗ ರೂಪಿತವಾಗದಿದ್ದಾಗ ಅಥವಾ ಸುತ್ತಳತೆಯಲ್ಲಿ ಅರ್ಧಮಾತ್ರವೇ ಇರುವುದನ್ನು 'ಚಿತ್ರಾರ್ಧ' ಎನ್ನುತ್ತಾರೆ. ಉದ್ದ-ಅಗಲ ಆಯಾಮಗಳನ್ನು ಮಾತ್ರವೇ ಬಳಸಿಕೊಂಡು ಚಿತ್ರಿತವಾಗಿರುವುದನ್ನು, ಯಾವ ರೀತಿಯ ಉಬ್ಬು-ತಗ್ಗುಗಳು ಇಲ್ಲದೆ ಸಮತಲದ ಮೇಲೆ ಉಬ್ಬುತಗ್ಗುಗಳ ಆ ಭಾಸವನ್ನು ರೂಪಿಸಿ ಚಿತ್ರಿತಗೊಂಡ ಶಿಲ್ಪವನ್ನು

ಚಿತ್ರಾಭಾಸ ಎನ್ನಲಾಗಿದೆ. ಇದನ್ನು ಇಂಗ್ಲಿಷ್‌ನಲ್ಲಿ ಪೈಂಟಿಂಗ್ ಅಥವ ಪಿಕ್ಚರ್ ಎನ್ನುತ್ತಾರೆ. ಪೂರ್ಣಚಿತ್ರ ಪೂಜೆಗೆ ಶ್ರೇಷ್ಠವಾದುದು, ಚಿತ್ರಾರ್ಧ ಮಧ್ಯಮ, ಚಿತ್ರಾಭಾಸ ಕನಿಷ್ಠವಾದುದು. ಈ ಮೂರ್ತಿಗಳ ಪೂಜೆಯಿಂದ ಲಭಿಸುವ ಫಲಗಳೂ ಇದೇ ಕ್ರಮದಲ್ಲಿದೆ ಎಂದು ಹೇಳಲಾಗಿದೆ.[೨೭]

ಮೂರ್ತಿಶಿಲ್ಪಗಳ ಅಧ್ಯಯನ ಮಾಡುವಾಗ ಶಿಲ್ಪಗಳ ವಿಭಾಗ ಕ್ರಮದಲ್ಲಿ ನಾನಾ ರೀತಿಗಳನ್ನು ಬಳಸಲಾಗುತ್ತದೆ. ಪ್ರಸ್ತುತ ಅಧ್ಯಯನದ ಅನುಕೂಲಕ್ಕಾಗಿ ಮತ್ತು ಹೆಚ್ಚು ಸ್ಪಷ್ಟತೆಗಾಗಿ ಇಲ್ಲಿಯ ಶಿಲ್ಪಗಳನ್ನು ಈ ಕೆಳಗಿನಂತೆ ವಿಭಾಗಿಸಿ ಅಭ್ಯಸಿಸಲಾಗಿದೆ.

೧. ಶೈವ ಶಿಲ್ಪಗಳು

೨. ವೈಷ್ಣವ ಶಿಲ್ಪಗಳು

೩. ಶಾಕ್ತ ಶಿಲ್ಪಗಳು

೪. ನಾಗ ಶಿಲ್ಪಗಳು

೫. ಜಿನ ಶಿಲ್ಪಗಳು ಮತ್ತು

೬. ಇತರ ಶಿಲ್ಪಗಳು

## ೪.೧. ಶೈವ ಶಿಲ್ಪಗಳು

ಶೈವಧರ್ಮದ ಪ್ರಾಚೀನತೆಯು ಸಿಂಧೂಕೊಳ್ಳ ಸಂಸ್ಕೃತಿಯಷ್ಟು ಹಿಂದಕ್ಕೆ ಹೋಗುತ್ತದೆ. ಮೊಹೆಂಜೊದಾರೊ ನೆಲೆಗಳ ಉತ್ಖನನದಲ್ಲಿ 'ಶಿವಸಂಸ್ಕೃತಿ' ಅಥವಾ 'ಶಿವಪರ ಸಂಸ್ಕೃತಿ'ಯನ್ನು ಹೇಳುವಂತಹ ಕೆಲವು ಅವಶೇಷಗಳು ದೊರೆತಿವೆ. ಅವುಗಳಲ್ಲಿ ಶಿವಲಿಂಗಗಳು, ಕಲ್ಲು ಬಳೆಗಳು (ring stones) ಮತ್ತು ಮುದ್ರಿಕೆಗಳು (steatite seals) ಪ್ರಮುಖವಾಗಿವೆ. ಲಿಂಗಗಳಲ್ಲಿ ಕೆಲವು ಸ್ಥಾವರ ಲಿಂಗಗಳನ್ನು ಕೆಲವು ದೇಹದ ಮೇಲೆ ಧರಿಸುವ ಚಿಕ್ಕ ಲಿಂಗಗಳನ್ನು ಹೋಲುತ್ತವೆ. ಗಾತ್ರದಲ್ಲಿ ದೊಡ್ಡದಾಗಿರುವ ಲಿಂಗಗಳನ್ನು ಒಂದು ಪಂಗಡದ ಜನರ ಸಲುವಾಗಿ ಉಪಯೋಗಿಸಿರಬೇಕು. ಚಿಕ್ಕ ಲಿಂಗಗಳನ್ನು ಈಗಿನ ಶೈವರಂತೆ ದೇಹದ ಮೇಲೆ ಧಾರಣ ಮಾಡುತ್ತಿರಬೇಕು ಎಂದು ಈ ಲಿಂಗಗಳ ಬಗ್ಗೆ ಜಾನ್ ಮಾರ್ಷಲ್ ಅವರು ಅಭಿಪ್ರಾಯಪಡುತ್ತಾರೆ.[೨೮] ಈ ನೆಲೆಯಲ್ಲಿ ಲಭ್ಯವಾದ ಕಲ್ಲು ಬಳೆಗಳು ಲಿಂಗ ಪೀಠಗಳೆಂದು ಗುರುತಿಸಲಾಗಿದೆ.[೨೯] ಮುದ್ರಿಕೆಗಳ ಮೇಲಿನ ಯೋಗಿಯನ್ನು ಗುರುತಿಸುವಲ್ಲಿ ವಿದ್ವಾಂಸರಲ್ಲಿ ಭಿನ್ನ ಅಭಿಪ್ರಾಯಗಳಿವೆ. ಮಾರ್ಷಲ್ ಅವರು ಅದನ್ನು 'ಪಶುಪತಿ' ಎಂದು ಗುರುತಿಸಿದರೆ; ಎಸ್.ಆರ್.ರಾವ್ ಅವರು 'ಅಗ್ನಿಯ ರೂಪ' ಎಂದು ಅಭಿಪ್ರಾಯ ಪಟ್ಟಿದ್ದಾರೆ.[೩೦] ಅ. ಸುಂದರ ಅವರು ಯೋಗಿಯ ಸುತ್ತಲೂ ಇರುವ ಪ್ರಾಣಿ ಮತ್ತು ಮನುಷ್ಯ ಆಕೃತಿಗಳನ್ನು ಗಮನದಲ್ಲಿಟ್ಟುಕೊಂಡು ಪುರಾಣಗಳಲ್ಲಿ ಕಥೆಯ ರೂಪದಲ್ಲಿ ಬರುವ ಗಜಾಸುರಸಂಹಾರ, ಕಾಲಾರಿಶಿವ, ಭಿಕ್ಷಾಟನಾಶಿವ, ಮಾರ್ಕಾಂಡೇಯನ ಸನ್ನಿವೇಶಗಳನ್ನು ಪ್ರಾಚೀನ ಮುದ್ರೆಗಳೊಂದಿಗೆ ಹೋಲಿಸಿ ನೋಡಿ ಮೂರು ಮುಖದ ಕೊಂಬುಗಳುಳ್ಳ ಯೋಗಿಯು ಶಿವನೆಂದು ಅಭಿಪ್ರಾಯಪಟ್ಟಿದ್ದಾರೆ.[೩೧] ಹೀಗೆ ಶೈವಧರ್ಮವು ಕ್ರಿ.ಪೂ.೩೦೦೦ದಷ್ಟು ಹಿಂದೆ ಹೋಗಬಹುದಾಗಿದೆ.

ವೇದಗಳಲ್ಲಿಯೂ ಸಹ ರುದ್ರನ ಉಲ್ಲೇಖವಿದೆ. ಅವನನ್ನು ರುದ್ರ, ಶರ್ವ, ಉಗ್ರ, ಅಶನಿ ಎಂದು ಅವನ ಘೋರ ರೂಪವನ್ನು ನಿರ್ದೇಶಿಸಿ ಕರೆದಿರುವುದಲ್ಲದೆ; ಭವ, ಪಶುಪತಿ, ಮಹಾದೇವ, ಈಶಾನ ಎಂದು ರುದ್ರನ ಸೌಮ್ಯ ಸ್ವಭಾವವನ್ನು ಲಕ್ಷಿಸಿ ಕರೆಯಲಾಗಿದೆ. ಹೀಗೆ ರುದ್ರನಿಗೆ ಘೋರ ಮತ್ತು ಸೌಮ್ಯ ಎರಡೂ ರೂಪಗಳಿವೆ.[೧೨] ಅಲ್ಲದೆ ವೇದಗಳಲ್ಲಿ ಇವನನ್ನು ವೈದ್ಯನೆಂದೂ ಕರೆಯಲಾಗಿದೆ. ಅವನು ಔಷಧಿಗಳಿಗೆ ಅಧಿಪತಿ ಆದುದರಿಂದ ದೇವಲೋಕದ ವೈದ್ಯನಾಗಿದ್ದಾನೆ. ಅವನು ಬಯಲು ಹೊಲಗಳ ಯಜಮಾನ, ಪಶುಗಳ ಒಡೆಯ, ಆದುದರಿಂದ ಪಶುಪತಿಯೂ ಹೌದು.[೧೩] ಮುಂದೆ ಪುರಾಣಗಳ ಕಾಲದಲ್ಲಿ ಪ್ರಧಾನರಾದ ತ್ರಿಮೂರ್ತಿಗಳಲ್ಲಿ ಶಿವನೂ ಒಬ್ಬ. ಸೃಷ್ಟಿ, ಸ್ಥಿತಿ ಮತ್ತು ಲಯ ಕಾರ್ಯಗಳಲ್ಲಿ ಇವನು ಲಯಕರ್ತನಾಗಿ ಕಂಡುಕೊಳ್ಳುತ್ತಾನೆ.

ಪ್ರಸ್ತುತ ಅಧ್ಯಯನದ ಶೈವ ಶಿಲ್ಪಗಳಲ್ಲಿ ಪ್ರಮುಖವಾಗಿ ಲಿಂಗ, ಭೈರವ, ವೀರಭದ್ರ, ಗಣಪತಿ, ಸ್ಕಂದ, ಉಮಾಮಹೇಶ್ವರ, ರತಿಮನ್ಮಥ ಮತ್ತು ನಂದಿ ಶಿಲ್ಪಗಳನ್ನು ಕಾಣುತ್ತೇವೆ.

**ಗಣಪತಿ ಶಿಲ್ಪಗಳು :** ಗಣಪತಿಯು ಭಾರತೀಯರ ಜಯ, ಶುಭ ಹಾಗೂ ವೈಭವದ ಸಂಕೇತ. ಶಿವ, ಬ್ರಹ್ಮಾಂಡ, ಗಣೇಶ, ವರಾಹ, ಸ್ಕಂದ, ಬ್ರಹ್ಮ-ವೈವರ್ತ, ಮತ್ಸ್ಯ, ವಾಮನ, ಪದ್ಮ ಮೊದಲಾದ ಪುರಾಣಗಳು ಹಾಗೂ ರೂಪಮಂಡನ, ಕಾಮಿಕಾಗಮಗಳು ಗಣಪತಿಯನ್ನು ಉಲ್ಲೇಖಿಸಿವೆ.[೧೪] ಶಿವಪುರಾಣವು ಗಣಪತಿಯ ಹುಟ್ಟಿನ ಬಗ್ಗೆ ತಿಳಿಸುತ್ತದೆ. ಗಣಪತಿಯು ನಾಲ್ಕು, ಆರು, ಹತ್ತು ಹಾಗೂ ಹದಿನಾರು ಕೈಗಳನ್ನು ಹೊಂದಿರುವನು. ಅವುಗಳಲ್ಲಿ ನಾಲ್ಕು ಕೈಗಳಿರುವ ಗಣಪತಿ ಸಾಮಾನ್ಯ. ಗಣಪತಿಯು ನಾನಾ ರೂಪಗಳಿಂದ ಪೂಜೆಗೊಳ್ಳುವನು. ಅವು ಬಾಲಗಣಪತಿ, ತರುಣಗಣಪತಿ, ಭಕ್ತಿವಿಘ್ನೇಶ್ವರ, ವೀರವಿಘ್ನೇಶ, ಶಕ್ತಿಗಣೇಶ, ಉಚ್ಚಿಷ್ಟಗಣಪತಿ, ಮಹಾಗಣಪತಿ, ಉರ್ಧ್ವಗಣಪತಿ, ಪಿಂಗಲಗಣಪತಿ, ಹೇರಂಭಾ, ಪ್ರಸನ್ನಗಣಪತಿ, ಧ್ವಜಗಣಪತಿ, ಉನ್ಮತ್ತಗಣಪತಿ, ವಿಘ್ನರಾಜ, ಗಣಪತಿ, ಭುವನೇಶಗಣಪತಿ, ನೃತ್ಯಗಣಪತಿ, ಹರಿದ್ರಾಗಣಪತಿ, ಬಾಲಚಂದ್ರ, ಸುರಪಕರಣ ಹಾಗೂ ಏಕದಂತ.[೧೫] ಶಿಲ್ಪಗಳಲ್ಲಿ ಗಣಪತಿಯನ್ನು ಸುಖಾಸೀನದಲ್ಲಿ ಕುಳಿತಂತೆ, ನಿಂತಂತೆ ಮತ್ತು ನೃತ್ಯ ಭಂಗಿಯಲ್ಲಿಯೂ ಕಂಡರಿಸಲಾಗಿದೆ. ಸಾಮಾನ್ಯವಾಗಿ ಗಣಪತಿಯ ಶಿಲ್ಪಗಳು ಕುಳಿತ ಭಂಗಿಯಲ್ಲಿದ್ದು ಆನೆಮುಖ, ಸುತ್ತಿದ ಸೊಂಡಿಲು(ವಕ್ರತುಂಡ), ದೊಡ್ಡ ಹೊಟ್ಟೆ(ಮಹೋದರ), ನಾಲ್ಕು ಕೈಗಳಿಂದ ಕೂಡಿದವನಾಗಿ ಪಾಶ, ಅಂಕುಶ, ಅಭಯ, ಮೋದಕಧಾರಿಯಾಗಿ ಕಂಡುಬರುತ್ತಾನೆ.[೧೬] ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಿದ ತ್ರಿಕೂಟ ದೇವಾಲಯಗಳಲ್ಲಿ ಗಣಪತಿಯ ಕೆಲವು ಗಮನಾರ್ಹ ಶಿಲ್ಪಗಳು ಈ ಕೆಳಗಿನಂತೆ ಕಂಡು ಬರುತ್ತವೆ.

## ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳ ಗಣಪತಿ ಶಿಲ್ಪಗಳು, ಶೈಲಿ : ಕಲ್ಯಾಣ ಚಾಲುಕ್ಯ

| ಕ್ರ.ಸಂ. | ಊರು | ದೇವಾಲಯದ ಹೆಸರು | ಬಳಸಿದ ಕಲ್ಲು | ಗಾತ್ರ ಅxಎ ಅಡಿಗಳಲ್ಲಿ | ವಿವರ | ಕಾಲ |
|---|---|---|---|---|---|---|
| ೧. | ಅಬ್ಬಲೂರು (ತಾ : ಹಿರೇಕೆರೂರು) | ಸಣ್ಣ ಬಸವಣ್ಣ (ಬ್ರಹ್ಮಲಿಂಗೇಶ್ವರ) | ನೀಲಿ ಛಾಯೆಯ ಕಪ್ಪು ಕಲ್ಲು | ೨.೩ x ೩ | ಆಸೀನ ಶಿಲ್ಪವು ನಾಲ್ಕು ಕೈಗಳಲ್ಲಿ ಕುಠಾರ, ಅಂಕುಶ, ದಂತ ಹಿಡಿದಿದೆ. ಮೋದಕ ಹಿಡಿದ ಕೈ ಹಾಳಾಗಿದೆ. ಪೀಠದಲ್ಲಿ ಇಲಿಯ ಉಬ್ಬು ಶಿಲ್ಪವಿದೆ. ಕಿರೀಟ, ಕೊರಳಹಾರ, ಕಾಲುಗಳಲ್ಲಿ ಕಡಗ, ಗೆಜ್ಜೆಗಳಿವೆ. (ಛಾಯಾಚಿತ್ರ-೬೫) | ಕ್ರಿ.ಶ.೧೨ನೇ ಶತಮಾನ |
| ೨. | ಉಪ್ಪುಣಸಿ (ತಾ : ಹಾನಗಲ್ಲು) | ಕಲ್ಮೇಶ್ವರ | ,, | ೩ x ೪.೪ | ಆಸೀನ ಭಂಗಿಯಲ್ಲಿರುವ ಶಿಲ್ಪವು ನಾಲ್ಕು ಕೈಗಳಿಂದ ಕೂಡಿದ್ದು ಕುಠಾರ, ಅಂಕುಶ, ಮೋದಕವನ್ನು ಧರಿಸಿದ್ದು ದಂತವನ್ನು ಹಿಡಿದ ಕೈ ಭಗ್ನಗೊಂಡಿದೆ. ಅಗಲವಾದ ಕಿವಿ, ಕಿರೀಟಗಳು ಆಕರ್ಷಕವಾಗಿವೆ.(ಛಾಯಾಚಿತ್ರ-೬೬) | ಕ್ರಿ.ಶ.೧೧ನೇ ಶತಮಾನ |
| ೩. | ರಟ್ಟಿಹಳ್ಳಿ (ತಾ : ಹಿರೇಕೆರೂರು) | ಕಡಂಬೇಶ್ವರ | ,, | ೨ X ೩ | ಚತುರ್ಭುಜ ಆಸೀನ ಶಿಲ್ಪವು ಕುಠಾರ, ಅಂಕುಶ, ದಂತ, ಮೋದಕಗಳನ್ನು ಧರಿಸಿರುವುದು. ಕಿರೀಟ, ಕೊರಳಹಾರ, ಕಾಲುಗಳಲ್ಲಿ ಕಡಗಗಳ ಅಲಂಕರಣವಿದೆ. | ಕ್ರಿ.ಶ.೧೧ನೇ ಶತಮಾನ |

**ಶಿವಲಿಂಗಗಳು :** ಲಿಂಗವು ಶೈವಧರ್ಮದ ಹೆಗ್ಗುರುತು ಆದುದರಿಂದ ಶಿವನನ್ನು ಲಿಂಗರೂಪದಲ್ಲಿ ಪೂಜಿಸುತ್ತಿದ್ದುದು ಸಾಮಾನ್ಯವಾಗಿ ಕಂಡುಬರುತ್ತದೆ. 'ಲಿಂಗಾತ್ ಸರ್ವಂ ಸಮುತ್ಪನ್ನಂ ಲಯಂ ತಸ್ಮಿನ್ ಪ್ರಕೀರ್ತಿತಮ್', ಲಿಂಗದಿಂದಲೇ ಸಕಲ ಜಗತ್ತು ಹುಟ್ಟುತ್ತದೆ ಮತ್ತು ಅಲ್ಲಿಯೇ ಲಯವಾಗುತ್ತದೆ. 'ಲೀಯತೆ', 'ಗಮ್ಯತೆ' ಎಂಬ ಎರಡು ಧಾತುಗಳ ಪ್ರಥಮಾಕ್ಷರಗಳಿಂದ ಲಿಂಗಶಬ್ದದ ಉತ್ಪನ್ನ ಎಂದು ಆಗಮಗಳು ಸಾರುತ್ತವೆ.[೩೭] ಸ್ಕಂದ ಪುರಾಣದಲ್ಲಿ ಆಕಾಶವು ಲಿಂಗಸ್ವರೂಪವೆಂದೂ ಭೂಮಿಯು ಪಾಣಿಪೀಠವೆಂದೂ ಈ ಬೃಹತ್‌ಲಿಂಗದೊಳಗೆ ಜಗತ್ತು ಹುಟ್ಟಿಕೊಂಡು ಅಲ್ಲೇ ಲಯವಾಗುತ್ತದೆ ಎಂದು ಹೇಳಿದೆ.[೩೮]

ಮಾನಸಾರ ಗ್ರಂಥದಲ್ಲಿ ಲಿಂಗವನ್ನು ಆರು ವಿಧಗಳಲ್ಲಿ ವಿಂಗಡಿಸಿದೆ.[೩೯]

೧. ಶೈವ, ಪಾಶುಪತ, ಕಾಲಾಮುಖ, ಮಹಾವ್ರತ, ವಾಮ, ಭೈರವ

೨. ಸಂಕರ್ಣ, ವರ್ಧಮಾನ, ಶಿವಾಂಕ, ಸ್ವಸ್ತಿಕ,

೩. ಜಾತಿ, ಛಂದ, ವಿಕಲ್ಪ, ಆಭಾಸ, (ಎತ್ತರವನ್ನು ಆಧರಿಸಿ)

೪. ನಾಗರ, ದ್ರಾವಿಡ, ವೇಸರ (ಅಗಲವನ್ನು ಆಧರಿಸಿ)

೫. ದೈವಿಕ, ಮಾನುಷ, ಗಾಣಪತ್ಯ, ಆರ್ಷ (ಈ ನಾಲ್ಕೂ ಸೇರಿ ಸ್ವಯಂಭೂ ಎನ್ನಲಾಗಿದೆ)

೬. ಆತ್ಮಾರ್ಥ, ಪರಾರ್ಥ (ವೈಯಕ್ತಿಕ, ಸಾಮೂಹಿಕ) ಇದರಲ್ಲಿ ಮತ್ತೆ ಎರಡು ವಿಧ ೧. ಏಕಲಿಂಗ ೨. ಬಹುಲಿಂಗ. ಕ್ಷಣಿಕ ಲಿಂಗವೂ ಸಹ (ಉಸುಕು ಮುಂತಾದುವುಗಳಲ್ಲಿ ಕ್ಷಣಿಕವಾಗಿ ತಯಾರಿಸಿದ) ಇದೇ ಗುಂಪಿನಲ್ಲಿದೆ.

ಸುಪ್ರಭೇದಾಗಮ ಪ್ರಕಾರ ಗರ್ಭಗೃಹದಲ್ಲಿ ಸ್ಥಾಪಿತಗೊಂಡ ಅಚಲ ಲಿಂಗಗಳಲ್ಲಿ ಒಂಬತ್ತು ವಿಧಗಳಿವೆ. ಅವು ಸ್ವಯಂಭೂ, ಪುರವ, ದೈವತ, ಗಾಣಪತ್ಯ, ಅಸುರ, ಸುರ, ರಾಕ್ಷಸ, ಮಾನುಷ ಬಾಣಲಿಂಗಗಳಾಗಿವೆ[೪೦] ಇವುಗಳಲ್ಲಿ ಹೆಚ್ಚಾಗಿ ಕಂಡುಬರುವುವೆಂದರೆ ಮಾನುಷ್ಯಕೃತ ಲಿಂಗಗಳು.[೪೧] ಇದು ಬ್ರಹ್ಮಭಾಗ, ವಿಷ್ಣುಭಾಗ ಮತ್ತು ರುದ್ರಭಾಗಗಳಿಂದ ಕೂಡಿರುತ್ತದೆ. ಚತುರ್ಭುಜ ಭಾಗವು ಬ್ರಹ್ಮಭಾಗ, ಅಷ್ಟಭುಜ ಭಾಗವು ವಿಷ್ಣುಭಾಗ, ವೃತ್ತಾಕಾರದ ಪೂಜಾಭಾಗವು ರುದ್ರಭಾಗವು. ರುದ್ರಭಾಗದಲ್ಲಿ ಬ್ರಹ್ಮಸೂತ್ರವಿರುತ್ತದೆ. ಮತ್ತು ಭಿನ್ನಭಿನ್ನ ಶಿರೋವರ್ತನಗಳಿರುತ್ತವೆ. ಆದುದರಿಂದ ಪ್ರತಿಯೊಂದು ದೇವಾಲಯದಲ್ಲಿ ಇರುವ ಮಾನುಷಕೃತ ಲಿಂಗಗಳು ತ್ರಿಮೂರ್ತಿಗಳ ಸಂಕೇತವಾಗಿವೆ.

ಲಿಂಗ ಮತ್ತು ಯೋನಿ(ಪೀಠ)ಗಳು ಶಿವ ಮತ್ತು ಶಕ್ತಿಯರ ಸಂಕೇತವಾಗಿದೆ. ಮಾನಸಾರ ಶಿಲ್ಪಶಾಸ್ತ್ರದ ಪ್ರಕಾರ

೧. ನಾಗರಪೀಠ (ಚತುರ್ಭುಜವುಳ್ಳದ್ದು) ೨. ದ್ರಾವಿಡ ಪೀಠ (ಅಷ್ಟಭುಜವುಳ್ಳದ್ದು) ೩. ವೇಸರ ಪೀಠ (ವೃತ್ತಾಕಾರವುಳ್ಳದ್ದು) ಮತ್ತು ಧಾರಾಪೀಠ (ವೈಶ್ವತ್ರಿಕ) ಎಂಬ ನಾಲ್ಕು ಪೀಠ ಪ್ರಕಾರಗಳಿವೆ.

ಪೀಠವನ್ನು ಸರಳವಾಗಿಯೂ ಹಾಗೂ ಅಲಂಕೃತವಾಗಿಯೂ ರಚಿಸಿರಬಹುದು. ಒಂದರ ಮೇಲೊಂದರಂತೆ ಇಟ್ಟು ಒಂದು, ಎರಡು ಅಥವಾ ಮೂರು ಕಲ್ಲು ಹಲಗೆಗಳಿಂದ ಪೀಠವು ರಚಿತವಾಗಿರಬಹುದು. ಅಥವಾ

ವಿವಿಧ ಕುಸುರುಗೆಲಸಗಳಿಂದ ಅಲಂಕರಿಸಿರಬಹುದು. ದೇವಾಲಯ ಅಧಿಷ್ಠಾನ ಭಾಗದಲ್ಲಿ ಇರುವ ರಚನೆಗಳು ಇಲ್ಲಿ ಇರುತ್ತವೆ. ವಿವಿಧ ರಚನಾವಿಧಾನಗಳ ಆಧಾರದಿಂದ ಇವುಗಳ ಆಕೃತಿ ಮತ್ತು ಸಂಖ್ಯೆಗಳಿಗನುಗುಣವಾಗಿ ಅವುಗಳನ್ನು ಗುರುತಿಸಲಾಗಿದೆ. ಉದಾ. ಭದ್ರಪೀಠ, ಮಹಾಂಬುಜ ಪೀಠ, ಶ್ರೀಕರಪೀಠ, ವಿಕರಪೀಠ, ಮಹಾವಜ್ರಪೀಠ, ಸೌಮ್ಯಕಪೀಠ, ಚಂದ್ರಪೀಠ ಮತ್ತು ವಜ್ರಪೀಠ. ಈ ರಚನಾ ವಿಧಾನದಲ್ಲಿ ಬಳಸಿರುವ ವಿವಿಧ ಭಾಗಗಳೆಂದರೆ - ಉಪಾನ, ಜಗತಿ, ಕುಮುದ, ಪದ್ಮ, ಕಂಪ, ಕಂಠ, ಪಟ್ಟಿಕೆ, ನಿಮ್ನ ಮತ್ತು ಘೃತವಾರಿ. ಪೂಜಕನಿಗೆ ಎದುರಾದಂತೆ ಪೀಠದ ಪ್ರಣಾಳ ಲಿಂಗದ ಎಡಕ್ಕೆ ಇರುತ್ತದೆ.[೨]

ಹಾವೇರಿ ಜಿಲ್ಲೆಯ ಎಲ್ಲ ತ್ರಿಕೂಟ ದೇವಾಲಯಗಳ ಅಂದರೆ ಅದು ವ್ಯಕ್ತಿನಾಮದ್ದಾಗಿರಲಿ, ತ್ರೈಪುರಷ ದ್ದಾಗಿರಲಿ ಅಥವಾ ನ್ಯಾಯದರ್ಶನದ ಹಿನ್ನೆಲೆಯಲ್ಲಿ ರೂಪಗೊಂಡದ್ದಿರಲಿ ಎಲ್ಲ ದೇವಾಲಯಗಳಲ್ಲೂ ಶಿವಲಿಂಗಕ್ಕೆ ಪ್ರಥಮ ಸ್ಥಾನವನ್ನು ಕೊಡಲಾಗಿದೆ. ಪೂರ್ವಾಭಿಮುಖವಾದ ಮುಖ್ಯಗರ್ಭಗೃಹಗಳನ್ನು ಲಿಂಗಕ್ಕೆ ಮೀಸಲಿಡಲಾಗಿದೆ. ಅಲ್ಲದೆ ವ್ಯಕ್ತಿನಾಮ ದೇವಾಲಯಗಳು ಮೂರು ಲಿಂಗಗಳನ್ನು ನ್ಯಾಯದರ್ಶನ ದೇವಾಲಯ ಗಳು ಎರಡು ಲಿಂಗಗಳನ್ನು ಮತ್ತು ತ್ರೈಪುರುಷ ದೇವಾಲಯಗಳು ಒಂದು ಲಿಂಗವನ್ನು ಹೊಂದಿರುವುದು ಮುಖ್ಯವಾಗಿ ಗಮನಿಸಬೇಕಾದ ಅಂಶವಾಗಿದೆ.

### ವ್ಯಕ್ತಿನಾಮ ದೇವಾಲಯದ ಲಿಂಗಗಳು

ಈ ಮಾದರಿಯ ದೇವಾಲಯಗಳಲ್ಲಿ ಮೂರೂ ಗರ್ಭಗೃಹಗಳು ಲಿಂಗಗಳನ್ನೇ ಹೊಂದಿವೆ. ಸಾಮಾನ್ಯವಾಗಿ ಮುಖ್ಯ ಗರ್ಭಗೃಹದಲ್ಲಿಯ ಲಿಂಗವು ನೆಲಮಟ್ಟದಿಂದ ಸ್ವಲ್ಪ ಮೇಲೆ ಇದ್ದಂತೆ (ಸ್ವಯಂಭೂ) ಇವೆ. ಅಕ್ಕಪಕ್ಕದ ಗರ್ಭಗೃಹಗಳಲ್ಲಿಯ ಲಿಂಗಗಳು ಎತ್ತರವಾದ ಪೀಠ ರಚನೆಗಳನ್ನು ಹೊಂಟ ರೂಪುಗೊಂಡಿವೆ.

### ತ್ರೈಪುರುಷ ದೇವಾಲಯಗಳಲ್ಲಿಯ ಲಿಂಗಗಳು

ಈ ಮಾದರಿಯ ತ್ರಿಕೂಟ ದೇವಾಲಯಗಳು ದಕ್ಷಿಣ ದಿಕ್ಕಿನಲ್ಲಿ ಪ್ರವೇಶ ದ್ವಾರವನ್ನು ಹೊಂದಿದ್ದರೂ ಮುಖ್ಯಗರ್ಭಗೃಹವು ಪೂರ್ವಾಭಿಮುಖವಾಗಿಯೇ ಇದೆ. ಈ ಮುಖ್ಯ ಗರ್ಭಗೃಹವನ್ನು ಲಿಂಗಕ್ಕೆ ಮೀಸಲಾಗಿ ಇಡಲಾಗಿದೆ. ಈ ಮಾದರಿಯ ತ್ರಿಕೂಟ ದೇವಾಲಯಗಳಲ್ಲಿ ಒಂದು ಲಿಂಗವನ್ನು ಮಾತ್ರ ಕಾಣುತ್ತೇವೆ. ಈ ಲಿಂಗಗಳು ಎತ್ತರವಾದ ಪೀಠ ರಚನೆಯನ್ನು ಒಳಗೊಂಡಿವೆ.

## ೧. ವ್ಯಕ್ತಿನಾಮ/ಪರೋಕ್ಷವಿನಯ ತ್ರಿಕೂಟ ದೇವಾಲಯಗಳ ಲಿಂಗಗಳು

### ಹರಳಹಳ್ಳಿ (ತಾ.ಹಾವೇರಿ) ಸೋಮೇಶ್ವರ ದೇವಾಲಯದ ಲಿಂಗಗಳು, ಕಾಲ : ಕ್ರಿ.ಶ. ೧೧೮೧, ಶೈಲಿ : ಕಲ್ಯಾಣ ಚಾಲುಕ್ಯ

| ಕ್ರ.ಸಂ. | ವಿವರ | ಮುಖ್ಯಲಿಂಗ, ಪೂರ್ವಾಭಿಮುಖ | ಉತ್ತರಾಭಿಮುಖ, ಗರ್ಭಗೃದಹ ಲಿಂಗ (ಛಾಯಾಚಿತ್ರ-೬೭) | ದಕ್ಷಿಣಾಭಿಮುಖ, ಗರ್ಭಗೃಹದ ಲಿಂಗ |
|---|---|---|---|---|
| ೧. | ಹೆಸರು | ಸ್ವಯಂಭೂ ಸೋಮೇಶ್ವರ | ವಿಕ್ರಮೇಶ್ವರ | ಗುತ್ತೇಶ್ವರ |
| ೨. | ಗಾತ್ರ | ನೆಲಮಟ್ಟದಿಂದ ಸ್ವಲ್ಪ ಎತ್ತರ | ೩x೪ ಅಡಿ | ೩x೪ ಅಡಿ |
| ೩. | ಪೀಠ ಮಾದರಿ | ಚೌಕಾಕಾರ | ಚೌಕಾಕಾರ | ಚೌಕಾಕಾರ |
| ೪. | ಪೀಠ ರಚನಾ ವಿಧಾನ | ಒಡ್ಡು ಕಟ್ಟಿದಂತೆ | ಉಪಾನ, ಜಗತಿ, ಪದ್ಮ, ಕಂಠ, ತ್ರಿಪಟ್ಟ ಕುಮುದ, ನಿಮ್ನ, ಘೃತವಾರಿ ಇದೆ | ಉಪಾನ, ಜಗತಿ, ಪದ್ಮ, ಕಂಠ, ತ್ರಿಪಟ್ಟ ಕುಮುದ, ನಿಮ್ನ ಘೃತವಾರಿ |
| ೫. | ಮಣಿರೇಖೆ | ಇದೆ | ಇದೆ | ಇದೆ |
| ೬. | ಜಲಹರಿ | ಲಿಂಗದ ಎಡಭಾಗಕ್ಕೆ | ಲಿಂಗದ ಬಲಭಾಗಕ್ಕೆ | ಲಿಂಗದ ಎಡ ಭಾಗಕ್ಕೆ |
| ೭. | ಬಳಸಿದ ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು |
| ೮. | ಕಾಲ | ಕ್ರಿ.ಶ.೧೧೮೧ | ಕ್ರಿ.ಶ.೧೧೮೧ | ಕ್ರಿ.ಶ.೧೧೮೧ |

## ೨. ದಶರಥಕೊಪ್ಪ (ತಾ.ಹಾನಗಲ್ಲ) ಸೋಮೇಶ್ವರ ದೇವಾಲಯದ ಲಿಂಗಗಳು, ಕಾಲ : ಕ್ರಿ.ಶ.ಸು. ೧೨ನೇ ಶತಮಾನ, ಶೈಲಿ : ಕಲ್ಯಾಣ ಚಾಲುಕ್ಯ

| ಕ್ರ.ಸಂ. | ವಿವರ | ಪೂರ್ವಾಭಿಮುಖ ಗರ್ಭಗೃಹ | ಉತ್ತರಾಭಿಮುಖ ಗರ್ಭಗೃಹ | ದಕ್ಷಿಣಾಭಿಮುಖ ಗರ್ಭಗೃಹ |
|---|---|---|---|---|
| ೧. | ಹೆಸರು | ಸೋಮೇಶ್ವರ | ಗುರುಭಕ್ತ (?) | ಗುರುಭಕ್ತ (?) |
| ೨. | ಗಾತ್ರ | ೧ x ೨ ಅಡಿ | ೧.೧೦ x ೧.೮ ಅಡಿ | ೧.೧೦x೧.೮ ಅಡಿ |
| ೩. | ಪೀಠ ಮಾದರಿ | ವೃತ್ತಾಕಾರ | ವೃತ್ತಾಕಾರ | ವೃತ್ತಾಕಾರ |
| ೪. | ಪೀಠ ರಚನಾ ವಿಧಾನ | ಎರಡು ಕಲ್ಲು ಫಲಕಗಳನ್ನು ಬಳಸಿದೆ | ಎರಡು ಕಲ್ಲು ಫಲಕಗಳನ್ನು ಬಳಸಿದೆ | ಎರಡು ಕಲ್ಲು ಫಲಕಗಳನ್ನು ಬಳಸಿದೆ |
| ೫. | ಮಣಿರೇಖೆ | ಇಲ್ಲ | ಇಲ್ಲ | ಇಲ್ಲ |
| ೬. | ಜಲಹರಿ | ಲಿಂಗದ ಎಡಭಾಗಕ್ಕೆ | ಲಿಂಗದ ಬಲಭಾಗಕ್ಕೆ | ಲಿಂಗದ ಎಡ ಭಾಗಕ್ಕೆ |
| ೭. | ಬಳಸಿದ ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು |
| ೮. | ಕಾಲ | ಕ್ರಿ.ಶ.ಸು.೧೨ನೇ ಶತಮಾನ | ಕ್ರಿ.ಶ.ಸು.೧೨ನೇ ಶತಮಾನ | ಕ್ರಿ.ಶ.ಸು.೧೨ನೇ ಶತಮಾನ |

## ೩. ಅಬ್ಬಲೂರು (ತಾ.ಹಿರೇಕೆರೂರು) ಸೋಮೇಶ್ವರ ದೇವಾಲಯದ ಲಿಂಗಗಳು, ಕಾಲ : ಕ್ರಿ.ಶ. ೧೨೦೦, ಶೈಲಿ : ಕಲ್ಯಾಣ ಚಾಲುಕ್ಯ

| .ಕ್ರ.ಸಂ. | ವಿವರ | ಮುಖ್ಯಗರ್ಭಗೃಹ ಪೂರ್ವಾಭಿಮುಖ (ಛಾಯಾಚಿತ್ರ-೬೮) | ಉತ್ತರಾಭಿಮುಖ | ದಕ್ಷಿಣಾಭಿಮುಖ |
| --- | --- | --- | --- | --- |
| ೧. | ಹೆಸರು | ಸೋಮನಾಥ | ಏಕಾಂತ ರಾಮಯ್ಯ | ಅಗ್ನಿಹೊನ್ನಯ್ಯ |
| ೨. | ಗಾತ್ರ (ಎXಅ) | ೪X೨.೫ ಅಡಿ | ೪x೨ ಅಡಿ | ೪x೨ ಅಡಿ |
| ೩. | ಪೀಠ ಮಾದರಿ | ಚೌಕಾಕಾರ | ಚೌಕಾಕಾರ | ಚೌಕಾಕಾರ |
| ೪. | ಪೀಠ ರಚನಾ ವಿಧಾನ | ಉಪಾನ, ಜಗತಿ, ಪದ್ಮ, ಕಂಪ, ಕಂಠ, ತ್ರಿಪಟ್ಟ ಕುಮುದ, ನಿಮ್ನ, ಘೃತವಾರಿ | ಉಪಾನ, ಜಗತಿ, ಪದ್ಮ, ಕಂಠ, ಕಂಪ,ತ್ರಿಪಟ್ಟ ಕುಮುದ, ನಿಮ್ನ, ಘೃತವಾರಿ | ಜಗತಿ, ಪದ್ಮ, ಕಂಠ, ತ್ರಿಪಟ್ಟ ಕುಮುದ, ನಿಮ್ನ, ಘೃತವಾರಿ |
| ೫. | ಮಣಿರೇಖೆ | ಇಲ್ಲ | ಇಲ್ಲ | ಇಲ್ಲ |
| ೬. | ಜಲಹರಿ | ಲಿಂಗದ ಎಡಭಾಗಕ್ಕೆ | ಲಿಂಗದ ಬಲಭಾಗಕ್ಕೆ | ಲಿಂಗದ ಎಡ ಭಾಗಕ್ಕೆ |
| ೭. | ಬಳಸಿದ ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು |
| ೮. | ಕಾಲ | ಕ್ರಿ.ಶ.೧೨೦೦ | ಕ್ರಿ.ಶ.೧೨೦೦ | ಕ್ರಿ.ಶ.೧೨೦೦ |

## ೪. ರಟ್ಟಿಹಳ್ಳಿ (ತಾ.ಹಿರೇಕೆರೂರು) ಕಡಂಬೇಶ್ವರ ದೇವಾಲಯ ಲಿಂಗಗಳು, ಕಾಲ : ಕ್ರಿ.ಶ. ೧೨ನೇ ಶತಮಾನ, ಶೈಲಿ : ಕಲ್ಯಾಣ ಚಾಲುಕ್ಯ

| ಕ್ರ.ಸಂ. | ವಿವರ | ಮುಖ್ಯಗರ್ಭಗೃಹ ಪೂರ್ವಾಭಿಮುಖ | ಉತ್ತರಾಭಿಮುಖ | ದಕ್ಷಿಣಾಭಿಮುಖ |
|---|---|---|---|---|
| ೧. | ಹೆಸರು | ಕಡಂಬೇಶ್ವರ | ರಾಜೇಶ್ವರ | ಮಲ್ಲೇಶ್ವರ |
| ೨. | ಗಾತ್ರ (ಎXಅ) | ೪ X ೨.೫ ಅಡಿ | ೧.೬ x ೨ ಅಡಿ | ೧.೬ x ೨ ಅಡಿ |
| ೩. | ಪೀಠ ಮಾದರಿ | ಚೌಕಾಕಾರ | ವೃತ್ತಾಕಾರ | ವೃತ್ತಾಕಾರ |
| ೪. | ಪೀಠ ರಚನಾ ವಿಧಾನ | ಉಪಾನ, ಜಗತಿ, ಪದ್ಮ, ಕಂಠ, ತ್ರಿಪಟ್ಟ ಕುಮುದ, ನಿಮ್ನ, ಘೃತವಾರಿ | ಎರಡು ಕಲ್ಲು ಫಲಕಗಳನ್ನು ಬಳಸಿದೆ | ಎರಡು ಕಲ್ಲು ಫಲಕಗಳನ್ನು ಬಳಸಿದೆ |
| ೫. | ಮಣಿರೇಖೆ | ಇಲ್ಲ | ಇಲ್ಲ | ಇಲ್ಲ |
| ೬. | ಜಲಹರಿ | ಲಿಂಗದ ಎಡಭಾಗಕ್ಕೆ | ಲಿಂಗದ ಬಲಭಾಗಕ್ಕೆ | ಲಿಂಗದ ಎಡಭಾಗಕ್ಕೆ |
| ೭. | ಬಳಸಿದ ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು |
| ೮. | ಕಾಲ | ಕ್ರಿ.ಶ.೧೧೭೪ | ಕ್ರಿ.ಶ.೧೨೩೮ | ಕ್ರಿ.ಶ.೧೨೩೮ |

೫. ಕಾರಡಗಿ (ತಾ.ಸವಣೂರು) ಡೊಳ್ಳೇಶ್ವರ ದೇವಾಲಯದ ಲಿಂಗಗಳು, ಕಾಲ : ಕ್ರಿ.ಶ.ಸು. ೧೨ನೇ ಶತಮಾನ, ಶೈಲಿ : ಕಲ್ಯಾಣ ಚಾಲುಕ್ಯ

| ಕ್ರ.ಸಂ. | ವಿವರ | ಮುಖ್ಯಗರ್ಭಗೃಹ ಪೂರ್ವಾಭಿಮುಖ | ಉತ್ತರಾಭಿಮುಖ | ದಕ್ಷಿಣಾಭಿಮುಖ |
|---|---|---|---|---|
| ೧. | ಹೆಸರು | ಲಭ್ಯವಿಲ್ಲ | ಲಭ್ಯವಿಲ್ಲ | ಲಭ್ಯವಿಲ್ಲ |
| ೨. | ಗಾತ್ರ (ಎxಅ) | ನೆಲಮಟ್ಟದಿಂದ ಅರ್ಧ ಅಡಿ ಎತ್ತರದಲ್ಲಿ | ೧.೬ x ೨ ಅಡಿ | ೧.೬ x ೨ ಅಡಿ |
| ೩. | ಪೀಠ ಮಾದರಿ | ವೃತ್ತಾಕಾರ | ವೃತ್ತಾಕಾರ | ವೃತ್ತಾಕಾರ |
| ೪. | ಪೀಠ ರಚನಾ ವಿಧಾನ | - | ಎರಡು ಕಲ್ಲು ಫಲಕಗಳನ್ನು ಬಳಸಲಾಗಿದೆ | ಎರಡು ಕಲ್ಲು ಫಲಕಗಳನ್ನು ಬಳಸಲಾಗಿದೆ |
| ೫. | ಮಣಿರೇಖೆ | ಇಲ್ಲ | ಇಲ್ಲ | ಇಲ್ಲ |
| ೬. | ಜಲಹರಿ | ಲಿಂಗದ ಎಡಭಾಗಕ್ಕೆ | ಲಿಂಗದ ಬಲಭಾಗಕ್ಕೆ | ಲಿಂಗದ ಎಡಭಾಗಕ್ಕೆ |
| ೭. | ಬಳಸಿದ ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು |
| ೮. | ಕಾಲ | ಕ್ರಿ.ಶ. ಸು. ೧೨ನೇ ಶತಮಾನ | ಕ್ರಿ.ಶ.ಸು.೧೨ನೇ ಶತಮಾನ | ಕ್ರಿ.ಶ.ಸು.೧೨ನೇ ಶತಮಾನ |

# ಹಾವೇರಿ ಜಿಲ್ಲೆಯ ತ್ರೈಪುರುಷ ತ್ರಿಕೂಟ ದೇವಾಲಯಗಳ ಲಿಂಗಗಳು, ಶೈಲಿ : ಕಲ್ಯಾಣ ಚಾಲುಕ್ಯ

| ಕ್ರ. ಸಂ. | ಊರು | ದೇವಾಲಯ ಹೆಸರು | ಲಿಂಗದ ಗಾತ್ರ ಎxಅ | ಪೀಠದ ಮಾದರಿ | ಪೀಠ ರಚನಾ ವಿಧಾನ | ಮಣಿರೇಖೆ | ಜಲಹರಿ | ಬಳಸಿದ ಕಲ್ಲು | ಕಾಲ |
|---|---|---|---|---|---|---|---|---|---|
| ೧. | ಉಪ್ಪುಣಸಿ (ತಾ.ಹಾನಗಲ್ಲ) | ಕಲ್ಮೇಶ್ವರ | ೩x೨.೬ ಅಡಿ | ಚೌಕಾಕಾರ | ಜಗತಿ, ಪದ್ಮ, ಕಂಠ, ತ್ರಿಪಟ್ಟ ಕುಮುದ, ಕಂಠ, ನಿಮ್ನ, ಘೃತವಾರಿ | ಇದೆ | ಲಿಂಗದ ಎಡಭಾಗದಲ್ಲಿ | ನೀಲಿ ಛಾಯೆಯ ಕಪ್ಪು ಕಲ್ಲು | ಕ್ರಿ.ಶ. ೧೦೨೮ |
| ೨. | ಕುಳೇನೂರು (ತಾ.ಹಾವೇರಿ) | ಕಲ್ಮೇಶ್ವರ | ೩x೨.೬ ಅಡಿ | ಚೌಕಾಕಾರ | ಜಗತಿ, ಪದ್ಮ, ಕಂಠ, ತ್ರಿಪಟ್ಟ ಕುಮುದ, ಕಂಠ, ನಿಮ್ನ, ಘೃತವಾರಿ | ಇದೆ | ಲಿಂಗದ ಎಡಭಾಗದಲ್ಲಿ | ,, | ಕ್ರಿ.ಶ. ೧೦೨೮ |
| ೩. | ಕಲಕೇರಿ (ತಾ.ಹಾನಗಲ್ಲ) | ಸೋಮೇಶ್ವರ | ನೆಲಮಟ್ಟದಿಂದ ಸ್ವಲ್ಪ ಮೇಲೆ | ಭಗ್ನ | - | - | - | ,, | ಕ್ರಿ.ಶ. ೧೦೭೬ |
| ೪. | ಮೇದೂರು (ತಾ.ಹಿರೇಕೆರೂರು) | ಸಣ್ಣಬಸವಣ್ಣ ಮಾಕಾಳೇಶ್ವರ (ಛಾಯಾಚಿತ್ರ-೬೯) | ೩x೩ ಅಡಿ | ಚೌಕಾಕಾರ | ಜಗತಿ, ಪದ್ಮ, ಕಂಠ, ತ್ರಿಪಟ್ಟ ಕುಮುದ, ಕಂಠ, ನಿಮ್ನ, ಘೃತವಾರಿ | ಇದೆ | ಲಿಂಗದ ಎಡಭಾಗದಲ್ಲಿ | ,, | ಕ್ರಿ.ಶ. ೧೦೮೭ |

# ಹಾವೇರಿ ಜಿಲ್ಲೆಯ ತ್ರೈಪುರುಷ ತ್ರಿಕೂಟ ದೇವಾಲಯಗಳ ಲಿಂಗಗಳು, ಶೈಲಿ : ಕಲ್ಯಾಣ ಚಾಲುಕ್ಯ

| ಕ್ರ. ಸಂ. | ಊರು | ದೇವಾಲಯ ಹೆಸರು | ಲಿಂಗದ ಗಾತ್ರ ಎxಅ | ಪೀಠದ ಮಾದರಿ | ಪೀಠ ರಚನಾ ವಿಧಾನ | ಮಣಿರೇಖೆ | ಜಲಹರಿ | ಬಳಸಿದ ಕಲ್ಲು | ಕಾಲ |
|---|---|---|---|---|---|---|---|---|---|
| ೫. | ಅಬ್ಬಲೂರು (ತಾಲೂಕು ಹಿರೇಕೆರೂರು) | ಬ್ರಹ್ಮಲಿಂಗೇಶ್ವರ | ೨.೬x೨.೬ ಅಡಿ | ಚೌಕಾಕಾರ | ಉದಾನ, ಜಗತಿ, ಪದ್ಮ, ಕಂಠ, ತ್ರಿಪಟ್ಟ ಕುಮುದ, ಕಂಠ, ನಿಮ್ನ, ಘೃತವಾರಿ | ಇಲ್ಲ | ಲಿಂಗದ ಎಡಭಾಗದಲ್ಲಿ | ನೀಲಿ ಛಾಯೆಯ ಕಪ್ಪು ಕಲ್ಲು | ಕ್ರಿ.ಶ. ೧೧೦೦ |
| ೬. | ನಾಗವಂದ (ತಾಲೂಕು ಹಿರೇಕೆರೂರು) | ಸಿದ್ದೇಶ್ವರ (ಬ್ರಹ್ಮಲಿಂಗೇಶ್ವರ) | ೨x೨ ಅಡಿ | ಚೌಕಾಕಾರ | ಉಪಾನ, ಜಗತಿ, ಪದ್ಮ, ಕಂಠ, ತ್ರಿಪಟ್ಟ ಕುಮುದ, ಕಂಠ, ನಿಮ್ನ, ಘೃತವಾರಿ | ಇಲ್ಲ | ಲಿಂಗದ ಎಡಭಾಗದಲ್ಲಿ | ,, | ಕ್ರಿ.ಶ. ೧೧೨೮ |
| ೭. | ಪುರದಗೇರಿ (ತಾಲೂಕು ಹಿರೇಕೆರೂರು) | ಸೋಮೇಶ್ವರ | ೨.೬x೨.೬ ಅಡಿ | ಚೌಕಾಕಾರ | ಉಪಾನ, ಜಗತಿ, ಪದ್ಮ, ಕಂಠ, ತ್ರಿಪಟ್ಟ ಕುಮುದ, ಕಂಠ, ನಿಮ್ನ, ಘೃತವಾರಿ | ಇಲ್ಲ | ಲಿಂಗದ ಎಡಭಾಗದಲ್ಲಿ | ,, | ಇತ್ತೀಚಿನ |
| ೮. | ಕರಗುದರಿ | ಶಂಕರದೇವ | ಲಭ್ಯವಿಲ್ಲ | - | - | - | - | - | - |

### ನ್ಯಾಯದರ್ಶನ ತ್ರಿಮೂರ್ತಿ ಹಿನ್ನೆಲೆಯ ದೇವಾಲಯಗಳಲ್ಲಿಯ ಲಿಂಗಗಳು

ಈಶ್ವರನ ಅನಿತ್ಯರೂಪವನ್ನು ಬಿಂಬಿಸುವ ಈ ಮಾದರಿಯ ತ್ರಿಕೂಟ ದೇವಾಲಯಗಳಲ್ಲಿ ಎರಡು ಗರ್ಭಗೃಹಗಳು ಲಿಂಗಕ್ಕೆ ಮೀಸಲಾಗಿವೆ. ಒಂದು ಪೂರ್ವಾಭಿಮುಖ ಇನ್ನೊಂದು ಉತ್ತರಾಭಿಮುಖ ಗರ್ಭಗೃಹಗಳು. ಈ ಗರ್ಭಗೃಹಗಳಲ್ಲಿ ಪ್ರತಿಷ್ಠಾಪಿಸಿದ ಎರಡೂ ಲಿಂಗಗಳಲ್ಲಿ ಭಿನ್ನತೆಯನ್ನು ಕಾಣುತ್ತೇವೆ. ಪೂರ್ವಾಭಿಮುಖವಾದ ಮುಖ್ಯ ಗರ್ಭಗೃಹದಲ್ಲಿ ಚೌಕಾಕಾರದ ಪೀಠದಲ್ಲಿ ಪೂಜಾಭಾಗವಾದ ರುದ್ರಭಾಗವು ಎತ್ತರವಾಗಿರುತ್ತದೆ. ಉತ್ತರಾಭಿಮುಖವಾದ ಗರ್ಭಗೃಹದಲ್ಲಿಯ ಲಿಂಗವು ವೃತ್ತಾಕಾರದ ಪೀಠವನ್ನು ಹೊಂದಿದ್ದು ಪೂಜಾ ಭಾಗವಾದ ರುದ್ರಭಾಗವು ಸಣ್ಣಗಾತ್ರದಲ್ಲಿ ಇರುತ್ತದೆ. ಜಲಹರಿಯು ಲಿಂಗದ ಬಲಬದಿಯಲ್ಲಿ ಇರುತ್ತದೆ. ದಕ್ಷಿಣಾಭಿಮುಖ ಗರ್ಭಗೃಹವು ಸಾಮಾನ್ಯವಾಗಿ ವಿಷ್ಣುಶಿಲ್ಪಕ್ಕಾಗಿ ಮೀಸಲಿರುತ್ತದೆ. ಇಲ್ಲಿಯ ಮೂರೂ ಗರ್ಭಗೃಹದಲ್ಲಿಯ ಶಿಲ್ಪಗಳು ಶಿವನ ಅನಿತ್ಯ ರೂಪವನ್ನು ಸ್ಪಷ್ಟವಾಗಿ ಹೇಳುತ್ತವೆ. ಕೆಲವು ದೇವಾಲಯಗಳಲ್ಲಿ ವಿಷ್ಣುಶಿಲ್ಪದ ಬದಲು ಎತ್ತರವಾದ ರುದ್ರಭಾಗವನ್ನು ಹೊಂದಿದ ಲಿಂಗವನ್ನು ಕಾಣುತ್ತೇವೆ. ಇಂತಹ ದೇವಾಲಯಗಳನ್ನು ತ್ರಿಕೂಟೇಶ್ವರ ದೇವಾಲಯವೆಂದು ಕರೆಯಲಾಗುತ್ತದೆ.

#### ೩. ನ್ಯಾಯದರ್ಶನ/ತ್ರಿಮೂರ್ತಿ ತ್ರಿಕೂಟ ದೇವಾಲಯಗಳ ಲಿಂಗಗಳು

೧. ಅಂತರವಳ್ಳಿ (ತಾ.ರಾಣೆಬೆನ್ನೂರು) ಕಲ್ಮೇಶ್ವರ ದೇವಾಲಯದ ಲಿಂಗಗಳು

ಕಾಲ : ಕ್ರಿ.ಶ.ಸು.೧೨ನೇ ಶತಮಾನ, ಶೈಲಿ : ಕಲ್ಯಾಣ ಚಾಲುಕ್ಯ

| ಕ್ರ.ಸಂ. | ವಿವರ | ಮುಖ್ಯಗರ್ಭಗೃಹ ಪೂರ್ವಾಭಿಮುಖ | ಉತ್ತರಾಭಿಮುಖ ಗರ್ಭಗೃಹ | ದಕ್ಷಿಣಾಭಿಮುಖ ಗರ್ಭಗೃಹ |
|---|---|---|---|---|
| ೧. | ಹೆಸರು | ಕಲ್ಮೇಶ್ವರ | ಖಾಲಿಯಾಗಿದೆ | ಖಾಲಿಯಾಗಿದೆ |
| ೨. | ಗಾತ್ರ ಎxಅ | ೪x೪ ಅಡಿ | | |
| ೩. | ಪೀಠ ಮಾದರಿ | ಚೌಕಾಕಾರ | | |
| ೪. | ಪೀಠ ರಚನಾ ವಿಧಾನ | ಎರಡು ಕಲ್ಲು ಫಲಕಗಳನ್ನು ಬಳಸಲಾಗಿದೆ. | | |
| ೫. | ರುದ್ರಭಾಗ | ೧.೨ ಅಡಿ ಎತ್ತರ, ಮುಕ್ಕಾಲು ಅಡಿ ವ್ಯಾಸ | | |
| ೬. | ಜಲಹರಿ | ಲಿಂಗದ ಎಡಭಾಗದಲಿ | | |
| ೭. | ಬಳಸಿದ ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು | | |
| ೮. | ಕಾಲ | ಕ್ರಿ.ಶ.ಸು.೧೨ನೇ ಶತಮಾನ | | |

### ೨. ಅಕ್ಕಿಆಲೂರು (ತಾ.ಹಾನಗಲ್ಲ) ಕಲ್ಮೇಶ್ವರ ದೇವಾಲಯದ ಲಿಂಗಗಳು
### ಕಾಲ : ಕ್ರಿ.ಶ.ಸು.೧೧ನೇ ಶತಮಾನ, ಶೈಲಿ : ಕಲ್ಯಾಣ ಚಾಲುಕ್ಯ

| ಕ್ರ.ಸಂ. | ವಿವರ | ಮುಖ್ಯಗರ್ಭಗೃಹ ಪೂರ್ವಾಭಿಮುಖ | ಉತ್ತರಾಭಿಮುಖ ಗರ್ಭಗೃಹ | ದಕ್ಷಿಣಾಭಿಮುಖ ಗರ್ಭಗೃಹ |
|---|---|---|---|---|
| ೧. | ಹೆಸರು | ಕಲ್ಮೇಶ್ವರ | —— | ಖಾಲಿಯಾಗಿದೆ (ವಿಷ್ಣುಪೀಠ ಅಂಗಳದಲ್ಲಿದೆ) |
| ೨. | ಗಾತ್ರ ಎXಅ | ೩X೩ ಅಡಿ | ೧.೨ x ೨ ಅಡಿ | |
| ೩. | ಪೀಠ ಮಾದರಿ | ಚೌಕಾಕಾರ | ವೃತ್ತಾಕಾರ | |
| ೪. | ಪೀಠ ರಚನಾ ವಿಧಾನ | ಉಪಾನ, ಜಗತಿ, ಪದ್ಮ, ಪಟ್ಟಿಕೆ ನಿಮ್ನ ಘೃತವಾರಿ | ಒಂದು ಕಲ್ಲು ಫಲಕ ಬಳಸಲಾಗಿದೆ | |
| ೫. | ರುದ್ರಭಾಗ | ೧.೬ ಅಡಿ ಎತ್ತರ, ಮುಕ್ಕಾಲು ಅಡಿ ವ್ಯಾಸ | ಅರ್ಧ ಅಡಿ ಎತ್ತರ | |
| ೬. | ಜಲಹರಿ | ಲಿಂಗದ ಎಡಭಾಗದಲ್ಲಿ | ಲಿಂಗದ ಬಲಭಾಗದಲ್ಲಿ | |
| ೭. | ಬಳಸಿದ ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು | |
| ೮. | ಕಾಲ | ಕ್ರಿ.ಶ.ಸು.೧೧ನೇ ಶತಮಾನ | ಕ್ರಿ.ಶ.ಸು.೧೧ನೇ ಶತಮಾನ | |

### ೩. ಆಲದಗೇರಿ (ತಾ.ಹಿರೇಕೆರೂರು) ಕಲ್ಮೇಶ್ವರ ದೇವಾಲಯದ ಲಿಂಗಗಳು
### ಕಾಲ : ಕ್ರಿ.ಶ. ೧೨ನೇ ಶತಮಾನ ಶೈಲಿ : ಕಲ್ಯಾಣ ಚಾಲುಕ್ಯ

| ಕ್ರ.ಸಂ. | ವಿವರ | ಮುಖ್ಯಗರ್ಭಗೃಹ ಪೂರ್ವಾಭಿಮುಖ | ಉತ್ತರಾಭಿಮುಖ ಗರ್ಭಗೃಹ | ದಕ್ಷಿಣಾಭಿಮುಖ ಗರ್ಭಗೃಹ |
|---|---|---|---|---|
| ೧. | ಹೆಸರು | ಕಲ್ಮೇಶ್ವರ | —— | ಗರುಡ ಲಾಂಛನ ವಿಷ್ಣುಪೀಠ |
| ೨. | ಗಾತ್ರ ಎXಅ | ೨X೨ ಅಡಿ | ೧.೫ x ೨ ಅಡಿ | |
| ೩. | ಪೀಠ ಮಾದರಿ | ಚೌಕಾಕಾರ | ವೃತ್ತಾಕಾರ | |
| ೪. | ಪೀಠ ರಚನಾ ವಿಧಾನ | ಎರಡು ಕಲ್ಲು ಫಲಕ ಬಳಸಲಾಗಿದೆ | ಒಂದು ಕಲ್ಲು ಫಲಕ ಬಳಸಲಾಗಿದೆ | |
| ೫. | ರುದ್ರಭಾಗ | ೧.೧ ಅಡಿ ಎತ್ತರ, ಮುಕ್ಕಾಲು ಅಡಿ ವ್ಯಾಸ | ಅರ್ಧ ಅಡಿ ಎತ್ತರ | |
| ೬. | ಜಲಹರಿ | ಲಿಂಗದ ಎಡಭಾಗದಲ್ಲಿ | ಲಿಂಗದ ಬಲಭಾಗದಲ್ಲಿ | |
| ೭. | ಬಳಸಿದ ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು | |
| ೮. | ಕಾಲ | ಕ್ರಿ.ಶ.ಸು.೧೨ನೇ ಶತಮಾನ | ಕ್ರಿ.ಶ.ಸು.೧೨ನೇ ಶತಮಾನ | |

## ೪. ಕಡೂರು (ತಾ.ಹಿರೇಕೆರೂರು) ಕಲ್ಮೇಶ್ವರ ದೇವಾಲಯದ ಲಿಂಗಗಳು, ಕಾಲ : ಕ್ರಿ.ಶ.ಸು.೧೨ನೇ ಶತಮಾನ, ಶೈಲಿ : ಕಲ್ಯಾಣ ಚಾಲುಕ್ಯ

| ಕ್ರ.ಸಂ. | ವಿವರ | ಪೂರ್ವಾಭಿಮುಖ ಮುಖ್ಯ ಗರ್ಭಗೃಹ | ಉತ್ತರಾಭಿಮುಖ ಗರ್ಭಗೃಹ (ಛಾಯಾಚಿತ್ರ-೭೦) | ದಕ್ಷಿಣಾಭಿಮುಖ ಗರ್ಭಗೃಹ (ಛಾಯಾಚಿತ್ರ-೭೧) |
|---|---|---|---|---|
| ೧. | ಹೆಸರು | ಕಲ್ಮೇಶ್ವರ | ಬ್ರಹ್ಮಲಿಂಗ | ಆತ್ಮಲಿಂಗ |
| ೨. | ಗಾತ್ರ ಎ×ಅ | ೨.೨ x ೧.೧೧ ಅಡಿ | ೧.೬ x ೨ ಅಡಿ | ೨.೬ x ೨ ಅಡಿ |
| ೩. | ಪೀಠ ಮಾದರಿ | ಚೌಕಾಕಾರ | ವೃತ್ತಾಕಾರ | ವೃತ್ತಾಕಾರ |
| ೪. | ಪೀಠ ರಚನಾ ವಿಧಾನ | ಉಪಾನ, ಪದ್ಮ, ಕಂಠ, ಕುಮುದ, ಕಂಠ, ನಿಮ್ನ ಘೃತವಾರಿ | ಎರಡು ಕಲ್ಲು ಫಲಕ ಬಳಸಲಾಗಿದೆ | ಎರಡು ಕಲ್ಲು ಫಲಕ ಬಳಸಲಾಗಿದೆ |
| ೫. | ರುದ್ರಭಾಗ | ೧.೨ ಅಡಿ ಎತ್ತರ ಮುಕ್ಕಾಲು ಅಡಿ ವ್ಯಾಸ | ಸಣ್ಣಗಾತ್ರ | ೧.೨ ಅಡಿ ಎತ್ತರ ಮುಕ್ಕಾಲು ಅಡಿ ವ್ಯಾಸ |
| ೬. | ಜಲಹರಿ | ಲಿಂಗದ ಎಡಭಾಗದಲ್ಲಿ | ಲಿಂಗದ ಬಲಭಾಗಕ್ಕೆ | ಲಿಂಗದ ಎಡಭಾಗದಲ್ಲಿ |
| ೭. | ಬಳಸಿದ ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು |
| ೮. | ಕಾಲ | ಕ್ರಿ.ಶ.ಸು. ೧೨ನೇ ಶತಮಾನ | ಕ್ರಿ.ಶ.ಸು. ೧೨ನೇ ಶತಮಾನ | ಕ್ರಿ.ಶ.ಸು. ೧೨ನೇ ಶತಮಾನ |

## ೫. ಕಿರಗೇರಿ (ತಾ.ಹಿರೇಕೆರೂರು) ಕಲ್ಮೇಶ್ವರ ದೇವಾಲಯದ ಲಿಂಗಗಳು
### ಕಾಲ : ಕ್ರಿ.ಶ.ಸು.೧೨ನೇ ಶತಮಾನ, ಶೈಲಿ : ಕಲ್ಯಾಣ ಚಾಲುಕ್ಯ

| ಕ್ರ.ಸಂ. | ವಿವರ | ಮುಖ್ಯಗರ್ಭಗೃಹ ಪೂರ್ವಾಭಿಮುಖ | ಉತ್ತರಾಭಿಮುಖ ಗರ್ಭಗೃಹ | ದಕ್ಷಿಣಾಭಿಮುಖ ಗರ್ಭಗೃಹ |
|---|---|---|---|---|
| ೧. | ಹೆಸರು | ಕಲ್ಮೇಶ್ವರ | —— | ಖಾಲಿಯಾಗಿದೆ |
| ೨. | ಗಾತ್ರ ಎXಅ | ೨ X ೨.೪ ಅಡಿ | ೧ x ೧.೪ ಅಡಿ | |
| ೩. | ಪೀಠ ಮಾದರಿ | ವೃತ್ತಾಕಾರ | ವೃತ್ತಾಕಾರ | |
| ೪. | ಪೀಠ ರಚನಾ ವಿಧಾನ | ಎರಡು ಕಲ್ಲು ಫಲಕ ಬಳಸಲಾಗಿದೆ | ಒಂದು ಕಲ್ಲು ಫಲಕ ಬಳಸಲಾಗಿದೆ | |
| ೫. | ರುದ್ರಭಾಗ | ೧.೧ ಅಡಿ ಎತ್ತರ, ಅರ್ಧ ಅಡಿ ವ್ಯಾಸ | ಸಣ್ಣ ಗಾತ್ರ | |
| ೬. | ಜಲಹರಿ | ಲಿಂಗದ ಎಡಭಾಗಕ್ಕೆ | ಲಿಂಗದ ಬಲಭಾಗದಲ್ಲಿ | |
| ೭. | ಬಳಸಿದ ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು | |
| ೮. | ಕಾಲ | ಕ್ರಿ.ಶ.ಸು.೧೨ನೇ ಶತಮಾನ | ಕ್ರಿ.ಶ.ಸು.೧೨ನೇ ಶತಮಾನ | |

## ೬. ಕುಡುಪಲಿ (ತಾ.ಹಿರೇಕೆರೂರು) ಕಲ್ಮೇಶ್ವರ ದೇವಾಲಯದ ಲಿಂಗಗಳು
### ಕಾಲ : ಕ್ರಿ.ಶ.ಸು.೧೨ನೇ ಶತಮಾನ, ಶೈಲಿ : ಕಲ್ಯಾಣ ಚಾಲುಕ್ಯ

| ಕ್ರ.ಸಂ. | ವಿವರ | ಮುಖ್ಯಗರ್ಭಗೃಹ ಪೂರ್ವಾಭಿಮುಖ | ಉತ್ತರಾಭಿಮುಖ ಗರ್ಭಗೃಹ | ದಕ್ಷಿಣಾಭಿಮುಖ ಗರ್ಭಗೃಹ |
|---|---|---|---|---|
| ೧. | ಹೆಸರು | ಕಲ್ಮೇಶ್ವರ | ಖಾಲಿಯಾಗಿದೆ | ಖಾಲಿಯಾಗಿದೆ |
| ೨. | ಗಾತ್ರ ಎxಅ | ೧.೬ X ೨ ಅಡಿ | | |
| ೩. | ಪೀಠ ಮಾದರಿ | ಚೌಕಾಕಾರ | | |
| ೪. | ಪೀಠ ರಚನಾ ವಿಧಾನ | ಎರಡು ಕಲ್ಲು ಫಲಕ ಬಳಸಲಾಗಿದೆ | | |
| ೫. | ರುದ್ರಭಾಗ | ೧ ಅಡಿ ಎತ್ತರ ಅರ್ಧ ಅಡಿ ವ್ಯಾಸ | | |
| ೬. | ಜಲಹರಿ | ಲಿಂಗದ ಎಡಭಾಗದಲ್ಲಿ | | |
| ೭. | ಬಳಸಿದ ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು | | |
| ೮. | ಕಾಲ | ಕ್ರಿ.ಶ.ಸು.೧೨ನೇ ಶತಮಾನ | | |

## ೭. ಗುಡಗೂರು (ತಾ.ರಾಣೆಬೆನ್ನೂರು) ಕಲ್ಮೇಶ್ವರ ದೇವಾಲಯದ ಲಿಂಗಗಳು

**ಕಾಲ : ಕ್ರಿ.ಶ.ಸು.೧೨ನೇ ಶತಮಾನ, ಶೈಲಿ : ಕಲ್ಯಾಣ ಚಾಲುಕ್ಯ**

| ಕ್ರ.ಸಂ. | ವಿವರ | ಮುಖ್ಯಗರ್ಭಗೃಹ ಪೂರ್ವಾಭಿಮುಖ | ಉತ್ತರಾಭಿಮುಖ ಗರ್ಭಗೃಹ (ರೇಖಾಚಿತ್ರ-೭೨) | ದಕ್ಷಿಣಾಭಿಮುಖ ಗರ್ಭಗೃಹ |
|---|---|---|---|---|
| ೧. | ಹೆಸರು | ಕಲ್ಮೇಶ್ವರ | —— | ಖಾಲಿಯಾಗಿದೆ |
| ೨. | ಗಾತ್ರ ಎXಅ | ೧ X ೧.೮ ಅಡಿ | ೧ x ೧.೮ ಅಡಿ | |
| ೩. | ಪೀಠ ಮಾದರಿ | ವೃತ್ತಾಕಾರ | ವೃತ್ತಾಕಾರ | |
| ೪. | ಪೀಠ ರಚನಾ ವಿಧಾನ | ಎರಡು ಕಲ್ಲು ಫಲಕ ಬಳಸಲಾಗಿದೆ | ಎರಡು ಕಲ್ಲು ಫಲಕ ಬಳಸಲಾಗಿದೆ | |
| ೫. | ರುದ್ರಭಾಗ | ಅರ್ಧ ಅಡಿ ಎತ್ತರ | ಸಣ್ಣ ಗಾತ್ರ ರುದ್ರಭಾಗವು ಜಟೆಕಟ್ಟಿದಂತೆ ಎರಡು ಹಂತದಲ್ಲಿದೆ | |
| ೬. | ಜಲಹರಿ | ಲಿಂಗದ ಎಡಭಾಗಕ್ಕೆ | ಲಿಂಗದ ಬಲಭಾಗದಲ್ಲಿ | |
| ೭. | ಬಳಸಿದ ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು | |
| ೮. | ಕಾಲ | ಕ್ರಿ.ಶ.ಸು.೧೨ನೇ ಶತಮಾನ | ಕ್ರಿ.ಶ.ಸು.೧೨ನೇ ಶತಮಾನ | |

## ೮. ಗುಡ್ಡದ ಆನವೇರಿ (ತಾ.ರಾಣೆಬೆನ್ನೂರು) ಕಲ್ಮೇಶ್ವರ ದೇವಾಲಯದ ಲಿಂಗಗಳು

**ಕಾಲ : ಕ್ರಿ.ಶ.೧೨ನೇ ಶತಮಾನ, ಶೈಲಿ : ಕಲ್ಯಾಣ ಚಾಲುಕ್ಯ**

| ಕ್ರ.ಸಂ. | ವಿವರ | ಮುಖ್ಯಗರ್ಭಗೃಹ ಪೂರ್ವಾಭಿಮುಖ | ಉತ್ತರಾಭಿಮುಖ ಗರ್ಭಗೃಹ | ದಕ್ಷಿಣಾಭಿಮುಖ ಗರ್ಭಗೃಹ |
|---|---|---|---|---|
| ೧. | ಹೆಸರು | ಕಲ್ಮೇಶ್ವರ | ಖಾಲಿಯಾಗಿದೆ | ಖಾಲಿಯಾಗಿದೆ |
| ೨. | ಗಾತ್ರ ಎxಅ | ೧.೨ X ೧.೬ ಅಡಿ | | |
| ೩. | ಪೀಠ ಮಾದರಿ | ವೃತ್ತಾಕಾರ | | |
| ೪. | ಪೀಠ ರಚನಾ ವಿಧಾನ | ಎರಡು ಕಲ್ಲು ಫಲಕ ಬಳಸಲಾಗಿದೆ | | |
| ೫. | ರುದ್ರಭಾಗ | ಅರ್ಧ ಅಡಿ ಎತ್ತರ | | |
| ೬. | ಜಲಹರಿ | ಲಿಂಗದ ಎಡಭಾಗದಲ್ಲಿ | | |
| ೭. | ಬಳಸಿದ ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು | | |
| ೮. | ಕಾಲ | ಕ್ರಿ.ಶ.೧೨ನೇ ಶತಮಾನ | | |

## ೯. ಮತ್ತೂರು (ತಾ.ಬ್ಯಾಡಗಿ) ಕಲ್ಮೇಶ್ವರ ದೇವಾಲಯದ ಲಿಂಗಗಳು

**ಕಾಲ : ಕ್ರಿ.ಶ.ಸು.೧೨ನೇ ಶತಮಾನ, ಶೈಲಿ : ಕಲ್ಯಾಣ ಚಾಲುಕ್ಯ**

| ಕ್ರ.ಸಂ. | ವಿವರ | ಮುಖ್ಯಗರ್ಭಗೃಹ ಪೂರ್ವಾಭಿಮುಖ | ಉತ್ತರಾಭಿಮುಖ ಗರ್ಭಗೃಹ | ದಕ್ಷಿಣಾಭಿಮುಖ ಗರ್ಭಗೃಹ |
|---|---|---|---|---|
| ೧. | ಹೆಸರು | ಕಲ್ಮೇಶ್ವರ | ಬ್ರಹ್ಮಲಿಂಗ | ವಿಷ್ಣುಶಿಲ್ಪ |
| ೨. | ಗಾತ್ರ ಎXಅ | ೧.೮ X ೨.೨ ಅಡಿ | ೦.೯ x ೧.೭ ಅಡಿ | |
| ೩. | ಪೀಠ ಮಾದರಿ | ಚೌಕಾಕಾರ | ವೃತ್ತಾಕಾರ | |
| ೪. | ಪೀಠ ರಚನಾ ವಿಧಾನ | ಎರಡು ಕಲ್ಲು ಫಲಕ ಬಳಸಲಾಗಿದೆ | ಒಂದು ಕಲ್ಲು ಫಲಕ ಬಳಸಲಾಗಿದೆ | |
| ೫. | ರುದ್ರಭಾಗ | ಮುಕ್ಕಾಲು ಅಡಿ ಎತ್ತರ ಅರ್ಧ ಅಡಿ ವ್ಯಾಸ | ಸಣ್ಣ ಗಾತ್ರ | |
| ೬. | ಜಲಹರಿ | ಲಿಂಗದ ಎಡಭಾಗಕ್ಕೆ | ಲಿಂಗದ ಬಲಭಾಗದಲ್ಲಿ | |
| ೭. | ಬಳಸಿದ ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು | |
| ೮. | ಕಾಲ | ಕ್ರಿ.ಶ.ಸು.೧೨ನೇ ಶತಮಾನ | ಕ್ರಿ.ಶ.ಸು.೧೨ನೇ ಶತಮಾನ | |

## ೧೦. ಮತ್ತಿಹಳ್ಳಿ (ತಾ.ಹಿರೇಕೆರೂರು) ಸೋಮೇಶ್ವರ ದೇವಾಲಯದ ಲಿಂಗಗಳು

**ಕಾಲ : ಕ್ರಿ.ಶ. ೧೧ನೇ ಶತಮಾನ, ಶೈಲಿ : ಕಲ್ಯಾಣ ಚಾಲುಕ್ಯ**

| ಕ್ರ.ಸಂ. | ವಿವರ | ಮುಖ್ಯಗರ್ಭಗೃಹ ಪೂರ್ವಾಭಿಮುಖ | ಉತ್ತರಾಭಿಮುಖ ಗರ್ಭಗೃಹ | ದಕ್ಷಿಣಾಭಿಮುಖ ಗರ್ಭಗೃಹ |
|---|---|---|---|---|
| ೧. | ಹೆಸರು | ಸೋಮೇಶ್ವರ | ಇತ್ತೀಚಿನ ಬ್ರಹ್ಮಶಿಲ್ಪ | ಇತ್ತೀಚಿನ ವಿಷ್ಣುಶಿಲ್ಪ |
| ೨. | ಗಾತ್ರ ಎXಅ | ನೆಲದ ಮಟ್ಟದಲ್ಲಿ | | |
| ೩. | ಪೀಠ ಮಾದರಿ | ಚೌಕಾಕಾರ | | |
| ೪. | ಪೀಠ ರಚನಾ ವಿಧಾನ | —— | | |
| ೫. | ರುದ್ರಭಾಗ | ಸಣ್ಣಗಾತ್ರ | | |
| ೬. | ಜಲಹರಿ | ಲಿಂಗದ ಎಡಭಾಗಕ್ಕೆ | | |
| ೭. | ಬಳಸಿದ ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು | | |
| ೮. | ಕಾಲ | ಕ್ರಿ.ಶ.೧೧ನೇ ಶತಮಾನ | | |

## ೧೧. ಸಿಡೆನೂರು (ತಾ.ಬ್ಯಾಡಗಿ) ಕಲ್ಮೇಶ್ವರ ದೇವಾಲಯದ ಲಿಂಗಗಳು

**ಕಾಲ : ಕ್ರಿ.ಶ.ಸು.೧೨ನೇ ಶತಮಾನ, ಶೈಲಿ : ಕಲ್ಯಾಣ ಚಾಲುಕ್ಯ**

| ಕ್ರ.ಸಂ. | ವಿವರ | ಮುಖ್ಯಗರ್ಭಗೃಹ ಪೂರ್ವಾಭಿಮುಖ | ಉತ್ತರಾಭಿಮುಖ ಗರ್ಭಗೃಹ | ದಕ್ಷಿಣಾಭಿಮುಖ ಗರ್ಭಗೃಹ |
|---|---|---|---|---|
| ೧. | ಹೆಸರು | ಕಲ್ಮೇಶ್ವರ | ಬರಿದಾಗಿದೆ | ವೀರಭದ್ರ ಶಿಲ್ಪ |
| ೨. | ಗಾತ್ರ ಎXಅ | ೨x೨ ಅಡಿ | | |
| ೩. | ಪೀಠ ಮಾದರಿ | ಚೌಕಾಕಾರ | | |
| ೪. | ಪೀಠ ರಚನಾ ವಿಧಾನ | ಉಪಾನ, ಜಗತಿ, ಕಂಪ, ಕುಮುದ, ನಿಮ್ನ, ಘೃತವಾರಿ | | |
| ೫. | ರುದ್ರಭಾಗ | ಮುಕ್ಕಾಲು ಅಡಿ ಎತ್ತರ | | |
| ೬. | ಜಲಹರಿ | ಲಿಂಗದ ಎಡಭಾಗಕ್ಕೆ | | |
| ೭. | ಬಳಸಿದ ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು | | |
| ೮. | ಕಾಲ | ಕ್ರಿ.ಶ.ಸು.೧೧-೧೨ನೇ ಶತಮಾನ | | |

## ೧೨. ಹಿರೇಕೋಣತಿ (ತಾ.ಹಿರೇಕೆರೂರು) ಕಲ್ಮೇಶ್ವರ ದೇವಾಲಯದ ಲಿಂಗಗಳು

**ಕಾಲ : ಕ್ರಿ.ಶ.ಸು.೧೨ನೇ ಶತಮಾನ, ಶೈಲಿ : ಕಲ್ಯಾಣ ಚಾಲುಕ್ಯ**

| ಕ್ರ.ಸಂ. | ವಿವರ | ಮುಖ್ಯಗರ್ಭಗೃಹ ಪೂರ್ವಾಭಿಮುಖ | ಉತ್ತರಾಭಿಮುಖ ಗರ್ಭಗೃಹ | ದಕ್ಷಿಣಾಭಿಮುಖ ಗರ್ಭಗೃಹ |
|---|---|---|---|---|
| ೧. | ಹೆಸರು | ಕಲ್ಮೇಶ್ವರ | ಹಾಳಾಗಿದೆ | ವಿಷ್ಣುಪೀಠದ ಮೇಲೆ ವೀರಭದ್ರ ಶಿಲ್ಪ |
| ೨. | ಗಾತ್ರ ಎXಅ | ೩ x ೨.೮ ಅಡಿ | | |
| ೩. | ಪೀಠ ಮಾದರಿ | ಚೌಕಾಕಾರ | | |
| ೪. | ಪೀಠ ರಚನಾ ವಿಧಾನ | ಉಪಾನ, ಜಗತಿ, ಪದ್ಮ, ಕಂಪ, ಕುಮುದ, ನಿಮ್ನ, ಘೃತವಾರಿ | | |
| ೫. | ರುದ್ರಭಾಗ | ಮುಕ್ಕಾಲು ಅಡಿ ಎತ್ತರ | | |
| ೬. | ಜಲಹರಿ | ಲಿಂಗದ ಎಡಭಾಗಕ್ಕೆ | | |
| ೭. | ಬಳಸಿದ ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು | | |
| ೮. | ಕಾಲ | ಕ್ರಿ.ಶ.ಸು.೧೨ನೇ ಶತಮಾನ | | |

## ೧೩. ಹಿರೇಮಾಗನೂರು (ತಾ.ರಾಣೆಬೆನ್ನೂರು) ಕಲ್ಮೇಶ್ವರ ದೇವಾಲಯದ ಲಿಂಗಗಳು

ಕಾಲ : ಕ್ರಿ.ಶ.ಸು.೧೧ನೇ ಶತಮಾನ, ಶೈಲಿ : ಕಲ್ಯಾಣ ಚಾಲುಕ್ಯ

| ಕ್ರ.ಸಂ. | ವಿವರ | ಮುಖ್ಯಗರ್ಭಗೃಹ ಪೂರ್ವಾಭಿಮುಖ (ಛಾಯಾಚಿತ್ರ-೭೩) | ಉತ್ತರಾಭಿಮುಖ ಗರ್ಭಗೃಹ | ದಕ್ಷಿಣಾಭಿಮುಖ ಗರ್ಭಗೃಹ |
|---|---|---|---|---|
| ೧. | ಹೆಸರು | ಕಲ್ಮೇಶ್ವರ | —— | ಗರುಡ ಪೀಠವಿರುವ ವಿಷ್ಣು ಪೀಠ |
| ೨. | ಗಾತ್ರ ಎXಅ | ೨ x ೧.೮ ಅಡಿ | | |
| ೩. | ಪೀಠ ಮಾದರಿ | ಚೌಕಾಕಾರ | | |
| ೪. | ಪೀಠ ರಚನಾ ವಿಧಾನ | ಜಗತಿ, ಪದ್ಮ, ಕುಮುದ, ಕಂಪ, ನಿಮ್ನ, ಘೃತವಾರಿ | | |
| ೫. | ರುದ್ರಭಾಗ | ಮುಕ್ಕಾಲು ಅಡಿ ಎತ್ತರ | | |
| ೬. | ಜಲಹರಿ | ಲಿಂಗದ ಎಡಕ್ಕೆ | | |
| ೭. | ಬಳಸಿದ ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು | | |
| ೮. | ಕಾಲ | ಕ್ರಿ.ಶ.ಸು.೧೧ನೇ ಶತಮಾನ | | |

## ೧೪. ಹೊನ್ನತ್ತಿ (ತಾ.ರಾಣೆಬೆನ್ನೂರು) ಕಲ್ಮೇಶ್ವರ ದೇವಾಲಯದ ಲಿಂಗಗಳು

ಕಾಲ : ಕ್ರಿ.ಶ.ಸು.೧೧ನೇ ಶತಮಾನ, ಶೈಲಿ : ಕಲ್ಯಾಣ ಚಾಲುಕ್ಯ

| ಕ್ರ.ಸಂ. | ವಿವರ | ಮುಖ್ಯಗರ್ಭಗೃಹ ಪೂರ್ವಾಭಿಮುಖ | ಉತ್ತರಾಭಿಮುಖ ಗರ್ಭಗೃಹ | ದಕ್ಷಿಣಾಭಿಮುಖ ಗರ್ಭಗೃಹ |
|---|---|---|---|---|
| ೧. | ಹೆಸರು | ಕಲ್ಮೇಶ್ವರ | —— | —— |
| ೨. | ಗಾತ್ರ ಎXಅ | ೪ x ೩.೨ ಅಡಿ | ೧.೮ x ೩ ಅಡಿ | ೧.೮ x ೩ ಅಡಿ |
| ೩. | ಪೀಠ ಮಾದರಿ | ಚೌಕಾಕಾರ | ವೃತ್ತಾಕಾರ | ವೃತ್ತಾಕಾರ |
| ೪. | ಪೀಠ ರಚನಾ ವಿಧಾನ | ಉಪಾನ, ಜಗತಿ, ಪದ್ಮ, ಕುಮುದ, ಕಂಪ, ನಿಮ್ನ, ಘೃತವಾರಿ | ಎರಡು ಕಲ್ಲು ಫಲಕಗಳನ್ನು ಬಳಸಲಾಗಿದೆ | ಎರಡು ಕಲ್ಲು ಫಲಕಗಳನ್ನು ಬಳಸಲಾಗಿದೆ |
| ೫. | ರುದ್ರಭಾಗ | ಮುಕ್ಕಾಲು ಅಡಿ ಎತ್ತರ | ಸಣ್ಣಗಾತ್ರ | ಸಣ್ಣಗಾತ್ರ |
| ೬. | ಜಲಹರಿ | ಲಿಂಗದ ಎಡಕ್ಕೆ | ಲಿಂಗದ ಬಲಕ್ಕೆ | ಲಿಂಗದ ಎಡಕ್ಕೆ |
| ೭. | ಬಳಸಿದ ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು | ನೀಲಿ ಛಾಯೆಯ ಕಪ್ಪು ಕಲ್ಲು |
| ೮. | ಕಾಲ | ಕ್ರಿ.ಶ.ಸು.೧೧ನೇ ಶತಮಾನ | ಕ್ರಿ.ಶ.ಸು.೧೧ನೇ ಶತಮಾನ | ಕ್ರಿ.ಶ.ಸು.೧೧ನೇ ಶತಮಾನ |

**ಭೈರವ ಶಿಲ್ಪಗಳು :** ಭೈರವನು ಶಿವನ ಒಂದು ಭಯಂಕರ ರೂಪ. ಇವನು ಶಿವನ ರಕ್ತದಿಂದ ಹುಟ್ಟಿದವನು.[೪೩] ವರಾಹ ಪುರಾಣ ಮತ್ತು ಕೂರ್ಮ ಪುರಾಣಗಳು ಭೈರವನಿಗೆ ಸಂಬಂಧಪಟ್ಟ ಕಥೆಯನ್ನು ಹೇಳುತ್ತವೆ. ದುರಹಂಕಾರಿಯಾದ ಬ್ರಹ್ಮನನ್ನು ಶಿಕ್ಷಿಸಲು ಶಿವನು ತನ್ನ ಉಗುರಿನಿಂದ ಬ್ರಹ್ಮನ ಐದನೆಯ ತಲೆಯನ್ನು ಕತ್ತರಿಸಿದನು. ಆದರೆ ಆ ಶಿರವು ಶಿವನ ಅಂಗೈಯಲ್ಲಿ ಅಂಟಿಕೊಂಡಿತು. ಈ ಪಾಪವನ್ನು ಕಳೆದುಕೊಳ್ಳಲು ಶಿವನು ಹನ್ನೆರಡು ವರ್ಷ ಭಿಕ್ಷುಕನಾಗಿ ಅಲೆದಾಡಿದನು. ವಾರಣಾಸಿಯ 'ಕಪಾಲಮೋಚನ ತೀರ್ಥ'ದಲ್ಲಿ ಸ್ನಾನ ಮಾಡಿದ ಮೇಲೆ ಅವನ ಪಾಪವು ತೊಳೆಯಿತು ಎಂದು ಪುರಾಣಗಳು ಹೇಳುತ್ತವೆ. ತಂತ್ರಸಾರ, ವಿಷ್ಣುಧರ್ಮೋತ್ತರ ಪುರಾಣ ಹಾಗೂ ಕಾಳಿಕಾ ಪುರಾಣಗಳೂ ಭೈರವನ ಕುರಿತು ಮಾಹಿತಿಯನ್ನು ಒದಗಿಸುತ್ತವೆ.[೪೪] ಭೈರವ ಮೂರ್ತಿಯ ಪ್ರಭೇದಗಳು ಅವನ ಉಗ್ರರೂಪಗಳನ್ನು ಸ್ಪಷ್ಟಪಡಿಸುತ್ತವೆ. ತ್ರಿಪುರಾಂತಕಭೈರವ, ಉಗ್ರಭೈರವ, ಬಾಡವಾನಲಭೈರವ, ಅಗ್ನಿಭೈರವ, ಕಾಲಭೈರವ, ಕರಾಳಭೈರವ ಇತ್ಯಾದಿ. ಶಿಲ್ಪಾರತ್ನದ ಪ್ರಕಾರ, ಭಯಂಕರ ಮುಖ ಉಳ್ಳವನಾದ ಇವನು ನಾಲ್ಕು ಕೈಗಳನ್ನು ಹೊಂದಿದ್ದು, ಖಡ್ಗ, ತ್ರಿಶೂಲ, ಢಮರು ಮತ್ತು ರುಂಡವನ್ನು ಹಿಡಿದಿರುತ್ತಾನೆ. ಕೋರೆ ಹಲ್ಲುಗಳನ್ನು ಹೊಂದಿದವನಾಗಿ ತಲೆ ಕೂದಲು ನೆಟ್ಟಗೆ ನಿಂತಿರುತ್ತವೆ. ಕೊರಳಲ್ಲಿ ರುಂಡಮಾಲೆಯನ್ನು ಧರಿಸಿದವನು ಹಾವುಗಳಿಂದ ಅಲಂಕರಿಸಿಕೊಂಡಿರುವನು. ಮತ್ತು ನಾಯಿಯೊಂದಿಗೆ ಇವನನ್ನು ಗುರುತಿಸಲಾಗುತ್ತದೆ. ಆದುದರಿಂದ ಭೈರವನನ್ನು ಕ್ಷೇತ್ರಪಾಲನೆಂದೂ ಹೇಳಲಾಗುತ್ತದೆ.[೪೫] ಅಧ್ಯಯನಕ್ಕೆ ಸಂಬಂಧಪಟ್ಟಂತೆ ದೊರೆತ ಭೈರವ ಕ್ಷೇತ್ರಪಾಲ ಶಿಲ್ಪಗಳು ಈ ಕೆಳಗಿನಂತಿವೆ.

## ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳ ಭೈರವ ಶಿಲ್ಪಗಳು

| ಕ್ರ.ಸಂ | ಊರು | ದೇವಾಲಯ ಹೆಸರು | ಬಳಸಿದ ಕಲ್ಲು | ಗಾತ್ರ ಅXಎ ಅಡಿ | ವಿವರ | ಕಾಲ |
|---|---|---|---|---|---|---|
| ೧. | ಮತ್ತೂರು (ತಾ. ಬ್ಯಾಡಗಿ) | ಕಲ್ಮೇಶ್ವರ | ನೀಲಿ ಛಾಯೆಯ ಕಪ್ಪು ಕಲ್ಲು | ೨.೧೦ X ೪.೫ ಅಡಿ | ದೇವಾಲಯ ನವರಂಗದಲ್ಲಿರುವ ಈ ಶಿಲ್ಪವು ದಿಗಂಬರವಾಗಿ, ಚತುರ್ಭುಜಗಳಿಂದ ಕೂಡಿದೆ. ಡಮರು, ತ್ರಿಶೂಲ, ಖಡ್ಗ, ರುಂಡಗಳನ್ನು ಧರಿಸಿದೆ. ಅಗಲವಾದ ಕಣ್ಣುಗಳು, ಕೋರೆ ಹಲ್ಲು, ದಪ್ಪವಾಗಿ ಇಳಿಬಿದ್ದ ಜಟೆಗಳ ಭಯಂಕರ ರೂಪ, ಕೊರಳಲ್ಲಿ ಹಾರಗಳು, ಸೊಂಟಪಟ್ಟಿ ತೊಡೆ ಭಾಗದಲ್ಲಿ ನಾಗಬಂಧ, ಪಾದರಕ್ಷೆ, ಮೊಣಕಾಲಿನವರೆಗೂ ನೇತಾಡುವ ರುಂಡಮಾಲೆ | ಕ್ರಿ.ಶ. ೧೨ನೇ ಶತಮಾನ, ಕಲ್ಯಾಣ ಚಾಲುಕ್ಯ ಶೈಲಿ |
| ೨. | ಮೇದೂರು (ತಾ.ಹಿರೇಕೆರೂರು) | ಸಣ್ಣ ಬಸವಣ್ಣ (ಮಾಕಾಳೇಶ್ವರ) | ನೀಲಿ ಛಾಯೆಯ ಕಪ್ಪು ಕಲ್ಲು | ೩.೬ X ೬.೨ ಅಡಿ | ನವರಂಗದಲ್ಲಿರುವ ಈ ಶಿಲ್ಪವು ದಿಗಂಬರವಾಗಿ, ಚತುರ್ಭುಜಗಳಿಂದ ಕೂಡಿದ್ದು, ತ್ರಿಶೂಲ ಢಮರು ಮತ್ತು ರುಂಡವನ್ನು ಧರಿಸಿದೆ. ಒಂದು ಕೈ ಭಗ್ನವಾಗಿದೆ. ಅಗಲ ಕಣ್ಣುಗಳು ಕೋರೆಹಲ್ಲು, ಊರ್ಧ್ವಮುಖ ಕೂದಲು, ಕೊರಳಹಾರಗಳು ಭುಜಾಲಂಕಾರ, ಯಜ್ಞೋಪವೀತ ತೊಡೆಗಳಲ್ಲಿ ನಾಗಬಂಧ ಮತ್ತು ಪಾದರಕ್ಷೆಗಳನ್ನು ಕಂಡರಿಸಲಾಗಿದೆ. | ಕ್ರಿ.ಶ.೧೨ನೇ ಶತಮಾನ, ಕಲ್ಯಾಣ ಚಾಲುಕ್ಯ ಶೈಲಿ (ಛಾಯಾಚಿತ್ರ-೭೪) |

| ಕ್ರ.ಸಂ | ಊರು | ದೇವಾಲಯ ಹೆಸರು | ಬಳಸಿದ ಕಲ್ಲು | ಗಾತ್ರ ಅXಎ ಅಡಿ | ವಿವರ | ಕಾಲ |
|---|---|---|---|---|---|---|
| ೩. | ರಟ್ಟಿಹಳ್ಳಿ (ತಾ.ಹಿರೇಕೆರೂರು) | ಕಡಂಬೇಶ್ವರ | ನೀಲಿ ಛಾಯೆಯ ಕಪ್ಪು ಕಲ್ಲು | ೧ X ೧.೫ ಅಡಿ | ದೇವಾಲಯದ ಮೇಲ್ಕಟ್ಟಡದ ಶಿಲಾ ಫಲಕಗಳಲ್ಲಿ ಈ ಶಿಲ್ಪಗಳನ್ನು ಕಾಣುತ್ತೇವೆ. ಮಕರತೋರಣದ ಅಡಿಯಲ್ಲಿ, ದಿಗಂಬರನಾದ ಭೈರವನನ್ನು ಎಂಟು ಭುಜಗಳಿಂದ, ಬಲಗಾಲನ್ನು ಊರಿ, ಎಡಗಾಲನ್ನು ನೃತ್ಯ ಭಂಗಿಯಲ್ಲಿ ಎತ್ತಿದಂತೆ ಕಂಡರಿಸಲಾಗಿದೆ. ಸುತ್ತಲೂ ವಾದ್ಯ ನುಡಿಸುವ ಶಿವಗಣಗಳನ್ನು ಬಿಡಿಸಲಾಗಿದೆ. | ಕ್ರಿ.ಶ. ೧೨ನೇ ಶತಮಾನ ಕಲ್ಯಾಣ ಚಾಲುಕ್ಯ ಶೈಲಿ |
| ೪. | ಹರಳಹಳ್ಳಿ (ತಾ.ಹಾವೇರಿ) | ಸೋಮೇಶ್ವರ | ನೀಲಿ ಛಾಯೆಯ ಕಪ್ಪು ಕಲ್ಲು | ೨ X ೨.೧೦ ಅಡಿ | ಮುಖ್ಯ ಗರ್ಭಗೃಹದ ದಕ್ಷಿಣ ದಿಕ್ಕಿನ ಭದ್ರಕೋಷ್ಠದಲ್ಲಿರುವ ಶಿಲ್ಪವು ತ್ರಿಭಂಗಿಯಲ್ಲಿ ನಿಂತ ದಿಗಂಬರ ಮೂರ್ತಿಯಾಗಿದೆ. ನಾಲ್ಕು ಕೈಗಳನ್ನು ಹೊಂದಿದ್ದು ಢಮರು, ತ್ರಿಶೂಲಗಳಿವೆ. ಎರಡು ಕೈಗಳು ಭಗ್ನವಾಗಿವೆ. ಕಾಲುಗಳಲ್ಲಿ ಕಡಗ ಪಾದರಕ್ಷೆಗಳನ್ನು ಕಂಡರಿಸಲಾಗಿದೆ. | ಕ್ರಿ.ಶ.೧೨ನೇ ಶತಮಾನ, ಕಲ್ಯಾಣ ಚಾಲುಕ್ಯ ಶೈಲಿ |

**ವೀರಭದ್ರ ಶಿಲ್ಪಗಳು :** ವಿಜಯನಗರ ಕಾಲದಲ್ಲಿ ಮತ್ತು ವಿಜಯನಗರೋತ್ತರ ಕಾಲದಲ್ಲಿ ವೀರಭದ್ರನ ಆರಾಧನೆಯು ಹೆಚ್ಚು ರೂಢಿಯಲ್ಲಿ ಇರುವುದನ್ನು ಕಾಣುತ್ತೇವೆ. ವೀರಭದ್ರನ ಮೂರ್ತಿ ಲಕ್ಷಣಗಳಲ್ಲಿ ಉಗ್ರ, ಅತಿಕ್ರೂರ, ಸರ್ವದುಷ್ಟನಿಬರ್ಹಣ, ಕರಾಳಾಟ್ಟಹಾಸ, ಗದಾಮುಷ್ಟಿಹಸ್ತ, ಭುಜಂಗಗಣಭೂಷಣ, ಭಯದ, ಫಾಲನೇತ್ರಾನನ, ದಿಗಂಬರ. ಯುದ್ಧಪ್ರಿಯ ದೇವತೆಯಾದ ವೀರಭದ್ರನ ಆರಾಧನೆ ವಿಜಯನಗರ ಕಾಲದಲ್ಲಿ ಹೆಚ್ಚು ಜನಪ್ರಿಯವಾಗಿತ್ತು. ಈ ಕಾಲದಲ್ಲಿ ವೀರಭದ್ರ ಮತ್ತು ಆಂಜನೇಯ ದೇವಾಲಯಗಳು ಹೆಚ್ಚು ಸಂಖ್ಯೆಯಲ್ಲಿ ಹುಟ್ಟಿಕೊಂಡವು. ಅಲ್ಲದೆ ಕೆಲವು ದೇವಾಲಯಗಳಲ್ಲಿ ಮೊದಲು ಇದ್ದ ವಿಷ್ಣು ಶಿಲ್ಪವನ್ನು ಸ್ಥಳಾಂತರಿಸಿ ಆ ಸ್ಥಳದಲ್ಲಿ ವೀರಭದ್ರ ಶಿಲ್ಪವನ್ನು ಇಟ್ಟಿರುವುದು ಗಮನಕ್ಕೆ ಬರುತ್ತದೆ.

**ಪಂಚರಾತ್ರಾಗಮವು** ವೀರಭದ್ರನ ಬಗ್ಗೆ ವಿವರಣೆ ಕೊಡುತ್ತದೆ. ವೀರಭದ್ರನು ಕಪ್ಪು ಮೈಬಣ್ಣದವನು, ಮೂರು ಕಣ್ಣುಳ್ಳವನು, ನಾಲ್ಕು ಕೈಗಳಲ್ಲಿ ಖಡ್ಗ, ಬಿಲ್ಲು, ಬಾಣ, ಗುರಾಣಿಗಳನ್ನು ಹಿಡಿದಿರುವನು. ರುಂಡ ಮಾಲೆಯನ್ನು, ಪಾದರಕ್ಷೆಯನ್ನು ಧರಿಸಿರುವನು. ಅವನ ಸೊಂಟಪಟ್ಟಿಯಲ್ಲಿ ವಸ್ತ್ರವನ್ನು ಧರಿಸಿರುವನು.[೪೬] ಪ್ರಸ್ತುತ ಅಧ್ಯಯನದಲ್ಲಿ ಕಂಡುಬಂದ ವೀರಭದ್ರನ ಶಿಲ್ಪಗಳು ಈ ಕೆಳಗಿನಂತೆ ಇವೆ.

## ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳ ವೀರಭದ್ರ ಶಿಲ್ಪಗಳು

| ಕ್ರ. ಸಂ. | ಊರು | ದೇವಾಲಯ ಹೆಸರು | ಬಳಸಿದ ಕಲ್ಲು | ಗಾತ್ರ ಅXಎ ಅಡಿ | ವಿವರ | ಕಾಲ |
|---|---|---|---|---|---|---|
| ೧. | ಅಬ್ಬಲೂರು (ತಾ.ಹಿರೇಕೆರೂರು) | ಸೋಮೇಶ್ವರ | ನೀಲಿ ಛಾಯೆಯ ಕಪ್ಪು ಕಲ್ಲು | ೨X೪ | ನಾಲ್ಕು ಕೈಗಳಲ್ಲಿ ಖಡ್ಗ, ಗುರಾಣಿ, ಬಿಲ್ಲು, ಬಾಣಗಳನ್ನು ಹಿಡಿದು ವೀರಾವೇಶದಲ್ಲಿ ಕಾಲುಗಳನ್ನು ಅಗಲಿಸಿ ನಿಂತಿರುವನು. ದೊಡ್ಡ ಕಣ್ಣು, ಕೋರೆ ಹಲ್ಲು, ಕೊರಳಲ್ಲಿಯ ರುಂಡಮಾಲೆ ಜರಿದು ಕೆಳಗೆ ಬಂದಿದೆ. ಪಕ್ಕದಲ್ಲಿ ದಕ್ಷಬ್ರಹ್ಮನನ್ನು ಕಂಡರಿಸಲಾಗಿದೆ. (ಛಾಯಾಚಿತ್ರ-೭೫) | ಕ್ರಿ.ಶ.ಸು.೧೪-೧೫ ನೇ ಶತಮಾನ |
| ೨. | ಸಿಡೇನೂರು (ತಾ. ಬ್ಯಾಡಗಿ) | ಕಲ್ಮೇಶ್ವರ | ನೀಲಿ ಛಾಯೆಯ ಕಪ್ಪು ಕಲ್ಲು | ೧.೧೧ X ೩.೧೦ | ವೀರಾವೇಶದಲ್ಲಿ ನಿಂತ ವೀರಭದ್ರನು ನಾಲ್ಕು ಕೈಗಳಲ್ಲಿ ಖಡ್ಗ, ಗುರಾಣಿ, ಬಿಲ್ಲು, ಬಾಣಗಳನ್ನು ಧರಿಸಿರುವನು. ರುಂಡಮಾಲೆ, ಕಾಲಲ್ಲಿ ಕಡಗ, ಪಕ್ಕದಲ್ಲಿ ದಕ್ಷಬ್ರಹ್ಮನನ್ನು ಕಂಡರಿಸಲಾಗಿದೆ. | ಕ್ರಿ.ಶ.ಸು.೧೪-೧೫ ನೇ ಶತಮಾನ |

**ಸ್ಕಂದ ಶಿಲ್ಪಗಳು :** ಕಾರ್ತಿಕೇಯ ಅಥವಾ ಸ್ಕಂದನು ಸ್ವರ್ಗದ ಸೇನಾಪತಿ, ಯುದ್ಧ ದೇವತೆ. ಇವನು ಉತ್ಸಾಹ ಮತ್ತು ತಾರುಣ್ಯದ ಸಂಕೇತ.[೪೭] ದಕ್ಷಿಣ ಭಾರತದಲ್ಲಿ ಸ್ಕಂದನನ್ನು ಸುಬ್ರಹ್ಮಣ್ಯನೆಂದು ಪೂಜಿಸುವರು. ಉತ್ತರ ಭಾರತಕ್ಕಿಂತ ದಕ್ಷಿಣದಲ್ಲಿ ಸುಬ್ರಹ್ಮಣ್ಯ ದೇವಾಲಯಗಳು ಹೆಚ್ಚಾಗಿ ಕಂಡುಬರುತ್ತವೆ.[೪೮] ಪುರಾಣಗಳು ಇವನನ್ನು ಅಗ್ನಿ ಮತ್ತು ಸ್ವಾಹಾ ದಂಪತಿಗಳ ಪುತ್ರನೆಂದು ಹೇಳಿವೆ. ರುದ್ರನ ಇನ್ನೊಂದು ಹೆಸರು ಅಗ್ನಿ ಎಂದೂ ನಂತರದಲ್ಲಿ ಶಿವನೆಂದೂ ಕರೆಯಲಾಗಿದೆ. ಪಾರ್ವತಿಯು ಅಗ್ನಿಯ ಪತ್ನಿ ಸ್ವಾಹಾಳ ಸ್ವರೂಪಳು. ಹೀಗಾಗಿ ಸ್ಕಂದನು ಶಿವಪಾರ್ವತಿಯರ ಮಗನು ಎಂದು ಹೇಳಲಾಗಿದೆ.[೪೯] ಇವನ ಹುಟ್ಟಿನ ಬಗ್ಗೆ ರಾಮಾಯಣ ಬಾಲಕಾಂಡದಲ್ಲಿಯೂಹೇಳಲಾಗಿದೆ. ಮಹಾಭಾರತದ ವನಪರ್ವವು ಸ್ಕಂದನ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ. ಕುಮಾರ ತಂತ್ರದಲ್ಲಿ ಸ್ಕಂದನ ವಿವಿಧರೂಪಗಳಾದ ಶಕ್ತಿಂದ್ರ, ಸ್ಕಂದ, ಸೇನಾಪತಿ, ಸುಬ್ರಮಣ್ಯ, ಕಾರ್ತಿಕೇಯ, ಕುಮಾರ, ಷಣ್ಮುಖ, ತಾರಕಾರಿ, ಸೇನಾನಿ, ವಲ್ಲಿಕಲ್ಯಾಣ ಸುಂದರಮೂರ್ತಿ, ಬಾಲಸ್ವಾಮಿ, ಕ್ರೌಚ್ಯಬೆಟ್ಟ ಹಾಗೂ ಶಿಖಿವಾಹನಗಳನ್ನು ಹೆಸರಿಸಲಾಗಿದೆ.[೫೦]

ಕಾಶ್ಯಪಶಿಲ್ಪವು ಸ್ಕಂದ ಶಿಲ್ಪದ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ. ಶಿಲ್ಪವು ಎರಡು, ನಾಲ್ಕು, ಆರು, ಹನ್ನೆರಡು ಕೈಗಳಿಂದಲೂ ಮತ್ತು ಒಂದು ಮುಖದಿಂದ ಅಥವಾ ಆರು ಮುಖಗಳಿಂದಲೂ ಕೂಡಿರಬಹುದು.[೫೧] ಇವನು ಶಿಖಿವಾಹನ (ನವಿಲು) ಮತ್ತು ಕುಕ್ಕುಟ ಧ್ವಜವನ್ನು ಹೊಂದಿರುವನು.[೫೨] ಪ್ರಸ್ತುತ ಅಧ್ಯಯನದಲ್ಲಿ ಅಬ್ಬಲೂರಿನ ಬ್ರಹ್ಮಲಿಂಗೇಶ್ವರ ದೇವಾಲಯದಲ್ಲಿ ಮಾತ್ರ ಸ್ಕಂದ ಶಿಲ್ಪವನ್ನು ಕಾಣುತ್ತೇವೆ.

### ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳ ಸ್ಕಂದ ಶಿಲ್ಪಗಳು

| ಕ್ರ. ಸಂ. | ಊರು | ದೇವಾಲಯ ಹೆಸರು | ಬಳಸಿದ ಕಲ್ಲು | ಗಾತ್ರ ಅXಏ ಅಡಿ | ವಿವರ | ಕಾಲ |
|---|---|---|---|---|---|---|
| ೧. | ಅಬ್ಬಲೂರು (ತಾ.ಹಿರೇ ಕೆರೂರು) | ಬಸವೇಶ್ವರ (ಬ್ರಹ್ಮಲಿಂಗೇಶ್ವರ) | ನೀಲಿ ಛಾಯೆಯ ಕಪ್ಪು ಕಲ್ಲು (ಛಾಯಾಚಿತ್ರ -೭೬) | ೨.೫ X ೪.೨ | ಕೀರ್ತಿಮುಖ ತೋರಣದ ಅಡಿಯಲ್ಲಿ ಮೂರು ಮುಖಗಳು, ಆರು ಕೈಗಳಲ್ಲಿ ಬಾಣ, ಅಂಕುಶ ಪಾಶ, ಬಿಲ್ಲು, ಅಭಯ ಧರಿ ಸಿರುವನು. ಒಂದು ಕೈ ಭಗ್ನಗೊಂಡಿದೆ. ನವಿಲಿನ ಮೇಲೆ ಕುಳಿತ ಸ್ಕಂದನು ಕಿರೀಟ, ಕುಂಡಲ, ಭುಜಾಲಂಕಾರ, ಹಾರಗಳು, ಉಪವೀತ, ನಡುಪಟ್ಟಿ, ಕಾಲಲ್ಲಿ ಗೆಜ್ಜೆಗಳಿಂದ ಅಲಂಕೃತಗೊಂಡಿರುವನು. | ಕ್ರಿ.ಶ.ಸು. ೧೪-೫ನೇ ಶತಮಾನ |

ಉಮಾಮಹೇಶ್ವರ ಶಿಲ್ಪಗಳು : ಶಿವನ ಪ್ರಸಿದ್ಧ ರೂಪಗಳಲ್ಲಿ ಉಮಾಮಹೇಶ್ವರ ರೂಪವು ಒಂದು.[೯೩] ಇಲ್ಲಿ ಶಿವನು ಉಮೆಯೊಂದಿಗೆ ಗುರುತಿಸಿಕೊಳ್ಳುತ್ತಾನೆ.[೯೪]

ಊರು : ಅಬ್ಬಲೂರು (ತಾ.ಹಿರೇಕೆರೂರು)

ದೇವಾಲಯ : ಸೋಮನಾಥ

ಸ್ಥಳ : ನವರಂಗದಲ್ಲಿ

ಬಳಸಿದ ಕಲ್ಲು : ನೀಲಿಛಾಯೆಯ ಕಪ್ಪುಕಲ್ಲು (ಛಾಯಾಚಿತ್ರ-೭೭)

ಗಾತ್ರ : ೨.೩x೩.೮ ಅಡಿ, ಕಲ್ಯಾಣ ಚಾಲುಕ್ಯ ಶೈಲಿ

ಮಕರತೋರಣದ ಅಡಿಯಲ್ಲಿ ಎರಡು ಸಿಂಹಗಳು ಹೊತ್ತ ಪೀಠದ ಮೇಲೆ, ಚತುರ್ಭಾಹುವಾದ ಶಿವನು ತನ್ನ ಎಡತೊಡೆಯ ಮೇಲೆ ಉಮೆಯನ್ನು ಕೂಡಿಸಿಕೊಂಡಿರುವನು. ಅವನು ಎರಡು ಕೈಗಳಲ್ಲಿ ತ್ರಿಶೂಲ, ಡಮರುಗಳನ್ನು ಧರಿಸಿರುವನು. ಮುಂಭಾಗದ ಒಂದು ಕೈ ಅಭಯ ಹಸ್ತವನ್ನು ತೋರಿದರೆ ಇನ್ನೊಂದು ಉಮೆಯ ಎಡ ಭುಜದ ಮೇಲಿದೆ. ಶಿವನ ಒಂದು ಪಾದವು ಪೀಠದ ಅಡಿಯಲ್ಲಿ ಕುಳಿತ ನಂದಿಯ ಹಿಂಭಾಗದ ಮೇಲೆ ಇದೆ. ಉಮೆಯು ಒಂದು ಕೈಯಲ್ಲಿ ಫಲವನ್ನು, ಇನ್ನೊಂದು ಕೈಯಿಂದ ಶಿವನ ಬೆನ್ನಿನ ಭಾಗವನ್ನು ಹಿಡಿದಿರುವಳು. ಅವಳ ಒಂದು ಪಾದವು ಪೀಠ ಹೊತ್ತ ಸಿಂಹದ ತಲೆಯ ಮೇಲೆ ಇದೆ. ಮಕರ ಸ್ತಂಭಗಳ ಅಡಿಯಲ್ಲಿ ಗಣಪತಿ ಮತ್ತು ಸ್ಕಂದನ ಸಣ್ಣ ಉಬ್ಬುಶಿಲ್ಪಗಳಿವೆ.

ಊರು : ಉಪ್ಪುಣಸಿ (ತಾ.ಹಾನಗಲ್ಲ)

ದೇವಾಲಯ : ಕಲ್ಮೇಶ್ವರ

ಸ್ಥಳ : ನವರಂಗದಲ್ಲಿ

ಬಳಸಿದ ಕಲ್ಲು : ನೀಲಿಛಾಯೆಯ ಕಪ್ಪು ಕಲ್ಲು (ಛಾಯಾಚಿತ್ರ-೭೮)

ಗಾತ್ರ : ೨.೬ x ೩ ಅಡಿ, ಕಲ್ಯಾಣ ಚಾಲುಕ್ಯ ಶೈಲಿ

ಉಮಾಮಹೇಶ್ವರರನ್ನು ನಿಂತ ಭಂಗಿಯಲ್ಲಿ ಕೊರೆಯಲಾಗಿದೆ. ಶಿವನು ಸಮಭಂಗಿಯಲ್ಲಿ ನಿಂತರೆ, ಉಮೆಯು ಎಡಭಾಗಕ್ಕೆ ವಾಲಿದಂತೆ ನಿಂತಿರುವಳು. ಶಿವನು ನಾಲ್ಕು ಕೈಗಳನ್ನು ಉಳ್ಳವನಾಗಿ ತ್ರಿಶೂಲ, ಡಮರು, ಅಭಯಹಸ್ತ ಇನ್ನೊಂದು ಉಮೆಯ ಭುಜದ ಮೇಲಿದೆ. ಕಿರೀಟ, ಹಾರಗಳು, ಉದರಬಂಧ, ಯಜ್ಞೋಪವೀತ ನಡುಪಟ್ಟಿ, ವಸ್ತ್ರಾಭರಣಗಳಿಂದ ಶೋಭಿತನಾಗಿರುವನು. ಉಮೆಯು ಎರಡು ಕೈಗಳನ್ನು ಉಳ್ಳವಳಾಗಿದ್ದು ಒಂದು ಕೈಯಿಂದ ಶಿವನ ಬೆನ್ನನ್ನು, ಇನ್ನೊಂದು ಕೈಯಲ್ಲಿ ಪುಷ್ಪವನ್ನು ಹಿಡಿದಿರುವಳು. ಕೇಶ ಶೃಂಗಾರ, ಕೊರಳಹಾರ, ಕುಂಡಲಗಳು ವಸ್ತ್ರಾಭರಣಗಳಿಂದ ಶೋಭಿಸಿರುವಳು. ಶಿಲ್ಪದ ಕೆಳಭಾಗದಲ್ಲಿ ನಂದಿ, ಉಬ್ಬುಶಿಲ್ಪವನ್ನು ಕೊರೆಯಲಾಗಿದೆ.

ಊರು : ಕುಳೇನೂರು (ತಾ.ಹಾವೇರಿ)

ದೇವಾಲಯ : ಕಲ್ಮೇಶ್ವರ

ಸ್ಥಳ : ನವರಂಗದ ಗೋಡೆಯಲ್ಲಿ

ಬಳಸಿದ ಕಲ್ಲು : ನೀಲಿಛಾಯೆಯ ಕಪ್ಪು ಕಲ್ಲು (ಛಾಯಾಚಿತ್ರ-೭೯)

ಗಾತ್ರ : ೧.೧೦ x ೩.೧ ಅಡಿ, ಕಲ್ಯಾಣ ಚಾಲುಕ್ಯ ಶೈಲಿ

ಉಮಾಮಹೇಶ್ವರರನ್ನು ನಿಂತ ಭಂಗಿಯಲ್ಲಿ ಕೊರೆಯಲಾಗಿದೆ. ಮಹೇಶ್ವರನು ನಾಲ್ಕು ಕೈಗಳನ್ನು ಹೊಂದಿದ್ದು, ತ್ರಿಶೂಲ, ಢಮರು, ಅಭಯಹಸ್ತದಲ್ಲಿ ಮಣಿಸರಗಳನ್ನು ಕಂಡರಿಸಲಾಗಿದೆ. ಇನ್ನೊಂದು ಕೈ ಉಮೆಯ ಎಡಭುಜದ ಮೇಲೆ ಇದೆ. ಕಿರೀಟ, ಕುಂಡಲ, ಹಾರ, ಉದರಬಂಧ, ಕಟಿವಸ್ತ್ರ ಉಪವೀತಗಳನ್ನು ಧರಿಸಿರುವನು. ಉಮೆಯು ಎರಡು ಕೈಗಳನ್ನು ಉಳ್ಳವಳಾಗಿದ್ದು ಒಂದು ಕೈ ಮಹೇಶ್ವರನ ಬೆನ್ನನ್ನು, ಇನ್ನೊಂದು ಕೈ ಪುಷ್ಪವನ್ನು ಧರಿಸಿರುವಂತೆ ಕೊರೆಯಲಾಗಿದೆ. ಆಕರ್ಷಕವಾದ ಕೇಶವಿನ್ಯಾಸ, ಕುಂಡಲಗಳು, ಹಾರಗಳು, ಕಟಿವಸ್ತ್ರ, ಕಟಿಸೂತ್ರ, ಕಾಲುಗಳಲ್ಲಿ ಕಡಗಗಳಿಂದ ಅಲಂಕೃತಗೊಂಡಿರುವಳು. ಶಿಲ್ಪದ ಕೆಳಭಾಗದಲ್ಲಿ ನಂದಿಯ ಉಬ್ಬುಶಿಲ್ಪವಿದೆ. ನಗುಮುಖದಿಂದ, ಜೀವಕಳೆಯನ್ನು ತುಂಬಿಕೊಂಡ ಈ ಶಿಲ್ಪವು ಬಹು ಆಕರ್ಷಕವಾಗಿದೆ.

ಊರು : ನಾಗವಂದ (ತಾ.ಹಿರೇಕೆರೂರು)

ದೇವಾಲಯ : ಸಿದ್ದೇಶ್ವರ

ಸ್ಥಳ : ನವರಂಗದ ಕೋಷ್ಠ

ಬಳಸಿದ ಕಲ್ಲು : ನೀಲಿಛಾಯೆಯ ಕಪ್ಪು ಕಲ್ಲು

ಗಾತ್ರ : ೧.೧ x ೧.೮ ಅಡಿ

ಕಾಲ : ಕ್ರಿ.ಶ.೧೧ನೇ ಶತಮಾನ, ಕಲ್ಯಾಣ ಚಾಲುಕ್ಯ ಶೈಲಿ

ಗಾತ್ರದಲ್ಲಿ ಚಿಕ್ಕದಾದ ಈ ಶಿಲ್ಪವು ಉಮಾಮಹೇಶ್ವರರನ್ನು ಕುಳಿತ ಭಂಗಿಯಲ್ಲಿ ಕೊರೆಯಲಾಗಿದೆ. ಮಹೇಶ್ವರನ ಹಿಂದಿನ ಎರಡು ಕೈಗಳು ಭಗ್ನಗೊಂಡಿವೆ. ಒಂದು ಕೈ ಅಭಯಹಸ್ತವನ್ನು ತೋರಿದರೆ, ಇನ್ನೊಂದು ಕೈ ಉಮೆಯ ಎಡಭುಜದ ಮೇಲಿದೆ. ಕಿರೀಟ, ಕುಂಡಲ, ಹಾರ, ಕಟಿವಸ್ತ್ರಗಳಿಂದ ಅಲಂಕೃತಗೊಂಡಿರುವನು. ಮಹೇಶ್ವರನ ಎಡತೊಡೆಯ ಮೇಲೆ ಕುಳಿತ ಉಮೆಯು ಎರಡು ಕೈಗಳನ್ನು ಹೊಂದಿರುವಳು. ಒಂದು ಕೈ ಶಿವನ ಬೆನ್ನನ್ನು, ಇನ್ನೊಂದು ಕೈ ಪುಷ್ಪವನ್ನು ಹಿಡಿದಂತೆ ಕಂಡರಿಸಲಾಗಿದೆ. ಸುಂದರವಾದ ಕೇಶವಿನ್ಯಾಸ, ಕೊರಳ ಹಾರಗಳು, ಕಟಿಬಂಧ, ವಸ್ತ್ರಗಳನ್ನು ಬಿಡಿಸಲಾಗಿದೆ.

**ರತಿ ಮನ್ಮಥ ಶಿಲ್ಪಗಳು :** ಮನ್ಮಥನು ಪ್ರೀತಿ, ಯೌವ್ವನ, ಆಕಾಂಕ್ಷೆಯ ದೇವರು ಎಂದು ಕರೆಯಿಸಿ ಕೊಂಡಿದ್ದಾನೆ. ಶಿಲ್ಪರತ್ನ, ವಿಷ್ಣುಧರ್ಮೋತ್ತರ ಪುರಾಣಗಳು ಮನ್ಮಥನ ಶಿಲ್ಪದ ಬಗ್ಗೆ ಮಾಹಿತಿಯನ್ನು ಒದಗಿಸುತ್ತವೆ.[೫೯] ಕಾಮದೇವನನ್ನು ದ್ವಿಬಾಹುಗಳಿಂದಲೂ, ಅಷ್ಟಬಾಹುಗಳಿಂದಲೂ ಗುರುತಿಸಲಾಗುತ್ತದೆ. ದ್ವಿಬಾಹು ಇದ್ದಲ್ಲಿ ಕಬ್ಬಿನ ಬಿಲ್ಲನ್ನು ಮತ್ತು ಬಾಣವನ್ನು ಹಿಡಿದಿರುವನು. ಇವನ ಪತ್ನಿಯರಾದ 'ಪ್ರೀತಿ ಮತ್ತು ರತಿ' ಕ್ರಮವಾಗಿ ತೃಪ್ತಿ ಮತ್ತು ಆನಂದದ ಸಂಕೇತ[೬೦] ಮನ್ಮಥನು ಐದು ಬಾಣಗಳನ್ನು ಹೊಂದಿರು ವುದರಿಂದ ಅವನನ್ನು 'ಪಂಚಬಾಣ' ಎಂದೂ ಕರೆಯುವರು.

ದೇವಾಲಯಗಳಲ್ಲಿ ರತಿಮನ್ಮಥರನ್ನು ಮೂರ್ತಿಶಿಲ್ಪದಲ್ಲೂ ಮತ್ತು ಗರ್ಭಗೃಹಗಳ ದ್ವಾರಶಾಖೆಗಳ ಪಾದಫಲಕಗಳಲ್ಲಿಯೂ ಉಬ್ಬುಶಿಲ್ಪಗಳ ರೂಪದಲ್ಲಿ ಕಾಣುತ್ತೇವೆ.

ಊರು : ಕುಳೇನೂರು (ತಾ.ಹಾವೇರಿ)

ದೇವಾಲಯ : ಕಲ್ಮೇಶ್ವರ

ಸ್ಥಳ : ನವರಂಗದ ಭಿತ್ತಿಯಲ್ಲಿ

ಬಳಸಿದ ಕಲ್ಲು : ನೀಲಿಛಾಯೆಯ ಕಪ್ಪು ಕಲ್ಲು (ಛಾಯಾಚಿತ್ರ-೮೦)

ಗಾತ್ರ : ೨ x ೩.೬ ಅಡಿ

ಕಾಲ : ಕ್ರಿ.ಶ.೧೧ನೇ ಶತಮಾನ, ಕಲ್ಯಾಣ ಚಾಲುಕ್ಯ ಶೈಲಿ

ತ್ರಿಭಂಗಿಯಲ್ಲಿ ನಿಂತ, ಎರಡು ಕೈಗಳನ್ನು ಹೊಂದಿದ ರತಿ ಮನ್ಮಥ ಶಿಲ್ಪವು ಪ್ರಮಾಣ ಬದ್ಧವಾಗಿದ್ದು ಆಕರ್ಷಕವಾಗಿದೆ. ಕಾಮನು ಬಲಗೈಯಲ್ಲಿ ಪಂಚಬಾಣಗಳನ್ನು, ಎಡಗೈಯಲ್ಲಿ ಕಬ್ಬಿನ ಜಲ್ಲೆಯ ಬಿಲ್ಲನ್ನು ಹಿಡಿದಿರುವನು. ಎತ್ತರವಾದ ಕಿರೀಟ, ಕುಂಡಲ, ಕೊರಳಹಾರಗಳು, ಸುಂದರ ಕೇಶ ಉದರಬಂಧ, ಯಜ್ಞೋಪವೀತ, ಕಂಕಣ, ಕಟಿಸೂತ್ರ ವಸ್ತ್ರಾಲಂಕಾರದಿಂದ ಕೂಡಿರುವನು. ಅವನ ಪಕ್ಕದಲ್ಲಿ ನಿಂತ ರತಿಯು ಸುಂದರವಾದ ಕೇಶವಿನ್ಯಾಸ, ಕಂಠಹಾರಗಳು, ತೋಳು ಬಂಧಿಗಳು, ಕಂಕಣ, ಕಟಿಸೂತ್ರ ಮತ್ತು ವಸ್ತ್ರಾಲಂಕಾರ ದಿಂದ ಕೂಡಿದ್ದು, ಒಂದು ಕೈಯಲ್ಲಿ ಪುಷ್ಪವನ್ನು ಹಿಡಿದಿದ್ದು, ಬಲಗೈಯನ್ನು ಕಟಿ ಅವಲಂಬಿತವಾಗಿ ಇರಿಸಿ ವೈಯ್ಯಾರಿಯಾಗಿ ನಿಂತಿರುವಳು.

ನಂದಿ ಶಿಲ್ಪಗಳು : ಶಿವನ ಗಣ ದೇವತೆಗಳಲ್ಲಿ ಬರುವ ನಂದಿ, ನಂದೀಶ ಅಥವಾ ನಂದಿಕೇಶ್ವರನನ್ನು ಮಾನವ ರೂಪದಲ್ಲಿ ಮೂರು ಕಣ್ಣುಗಳನ್ನು, ನಾಲ್ಕು ಕೈಗಳನ್ನು ಹೊಂದಿದ್ದು, ಹುಲಿಚರ್ಮವನ್ನು ಧರಿಸಿರುವನೆಂದು ಹೇಳಲಾಗಿದೆ.[೫೭] ಇವನನ್ನು ವೃಷಭದ ರೂಪದಲ್ಲಿಯೂ ಗುರುತಿಸಲಾಗುತ್ತದೆ. ಪ್ರತಿ ಶಿವಾಲಯದಲ್ಲೂ ಶಿವನ ಎದುರಿಗೆ ವೃಷಭ ರೂಪದ ನಂದಿ ಶಿಲ್ಪವನ್ನು ಕಾಣುತ್ತೇವೆ. ನಂದಿಯು ಶಿವನ ವಾಹನ ಎಂದು ಪುರಾಣಗಳಲ್ಲಿ ಹೇಳಿದೆ. ಶಿವನನ್ನು 'ವೃಷಧ್ವಜ', 'ವೃಷಕೇತನ', ಎಂದು ಕರೆಯಲಾಗಿದೆ. ಸಿಂಧೂ ಸಂಸ್ಕೃತಿಯಲ್ಲಿಯೂ ವೃಷಭಕ್ಕೆ ಪ್ರಾಮುಖ್ಯತೆ ಇದ್ದುದನ್ನು ಕಾಣುತ್ತೇವೆ. ವೃಷಭದ ಬೆನ್ನ ಮೇಲಿನ ಡುಬ್ಬು (ಇಣಿ) ಲಿಂಗವನ್ನು ಹೋಲುತ್ತದೆ. ಆದ್ದರಿಂದ ನಂದಿಯು ಶಿವನನ್ನು ಹೊತ್ತವನು ಎಂದು ತಿಳಿಯಲಾಗುತ್ತದೆ.[೫೮] ಕೆಲವು ದೇವಾಲಯಗಳಲ್ಲಿ ಶಿವನಿಗಿಂತ ವೃಷಭನಿಗೇ ಹೆಚ್ಚು ಪೂಜೆ ಸಲ್ಲುತ್ತಿರುವುದು ಕಂಡು ಬರುತ್ತದೆ. ಕೃಷಿಕಾರ್ಯದಲ್ಲೂ ವೃಷಭ ಬಹುಮುಖ್ಯವಾಗಿ ಉಪಯೋಗಗೊಳ್ಳುತ್ತಿದ್ದುದು ಸಾಮಾನ್ಯ ವಿಷಯ. ಆದ್ದರಿಂದ ವೃಷಭ ಪೂಜನೀಯವಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ಎಲ್ಲ ದೇವಾಲಯಗಳಲ್ಲೂ ನಂದಿಶಿಲ್ಪವನ್ನು ಕಾಣುತ್ತೇವೆ. ವ್ಯಕ್ತಿನಾಮ ದೇವಾಲಯಗಳಲ್ಲಿ ಮತ್ತು ತ್ರೈಪುರುಷ ದೇವಾಲಯಗಳಲ್ಲಿ ಗಾತ್ರದಲ್ಲಿ ದೊಡ್ಡದಾದ, ಅಲಂಕಾರಯುಕ್ತವಾದ ನಂದಿ ಶಿಲ್ಪಗಳನ್ನು ಕಂಡರೆ ನ್ಯಾಯದರ್ಶನ ದೇವಾಲಯಗಳಲ್ಲಿ ಸಣ್ಣಗಾತ್ರದ ಅಲಂಕಾರ ಕಡಿಮೆ ಇರುವ ಶಿಲ್ಪಗಳಿವೆ. ಕೆಲವು ದೇವಾಲಯಗಳಲ್ಲಿ ಪ್ರಾಚೀನ ನಂದಿಶಿಲ್ಪದ ಸ್ಥಳದಲ್ಲಿ ಆಧುನಿಕ ಶಿಲ್ಪಗಳನ್ನು ಪ್ರತಿಷ್ಠಾಪಿಸಲಾಗಿದೆ.

## ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳ ನಂದಿ ಶಿಲ್ಪಗಳು

### ವ್ಯಕ್ತಿನಾಮ/ಪರೋಕ್ಷವಿನಯ ತ್ರಿಕೂಟ ದೇವಾಲಯಗಳ ನಂದಿ ಶಿಲ್ಪಗಳು, ಶೈಲಿ : ಕಲ್ಯಾಣ ಚಾಲುಕ್ಯ

| ಕ್ರ.ಸಂ | ಊರು | ದೇವಾಲಯ ಹೆಸರು | ಗಾತ್ರ ಎXಉXಅ ಅಡಿ | ಬಳಸಿದ ಕಲ್ಲು | ಅಲಂಕಾರಗಳು | ಕಾಲ |
|---|---|---|---|---|---|---|
| ೧. | ಅಬ್ಬಲೂರು (ತಾ.ಹಿರೇಕೆರೂರು) | ಸೋಮೇಶ್ವರ | ೦.೧೦ X ೧ X ೦.೬ ಗಾತ್ರದ ಮೂರು ನಂದಿ ಶಿಲ್ಪಗಳಿವೆ | ನೀಲಿ ಛಾಯೆಯ ಕಪ್ಪು ಕಲ್ಲು | ಹಣೆಪಟ್ಟಿ, ಕೊರಳಪಟ್ಟಿ, ಘಂಟೆ | ಕ್ರಿ.ಶ.೧೨೦೦ |
| ೨. | ರಟ್ಟಿಹಳ್ಳಿ : (ತಾ.ಹಿರೇಕೆರೂರು) | ಕಡಂಬೇಶ್ವರ | ೩.೬ X ೪.೨ X ೧.೬ | ,, | ಹಣೆಪಟ್ಟಿ, ಮಧ್ಯದಲ್ಲಿ ಪದಕ, ಹಗ್ಗ, ಗಂಟೆ, ಡುಬ್ಬ ಬಳಸಿದ ಪದಕಹಾರ, ಗೆಜ್ಜೆ | ಕ್ರಿ.ಶ.೧೨೦೦ |
| ೩. | ಹರಳಹಳ್ಳಿ (ತಾ.ಹಾವೇರಿ) | ಸೋಮೇಶ್ವರ | ೩.೫ X ೪.೨ X ೧.೬ | ,, | ಹಣೆಪಟ್ಟಿ, ಕೊರಳಪಟ್ಟಿ, ಡುಬ್ಬವನ್ನು ಬಳಸಿದಂತೆ ಉದ್ದವಾದ ಪದಕಸರ, ಗಂಟೆ, ಗೆಜ್ಜೆ | ಕ್ರಿ.ಶ.೧೨೦೦ |

## ತ್ರೈಪುರುಷ ತ್ರಿಕೂಟ ದೇವಾಲಯಗಳ ನಂದಿ ಶಿಲ್ಪಗಳು, ಶೈಲಿ : ಕಲ್ಯಾಣ ಚಾಲುಕ್ಯ

| ಕ್ರ.ಸಂ. | ಊರು | ದೇವಾಲಯ ಹೆಸರು | ಗಾತ್ರ ಎXಉXಅ ಅಡಿ | ಬಳಸಿದ ಕಲ್ಲು | ಅಲಂಕಾರಗಳು | ಕಾಲ |
|---|---|---|---|---|---|---|
| ೧. | ಅಬ್ಬಲೂರು (ತಾ. ಹಿರೇಕೆರೂರು) | ಬ್ರಹ್ಮಲಿಂಗ | ೪.೧೦ X ೬.೯ X ೩ | ನೀಲಿ ಛಾಯೆಯ ಕಪ್ಪು ಕಲ್ಲು (ಛಾಯಾಚಿತ್ರ-೮೧) | ಹಣೆಪಟ್ಟಿ, ಮುತ್ತಿನಸರ, ಕೊರಳ ಪಟ್ಟಿ, ಸುರುಳಿ ಹಗ್ಗ, ಗಂಟೆಸರ, ಗೆಜ್ಜೆ | ಕ್ರಿ.ಶ. ೧೨ನೇ ಶತಮಾನ |
| ೨. | ಉಪ್ಪುಣಸಿ (ತಾ. ಹಾನಗಲ್ಲ) | ಕಲ್ಮೇಶ್ವರ | ೩ X ೩.೨ X ೧.೧ | ,, | ಹಣೆಪಟ್ಟಿ, ಪದಕ ಕೊರಳಲ್ಲಿ ಒಂದು ಒಳೆಹಗ್ಗ, ಗಂಟೆಸರ | ಕ್ರಿ.ಶ. ೧೧ನೇ ಶತಮಾನ |
| ೩. | ಕಲಕೇರಿ (ತಾ.ಹಾನಗಲ್ಲ) | ಸೋಮೇಶ್ವರ | ೩ X ೪.೧ X ೨ | ,, | ಹಣೆಪಟ್ಟಿ, ಕೊರಳಪಟ್ಟಿ, ಹಗ್ಗದ ಸರ, ಗಂಟೆ, ಗೆಜ್ಜೆ | ಕ್ರಿ.ಶ. ೧೧ನೇ ಶತಮಾನ |
| ೪. | ಪುರದಗೇರಿ (ತಾ.ಹಿರೇಕೆರೂರು) | ಮಾಕಾಳೇಶ್ವರ | ೪ X ೬.೨ X ೧.೬ | ,, | ಹಣೆಪಟ್ಟಿ, ಗೆಜ್ಜೆಸರ, ಡುಬ್ಬವನ್ನು ಬಳಸಿದ ಘಂಟಾಹಾರ, ಕಾಲಿಗೆ ಗೆಜ್ಜೆ | ಕ್ರಿ.ಶ. ೧೨ನೇ ಶತಮಾನ |
| ೫. | ಮೇದೂರು (ತಾ.ಹಿರೇಕೆರೂರು) | ಮಾಕಾಳೇಶ್ವರ (ಸಣ್ಣಬಸವೇಶ್ವರ) | ೨.೮ X ೩.೯ X ೧.೨ | ,, | ಹಣೆಪಟ್ಟಿ, ಹಗ್ಗ, ಡುಬ್ಬವನ್ನು ಬಳಸಿದ ಪದಕಹಾರ, ಕೊರಳಪಟ್ಟಿ, ಗಂಟೆ, ಗೆಜ್ಜೆ | ಕ್ರಿ.ಶ. ೧೧ನೇ ಶತಮಾನ |
| ೬. | ನಾಗವಂದ (ತಾ.ಹಿರೇಕೆರೂರು) | ಸಿದ್ದೇಶ್ವರ | ೩.೮ X ೪.೫ X ೧.೯ | ,, | ಹಣೆಪಟ್ಟಿ, ಕೊರಳಪಟ್ಟಿ, ಹಗ್ಗ, ಗಂಟೆ, ಗೆಜ್ಜೆಸರ, ಡುಬ್ಬವನ್ನು ಬಳಸಿದ ಪದಕಹಾರ, ಗೆಜ್ಜೆ | ಕ್ರಿ.ಶ. ೧೨ನೇ ಶತಮಾನ |

## ನ್ಯಾಯದರ್ಶನ/ತ್ರಿಮೂರ್ತಿ ದೇವಾಲಯಗಳಲ್ಲಿಯ ನಂದಿ ಶಿಲ್ಪಗಳು, ಶೈಲಿ : ಕಲ್ಯಾಣ ಚಾಲುಕ್ಯ

| ಕ್ರ.ಸಂ | ಊರು | ದೇವಾಲಯ ಹೆಸರು | ಗಾತ್ರ ಎXಉXಅ ಅಡಿ | ಬಳಸಿದ ಕಲ್ಲು | ಅಲಂಕಾರಗಳು | ಕಾಲ |
|---|---|---|---|---|---|---|
| ೧. | ಅಂತರವಳ್ಳಿ (ತಾ. ರಾಣೆಬೆನ್ನೂರು) | ಕಲ್ಮೇಶ್ವರ | ೪ X ೬ X ೧.೭ | ನೀಲಿ ಛಾಯೆಯ ಕಪ್ಪು ಕಲ್ಲು (ಛಾಯಾಚಿತ್ರ-೮೨) | ಹಣೆಪಟ್ಟಿ, ಗೆಜ್ಜೆಸರ, ಕೊರಳ ಪಟ್ಟಿ, ಹಗ್ಗ, ಗಂಟೆ, ಡುಬ್ಬವನ್ನು ಬಳಸಿದಂತೆ ಪದಕಹಾರ, ಕಾಲಲ್ಲಿ ಗೆಜ್ಜೆ | ಕ್ರಿ.ಶ. ೧೨ನೇ ಶತಮಾನ |
| ೨. | ಆಲದಗೇರಿ (ತಾ. ಹಿರೇಕೆರೂರು) | ಕಲ್ಮೇಶ್ವರ | ૩ X ೪.೫ X ೧.೬ | ,, | ಹಣೆಪಟ್ಟಿ, ಕೊರಳಲ್ಲಿ ಜೋಡಿ ಹಗ್ಗದ ಸರ,ಗಂಟೆ, ಡುಬ್ಬವನ್ನು ಬಳಸಿದಂತೆ ಪದಕಹಾರ, ಗೆಜ್ಜೆ | ಕ್ರಿ.ಶ. ೧೧ನೇ ಶತಮಾನ |
| ೩. | ಗುಡಗೂರು (ತಾ.ರಾಣೆಬೆನ್ನೂರು) | ಕಲ್ಮೇಶ್ವರ | ೩ X ೩.೨ X ೧.೧ | ,, | ಹಣೆಪಟ್ಟಿ, ಕೊರಳಪಟ್ಟಿ, ದೊಡ್ಡ ಪದಕಹಾರ, ಗೆಜ್ಜೆ | ಕ್ರಿ.ಶ. ೧೨ನೇ ಶತಮಾನ |
| ೪. | ಗುಡ್ಡದ ಆನವೇರಿ (ತಾ.ರಾಣೆಬೆನ್ನೂರು) | ಕಲ್ಮೇಶ್ವರ | ೩ X ೫.೧ X ೨ | ,, | ಹಣೆಪಟ್ಟಿ, ಕೊರಳಪಟ್ಟಿ, ಹಗ್ಗ, ಪದಕಹಾರ | ಕ್ರಿ.ಶ. ೧೧ನೇ ಶತಮಾನ |
| ೫. | ಹಿರೇಮಾಗನೂರು (ತಾ.ರಾಣೆಬೆನ್ನೂರು) | ಕಲ್ಮೇಶ್ವರ | ೩ X ೩ X ೧.೭ | ,, (ಛಾಯಾಚಿತ್ರ-೮೩) | ಹಣೆಪಟ್ಟಿ, ಕೊರಳಲ್ಲಿ ಹಗ್ಗ, ಮಣಿ, ಪದಕಹಾರ, ಬಾಲದ ಸುತ್ತಲೂ ಪದಕ ಹಾರ, ಕಾಲಲ್ಲಿ ಗೆಜ್ಜೆ | ಕ್ರಿ.ಶ. ೧೧ನೇ ಶತಮಾನ |
| ೬. | ಹೊನ್ನತ್ತಿ (ತಾ.ರಾಣೆಬೆನ್ನೂರು) | ಕಲ್ಮೇಶ್ವರ | ೨.೯ X ೩.೨ X ೧ | ,, (ಛಾಯಾಚಿತ್ರ-೮೪) | ಹಣೆಪಟ್ಟಿ, ಹಗ್ಗದಸರ, ಗಂಟೆ, ಡುಬ್ಬವನ್ನು ಬಳಸಿದಂತೆ ಉದ್ದನೆಯ ಪದಕಹಾರ | ಕ್ರಿ.ಶ. ೧೧ನೇ ಶತಮಾನ |

## ೪.೨. ವೈಷ್ಣವ ಶಿಲ್ಪಗಳು

ವೈಷ್ಣವ ಶಿಲ್ಪಗಳಲ್ಲಿ ಮುಖ್ಯವಾಗಿ ವಿಷ್ಣುಶಿಲ್ಪವನ್ನು ಕಾಣುತ್ತೇವೆ. ವೇದಗಳಲ್ಲಿಯೇ ವಿಷ್ಣುವಿನ ಉಲ್ಲೇಖ ಬರುತ್ತದೆ. ಅಲ್ಲಿ ಈತನ ಸ್ಥಾನ ಸಣ್ಣದು. ಸವಿತ್ಯ, ಪೂಷನ್, ಸೂರ್ಯ, ವಿಷ್ಣು, ಭಗ, ಆರ್ಯಮನ್ ಎಂಬ ಸೂರ್ಯನ ಅಂಶಗಳಲ್ಲಿ ವಿಷ್ಣುವೂ ಒಬ್ಬನು. ವೇದದಲ್ಲಿ ಐದಾರು ಸೂಕ್ತಗಳಲ್ಲಿ ವಿಷ್ಣು ವರ್ಣನೆ ಇದೆ. ಇವನು ಮೂರು ಹೆಜ್ಜೆಗಳಲ್ಲಿ ಪೃಥ್ವಿ, ಅಂತರಿಕ್ಷ, ಆಕಾಶಗಳನ್ನು ಕ್ರಮಿಸುವನು. ಇವನಿಗೆ 'ಉರುಗಾಯ', 'ಉರುಕ್ರಮ' ಎಂಬ ಹೆಸರುಗಳು ಇವೆ.[೫೯] ಬ್ರಾಹ್ಮಣಗಳ ಕಾಲದಲ್ಲಿ ವಿಷ್ಣುವಿನ ಪ್ರಾಧಾನ್ಯವು ಹೆಚ್ಚುತ್ತ ಹೋಯಿತು. ದೇವತೆಗಳಲ್ಲೆಲ್ಲ ವಿಷ್ಣುವೇ ವರಿಷ್ಠ ದೇವತೆಯೆಂದೂ ಅಗ್ನಿಯೇ ಕನಿಷ್ಠ ದೇವತೆಯೆಂದೂ ಐತರೇಯ ಬ್ರಾಹ್ಮಣವು ಬಣ್ಣಿಸಿದೆ.[೬೦] ಇತಿಹಾಸ ಮಹಾಕಾವ್ಯಗಳ ಕಾಲದಲ್ಲಿ ವಿಷ್ಣುವು ಪರಮ ದೇವತೆಯಾಗಿ ಪರಿಣಮಿಸಿದನು.[೬೧] ಕ್ರಿ.ಪೂ.೨೦೦ರ ಸುಮಾರಿಗೆ ಸೇರಬಹುದಾದ, ರಜಪೂತಾನ ದಲ್ಲಿರುವ ಘೋಸುಂಡಿ ಎಂಬ ಸ್ಥಳದಲ್ಲಿ ದೊರೆತ ಶಿಲಾಲೇಖದಲ್ಲಿ ಸಂಕರ್ಷಣ ವಾಸುದೇವರ ಹೆಸರಿವೆ.[೬೨] ಬೆಸ್ನಾಗರದಲ್ಲಿ ದೊರೆತ ಇನ್ನೊಂದು ಶಾಸನದಿಂದ ಹಿಲಿಯೋಡೋರ ಎಂಬುವನು ದೇವದೇವನಾದ ವಾಸುದೇವ ನಿಗಾಗಿ ಗರುಡಧ್ವಜವನ್ನು ನಿಲ್ಲಿಸಿದಂತೆ ಹೇಳಿದೆ. ಇದರ ಕಾಲಮಾನ ಕ್ರಿ.ಪೂ.೧೨೦ಕ್ಕೆ ಸೇರಬಹುದಾಗಿ ಹೇಳಲಾಗಿದೆ.[೬೩] ದಕ್ಷಿಣ ಭಾರತದಲ್ಲಿಯೂ ಕ್ರಿಸ್ತ ಶಕಕ್ಕಿಂತ ಪೂರ್ವದಲ್ಲಿಯೇ ವೈಷ್ಣವಧರ್ಮ ಇದ್ದಿತೆಂದು ನಾನಘಾಟ್ ಶಾಸನದಿಂದ ತಿಳಿದುಬರುತ್ತದೆ.[೬೪] ಕರ್ನಾಟಕದಲ್ಲಿ, ಕನ್ನಡ ಭಾಷೆಯ ಅತ್ಯಂತ ಪ್ರಾಚೀನ ಶಾಸನವು ಕ್ರಿ.ಶ.ಸು.೪೫೦ಕ್ಕೆ ಸೇರಿದ ಹಲ್ಮಿಡಿ ಶಾಸನವಾಗಿದ್ದು, ಇದು ವಿಷ್ಣುವಿನ ಪ್ರಾರ್ಥನೆಯೊಂದಿಗೆ ಆರಂಭವಾಗುತ್ತದೆ.[೬೫] ಆರನೆಯ ಶತಮಾನದಲ್ಲಿ **'ಮಹಾಭಾಗವತ'**ನಾದ ಬಾದಾಮಿ ಚಾಲುಕ್ಯರ ಮಂಗಳೇಶನು ಬಾದಾಮಿಯಲ್ಲಿ ಪ್ರಸಿದ್ಧವಾದ ವೈಷ್ಣವ ಗುಹಾಂತರ ದೇವಾಲಯವನ್ನು ಕೊರೆಯಿಸಿದನು.[೬೬] ನಂತರದ ಕಾಲದಲ್ಲಿ ಅನೇಕ ಶಾಸನಗಳಲ್ಲಿ ವಿಷ್ಣು ದೇವಾಲಯಗಳ ರಚನೆ ಮತ್ತು ಅವುಗಳಿಗೆ ಬಿಟ್ಟ ದಾನಗಳ ಬಗ್ಗೆ ವಿವರಗಳು ಬಂದಿವೆ. ವೈಷ್ಣವ ಧರ್ಮದಲ್ಲಿ ವಿಷ್ಣುವೇ ಪ್ರಧಾನ ದೇವತೆ. ತ್ರಿಮೂರ್ತಿಗಳಲ್ಲಿ ಇವನು ಎರಡನೇಯವನು. ಜಗತ್ತಿನ ರಕ್ಷಣೆಯು ಇವನ ಕಾರ್ಯ.

ವಿಷ್ಣುವನ್ನು ಚತುರ್ವಿಂಶತಿ ಮೂರ್ತಿಗಳಿಂದಲೂ ಹಾಗೂ ಹತ್ತು ಅವತಾರಗಳಿಂದಲೂ ಪೂಜಿಸಲಾಗುತ್ತದೆ. ಪುರಾಣಗಳ ಪ್ರಕಾರ ವಿಷ್ಣುವಿನ ನಾಲ್ಕು ಮೂರ್ತಿಗಳಾದ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧ ಇವುಗಳಲ್ಲಿ ವಾಸುದೇವಮೂರ್ತಿಯೇ ಪ್ರಮುಖ. ಉಳಿದ ಮೂವರಲ್ಲಿ ಸಂಕರ್ಷಣನು ವಾಸುದೇವನ ಅಣ್ಣನಾಗಿ, ಪ್ರದ್ಯುಮ್ನನು ಮಗನಾಗಿ ಮತ್ತು ಅನಿರುದ್ಧನು ಮೊಮ್ಮಗನಾಗಿ ಕಂಡುಬರುತ್ತಾರೆ.[೬೭] ಈ ನಾಲ್ಕು ಮೂರ್ತಿಗಳ ಹೆಸರಿನಲ್ಲಿ ವ್ಯೂಹ ರಚನೆ ರೂಪಗೊಂಡಿದೆ. ಒಂದೊಂದು ವ್ಯೂಹದಲ್ಲಿಯೂ ಮೂರು ಮೂರು ಮೂರ್ತಿಗಳನ್ನು ಕಾಣುತ್ತೇವೆ. ವಾಸುದೇವ ವ್ಯೂಹದಲ್ಲಿ ಮಾತ್ರ ಆರು ಗುಣಗಳಿರುವವು. ಸಂಕರ್ಷಣ ವ್ಯೂಹದಲ್ಲಿ ಜ್ಞಾನ ಪ್ರಧಾನ; ಪ್ರದ್ಯುಮ್ನ ವ್ಯೂಹದಲ್ಲಿ ಶಕ್ತಿ ಪ್ರಧಾನ; ಅನಿರುದ್ಧನಲ್ಲಿ ಐಶ್ವರ್ಯ ಪ್ರಧಾನ. ಹೀಗೆ ವ್ಯೂಹ ರಚನೆಗಳಿಂದ ಒಟ್ಟು ಇಪ್ಪತ್ತನಾಲ್ಕು ವಿಷ್ಣು ಮೂರ್ತಿಗಳನ್ನು ಪೂಜಿಸುವ ಪದ್ಧತಿ ಬಂದಿದೆ. ಚತುರ್ವಿಂಶತಿ ಮೂರ್ತಿಗಳು ಕ್ರಮವಾಗಿ ಕೇಶವ, ನಾರಾಯಣ, ಮಾಧವ, ಗೋವಿಂದ, ವಿಷ್ಣು,

ಮಧುಸೂದನ, ತ್ರಿವಿಕ್ರಮ, ವಾಮನ, ಶ್ರೀಧರ, ಹೃಷಿಕೇಶ, ಪದ್ಮನಾಭ, ದಾಮೋದರ, ವಾಸುದೇವಾ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ, ಪುರುಷೋತ್ತಮ, ಅಧೋಕ್ಷಜ, ನರಸಿಂಹ, ಅಚ್ಯುತ, ಜನಾರ್ಧನ, ಉಪೇಂದ್ರ, ಹರಿ ಮತ್ತು ಕೃಷ್ಣ. ಪಂಚರಾತ್ರಾಗಮವು ಕೇಶವಾದಿ ಚತುರ್ವಿಂಶತಿ ಮೂರ್ತಿಗಳ ವಿವರವನ್ನು ಕೊಡುತ್ತದೆ.[೬೮]

ಸೃಷ್ಠಿಯ ಪಾಲನ ಕಾರ್ಯವನ್ನು ಹೊತ್ತಿರುವ ವಿಷ್ಣುವು ಲೋಕ ಕಂಟಕರನ್ನು ನಿಗ್ರಹಿಸಲು, ಧರ್ಮವನ್ನು ರಕ್ಷಿಸಲು ಹತ್ತು ಅವತಾರಗಳನ್ನು ಎತ್ತಿರುವನೆಂದು ಪುರಾಣಗಳು ಉಲ್ಲೇಖಿಸುತ್ತವೆ. ಅವು ಕ್ರಮವಾಗಿ ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಘುರಾಮ, ಕೃಷ್ಣ, ಬುದ್ಧ (ಬುದ್ಧನಿಗೆ ಬದಲು ಬಲರಾಮನನ್ನು ಸೇರಿಸಿರುವುದಿದೆ) ಮತ್ತು ಕಲ್ಕಿ. ಭಾಗವತ ಪುರಾಣದಲ್ಲಿ ಈ ಹತ್ತು ಅವತಾರಗಳಲ್ಲದೆ ಇನ್ನೂ ಹನ್ನೆರಡು ಸೇರಿಸಿ ಒಟ್ಟು ಇಪ್ಪತ್ತೆರಡು ಅವತಾರಗಳನ್ನು ಹೇಳಿದೆ.[೬೯] ಬೃಹದ್ಬ್ರಹ್ಮಸಂಹಿತೆ, ಮತ್ಸ್ಯಪುರಾಣ, ಅಗ್ನಿಪುರಾಣ, ಪದ್ಮಪುರಾಣ, ವಿಷ್ಣುಧರ್ಮೋತ್ತರ ಪುರಾಣ, ಕೂರ್ಮಪುರಾಣ, ಸಮರಾಂಗಣ ಸೂತ್ರಧಾರ ಮೊದಲಾದ ಗ್ರಂಥಗಳು ವಿಷ್ಣುವಿನ ಚತುರ್ವಿಂಶತಿ ಮೂರ್ತಿಗಳ ಬಗ್ಗೆ ಮತ್ತು ಅವತಾರಗಳ ಬಗ್ಗೆ ಮಾಹಿತಿಯನ್ನು ಒದಗಿಸುತ್ತವೆ.[೭೦] ಮಾನಸಾರವು ವಿಷ್ಣುವಿನ ಸಾಮಾನ್ಯ ವಿವರಣೆಯನ್ನು ಕೊಡುತ್ತದೆ. ನಾಲ್ಕು ಕೈಗಳಿಂದ, ಎರಡು ಕಣ್ಣುಗಳಿಂದ ಕೂಡಿದವನಾಗಿದ್ದು, ವಿಜೃಂಭಿಸುವ ಕಿರೀಟವನ್ನು, ಹಳದಿ ಬಣ್ಣದ ವಸ್ತ್ರವನ್ನು ಧರಿಸಿರುವನು. ಅವನ ಎದೆಯ ಮೇಲೆ ಶುಭಕಾರಕವಾದ ಶ್ರೀವತ್ಸಮುದ್ರೆಯು ಇರುವುದು. ನಾಲ್ಕು ಕೈಗಳಲ್ಲಿ ಶಂಕ, ಚಕ್ರ, ಗಧಾ, ಪದ್ಮಗಳನ್ನು ಹಿಡಿದಿರುವನು. ಮೊಣಕಾಲಿನವರೆಗೂ ವನಮಾಲೆಯನ್ನು ಧರಿಸಿರುವನು. ಸಾಮಾನ್ಯವಾಗಿ ವಿಷ್ಣುವಿನ ಎಡಬಲದಲ್ಲಿ ಲಕ್ಷ್ಮಿ ಮತ್ತು ಭೂದೇವಿ ಇರುವರು[೭೧] ವಿಷ್ಣು ಶಿಲ್ಪದಲ್ಲಿ ಸ್ಥಾನಿಕ, ಆಸೀನ ಮತ್ತು ಶಯನ ಎಂಬ ಮೂರು ವಿಧಗಳಿವೆ. ಪ್ರಸ್ತುತ ಅಧ್ಯಯನದಲ್ಲಿ ಸ್ಥಾನಿಕ ಮತ್ತು ಶಯನ ವಿಧಗಳಲ್ಲಿ ವಿಷ್ಣು ಶಿಲ್ಪಗಳನ್ನು ಕಾಣುತ್ತೇವೆ. ತ್ರೈಪುರುಷ ದೇವಾಲಯಗಳಲ್ಲಿ ಇರುವ ವಿಷ್ಣುಶಿಲ್ಪಗಳು ಗಾತ್ರದಲ್ಲಿ ಮತ್ತು ಅಲಂಕಾರದಲ್ಲಿ ಉತ್ತಮವಾಗಿದೆ. ನ್ಯಾಯದರ್ಶನ ದೇವಾಲಯಗಳಲ್ಲಿ ಇರುವ ವಿಷ್ಣುಶಿಲ್ಪಗಳು ಗಾತ್ರದಲ್ಲಿ ಚಿಕ್ಕದಾಗಿದೆ.

# ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳ ವಿಷ್ಣು ಶಿಲ್ಪಗಳು

| ಕ್ರ. ಸಂ. | ಊರು | ದೇವಾಲಯ | ಸ್ಥಳ | ಬಳಸಿದ ಕಲ್ಲು | ಗಾತ್ರ ಎXಅ ಅಡಿ | ಶಿಲ್ಪವಿಧ | ಕೈಗಳು ಮತ್ತು ಆಯುಧಗಳು | ಅಲಂಕಾರಗಳು ಮತ್ತು ವಿವರ | ಕಾಲ |
| --- | --- | --- | --- | --- | --- | --- | --- | --- | --- |
| ೧. | ಅಬ್ಬಲೂರು (ತಾ. ಹಿರೇಕೆರೂರು) | ಬಸವೇಶ್ವರ (ಬ್ರಹ್ಮಲಿಂಗೇಶ್ವರ) ಆವರಣದಲ್ಲಿ | ಗರ್ಭಗೃಹ | ನೀಲಿ ಛಾಯೆಯ ಕಪ್ಪು ಕಲ್ಲು | ೩x೧ | ಸ್ಥಾನಿಕ | ನಾಲ್ಕು ಕೈಗಳು, ಚಕ್ರ, ಶಂಖ, ಕಟಿ ಅವಲಂಬಿತ, ಇನ್ನೊಂದು ಕೈಯಲ್ಲಿ ಫಲ | ಕಿರೀಟ, ಮಕರಕುಂಡಲ, ಎರಡು ಹಾರ, ಯಜ್ಞೋಪವೀತ, ಕಟಿಬಂಧ | ಕ್ರಿ.ಶ.೮-೯ನೇ ಶತಮಾನ, ಆದಿ ಕದಂಬ ಶೈಲಿ |
| ೨. | ಅಬ್ಬಲೂರು (ತಾ. ಹಿರೇಕೆರೂರು) | ಬಸವೇಶ್ವರ (ಬ್ರಹ್ಮಲಿಂಗೇಶ್ವರ) | ಉತ್ತರ ದಿಕ್ಕಿನ ಗರ್ಭಗೃಹ | ,, | ೪.೪ x ೨.೩ | ಸ್ಥಾನಿಕ | ನಾಲ್ಕು ಕೈಗಳು, ಚಕ್ರ, ಶಂಖ, ಗದಾ, ಪದ್ಮ (ಛಾಯಾಚಿತ್ರ-೮೫) | ಉನ್ನತ ಕಿರೀಟ, ಮಕರಕುಂಡಲ, ಕೊರಳ ಹಾರಗಳು, ಉದರಬಂಧ, ಕಟಿಬಂಧ, ಯಜ್ಞೋಪವೀತ, ಭುಜಾಲಂಕಾರಗಳು, ಕೇಯೂರ ಕಂಕಣಗಳು, ವಸ್ತ್ರ, ಅಕ್ಕಪಕ್ಕದಲ್ಲಿ ಶ್ರೀದೇವಿ ಮತ್ತು ಭೂದೇವಿ | ಕ್ರಿ.ಶ.೧೨ ನೇ ಶತಮಾನ, ಕಲ್ಯಾಣ ಚಾಲುಕ್ಯ ಶೈಲಿ |
| ೩. | ಕುಳೇನೂರು (ತಾ. ಹಾವೇರಿ) | ಕಲ್ಮೇಶ್ವರ | ಸದ್ಯದಲ್ಲಿ ಅಂಗಳದಲ್ಲಿದೆ | ,, | ೩.೨ x ೧.೪ | ಸ್ಥಾನಿಕ | ನಾಲ್ಕು ಕೈಗಳಲ್ಲಿ ಎರಡು ಭಗ್ನಗೊಂಡಿವೆ. ಇನ್ನೆರಡರಲ್ಲಿ ಗದಾ ಪದ್ಮ ವಿದೆ. | ಶಿರೋಭಾಗ ಭಗ್ನಗೊಂಡಿದೆ. ಹಾರಗಳು, ಯಜ್ಞೋಪವೀತ, ಉದರ ಬಂಧ, ಕಟಿಬಂಧ, ವಸ್ತ್ರ | ಕ್ರಿ.ಶ.೧೨ನೇ ಶತಮಾನ, ಕಲ್ಯಾಣ ಚಾಲುಕ್ಯ ಶೈಲಿ |

| ಕ್ರ. ಸಂ. | ಊರು | ದೇವಾಲಯ | ಸ್ಥಳ | ಬಳಸಿದ ಕಲ್ಲು | ಗಾತ್ರ ಎXಅ ಅಡಿ | ಶಿಲ್ಪವಿಧ | ಕೈಗಳು ಮತ್ತು ಆಯುಧಗಳು | ಅಲಂಕಾರಗಳು ಮತ್ತು ವಿವರ | ಕಾಲ |
|---|---|---|---|---|---|---|---|---|---|
| ೪. | ಪುರದಗೇರಿ (ತಾ.ಹಿರೇಕೆರೂರು) | ಸೋಮೇಶ್ವರ | ನವರಂಗದಲ್ಲಿ | ನೀಲಿ ಛಾಯೆಯ ಕಪ್ಪು ಕಲ್ಲು | ೪.೫ x ೨ | ಸ್ಥಾನಿಕ | ನಾಲ್ಕು ಕೈಗಳಲ್ಲಿ, ಶಂಖ, ಚಕ್ರ, ಗದಾ, ಪದ್ಮ | ಮಕರ ತೋರಣ, ಕೊರಳ ಕಿರೀಟ, ಮಕರ ಕುಂಡಲ, ಕೇಯೂರ, ಕಂಕಣ, ಹಾರ ಗಳು, ಯಜ್ಞೋಪವೀತ, ಉದರಬಂಧ, ಕಟಿಬಂಧ, ವಸ್ತ್ರ | ಕ್ರಿ.ಶ.೧೨ನೇ ಶತಮಾನ, ಕಲ್ಯಾಣ ಚಾಲುಕ್ಯ ಶೈಲಿ |
| ೫. | ಮತ್ತಿಹಳ್ಳಿ (ತಾ.ಹಿರೇಕೆರೂರು) | ಸೋಮೇಶ್ವರ | ಉತ್ತರ ದಿಕ್ಕಿನ ಗರ್ಭಗೃಹ | ,, | ೩.೬ x ೧.೮ | ಸ್ಥಾನಿಕ | ನಾಲ್ಕು ಕೈಗಳು, ಶಂಖ, ಚಕ್ರ, ಗದಾ, ಪದ್ಮ | ಕಿರೀಟ,ಹಾರಗಳು, ಯಜ್ಞೋಪವೀತ, ಕಟಿಬಂಧ, ವಸ್ತ್ರ, ಇದೇ ಸ್ಥಳದಲ್ಲಿದ್ದ ಪ್ರಾಚೀನ ಶಿಲ್ಪವು ಈಗ ಕೆ.ಆರ್.ಐ. ಸಂಸ್ಥೆಯಲ್ಲಿದೆ. | ಆಧುನಿಕ |
| ೬. | ಮತ್ತೂರು (ತಾ.ಬ್ಯಾಡಗಿ) | ಕಲ್ಮೇಶ್ವರ | ಉತ್ತರ ದಿಕ್ಕಿನ ಗರ್ಭಗೃಹ | ,, | ೩.೪ x ೨ | ಸ್ಥಾನಿಕ | ನಾಲ್ಕು ಕೈಗಳು, ಶಂಖ, ಚಕ್ರ, ಗದಾ, ಪದ್ಮ (ಛಾಯಾಚಿತ್ರ-೮೬) | ಕಿರೀಟ, ಮಕರ ಕುಂಡಲ, ಕೊರಳ ಕಿರೀಟ, ಮಕರ ಕುಂಡಲ, ಉದರಬಂದ, ಕಟಿ ಬಂಧ, ಉದರಬಂಧ, ಕಟಿ ಬಂಧ, ವಸ್ತ್ರ, ಕಡಗ, ಕೀರ್ತಿ ಮುಖ ತೋರಣ | ಕ್ರಿ.ಶ.೧೨ನೇ ಶತ ಮಾನ, ಕಲ್ಯಾಣ ಚಾಲುಕ್ಯ ಶೈಲಿ |

| ಕ್ರ. ಸಂ. | ಊರು | ದೇವಾಲಯ | ಸ್ಥಳ | ಬಳಸಿದ ಕಲ್ಲು | ಗಾತ್ರ ಎXಅ ಅಡಿ | ಶಿಲ್ಪವಿಧ | ಕೈಗಳು ಮತ್ತು ಆಯುಧಗಳು | ಅಲಂಕಾರಗಳು ಮತ್ತು ವಿವರ | ಕಾಲ |
|---|---|---|---|---|---|---|---|---|---|
| ೭. | ನಾಗವಂದ (ತಾ.ಹಿರೇಕೆರೂರು) | ಸಿದ್ಧೇಶ್ವರ (ಬ್ರಹ್ಮಲಿಂಗ) | ನವರಂಗ | ನೀಲಿ ಛಾಯೆಯ ಕಪ್ಪು ಕಲ್ಲು | ೨.೬ x ೪.೪ | ಶಯನ | ನಾಲ್ಕು ಕೈಗಳು, ತಲೆಗೆ ಆಸರೆಯಾಗಿ, ವಕ್ಷಸ್ಥಳದಲ್ಲಿ, ತೊಡೆಯ ಮೇಲೆ, ಒಂದು ಕೈಯಲ್ಲಿ ಶಂಖ (ಛಾಯಾಚಿತ್ರ-೮೭) | ತಲೆಯ ಹಿಂಬದಿಯಲ್ಲಿ ಏಳು ಹೆಡೆಯ ಆದಿ ಶೇಷ, ಕಿರೀಟ, ಮಕರ ಕುಂಡಲ, ಹಾರಗಳು, ಕಟಿಬಂಧ, ಬಲಗಾಲನ್ನು ಶ್ರೀದೇವಿ ಒತ್ತುತ್ತಿರುವಳು. ಅವನ ನಾಭಿಯಿಂದ ಹೊರಟ ಕಮಲದಲ್ಲಿ ಬ್ರಹ್ಮನ ಉಬ್ಬು ಶಿಲ್ಪವಿದೆ. | ಕ್ರಿ.ಶ.೧೨ನೇ ಶತಮಾನ, ಕಲ್ಯಾಣ ಚಾಲುಕ್ಯ ಶೈಲಿ |

**ನರಸಿಂಹ ಶಿಲ್ಪ :** ವಿಷ್ಣುವಿನ ದಶಾವತಾರಗಳಲ್ಲಿ ನರಸಿಂಹ ಅವತಾರವೂ ಒಂದು. ನರಸಿಂಹನ ಆರಾಧನೆಯು ದೇಶದ ತುಂಬ ಕಂಡುಬರುತ್ತದೆ. ಉತ್ತರ ಭಾರತದಲ್ಲಿ ನರಸಿಂಹನಿಗಾಗಿಯೇ ಪ್ರತ್ಯೇಕ ದೇವಾಲಯ ಕಂಡುಬರುವುದಿಲ್ಲ. ಆದರೆ ದಕ್ಷಿಣ ಭಾರತದಲ್ಲಿ ನರಸಿಂಹನಿಗಾಗಿಯೇ ನಿರ್ಮಾಣಗೊಂಡ ದೇವಾಲಯಗಳು ಸಾಕಷ್ಟು ಸಂಖ್ಯೆಯಲ್ಲಿವೆ. ಭಾಗವತ, ಹರಿವಂಶ ಮತ್ತು ವಿಷ್ಣುಪುರಾಣಗಳು ನರಸಿಂಹ ಅವತಾರದ ಬಗ್ಗೆ ವಿವರಿಸುತ್ತವೆ.[೭೧] ನರಸಿಂಹ ಶಿಲ್ಪಗಳನ್ನು ಪ್ರಮುಖವಾಗಿ ಗಿರಿಜ (ಕೇವಲ) ನರಸಿಂಹ ಮತ್ತು ಸ್ತುನಜ (ಸ್ತೌನ) ನರಸಿಂಹ ಎಂದು ವಿಭಾಗಿಸಲಾಗಿದೆ. ವೈಖಾಸಾಗಮದಲ್ಲಿ ಕೇವಲ ನರಸಿಂಹವು ಸೌಮ್ಯರೂಪವೆಂದು, ಸ್ತುನಜ ನರಸಿಂಹವು ಭಯಾನಕ ರೂಪವೆಂದು ಹೇಳಿದೆ.[೭೨] ನರಸಿಂಹ ಶಿಲ್ಪಗಳನ್ನು ಸ್ವತಂತ್ರ ನರಸಿಂಹ ಮತ್ತು ದೇವಿಸಹಿತ ನರಸಿಂಹ ಎಂದೂ ವಿಭಾಗಿಸಲಾಗಿದೆ. ದೇವಿ ಸಹಿತ ನರಸಿಂದ ಶಿಲ್ಪಗಳಲ್ಲಿ ಲಕ್ಷ್ಮಿ ಮತ್ತು ಭೂದೇವಿಯರು ಎಡಬಲದಲ್ಲಿ ಇರುವರು. ಲಕ್ಷ್ಮಿನರಸಿಂಹ ಶಿಲ್ಪದಲ್ಲಿ ನರಸಿಂಹನ ಎಡತೊಡೆಯ ಮೇಲೆ ಲಕ್ಷ್ಮಿಯು ಕುಳಿತಿರುವಳು. ಇದು ನರಸಿಂಹನ ಸೌಮ್ಯರೂಪಗಳಲ್ಲಿ ಒಂದು.

ಪ್ರಸ್ತುತ ಅಧ್ಯಯನದಲ್ಲಿ ಹಾವೇರಿ ತಾಲೂಕು ನರಸಿಂಹಪುರದ ನರಸಿಂಹ ದೇವಾಲಯದಲ್ಲಿ ಮಾತ್ರ ನರಸಿಂಹ ಶಿಲ್ಪವನ್ನು ಕಾಣುತ್ತೇವೆ. ಈ ಶಿಲ್ಪವು ವಿಜಯನಗರ ಶೈಲಿಯಲ್ಲಿದೆ. ಸಿಂಹಾಸನದ ಮೇಲೆ ಕುಳಿತ ನರಸಿಂಹ ಶಿಲ್ಪವು ಎರಡು ಅಡಿ ಎತ್ತರವಾಗಿದ್ದು, ಗುರುತಿಸಲು ಆಗದಷ್ಟು ಭಗ್ನವಾಗಿದೆ.

**ಸೂರ್ಯ ಶಿಲ್ಪಗಳು :** ಸೂರ್ಯ ದೇವನ ಬಗ್ಗೆ ಈಗಾಗಲೇ ತ್ರೈಪುರುಷ ದೇವಾಲಯಗಳ ಕುರಿತು ವಿವರಣೆ ಕೊಡುವಾಗ ವಿವರಿಸಲಾಗಿದೆ. ಬೃಹತ್ ಸಹಿತಾ, ಮತ್ಸ್ಯಪರಾಣ, ಅಗ್ನಿಪುರಾಣ, ಶಿಲ್ಪರತ್ನ ಹಾಗೂ ತಂತ್ರಸಾರಗಳಲ್ಲಿ ಸೂರ್ಯನ ಬಗ್ಗೆ ವಿವರಣೆ ಇದೆ. ಸಾಮಾನ್ಯವಾಗಿ ಅವನು ಎರಡು ಅಥವಾ ನಾಲ್ಕು ಕೈಗಳನ್ನು ಹೊಂದಿರುವನು. ಕಮಲಗಳನ್ನು ಹಿಡಿದಿರುವನು. ಏಳು ಕುದುರೆಗಳನ್ನು ಹೊಂದಿದ ರಥದ ಮೇಲೆ ಪಯಣಿಸುತ್ತಿರುವನು. ಅವನ ಸಾರಥಿಯು ಕಾಲುಗಳಿಲ್ಲದ ಅರುಣನು. ಸೂರ್ಯನು ತನ್ನ ಇಬ್ಬರು ರಾಣಿಯರಾದ 'ಉಷೆ' ಮತ್ತು 'ಪ್ರತ್ಯುಷೆ'ಯರೊಂದಿಗೆ ಮೂರ್ತಿಶಿಲ್ಪ ದೃಷ್ಟಿಯಿಂದ ಸೂರ್ಯಮೂರ್ತಿಯು ವಿಷ್ಣುರೂಪವನ್ನು ಬಿಂಬಿಸುತ್ತದೆ. ಮತ್ತು ಸೂರ್ಯನು ವಿಷ್ಣುವಿನ ಪ್ರತಿರೂಪ ಮತ್ತು ವಿಷ್ಣುವಿನ ರಾಜಸ ಮೂರ್ತಿ ಎಂದು ಹೇಳಲಾಗಿದೆ.[೭೩] ವೃತ್ತಾಕಾರವಾಗಿ ಉರಿಯುತ್ತಿರುವ ಸೂರ್ಯವಲಯವನ್ನು ನಾರಾಯಣನೆಂದು ಗುರುತಿಸಲಾಗುತ್ತದೆ.[೭೪] ಅಲ್ಲದೆ ಸೂರ್ಯನಾರಾಯಣ ಎಂಬುದು ಹೆಚ್ಚುಬಳಕೆಯಲ್ಲಿರುವ ಹೆಸರು. ಈ ವಲಯದೊಳಗಿನ ನಾರಾಯಣನಿಗೂ ಮೂರುರೂಪಗಳಿವೆ. ಪ್ರಾತಃಕಾಲದಲ್ಲಿ ಬ್ರಹ್ಮ, ಮಧ್ಯಾಹ್ನದಲ್ಲಿ ಮಹೇಶ್ವರ (ಅಗ್ನಿ) ಮತ್ತು ಸಾಯಂಕಾಲದಲ್ಲಿ ವಿಷ್ಣು ಎಂದು ಹೇಳಲಾಗುತ್ತದೆ.[೭೫] ಸೂರ್ಯದೇವನನ್ನು ನವಗ್ರಹಗಳ ಮಧ್ಯದಲ್ಲಿ ಇಟ್ಟು ಪೂಜಿಸಲಾಗುತ್ತದೆ. ಆಗಮಶಾಸ್ತ್ರಗಳ ಪ್ರಕಾರ ಸೂರ್ಯನು ಪೂರ್ವಾಭಿಮುಖಿಯಾಗಿದ್ದು ಕೆಂಪು ಹೂಗಳಿಂದ ಪೂಜೆಗೊಳ್ಳುವನು. ದಕ್ಷಿಣಭಾರತದಲ್ಲಿ ಸೂರ್ಯನಿಗಾಗಿಯೇ ಪ್ರತ್ಯೇಕ ಗರ್ಭಗೃಹವನ್ನು ಕಟ್ಟಿ ಪೂಜಿಸುವ ಪದ್ಧತಿಯು ಹನ್ನೆರಡನೇ ಶತಮಾನದಲ್ಲಿ ಹೆಚ್ಚು ಕಂಡುಬರುತ್ತದೆ.

ಪ್ರಸ್ತುತ ಅಧ್ಯಯನದಲ್ಲಿ ಸೂರ್ಯಶಿಲ್ಪಗಳನ್ನು ತ್ರೈಪುರುಷ ದೇವಾಲಯಗಳಲ್ಲಿ ಕಾಣಬಹುದು. ವ್ಯಕ್ತಿನಾಮ ಮತ್ತು ನ್ಯಾಯದರ್ಶನ ದೇವಾಲಯಗಳಲ್ಲಿ ಕಂಡುಬರುವುದಿಲ್ಲ.

# ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳ ಸೂರ್ಯ ಶಿಲ್ಪಗಳು

| ಕ್ರ. ಸಂ | ಊರು | ದೇವಾಲಯ | ಸ್ಥಳ | ಬಳಸಿದ ಕಲ್ಲು | ಗಾತ್ರಎXಅ(ಅಡಿ) | ಶಿಲ್ಪವಿಧ | ಕೈಗಳು ಮತ್ತು ಆಯುಧಗಳು | ಅಲಂಕಾರಗಳು ಮತ್ತು ವಿವರ | ಕಾಲ |
|---|---|---|---|---|---|---|---|---|---|
| ೧. | ಅಬ್ಬಲೂರು (ತಾ.ಹಿರೇಕೆರೂರು) | ಬಸವೇಶ್ವರ (ಬ್ರಹ್ಮಲಿಂಗೇಶ್ವರ) | ಪೂರ್ವದಿಕ್ಕಿನ ಗರ್ಭಗೃಹ | ನೀಲಿ ಛಾಯೆಯ ಕಪ್ಪು ಕಲ್ಲು | ೪.೫ X ೨.೦ | ಸ್ಥಾನಿಕ | ಎರಡು ಕೈಗಳು, ಎರಡೂ ಕೈಗಳಲ್ಲೂ ಕಮಲ ಪುಷ್ಪ ಭುಜ ಮಟ್ಟದಲ್ಲಿ (ಛಾಯಾಚಿತ್ರ-೮೮) | ಮಕರ ತೋರಣ, ಕಿರೀಟ, ಮಕರ ಕುಂಡಲ, ಹಾರಗಳು ಯಜ್ಞೋಪವೀತ, ಕಂಕಣ, ಕಟಿಬಂಧ, ಕಡಗಗಳು ಅಕ್ಕ ಪಕ್ಕದಲ್ಲಿ ಬಾಣ ಹೂಡಿದ ಉಷೆ, ಪ್ರತ್ಯುಷೆಯರು ಪೀಠ ದಲ್ಲಿ ಏಳು ಕುದುರೆಗಳು | ಕ್ರಿ.ಶ.೧೨ನೇ ಶತ ಮಾನ, ಕಲ್ಯಾಣ ಚಾಲುಕ್ಯ ಶೈಲಿ |
| ೨. | ಉಪ್ಪುಣಸಿ (ತಾ.ಹಾನಗಲ್ಲ) | ಕಲ್ಮೇಶ್ವರ | ಪೂರ್ವ ದಿಕ್ಕಿನ ಗರ್ಭಗೃಹ | ,, | ೨.೧೦ X ೨ | ಸ್ಥಾನಿಕ | ಎರಡು ಕೈಗಳಲ್ಲೂ ಕಮಲ ಪುಷ್ಪ ಭುಜ ಮಟ್ಟದಲ್ಲಿ (ಛಾಯಾಚಿತ್ರ-೮೯) | ತಲೆಯ ಹಿಂಬಾಗದಲ್ಲಿ ಏಳು ಹೆಡೆಯ ಆದಿಶೇಷ, ಕಿರೀಟ, ಮಕರ ಕುಂಡಲ, ಯಜ್ಞೋಪ ವೀತ, ಕಟಿಬಂಧ, ವಸ್ತ್ರ, ಕಡಗ ಅಕ್ಕಪಕ್ಕದಲ್ಲಿ ಬಿಲ್ಲು ಧರಿಸಿದ ಉಷೆ, ಪ್ರತ್ಯುಷೆಯರು | ಕ್ರಿ.ಶ.೧೧ನೇ ಶತ ಮಾನ, ಕಲ್ಯಾಣ ಚಾಲುಕ್ಯ ಶೈಲಿ |
| ೩. | ನಾಗವಂದ (ತಾ.ಹಿರೇಕೆರೂರು) | ಸಿದ್ಧೇಶ್ವರ (ಬ್ರಹ್ಮೇಶ್ವರ) | ಪೂರ್ವದಿಕ್ಕಿನ ಗರ್ಭಗೃಹ | ,, | ೩.೨X೨ | ಸ್ಥಾನಿಕ | ಎರಡು ಕೈಗಳಲ್ಲೂ ಕಮಲ ಪುಷ್ಪ ಭುಜ ಮಟ್ಟದಲ್ಲಿ | ಶಿಲ್ಪವು ಭಾಗಶಃ ಭಿನ್ನವಾಗಿದೆ | ಕ್ರಿ.ಶ.೧೨ನೇ ಶತ ಮಾನ, ಕಲ್ಯಾಣ ಚಾಲುಕ್ಯ ಶೈಲಿ |

| ಕ್ರ. ಸಂ | ಊರು | ದೇವಾಲಯ | ಸ್ಥಳ | ಬಳಸಿದ ಕಲ್ಲು | ಗಾತ್ರ/ಎXಅ(ಅಡಿ) | ಶಿಲ್ಪವಿಧ | ಕೈಗಳು ಮತ್ತು ಆಯುಧಗಳು | ಅಲಂಕಾರಗಳು ಮತ್ತು ವಿವರ | ಕಾಲ |
|---|---|---|---|---|---|---|---|---|---|
| ೪. | ಪುರದಗೇರಿ (ತಾ.ಹಿರೇಕೆರೂರು) | ಸೋಮೇಶ್ವರ | ನವರಂಗ | ನೀಲಿ ಛಾಯೆಯ ಕಪ್ಪು ಕಲ್ಲು | ೪.೬X೩ | ಸ್ಥಾನಿಕ | ಎರಡು ಕೈಗಳಲ್ಲಿ ಕಮಲದ ಹೂ ಭುಜ ಮಟ್ಟದಲ್ಲಿ | ಮಕರ ತೋರಣ, ಕಿರೀಟ, ಮಕರ ಕುಂಡಲ, ಹಾರಗಳು ಯಜ್ಞೋಪವೀತ, ಉದರ ಬಂಧ, ಕಟಿಬಂಧ, ಕಡಗ | ಕ್ರಿ.ಶ.೧೨ನೇ ಶತಮಾನ, ಕಲ್ಯಾಣ ಚಾಲುಕ್ಯ ಶೈಲಿ |
| ೫. | ಮೇದೂರು (ತಾ.ಹಿರೇಕೆರೂರು) | ಸಣ್ಣ ಬಸವಣ್ಣ (ಮಾಕಾಳೇಶ್ವರ) | ಪೂರ್ವದಿಕ್ಕಿನ ಗರ್ಭಗೃಹ | ,, | ೩X೧.೧೦ | ಸ್ಥಾನಿಕ | ಎರಡು ಕೈಗಳಲ್ಲಿ ಕಮಲದ ಹೂಗಳು ಭುಜ ಮಟ್ಟದಲ್ಲಿ (ಛಾಯಾಚಿತ್ರ-೯೦) | ಕಿರೀಟ, ಮಕರಕುಂಡಲ, ಮಣಿಹಾರ ಯಜ್ಞೋಪವೀತ ಕಟಿಬಂಧ ಮತ್ತು ಎರಡೂ ಕಾಲುಗಳಲ್ಲಿ ಮೊಣಕಾಲಿನ ವರೆಗೂ ಪಾದಕವಚಗಳನ್ನು ಧರಿಸಿರುವನು. ಪೀಠದಲ್ಲಿ ಏಳು ಕುದುರೆಗಳನ್ನು ಕೊರೆಯಲಾಗಿದೆ. | ಕ್ರಿ.ಶ.೧೧ನೇ ಶತಮಾನ, ಕಲ್ಯಾಣ ಚಾಲುಕ್ಯ ಶೈಲಿ |

## ೪.೩. ಶಾಕ್ತ ಶಿಲ್ಪಗಳು

ಹಿಂದೂ ಧರ್ಮದ ಪೌರಾಣಿಕ ಸಾಹಿತ್ಯದಲ್ಲಿ ಮತ್ತು ತಂತ್ರಗಳಲ್ಲಿ ಶಕ್ತಿಯನ್ನು ಹೆಣ್ಣು ದೇವತೆಯ ರೂಪದಲ್ಲಿ ಚಿತ್ರಿಸಿದ್ದಾರೆ.[೭೮] ಯಾವ ಒಂದು ಅಸಾಧಾರಣ ಶಕ್ತಿ ಅಥವಾ ಸದ್ಗುಣ ಇಲ್ಲದಿದ್ದರೆ, ದೇವರು ಕೂಡ ಈ ಜಗತ್ತಿನಲ್ಲಿ ನಿಷ್ಕ್ರಿಯನಾಗುತ್ತಾನೊ ಆ ಶಕ್ತಿಯನ್ನು ತಮ್ಮ ಮೂಲಾಧಾರವೆಂದು ಶಾಕ್ತ ಸಂಪ್ರದಾಯದವರು ಭಾವಿಸುತ್ತಾರೆ.[೭೯] ಶಕ್ತಿ ಇಲ್ಲದ ಎಲ್ಲ ದೇವರೂ ಅಪೂರ್ಣ. ಹೆಣ್ಣು ದೇವತೆಯ ಶಕ್ತಿ ಮತ್ತು ಸ್ವರೂಪವನ್ನು ಗಂಡು ದೇವರ ತಾಯಿಯಾಗಿ, ಸಹೋದರಿಯಾಗಿ, ಪತ್ನಿಯಾಗಿ ನಾನಾ ಮಗ್ಗುಲಗಳಿಂದ ಕಾಣಲಾಗಿದೆ. ಇವುಗಳಲ್ಲಿ ಪತ್ನಿ ರೂಪದಲ್ಲಿಯೇ 'ಶಕ್ತಿ'ಯನ್ನು ಹೆಚ್ಚಾಗಿ ಕಾಣುತ್ತೇವೆ.

ಶಕ್ತಿಪೂಜೆ ಅಥವಾ ಮಾತೃದೇವತೆಯ ಉಪಾಸನೆಯು ಪ್ರಾಚೀನವಾದ ಸಿಂಧೂ ಸಂಸ್ಕೃತಿಯಲ್ಲಿಯೇ ಕಂಡುಬಂದಿದೆ. ಅಲ್ಲಿ ದೊರೆತ ಸ್ತ್ರೀವಿಗ್ರಹಗಳನ್ನು ಮಾತೃದೇವತೆಯ ವಿಗ್ರಹಗಳೆಂದು ಹೇಳಲಾಗುತ್ತದೆ.[೮೦] ವೈದಿಕ ಕಾಲದಲ್ಲಿ ಇಂದ್ರ, ಅಗ್ನಿ, ವರುಣ, ಸೂರ್ಯ, ವಿಷ್ಣು, ರುದ್ರ ಮುಂತಾದವರು ಪ್ರಧಾನ ದೇವತೆಗಳಾಗಿದ್ದು ಪುರುಷ ಪ್ರಧಾನ ಎನಿಸಿಕೊಂಡರೂ[೮೧] ಋಗ್ವೇದ 'ಅಂಬ್ರಿನಿಸೂಕ್ತ' (Ambrnisukta) ಮತ್ತು 'ರಾತ್ರಿಸೂಕ್ತ'ಗಳು ಮಾತೃದೇವತೆಯ ಆರಾಧನೆಯ ಮೂಲಗಳು ಎನಿಸಿವೆ.[೮೨] ದೇವತೆಗಳ ತಾಯಿ 'ಅದಿತಿ'ಯನ್ನು ಅಲಂಕಾರಿಕವಾಗಿ ಸೃಷ್ಟಿಗೆ ಹೋಲಿಸಲಾಗಿದೆ.[೮೩] ಪುರಾಣಗಳ ಕಾಲದಲ್ಲಿ ಹೆಚ್ಚು ಮಾನ್ಯತೆಯನ್ನು ಪಡೆದ ತ್ರಿಮೂರ್ತಿಗಳನ್ನು, ಅವರವರ ಪತ್ನಿಯರ ರೂಪದಲ್ಲಿ 'ಶಕ್ತಿ'ಯನ್ನು ಗುರುತಿಸಿರುವುದು ಕಂಡುಬರುತ್ತದೆ. ಸೃಷ್ಟಿಕರ್ತನಾದ ಬ್ರಹ್ಮನ ಶಕ್ತಿದೇವತೆ ಸರಸ್ವತಿ. ಅವನ ಮುಖವೇ ಅವಳ ವಾಸಸ್ಥಳ. ಅವಳು ಸರ್ವವಿದ್ಯೆಗಳ ಅಧ್ಯಕ್ಷೆ. ಜಗತ್ಸೃಷ್ಟಿಗೆ ಕಾರಣಳು.[೮೪] ಅದರಂತೆ ಸೃಷ್ಟಿಯ ಪಾಲನಕರ್ತನಾದ ವಿಷ್ಣುವಿನ ಶಕ್ತಿದೇವತೆ ಲಕ್ಷ್ಮಿ. ಇವಳು ಸಂಪತ್ತು, ಭಾಗ್ಯ, ಆನಂದಗಳ ಸಂಕೇತ. ಈ ಶಕ್ತಿಯಿಂದಲೇ ಜಗತ್ತು ಸುಸೂತ್ರವಾಗಿ ನಡೆದುಕೊಂಡು ಬರಲು ಅನುಕೂಲವಾಗಿದೆ.[೮೫] ಇದೇ ರೀತಿ ಲಯಕರ್ತನಾದ ಶಿವನ ಶಕ್ತಿಯು ಪಾರ್ವತಿ ಅಥವಾ ಉಮಾ. ಸಾಮಾನ್ಯವಾಗಿ ಅವಳನ್ನು ಕಾಳಿಕೆಯ ರೂಪದಲ್ಲಿ ವರ್ಣಿಸಲಾಗಿದೆ. ಸಂಹಾರ ರೂಪವಾದ ಇವಳ ಶಕ್ತಿಯು ಸೃಷ್ಟಿಯನ್ನು ಸಮಸ್ಥಿತಿಯಲ್ಲಿ ಇಡಲು ಸಹಕರಿಸುತ್ತದೆ.[೮೬]

ಶಿಲ್ಪಗಳಲ್ಲಿ 'ಶಕ್ತಿ'ಯನ್ನು ಶಾಂತ ಮತ್ತು ಘೋರ ರೂಪಗಳಲ್ಲಿ ಕಾಣುತ್ತೇವೆ. ಪತಿಯ ಜೊತೆಯಲ್ಲಿ ಗುರುತಿಸುವಾಗ ಶಾಂತ ರೂಪದಲ್ಲಿ ಮತ್ತು ಎರಡು ಕೈಗಳನ್ನು ಹೊಂದಿರುವಂತೆ ಒಂದು ಕೈಯಲ್ಲಿ ಕಮಲದ ಮೊಗ್ಗನ್ನು ಹಿಡಿದಿರುವಂತೆ ತೋರಿಸಲಾಗುತ್ತದೆ. ಘೋರ ರೂಪದಲ್ಲಿ ಶಿವನ ಶಕ್ತಿಯಾದ ಕಾಳಿಕೆಯನ್ನು ಹೆಚ್ಚಾಗಿ ಕಾಣುತ್ತೇವೆ. ಈ ಸಂದರ್ಭಗಳಲ್ಲಿ ಅವಳೊಬ್ಬಳನ್ನೇ ನಾಲ್ಕು, ಆರು, ಎಂಟು ಕೈಗಳಿಂದಲೂ ವಿವಿಧ ಆಯುಧಗಳಿಂದಲೂ ಘೋರ ರೂಪದಲ್ಲಿ ತೋರಿಸಲಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ತ್ರಿಮೂರ್ತಿಗಳ ಪ್ರಧಾನ ಶಕ್ತಿ ಸ್ವರೂಪವಾದ ಸರಸ್ವತಿ, ಲಕ್ಷ್ಮಿ, ಮಹಿಷಮರ್ದಿನಿಯರ ಶಿಲ್ಪಗಳನ್ನು ಜೊತೆಗೆ ಸಪ್ತಮಾತೃಕೆಯರ ಫಲಕಗಳನ್ನು ಗಮನಿಸುತ್ತೇವೆ.

**ಸರಸ್ವತಿ ಶಿಲ್ಪಗಳು :** ವೈದಿಕ ವಾಙ್ಮಯದಲ್ಲಿ ಸರಸ್ವತಿ ನದಿಯೂ ಹೌದು, ದೇವತೆಯೂ ಹೌದು.[೮೭] ವೇದದಲ್ಲಿ ಇವಳನ್ನು ವಾಗ್ದೇವಿ ಎಂದೂ ಕರೆದಿದೆ. ಧೀಶಕ್ತಿಯನ್ನು ಪ್ರಚೋದನೆ ಮಾಡುವ ಸವಿತೃವಿನ ಭರ್ಗವನ್ನು ಕುರಿತ ಮಂತ್ರ ದೇವಿಯು ಬೆಳಗಿನಲ್ಲಿ ಗಾಯತ್ರಿಯೆಂದೂ, ಮಧ್ಯಾಹ್ನ ಸಾವಿತ್ರಿಯೆಂದೂ, ಸಂಜೆ ಸರಸ್ವತಿಯೆಂಬ ಕಲ್ಪನೆ ಇದೆ.[೮೮] ವಿಷ್ಣುಧರ್ಮೋತ್ತರ ಪುರಾಣ, ಅಂಶುಮಬ್ದೇದಾಗಮ, ಪೂರ್ವಕಾರಣಾಗಮ, ಸ್ಕಂದಪುರಾಣ, ಮಾರ್ಕಾಂಡೆಯ ಪುರಾಣಗಳು ಸರಸ್ವತಿಯನ್ನು ಕುರಿತು ವಿವರಿಸಿವೆ. ಇವಳು ಬಿಳಿಕಮಲದ ಮೇಲೆ ನಿಂತಿರುವಳು ಬಿಳಿವಸ್ತ್ರವನ್ನು ತೊಟ್ಟಿರುವಳು. ತನ್ನ ನಾಲ್ಕು ಕೈಗಳಲ್ಲಿ ಅಕ್ಷಮಾಲೆ, ವ್ಯಾಖ್ಯಾನಮುದ್ರಾ, ಪುಸ್ತಕ ಹಾಗೂ ಬಿಳಿ ಕಮಲ ಹೂವನ್ನು ಹಿಡಿದಿರುವಳು. ಜಟಾಮುಕುಟೆಯಾಗಿ ಯಜ್ಞೋಪವೀತವನ್ನು ಧರಿಸಿರುವಳು.[೮೯]

ಶಿಲ್ಪಗಳಲ್ಲಿ ಸರಸ್ವತಿಯನ್ನು ಎರಡು ಕೈಗಳಿಂದಲು ಅಥವಾ ನಾಲ್ಕು ಕೈಗಳಿಂದಲು ಗುರುತಿಸಲಾಗಿದೆ. ಎರಡು ಕೈಗಳಲ್ಲಿ ಪುಸ್ತಕ ಮತ್ತು ಜಪಮಾಲೆಯನ್ನು ಧರಿಸಿರುವಳು. ನಾಲ್ಕು ಕೈ ಇರುವಲ್ಲಿ ಪುಸ್ತಕ, ಜಪಮಾಲೆ, ಪಾಶ ಮತ್ತು ಅಂಕುಶವನ್ನು ಧರಿಸಿರುವಳು. ಅವಳು ಧರಿಸಿದ ಆಯುಧಗಳಿಂದ ಅವಳು ಜ್ಞಾನ ಮತ್ತು ಉಪಾಸನೆಯ ದೇವತೆ ಎಂದು ತಿಳಿದು ಬರುತ್ತದೆ. ಮಾತ್ರವಲ್ಲ ಇವಳು ಲಲಿತಕಲೆಗಳ ತಾಯಿಯೂ ಹೌದು ಎಂದು ಮತ್ಸ್ಯಪುರಾಣವು ಹೇಳುತ್ತದೆ.[೯೦] ಅವಳ ಕೈಯಲ್ಲಿಯ ಪುಸ್ತಕವು ಲೌಕಿಕ ವಿಜ್ಞಾನವನ್ನು ಸಂಬೋಧಿಸಿದರೆ, ಅಕ್ಷಮಾಲೆಯು ಆತ್ಮಜ್ಞಾನ, ಯೋಗ ವಿಜ್ಞಾನವನ್ನು ಸಂಬೋಧಿಸುತ್ತದೆ. ವೀಣೆಯು ಲಲಿತಕಲೆಗಳ ಪ್ರತೀಕವಾಗಿದೆ.[೯೧] ಇವಳ ವಾಹನ ಬಿಳಿಹಂಸ. ಇದು 'ವಿವೇಕ' ಅಥವಾ 'ವಿದ್ಯೆ'ಯ ಸಂಕೇತ. ಆದುದರಿಂದ ಲೌಕಿಕ ಮತ್ತು ಅಲೌಕಿಕ ವಿದ್ಯೆಗಳೆರಡಕ್ಕೂ ಸರಸ್ವತಿಯು ಅಧ್ಯಕ್ಷೆ ಎಂದು ಸೂಚಿಸುತ್ತದೆ.

ಪ್ರಸ್ತುತ ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳಿಗೆ ಸಂಬಂಧಪಟ್ಟಂತೆ ತ್ರೈಪುರುಷ ದೇವಾಲಯಗಳಲ್ಲಿ ಸರಸ್ವತಿ ವಿಗ್ರಹಗಳನ್ನು ಕಾಣುತ್ತೇವೆ. ತ್ರೈಪುರುಷ ದೇವಾಲಯಗಳು ವಿದ್ಯಾದಾನಕ್ಕೆ ಹೆಚ್ಚು ಮಹತ್ವ ಕೊಟ್ಟಿರುವುದರಿಂದ ದೇವಾಲಯಗಳ ದಕ್ಷಿಣ ದಿಕ್ಕಿನಲ್ಲಿ ಉತ್ತರಾಭಿಮುಖವಾಗಿ ಸರಸ್ವತಿ ಮಂಟಪಗಳನ್ನು, ಸರಸ್ವತಿ ವಿಗ್ರಹಗಳನ್ನು ಕಾಣುತ್ತೇವೆ.

## ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳ ಸರಸ್ವತಿ ಶಿಲ್ಪಗಳು

| ಕ್ರ. ಸಂ | ಊರು | ದೇವಾಲಯ | ಸ್ಥಳ | ಬಳಸಿದ ಕಲ್ಲು | ಗಾತ್ರಎXಅ(ಅಡಿ) | ಶಿಲ್ಪವಿಧ | ಕೈಗಳು ಮತ್ತು ಆಯುಧಗಳು | ಅಲಂಕಾರಗಳು ಮತ್ತು ವಿವರ | ಕಾಲ |
|---|---|---|---|---|---|---|---|---|---|
| ೧. | ಅಬ್ಬಲೂರು (ತಾ.ಹಿರೇಕೆರೂರು) | ಬಸವೇಶ್ವರ (ಬ್ರಹ್ಮಲಿಂಗೇಶ್ವರ) | ದೇವಾಲಯದ ಆವರಣದಲ್ಲಿ ದಕ್ಷಿಣದಿಕ್ಕಿನ ದೇವಾಲಯ | ನೀಲಿಛಾಯೆಯ ಕಪ್ಪು ಕಲ್ಲು | ೨.೧೦ X ೧.೯ | ಪದ್ಮಾಸನ, ಹಂಸ ಪೀಠ | ನಾಲ್ಕು ಕೈಗಳಲ್ಲಿ ಪಾಶ, ಅಂಕುಶ, ಪುಸ್ತಕ, ಮಣಿ ಮಾಲೆ (ಛಾಯಾಚಿತ್ರ-೯೧) | ಮಕರ ತೋರಣ ಮತ್ತು ಕೀರ್ತಿಮುಖದ ಅಡಿಯಲ್ಲಿ, ಕಿರೀಟ, ಕುಂಡಲ, ಹಾರಗಳು, ಯಜ್ಞೋಪವೀತ, ಕಟಿಬಂಧ, ವಸ್ತ್ರ, ಕಾಲ್ಗೆಜ್ಜೆಗಳು ಅಕ್ಕ ಪಕ್ಕದಲ್ಲಿ ಚಾಮರಧಾರಿಣಿಯರು | ಕ್ರಿ.ಶ.೧೨ನೇ ಶತಮಾನ, ಕಲ್ಯಾಣ ಚಾಲುಕ್ಯ ಶೈಲಿ |
| ೨. | ಕಲಕೇರಿ (ತಾ.ಹಾನಗಲ್ಲ) | ಸೋಮೇಶ್ವರ | ದೇವಾಲಯದ ಆವರಣದಲ್ಲಿ ದಕ್ಷಿಣದಿಕ್ಕಿನ ದೇವಾಲಯದಿಂದ ಸ್ಥಳಾಂತರಗೊಂಡು ಈಗ ಬಸವೇಶ್ವರ ದೇವಸ್ಥಾನದಲ್ಲಿದೆ | ,, | ೩.೭ X ೨.೮ | ಪದ್ಮಾಸನ, ಹಂಸ ಪೀಠ | ನಾಲ್ಕು ಕೈಗಳಲ್ಲಿ ಪಾಶ, ಅಂಕುಶ, ಪುಸ್ತಕ, ಒಂದು ಕೈ ಭಗ್ನಗೊಂಡಿದೆ. (ಛಾಯಾಚಿತ್ರ-೯೨) | ಮಕರ ತೋರಣ, ಕಿರೀಟ, ಕುಂಡಲಗಳು, ಕೊರಳ ಹಾರಗಳು ಕಟಿಬಂಧ, ಕಾಲ್ಗೆಜ್ಜೆ, ಅಕ್ಕಪಕ್ಕದಲ್ಲಿ ಚಾಮರಧಾರಿಣಿಯರು | ಕ್ರಿ.ಶ.೧೨ನೇ ಶತಮಾನ, ಕಲ್ಯಾಣ ಚಾಲುಕ್ಯ ಶೈಲಿ |
| ೩. | ಮೇದೂರು (ತಾ.ಹಿರೇಕೆರೂರು) | ಸಣ್ಣ ಬಸವೇಶ್ವರ (ಮಾಕಾಳೇಶ್ವರ) | ದೇವಾಲಯದ ಆವರಣದಲ್ಲಿ ದಕ್ಷಿಣದಿಕ್ಕಿನ ದೇವಾಲಯ | ,, | ೨.೧೮ X ೧.೯ | ಪದ್ಮಾಸನ, ಹಂಸ ಪೀಠ | ನಾಲ್ಕು ಕೈಗಳಲ್ಲಿ ಪಾಶ, ಅಂಕುಶ, ಪುಸ್ತಕ, ಮಣಿ ಮಾಲೆ. (ಛಾಯಾಚಿತ್ರ-೯೩) | ಮಕರ ತೋರಣ, ಕಿರೀಟ, ಕುಂಡಲ, ಕೊರಳಹಾರಗಳು ಯಜ್ಞೋಪವೀತ, ಕಟಿ ಬಂಧ | ಕ್ರಿ.ಶ.೧೨ನೇ ಶತಮಾನ, ಕಲ್ಯಾಣ ಚಾಲುಕ್ಯ ಶೈಲಿ |

**ಲಕ್ಷ್ಮೀ ಶಿಲ್ಪಗಳು :** ತ್ರಿಮೂರ್ತಿಗಳಲ್ಲಿ ಪಾಲನ ಕರ್ತನಾದ ವಿಷ್ಣುವಿನ ಪತ್ನಿಯಾಗಿ ಕಂಡುಬರುವ 'ಲಕ್ಷ್ಮಿ' ಅಥವಾ 'ಶ್ರೀ'ಯು[೯೨] ವೈಭವ, ಸಂಮೃದ್ಧಿ ಮತ್ತು ಸೌಂದರ್ಯದ ಸಂಕೇತ. ಜೊತೆಗೆ ವೈವಿಧ್ಯಮಯ ಶಕ್ತಿ ಉಳ್ಳವಳು. ಈ ಎರಡೂ ಶಕ್ತಿಗಳು ಸೃಷ್ಟಿಯ ಪಾಲನಕಾರ್ಯದಲ್ಲಿ ಅವಶ್ಯವಾಗಿದೆ.[೯೩] ಶಿಲ್ಪಗಳಲ್ಲಿ ಇವಳನ್ನು ಕಮಲದ ಮೇಲೆ ಪರ್ಯಂಕಾಸನದಲ್ಲಿ ಅಥವಾ ಪದ್ಮಾಸನದಲ್ಲಿ ಕುಳಿತಂತೆ, ದ್ವಿಭುಜೆ ಅಥವಾ ಚತುರ್ಭುಜೆ ಉಳ್ಳವಳನ್ನಾಗಿ ತೋರಿಸಲಾಗಿದೆ. ಕಮಲ, ಶ್ರೀಫಲ, ಶಂಖ, ಅಮೃತಘಟ, ಮಾತುಲಿಂಗ, ಖೇಟಕ, ಗದಾ ಇವು ಅವಳ ವಿಶಿಷ್ಟವಾದ ಆಯುಧಗಳು.[೯೪]

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಪಟ್ಟಂತೆ ಲಕ್ಷ್ಮಿಯಮೂರ್ತಿ ಶಿಲ್ಪಗಳು ಕಂಡುಬರುವುದಿಲ್ಲ. ಗಜಲಕ್ಷ್ಮಿಯ ಉಬ್ಬುಶಿಲ್ಪಗಳನ್ನು ದ್ವಾರಬಂಧದ ಮೇಲಿನ ಲಲಾಟಫಲಕಗಳಲ್ಲಿ ಸಾಮಾನ್ಯವಾಗಿ ಕಾಣುತ್ತೇವೆ. ಒಂದೆರಡು ಕಡೆ ಸರಸ್ವತಿ, ಗಣಪತಿಯರ ಲಲಾಟಬಿಂಬಗಳನ್ನು ಬಿಟ್ಟರೆ; ಲಲಾಟಫಲಕವು ಗಜಲಕ್ಷ್ಮಿಗಾಗಿಯೇ ಮೀಸಲಾಗಿದೆ ಎನ್ನುವಷ್ಟು ಗಜಲಕ್ಷ್ಮಿಯ ಉಬ್ಬುಶಿಲ್ಪಗಳನ್ನು ಕಾಣುತ್ತೇವೆ. ಪಂಚರಾತ್ರಾಗಮವು ಗಜಲಕ್ಷ್ಮಿಯ ಸ್ವರೂಪವನ್ನು ವಿವರಿಸುತ್ತದೆ.[೯೫] ಇವಳು ಬಿಳಿ ವಸ್ತ್ರವನ್ನು ಧರಿಸಿದವಳು ನಾಲ್ಕು ಕೈಗಳಲ್ಲಿ ಉದ್ದನಾಳವಿರುವ ಕಮಲದ ಹೂವನ್ನು, ಅಮೃತ ಘಟವನ್ನು, ಶ್ರೀಫಲ ಮತ್ತು ಶಂಖವನ್ನು ಧರಿಸಿರುವಳು. ಎಂಟು ದಳಗಳಿರುವ ಕಮಲದ ಮೇಲೆ ಪದ್ಮಾಸನದಲ್ಲಿ ಕುಳಿತಿರುವಳು. ಅವಳ ಹಿಂಬದಿಯಲ್ಲಿ ಶಂಖ, ಪದ್ಮ ನಿಧಿಗಳನ್ನು ಸೂಚಿಸುವ ಅಲಂಕೃತಗೊಂಡ ಗಜಗಳು ಸೊಂಡಿಲನ್ನು ಎತ್ತಿ ಕುಂಭಗಳಿಂದ ಅಭಿಷೇಕ ಮಾಡಿಸುತ್ತಿವೆ. ಇದೇ ಸ್ವರೂಪದ ಗಜಲಕ್ಷ್ಮಿಯ ಉಬ್ಬುಶಿಲ್ಪಗಳನ್ನು ಸಾಮಾನ್ಯವಾಗಿ ಕಾಣುತ್ತೇವೆ.

**ಮಹಿಷಮರ್ಧಿನಿ ಶಿಲ್ಪಗಳು :** ಶಿವನ ಶಕ್ತಿಯಾದ ಪಾರ್ವತಿಯ ಅನೇಕ ರೂಪಗಳಲ್ಲಿ ಮಹಿಷ ಮರ್ಧಿನಿಯೂ ಒಂದು. ಇದು ಪಾರ್ವತಿಯ ಉಗ್ರರೂಪ. ಶಾಸ್ತ್ರಗ್ರಂಥಗಳಲ್ಲಿ ಉಗ್ರರೂಪದ ಯುವತಿಯಂತೆ ರೂಪಗೊಂಡಿರುವಳು. ಒಂದು ಮುಖ ಮತ್ತು ಇಪ್ಪತ್ತು ಕೈಗಳಿಂದಲೂ ಇವಳನ್ನು ಗುರುತಿಸಲಾಗಿದೆ.[೯೬] ಮಹಿಷಮರ್ಧಿನಿಯು ಮಹಿಷಾಸುರನ ಮರ್ಧನಕ್ಕಾಗಿ ಶಿವ, ವಿಷ್ಣು, ಯಮ, ಚಂದ್ರ, ಇಂದ್ರ ಹೀಗೆ ಬೇರೆ ಬೇರೆ ದೇವತೆಗಳ ಒಂದೊಂದು ಶಕ್ತಿಯನ್ನು ಪಡೆದುಕೊಂಡು ಅವತಾರ ಎತ್ತಿರುವಳು.[೯೭] ಶಿಲ್ಪಗಳಲ್ಲಿ ಅವಳ ಪಾದದ ಕೆಳಗೆ ಮಹಿಷನು ಬಿದ್ದಿರುವನು. ಕೋಣದ ತಲೆಯು ನೆಲದ ಮೇಲೆ ಬಿದ್ದಿರುತ್ತದೆ. ಅವರ ಕತ್ತಿನ ಭಾಗದಿಂದ ಮನುಷ್ಯ ಮುಖವು ಹೊರ ಬಂದಿರುತ್ತದೆ. ದೇವಿಯು ಶೂಲದಿಂದ ಅವನನ್ನು ಸಂಹರಿಸುವಂತೆ ಚಿತ್ರಿಸಲಾಗುತ್ತದೆ. ಇಲ್ಲಿ ಮಹಿಷ ರಾಕ್ಷಸನು ಅಜ್ಞಾನ, ದುರಾಗ್ರಹಿ, ಸ್ವಾರ್ಥಮನೋಭಾವವನ್ನು ಸಂಕೇತಿಸುತ್ತಾನೆ.

ಪ್ರಸ್ತುತ ಅಧ್ಯಯನದಲ್ಲಿ ಮಹಿಷಮರ್ಧಿನಿಯ ಶಿಲ್ಪವನ್ನು ಸಾಮಾನ್ಯವಾಗಿ ಎಲ್ಲ ದೇವಾಲಯಗಳಲ್ಲಿ ಕಾಣುತ್ತೇವೆ. ನವರಂಗದಲ್ಲಿ ಮುಖ್ಯ ಗರ್ಭಗೃಹದ ಎಡ ಭಾಗದ ಗೂಡಿನಲ್ಲಿ ಸಾಮಾನ್ಯವಾಗಿ ಈ ಶಿಲ್ಪವನ್ನು ಕಾಣುತ್ತೇವೆ.

## ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳ ಮಹಿಷಮರ್ಧಿನಿ ಶಿಲ್ಪಗಳು

| ಕ್ರ. ಸಂ. | ಊರು | ದೇವಾಲಯ | ಸ್ಥಳ | ಬಳಸಿದ ಕಲ್ಲು | ಗಾತ್ರಎXಅ(ಅಡಿ) | ಕೈಗಳು ಮತ್ತು ಆಯುಧಗಳು | ಶಿಲ್ಪಭಂಗಿ ಮತ್ತು ಅಲಂಕಾರಗಳು | ಕಾಲ |
|---|---|---|---|---|---|---|---|---|
| ೧. | ಅಬ್ಬಲೂರು (ತಾ.ಹಿರೇಕೆರೂರು) | ಬಸವೇಶ್ವರ (ಬ್ರಹ್ಮಲಿಂಗೇಶ್ವರ) | ನವರಂಗದಲ್ಲಿ | ನೀಲಿ ಛಾಯೆಯ ಕಪ್ಪು ಕಲ್ಲು | ೩.೪ X ೨.೨ | ಎಂಟು ಕೈಗಳು ಶಂಖ, ಚಕ್ರ, ಬಿಲ್ಲು, ಬಾಣ, ಶೂಲ, ಖಡ್ಗ, ಗುರಾಣಿ, ಮಹಿಷನ ಕೇಶ (ಛಾಯಾಚಿತ್ರ-೯೪) | ಎಡಗಾಲನ್ನು ಎತ್ತಿ ಕೋಣದ ಹಿಂಭಾಗದ ಮೇಲೆ ಊರಿರುವಳು, ಒಂದು ಕೈಯಿಂದ ಮಹಿಷನ ಕೇಶವನ್ನು ಹಿಡಿದು ಇನ್ನೊಂದು ಕೈಯಲ್ಲಿಯ ಶೂಲದಿಂದ ಕೋಣದ ತಲೆಯನ್ನು ತುಂಡರಿಸಿರುವಳು. ಕೋಣದ ದೇಹದಿಂದ ರಾಕ್ಷಸ ಹೊರಬಂದಿರುವನು. ಕಿರೀಟ, ಕೊರಳಹಾರ, ಕಟಿಬಂಧ, ವಸ್ತ್ರ ಧರಿಸಿರುವಳು | ಕ್ರಿ.ಶ.೧೨ನೇ ಶತಮಾನ, ಕಲ್ಯಾಣ ಚಾಲುಕ್ಯ ಶೈಲಿ |
| ೨. | ಉಪ್ಪಣಸಿ (ತಾ.ಹಾನಗಲ್ಲ) | ಕಲ್ಮೇಶ್ವರ | ನವರಂಗದಲ್ಲಿ | ,, | ೩ X ೧.೧೦ | ಎಂಟು ಕೈಗಳು ಶಂಖ, ಚಕ್ರ, ಬಿಲ್ಲು, ಬಾಣ, ಶೂಲ, ಖಡ್ಗ, ಗುರಾಣಿ, ಮಹಿಷನ ಕೇಶ (ಛಾಯಾಚಿತ್ರ-೯೫) | ಎಡಗಾಲನ್ನು ಕೋಣದ ಹಿಂಭಾಗದ ಮೇಲೆ ಊರಿರುವಳು, ಒಂದು ಕೈಯಿಂದ ಮಹಿಷನ ಕೇಶವನ್ನು ಹಿಡಿದು ಇನ್ನೊಂದು ಕೈಯಲ್ಲಿಯ ಶೂಲದಿಂದ ಅವನನ್ನು ಸಂಹರಿಸಿರುವಳು. ಕಿರೀಟ, ಕೊರಳಹಾರ, ಕಂಕಣ, ಕುಂಡಲ, ಕಟಿಬಂಧ, ವಸ್ತ್ರ ಧರಿಸಿರುವಳು | ಕ್ರಿ.ಶ.೧೧ನೇ ಶತಮಾನ, ಕಲ್ಯಾಣ ಚಾಲುಕ್ಯ ಶೈಲಿ |

# ಮಹಿಷಮರ್ಧಿನಿ ಶಿಲ್ಪಗಳು

| ಕ್ರ.ಸಂ. | ಊರು | ದೇವಾಲಯ | ಸ್ಥಳ | ಬಳಸಿದ ಕಲ್ಲು | ಗಾತ್ರಎXಅ(ಅಡಿ) | ಕೈಗಳು ಮತ್ತು ಆಯುಧಗಳು | ಶಿಲ್ಪಭಂಗಿ ಮತ್ತು ಅಲಂಕಾರಗಳು | ಕಾಲ |
|---|---|---|---|---|---|---|---|---|
| ೩. | ಕಡೂರು (ತಾ.ಹಿರೇಕೆರೂರು) | ಕಲ್ಮೇಶ್ವರ | ಅಂಗಳದಲ್ಲಿ | ನೀಲಿ ಛಾಯೆಯ ಕಪ್ಪು ಕಲ್ಲು | ೨X೧ | ನಾಲ್ಕು ಕೈಗಳಲ್ಲಿ ಶಂಖ, ಚಕ್ರ, ಶೂಲ, ಮಹಿಷನ ಕೇಶವನ್ನು ಹಿಡಿದಿರುವಳು. | ದೇವಿಯು ಎಡಗಾಲನ್ನು ನೆಲಕ್ಕೆ ಊರಿ ಬಲಗಾಲಿನಿಂದ ಕೋಣದ ಹಿಂಭಾಗವನ್ನು ತುಳಿದಿರುವಳು ಒಂದು ಕೈಯಿಂದ ರಾಕ್ಷಸನ ಕೂದಲನ್ನು ಜಗ್ಗಿ ಶೂಲದಿಂದ ಸಂಹರಿಸಿರುವಳು. | ಕ್ರಿ.ಶ.೧೨ನೇ ಶತಮಾನ, ಕಲ್ಯಾಣ ಚಾಲುಕ್ಯ ಶೈಲಿ |
| ೪. | ನಾಗವಂದ (ತಾ.ಹಿರೇಕೆರೂರು) | ಸಿದ್ಧೇಶ್ವರ ಬ್ರಹ್ಮೇಶ್ವರ | ನವರಂಗದಲ್ಲಿ | ,, | ೩X೨ | ಆರು ಕೈಗಳಲ್ಲಿ ಶಂಖ, ಚಕ್ರ, ಬಿಲ್ಲು, ಬಾಣ, ಖಡ್ಗ, ಗದೆ ಧರಿಸಿರುವಳು. (ಛಾಯಾಚಿತ್ರ-೯೬) | ಪಾದದಡಿಯ ಮಹಿಷನನ್ನು ಸಣ್ಣ ಗಾತ್ರದಲ್ಲಿ ಕೊರೆದಿರುವುದರಿಂದ ದೇವಿಯು ನಿಂತ ಭಂಗಿ ಸ್ಪಷ್ಟವಾಗಿ ಕಂಡುಬರುತ್ತದೆ. ಬಲಗಾಲನ್ನು ನೆಲದ ಮೇಲೆಯೂ ಎಡಗಾಲಿನಿಂದ ಮಹಿಷನನ್ನು ಮೆಟ್ಟಿರುವಳು. ಕಿರೀಟ, ಕುಂಡಲ, ಕೊರಳ ಹಾರ, ಉಪವೀತ, ಕಟಿಬಂಧ, ಕಟಿವಸ್ತ್ರ, ಕಡಗ ಧರಿಸಿರುವಳು. | ಕ್ರಿ.ಶ.೧೨ನೇ ಶತಮಾನ, ಕಲ್ಯಾಣ ಚಾಲುಕ್ಯ ಶೈಲಿ |

## ಮಹಿಷಮರ್ಧಿನಿ ಶಿಲ್ಪಗಳು

| ಕ್ರ. ಸಂ | ಊರು | ದೇವಾಲಯ | ಸ್ಥಳ | ಬಳಸಿದ ಕಲ್ಲು | ಗಾತ್ರಎXಅ(ಅಡಿ) | ಕೈಗಳು ಮತ್ತು ಆಯುಧಗಳು | ಶಿಲ್ಪಭಂಗಿ ಮತ್ತು ಅಲಂಕಾರಗಳು | ಕಾಲ |
|---|---|---|---|---|---|---|---|---|
| ೫. | ಮೇದೂರು (ತಾ.ಹಿರೇಕೆರೂರು) | ಸಣ್ಣ ಬಸವೇಶ್ವರ (ಮಾಕಾಳೇಶ್ವರ) | ನವರಂಗದಲ್ಲಿ | ನೀಲಿ ಛಾಯೆಯ ಕಪ್ಪು ಕಲ್ಲು | ೨ X ೧.೧೦ | ಎಂಟು ಕೈಗಳಲ್ಲಿ ಶಂಖ, ಚಕ್ರ, ಬಿಲ್ಲು, ಬಾಣ, ಶೂಲ, ಖಡ್ಗ, ಗುರಾಣಿ, ಮಹಿಷನ ಕೇಶವನ್ನು ಹಿಡಿದಿರುವಳು. | ಗರ್ಜಿಸುತ್ತಿರುವ ಸಿಂಹದ ಮೇಲೆ ಬಲಗಾಲನ್ನು ಇಟ್ಟು ಎಡಗಾಲನ್ನು ನೆಲಕ್ಕೆ ಊರಿ, ಕೋಣನ ದೇಹ ದಿಂದ ಹೊರಬಂದ ರಾಕ್ಷಸನನ್ನು ಶೂಲದಿಂದ ಸಂಹರಿಸುತ್ತಿರುವಳು. ಕಿರೀಟ, ಕುಂಡಲ, ಹಾರಗಳು, ಕಟಿಬಂಧ, ಕಟಿವಸ್ತ್ರ ಧರಿಸಿರುವಳು. | ಕ್ರಿ.ಶ.೧೧ನೇ ಶತಮಾನ, ಕಲ್ಯಾಣ ಚಾಲುಕ್ಯ ಶೈಲಿ |

**ಸಪ್ತ ಮಾತೃಕೆಯರು :** ಪಾರ್ವತಿಯ ವಿವಿಧ ರೂಪಗಳು ಎನಿಸಿಕೊಂಡ ಸಪ್ತ ಮಾತೃಕೆಯರು ಸರ್ವ ಜನರಿಂದ ಪೂಜೆಗೊಂಡವರು. **'ದುರ್ಗಾಸಪ್ತಶತಿ'**ಯಲ್ಲಿ ಹೇಳುವಂತೆ ಕೌಶಿಕ ದುರ್ಗೆಯು ರಕ್ತಬೀಜಾಸುರ ನೊಂದಿಗೆ ಯುದ್ಧಕ್ಕೆ ನಿಂತಾಗ ಅವನನ್ನು ಸಂಹರಿಸಲು ಅವಳಿಂದಲೇ ಏಳು ರೂಪಗಳು ಹೊರಹೊಮ್ಮಿದವು. ಈ ಏಳು ರೂಪಗಳನ್ನು ಸಪ್ತಮಾತೃಕೆಯರು ಎಂದು ಕರೆಯಲಾಗಿದೆ.[೯೮] ಈ ಮಾತೃಕೆಯರ ಮೂರ್ತಿ ಲಕ್ಷಣಗಳನ್ನು ಅಗ್ನಿಪುರಾಣ, ಪೂರ್ವ ಕಾರಣಾಗಮ, ಮತ್ಸ್ಯಪುರಾಣ. ರೂಪಮಂಡನ, ಶ್ರೀತತ್ವನಿಧಿ ಗ್ರಂಥಗಳು ವಿವರಿಸಿವೆ. ಈ ಏಳು ಮಾತೃಕೆಯರು ಕ್ರಮವಾಗಿ ಬ್ರಾಹ್ಮಿ, ವೈಷ್ಣವಿ, ಮಾಹೇಶ್ವರಿ, ಕೌಮಾರಿ, ವರಾಹಿ, ಇಂದ್ರಾಣಿ ಮತ್ತು ಚಾಮುಂಡಿ. ಇವರೆಲ್ಲ ಕ್ರಮವಾಗಿ ಬ್ರಹ್ಮ, ವಿಷ್ಣು, ಶಿವ, ಸ್ಕಂಧ, ವರಾಹ, ಇಂದ್ರನ ಶಕ್ತಿಯ ರೂಪಗಳು.[೯೯] ಸಪ್ತ ಮಾತೃಕೆಯರ ಗೋಪ್ಯವಾದ ಅರ್ಥ ವಿವರಣೆಯನ್ನು ತಂತ್ರಶಾಸ್ತ್ರದಲ್ಲಿ ಮಾಡಲಾಗಿದೆ. ಇವರಿಗೆ ಸಂಬಂಧಿಸಿದ ಆಯುಧಗಳು, ವಾಹನಗಳು, ಶಕ್ತಿಯ ವಿವರಣೆ ಈ ಕೆಳಗಿನಂತಿದೆ.

**ಬ್ರಾಹ್ಮಿ :** ಹಂಸವಾಹನಾರೂಢಳಾಗಿ, ಚತುರ್ಭುಜೆಯಾಗಿದ್ದು ಕ್ರಮವಾಗಿ ಪುಸ್ತಕ, ಅಕ್ಷಮಾಲೆ, ಅಂಕುಶ, ಕಮಂಡಲಗಳನ್ನು ಧರಿಸಿರುವಳು.[೧೦೦] ಇವಳು ಸೃಷ್ಟಿ ಮೂಲದ ನಾದ ದೇವತೆ ಇವಳಿಂದಲೇ ಸೃಷ್ಟಿಯು ಆವಿಷ್ಕರಣಗೊಂಡಿತು.

**ವೈಷ್ಣವಿ :** ಇವಳು ಉಲ್ಲೂಕ (ಗರುಡ) ವಾಹನದ ಮೇಲೆ ಆಸೀನಳಾಗಿರುವಳು. ಚತುರ್ಭುಜೆಯಾಗಿದ್ದು ಚಕ್ರ, ಶಂಖ, ಗದೆ, ಅಭಯಹಸ್ತಗಳನ್ನು ಹೊಂದಿರುವಳು.[೧೦೧] ಇವಳು ಬ್ರಾಹ್ಮಿಯಿಂದ ಸೃಷ್ಟಿಗೊಂಡ ಜಗತ್ತಿಗೆ ಕ್ರಮಬದ್ಧ ರೂಪವನ್ನು, ಅದರ ಮೇಲ್ವಿಚಾರಣೆಯನ್ನು ನೋಡಿಕೊಳ್ಳುವಳು.

**ಮಾಹೇಶ್ವರಿ :** ಇವಳು ವೃಷಭಾರೂಢಳಾಗಿ ಚತುರ್ಭುಜೆಯಾಗಿರುವಳು. ತ್ರಿಶೂಲ, ಡಮರು, ಅಭಯ ಮತ್ತು ಕಪಾಲ ಹಸ್ತಗಳನ್ನು ಹೊಂದಿರುವಳು.[೧೦೨] ಮೂರು ಕಣ್ಣುಗಳನ್ನು ಉಳ್ಳವಳಾಗಿರುವಳು. ಇವಳು ತನ್ನ ಶಕ್ತಿಯಿಂದ ಸೃಷ್ಟಿಗೊಂಡ ಪ್ರತಿ ಜೀವಿಯಲ್ಲೂ ವ್ಯಕ್ತಿತ್ವವನ್ನು ರೂಪಿಸುವಳು.

**ಕೌಮಾರಿ :** ಇವಳು ನವಿಲುವಾಹನಾರೂಢಳು. ಚತುರ್ಭುಜೆಯಾಗಿದ್ದು ವಜ್ರ, ತ್ರಿಶೂಲ, ಈಟಿ, ಅಭಯ ಹಸ್ತಗಳನ್ನು ಹೊಂದಿರುವಳು.[೧೦೩] ಇವಳು ಯವ್ವನ ಸೂಚಿಸುವ ದೇವತೆ. ಬಯಕೆಗಳನ್ನು ಕ್ರಮಕ್ರಮವಾಗಿ ವಿಕಸಿಸುವವಳು.

**ವರಾಹಿ :** ಇವಳು ವರಾಹ ಮುಖದವಳಾಗಿದ್ದು, ಗಂಟೆ, ಚಾಮರ, ಚಕ್ರ, ದಂಡಹಸ್ತೆಯಾಗಿರುವಳು.[೧೦೪] ಇವಳು ಪ್ರತಿ ಜೀವಿಗೂ ತಿನ್ನುವ ಶಕ್ತಿಯನ್ನು, ಪಚನಶಕ್ತಿಯನ್ನು ದಯಪಾಲಿಸುವಳು. ಇವಳ ದಯೆಯಿಂದ ಎಲ್ಲ ಜೀವಿಗಳು ತಮ್ಮ ಆಹಾರವನ್ನು ಪಡೆಯುವರು. ಭೌತಿಕ ಆನಂದವನ್ನು ಹೊಂದುವರು.

**ಇಂದ್ರಾಣಿ :** ಇವಳು ಗಜಾರೂಢೆ, ಚತುರ್ಭುಜೆ, ಪಾಶ, ಅಂಕುಶ, ಅಭಯ, ವರದ ಹಸ್ತೆಯಾಗಿ ರುವಳು.[೧೦೫] ಇವಳು ತನ್ನ ಶಕ್ತಿಯಿಂದ ವಿಶ್ವದ ನಿಯಮವನ್ನು ಪಾಲಿಸುವಳು.

**ಚಾಮುಂಡಾ :** ಇವಳು ಚತುರ್ಭುಜೆಯಾಗಿದ್ದು ಕಪಾಲ, ಕಮಲ, ವರದ, ಅಭಯ ಹಸ್ತಳಾಗಿರುವಳು. ಇವಳು ತನ್ನ ಶಕ್ತಿಯಿಂದ ಜೀವಿಯ ತಿಳುವಳಿಕೆಯನ್ನು ಹೆಚ್ಚಿಸಿ ಅಪಕ್ವವಾದ ಮನಸ್ಸು, ಬುದ್ಧಿ ಅಂತಃಕರಣ ಗಳನ್ನು ಪಕ್ವತೆಯತ್ತ ಒಯ್ಯುವಳು.

ಸಪ್ತಮಾತೃಕೆಯರ ಪಟ್ಟಿಯಲ್ಲಿ ಎಡಬಲದಲ್ಲಿ ವೀರಭದ್ರನನ್ನೂ ಗಣಪತಿಯನ್ನೂ ಇರಿಸಬೇಕೆಂದು ಹೇಳಲಾಗುತ್ತದೆ(ವಿರೇಶ್ವರಶ್ಚ ಮಾತೃಣಾಮಗ್ರತೋ ಭವೇತ್, ಅಂತೇ ತೇಷಾಂ ವಿನಾಯಕಃ ಮಧ್ಯೇ ಚ ಮಾತರಃ ಕಾರ್ಯಾ).[೧೦೬] ಹಾವೇರಿ ಜಿಲ್ಲೆಯ ಎಲ್ಲ ತ್ರಿಕೂಟ ದೇವಾಲಯಗಳಲ್ಲೂ ಸಪ್ತ ಮಾತೃಕೆಯರ ಫಲಕವನ್ನು ಸಾಮಾನ್ಯವಾಗಿ ಕಾಣುತ್ತೇವೆ. ಕೆಲವು ದೇವಾಲಯಗಳಲ್ಲಿ ಈ ಫಲಕವನ್ನು ಇಡುವುದಕ್ಕಾಗಿ ನವರಂಗದ ಬಲಭಾಗದಲ್ಲಿಯ ಕೋಷ್ಟವನ್ನು ಹೆಚ್ಚು ಅಗಲವಾಗಿ ರೂಪಿಸಿರುವುದೂ ಗಮನಕ್ಕೆ ಬರುತ್ತದೆ. ಇನ್ನು ಕೆಲವು ದೇವಾಲಯಗಳಲ್ಲಿ ದುರಸ್ತಿಕಾರ್ಯ ನಡೆದಾಗ ನವರಂಗದ ಗೋಡೆಯಲ್ಲಿ ಇಟ್ಟಿರುವುದು ಕಂಡುಬರುತ್ತದೆ. ಕೆಲವು ಫಲಕಗಳು ಬಿಡಿಯಾಗಿ ನವರಂಗದಲ್ಲಿ, ದೇವಾಲಯದ ಅಂಗಳದಲ್ಲೂ ಕಂಡುಬರುತ್ತವೆ. ಬಹಳಷ್ಟು ಫಲಕಗಳು ಅಸ್ಪಷ್ಟವಾಗಿವೆ. ಇನ್ನು ಕೆಲವು ದುರಸ್ತಿಕಾರ್ಯದಲ್ಲಿ ಗೋಡೆಯಲ್ಲಿ ಭಾಗಶಃ ಮುಚ್ಚಿಹೋಗಿವೆ. ಉತ್ತಮವಾದ ಮೂರು ಫಲಕಗಳನ್ನು ಇಲ್ಲಿ ಕೊಡಲಾಗಿದೆ.

## ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳ ಸಪ್ತಮಾತೃಕಾ ಫಲಕಗಳು

### ೧. ಅಕ್ಕಿಆಲೂರು (ತಾ.ಹಾನಗಲ್ಲ) ಗಾತ್ರ (ಎxಅ) ೦.೯ X ೪.೬ ಅಡಿ

| | ಬ್ರಾಹ್ಮಿ | ಮಹೇಶ್ವರಿ | ಕೌಮಾರಿ | ವೈಷ್ಣವಿ | ವರಾಹಿ | ಇಂದ್ರಾಣಿ | ಚಾಮುಂಡಾ |
|---|---|---|---|---|---|---|---|
| ಕೈಗಳು | ಎರಡು | ಎರಡು | ಎರಡು | ಎರಡು | ಎರಡು | ಎರಡು | ಎರಡು |
| ಮುಖ | ನಾಲ್ಕು | ಒಂದು | ಒಂದು | ಒಂದು | ಒಂದು | ಒಂದು | ಒಂದ |
| ಆಯುಧ | ಮಣಿಮಾಲೆ ಫಲ | ದಂಡ, ಫಲ | ದಂಡ, ಫಲ | ದಂಡ, ಫಲ | ದಂಡ, ಫಲ | ದಂಡ, ಫಲ | ದಂಡ, ಫಲ |
| ವಾಹನ | ಹಂಸ | ನಂದಿ | ನವಿಲು | ಗರುಡ | ಕೋಣ | ಗಜ | ಶವ ಅಥವಾ ಗೂಬೆ |

### ೨. ಕುಳೇನೂರು (ತಾ.ಹಾವೇರಿ) ಕಲ್ಮೇಶ್ವರ ದೇವಾಲಯ, ಗಾತ್ರ (ಎxಅ) ೧x೫ ಅಡಿ (ಛಾಯಾಚಿತ್ರ-೯೭)

| | ಬ್ರಾಹ್ಮಿ | ಮಹೇಶ್ವರಿ | ಕೌಮಾರಿ | ವೈಷ್ಣವಿ | ವರಾಹಿ | ಇಂದ್ರಾಣಿ | ಚಾಮುಂಡಾ |
|---|---|---|---|---|---|---|---|
| ಕೈಗಳು | ನಾಲ್ಕು | ನಾಲ್ಕು | ಎರಡು | ನಾಲ್ಕು | ಎರಡು | ನಾಲ್ಕು | ಎರಡು |
| ಮುಖಗಳು | ನಾಲ್ಕು | ನಾಲ್ಕು | ನಾಲ್ಕು | ಒಂದು | ಒಂದು | ಒಂದು | ಒಂದು |
| ಆಯುಧ | ಮಣಿಹಾರ, ಕುಂಭ | ಬಿಲ್ಲು, ಬಾಣ ಅಭಯ, ಫಲ | ಶಕ್ತಿ, ಅಭಯ | ಶಂಖ, ಚಕ್ರ ಅಭಯ | ದಂಡ, ಫಲ | ವಜ್ರಾಯುಧ | ಈಟಿ, ಕಪಾಲ |
| ವಾಹನ | ಹಂಸ | ನಂದಿ | ನವಿಲು | ಒಂದು ಕೈ ತ್ರುಟಿತ ಗರುಡ | ಕೋಣ | ಆನೆ | ಶವ ಅಥವಾ ಗೂಬೆ |

೩. ಅಂತರವಳ್ಳಿ (ತಾ.ರಾಣೆಬೆನ್ನೂರು) ಕಲ್ಮೇಶ್ವರ ದೇವಾಲಯ, ಗಾತ್ರ (ಎxಅ) ೧ x ೪.೬ ಅಡಿ (ಛಾಯಾಚಿತ್ರ-೯೮)

| | ಬ್ರಾಹ್ಮಿ | ಮಹೇಶ್ವರಿ | ಕೌಮಾರಿ | ವೈಷ್ಣವಿ | ವರಾಹಿ | ಇಂದ್ರಾಣಿ | ಚಾಮುಂಡಾ |
|---|---|---|---|---|---|---|---|
| ಕೈಗಳು | ನಾಲ್ಕು | ನಾಲ್ಕು | ಎರಡು | ನಾಲ್ಕು | ಎರಡು | ನಾಲ್ಕು | ನಾಲ್ಕು |
| ಮುಖಗಳು | ನಾಲ್ಕು | ಒಂದು | ನಾಲ್ಕು | ಒಂದು | ಒಂದು | ಒಂದು | ಒಂದು |
| ಆಯುಧ | ಮಣಿಹಾರ, ಕುಂಭ | ಬಿಲ್ಲು, ಬಾಣ ಅಭಯ | ಶಕ್ತಿ, ಅಭಯ | ಶಂಖ, ಚಕ್ರ ಅಭಯ, ಒಂದು ಕೈ ತೃಟಿತಗೊಂಡಿವೆ | ದಂಡ, ಫಲ | ವಜ್ರಾಯುಧ ಉಳಿದ ಕೈಗಳು ತೃಟಿತಗೊಂಡಿವೆ | ಈಟಿ, ಕಪಾಲ ಉಳಿದ ಕೈಗಳು ತೃಟಿತಗೊಂಡಿವೆ |
| ವಾಹನ | ಹಂಸ | ನಂದಿ | ನವಿಲು | ಗರುಡ | ಕೋಣ | ಆನೆ | ಶವ ಅಥವಾ ಗೂಬೆ |

## ೪.೪. ನಾಗ ಶಿಲ್ಪಗಳು

ನಾಗಾರಾಧನೆ ಭಾರತದ ಅತ್ಯಂತ ಪ್ರಾಚೀನ ಧರ್ಮ.[೧೦೭] ಇದು ಸಿಂಧೂ ಸಂಸ್ಕೃತಿಯಷ್ಟು ಹಿಂದೆ ಹೋಗುತ್ತದೆ.[೧೦೮] ವೇದ, ಉಪನಿಷತ್ತು, ಪುರಾಣಗಳಲ್ಲಿ ನಾಗಗಳು ಆರಾಧನಾ ದೈವಗಳಾಗಿ ಬೆಳೆದು ಬಂದಿರುವದಕ್ಕೆ ಸಾಕಷ್ಟು ಪುರಾವೆಗಳು ದೊರೆಯುತ್ತವೆ.[೧೦೯] ವಿಷ್ಣುವಿನ ಹಾಸಿಗೆಯಾಗಿ, ಶಿವನ ಕೊರಳ ಹಾರವಾಗಿ ಅಲ್ಲದೆ ಅನೇಕ ಸ್ತ್ರೀದೇವತೆಗಳಿಗೂ ನಾಗವು ಸಂಪರ್ಕ ಹೊಂದಿರುವುದಕ್ಕೆ ಅನೇಕ ದೃಷ್ಟಾಂತಗಳಿವೆ. ಷಡ್ದರ್ಶನಗಳ ಪೈಕಿ ಯೋಗ ದರ್ಶನವು ಕುಂಡಲಿನಿಶಕ್ತಿಯು ಸರ್ಪರೂಪದಲ್ಲಿ ಆಧಾರ ಚಕ್ರದಲ್ಲಿ ಸುಪ್ತವಾಗಿರುವುದೆಂದು ಹೇಳುತ್ತದೆ.[೧೧೦] ಜನಪದ ಧರ್ಮವಾಗಿ ಬೆಳೆದು ಬಂದ ನಾಗಾರಾಧನೆಯನ್ನು ಭಾರತದ ಹಿಂದೂ, ಬೌದ್ಧ, ಜೈನ ಮುಂತಾದ ಪ್ರಮುಖ ಧರ್ಮಗಳೂ ಗಾಣಪತ್ಯ, ಶಾಕ್ತ ಮುಂತಾದ ಪಂಥಗಳೂ ತಮ್ಮಲ್ಲಿ ಅಂತರ್ಗತ ಮಾಡಿಕೊಂಡಿವೆ.

ನಾಗಾರಾಧನೆಯ ಮುಖ್ಯ ಉದ್ದೇಶ ಸಂತಾನ ಹಾಗೂ ಸಂಪತ್ಸಮೃದ್ಧಿ, ಕುಷ್ಟರೋಗ, ಕ್ಷಾಮ ನಿವಾರಣೆ, ಮಳೆಗಾಗಿಯೂ ಆಚರಿಸಲಾಗುತ್ತದೆ. ನಾಗನು ಕ್ಷೇತ್ರಪಾಲಕ, ನಿಧಿಕಾವಲುಗಾರ ಹಾಗೂ ಸತ್ತವರ ಆತ್ಮ ಎಂದೂ ತಿಳಿಯಲ್ಪಡುತ್ತದೆ.[೧೧೧] ಈ ಎಲ್ಲ ಕಾರಣಗಳಿಂದ ನಾಗಗಳಿಗೆ ಹರಕೆ ಹೊರುವುದು ಜನಪದದಲ್ಲಿ ಪ್ರಚಲಿತದಲ್ಲಿದೆ. ನಾಗಗಳಿಗೆ ಹರಕೆ ಹೊತ್ತವರು ನಾಗಶಿಲಾವಿಗ್ರಹಗಳನ್ನು ದೇವಾಲಯದ ಆವರಣದಲ್ಲಿ ಅಥವಾ ಮರದಡಿಯಲ್ಲಿ ಪ್ರತಿಷ್ಠಾಪಿಸುತ್ತಾರೆ. ಹೀಗಾಗಿ ಎಲ್ಲ ದೇವಾಲಯಗಳಲ್ಲಿಯೂ ನಾಗಶಿಲ್ಪಗಳನ್ನು ಸಾಮಾನ್ಯವಾಗಿ ಕಾಣುತ್ತೇವೆ. ಈ ವಿಗ್ರಹಗಳು ಒಂದು, ಎರಡು, ಐದು ಇಲ್ಲವೆ ಏಳು ಹೆಡೆಗಳುಳ್ಳವುಗಳಾಗಿರುತ್ತವೆ. ಕೆಲವು ಶಿಲ್ಪಗಳು ಜೋಡಿನಾಗಗಳು ತಳಕು ಹಾಕಿಕೊಂಡಂತೆ ಇರುತ್ತವೆ. ಇನ್ನು ಕೆಲವು ನಾಗನಾಗಿಣಿಯರ ಶಿಲ್ಪಗಳು, ಕೆಳಭಾಗದಲ್ಲಿ ನಾಗರೂಪ, ಮೇಲಿನ ಭಾಗದಲ್ಲಿ ಮಾನವರೂಪದಲ್ಲಿ ಇರುವಂತೆ ಕೊರೆಯಲಾಗಿರುತ್ತವೆ. ಆಕರ್ಷಕವಾದ ಇಂಥ ಶಿಲ್ಪಗಳ ಬಗ್ಗೆ **'ಶಿಲ್ಪರತ್ನ'**ವು ಮಾಹಿತಿಯನ್ನು ಒದಗಿಸುತ್ತದೆ.[೧೧೨] ಇದರ ಪ್ರಕಾರ ಹೊಕ್ಕಳದಿಂದ ಕೆಳಭಾಗದಲ್ಲಿ ಸರ್ಪಾಕೃತಿಯು, ಹೊಕ್ಕಳದಿಂದ ಮೇಲಿನ ಭಾಗವು ಮಾನವಾಕೃತಿಯು ಗಂಡುದೇಹವಾಗಿದ್ದರೆ 'ನಾಗ', ಹೆಣ್ಣು ದೇಹವಾಗಿದ್ದರೆ 'ನಾಗಿಣಿ'. ಇವರ ತಲೆಯ ಹಿಂಭಾಗದಲ್ಲಿ ನಾಗಹೆಡೆಗಳು ಇರುತ್ತವೆ. ನಾಗನ ಕೈಯಲ್ಲಿ ಖಡ್ಗ, ಗುರಾಣಿ ಆಯುಧಗಳು ಇರುತ್ತವೆ.

ಪ್ರಸ್ತುತ ಅಧ್ಯಯನದಲ್ಲಿ ಸಾಕಷ್ಟು ನಾಗಶಿಲ್ಪಗಳನ್ನು ಕಾಣುತ್ತೇವೆ. ಅವು ಉಬ್ಬುಶಿಲ್ಪಗಳಾಗಿಯೂ ಹಾಗೂ ಪೂರ್ತಿಶಿಲ್ಪಗಳಾಗಿಯೂ ಇವೆ. ಮುಖ್ಯವಾದ ಕೆಲವುಗಳನ್ನು ಈ ಕೆಳಗಿನಂತೆ ಗಮನಿಸಬಹುದು.

# ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳ ನಾಗಶಿಲ್ಪಗಳು (ಅರ್ಧಮಾನವಾಕೃತಿಯಲ್ಲಿ)

| ಕ್ರ. ಸಂ. | ಊರು | ದೇವಾಲಯ | ಸ್ಥಳ | ಬಳಸಿದ ಕಲ್ಲು | ಗಾತ್ರ ಎXಅ ಅಡಿ | ಕೈಗಳು ಮತ್ತು ಭಂಗಿ | ಅಲಂಕಾರಗಳು | ಕಾಲ |
|---|---|---|---|---|---|---|---|---|
| ೧. | ಅಬ್ಬಲೂರು (ತಾ.ಹಿರೇಕೆರೂರು) | ಬಸವೇಶ್ವರ (ಬ್ರಹ್ಮಲಿಂಗೇಶ್ವರ) | ಮೂರೂ ಗರ್ಭಗೃಹಗಳ ಬಾಗಿಲವಾಡದ ಶಾಖೆ | ನೀಲಿ ಛಾಯೆಯ ಕಪ್ಪು ಕಲ್ಲು | ೦.೮ x ೦.೬ | ಎರಡು ಕೈಗಳನ್ನು ಹೊಂದಿದ್ದು, ಹಾವಿನಾಕೃತಿಯಲ್ಲೇ ಸಂಧಿಸಿವೆ. | ತಲೆಯ ಹಿಂಭಾಗದಲ್ಲಿ ಸರ್ಪ, ಹೊಕ್ಕಳ ಕೆಳಭಾಗದಲ್ಲಿ ಎರಡು ಹಂತದಲ್ಲಿ ತಳಕು ಹಾಕಿಕೊಂಡಿವೆ. | ಕ್ರಿ.ಶ. ೧೨ ನೇ ಶತಮಾನ, ಕಲ್ಯಾಣ ಚಾಲುಕ್ಯ ಶೈಲಿ |
| ೨. | ನಾಗವಂದ (ತಾ.ಹಿರೇಕೆರೂರು) | ಸಿದ್ದೇಶ್ವರ | ನವರಂಗದ ಕೋಷ್ಟದಲ್ಲಿ | ,, (ಛಾಯಾಚಿತ್ರ-೧೦೦) | ೨.೯ x ೧.೫ | ಎರಡು ಕೈಗಳನ್ನು ಹೊಂದಿದ್ದು, ನಾಗನ ಎಡಗೈ ನಾಗಿಣಿಯ ಸೊಂಟವನ್ನು ಬಳಸಿದೆ. ಬಲಗೈಯಲ್ಲಿ ಪುಷ್ಪವಿದೆ ನಾಗಿಣಿಯ ಬಲಗೈ ನಾಗನ ಭುಜದ ಮೇಲೆ, ಎಡಗೈ ಯಲ್ಲಿ ಪುಷ್ಪ. | ನಾಗನಾಗಿಣಿಯ ತಲೆಯ ಹಿಂದೆ ಏಳು ಹೆಡೆಯ ಸರ್ಪ, ಹೊಕ್ಕಳದಿಂದ ಕೆಳಭಾಗ ಸರ್ಪರೂಪದಲ್ಲಿ ಎರಡು ಹಂತದಲ್ಲಿ ತಳಕು ಹಾಕಿಕೊಂಡಿವೆ. ನಾಗನು ಕಿರೀಟ, ಕೊರಳ ಹಾರ, ನಡುಪಟ್ಟಿ ಧರಿಸಿರುವನು. ನಾಗಿಣಿಯು ಕೇಶಾಲಂಕಾರ, ಹಾರ, ನಡು ಪಟ್ಟಿ ಧರಿಸಿರುವಳು. | ಕ್ರಿ.ಶ. ೧೨ನೇ ಶತಮಾನ, ಕಲ್ಯಾಣ ಚಾಲುಕ್ಯ ಶೈಲಿ |
| ೩. | ಮೇದೂರು (ತಾ.ಹಿರೇಕೆರೂರು) | ಸಣ್ಣ ಬಸವಣ್ಣ (ಮಾಕಾಳೇಶ್ವರ) | ನವರಂಗದ ಕೋಷ್ಟದಲ್ಲಿ | ,, (ಛಾಯಾಚಿತ್ರ-೯೯) | ೨.೧೦ x ೧.೫ | ಎರಡು ಕೈಗಳನ್ನು ಹೊಂದಿದ್ದು, ನಾಗನ ಎಡಗೈ ನಾಗಿಣಿಯ ಸೊಂಟವನ್ನು ಬಳಸಿದೆ. ಬಲಗೈಯಲ್ಲಿ ಪುಷ್ಪವಿದೆ. ನಾಗಿಣಿಯ ಬಲಗೈ ನಾಗನ ಭುಜದ ಮೇಲೆ, ಎಡಗೈಯಲ್ಲಿ ಪುಷ್ಪ | ಇಬ್ಬರ ತಲೆಯ ಹಿಂಭಾಗಕ್ಕೂ ಏಳು ಹೆಡೆಯ ಸರ್ಪ, ಹೊಕ್ಕಳದಿಂದ ಕೆಳಭಾಗ ಸರ್ಪ ರೂಪದಲ್ಲಿ ಒಂದು ಹಂತದಲ್ಲಿ ತಳಕು ಹಾಕಿಕೊಂಡಿವೆ. ನಾಗನು ಕಿರೀಟ, ಕೊರಳ ಹಾರ, ನಡುಪಟ್ಟಿ ಧರಿಸಿರುವನು. ನಾಗಿಣಿಯು ಕೇಶಾಲಂಕಾರ, ಹಾರ, ನಡು ಪಟ್ಟಿ ಧರಿಸಿರುವಳು. | ಕ್ರಿ.ಶ.೧೨ನೇ ಶತಮಾನ, ಕಲ್ಯಾಣ ಚಾಲುಕ್ಯ ಶೈಲಿ |

**ಇತರ ನಾಗಶಿಲ್ಪಗಳು :** ಎರಡು ಹಾವುಗಳು ತಳಕು ಹಾಕಿಕೊಂಡಿರುವಂತೆ ಇರುವ ಶಿಲ್ಪಗಳನ್ನು ಕುಳೇನೂರು ಕಲ್ಮೇಶ್ವರ ಹಾಗೂ ಕಡೂರು ಕಲ್ಮೇಶ್ವರ ದೇವಾಲಯದಲ್ಲಿ ಆರು ಶಿಲ್ಪಗಳನ್ನು ಕಾಣುತ್ತೇವೆ. ಕುಳೇನೂರಿನಲ್ಲಿರುವ ಈ ಶಿಲ್ಪವು ಆಕರ್ಷಕವಾಗಿದೆ. ಏಳು ಹೆಡೆಗಳಿಂದ ಕೂಡಿದ ನಾಗಶಿಲ್ಪವು ಕಲಕೇರಿಯಲ್ಲಿದೆ. ಇದು ನಾಲ್ಕು ಅಡಿ ಎತ್ತರವಾಗಿದೆ. ಅಂತರವಳ್ಳಿ ಕಲ್ಮೇಶ್ವರ ದೇವಾಲಯದಲ್ಲಿರುವ ಐದು ಹೆಡೆಯ ಶಿಲ್ಪವು ನಾಲ್ಕು ಅಡಿ ಎತ್ತರವಾಗಿದ್ದು, ಅದರ ಹೊರಳಿದ ಮೈಮಧ್ಯದಲ್ಲಿ ಪುಷ್ಪಗಳ ಅಲಂಕರಣವನ್ನು ಹೊಂದಿದೆ (ಛಾಯಾಚಿತ್ರ-೧೦೧). ಕಿರಗೇರಿಯಲ್ಲಿಯೂ ಎರಡು ಅಡಿ ಎತ್ತರದ ಐದು ಹೆಡೆಯ ಶಿಲ್ಪವಿದೆ. ಉಳಿದಂತೆ ಒಂದು ಹೆಡೆಯ ನಾಗಶಿಲ್ಪಗಳನ್ನು ಸಾಮಾನ್ಯವಾಗಿ ಕಾಣುತ್ತೇವೆ.

## ೪.೫. ಜೈನ ಶಿಲ್ಪಗಳು

ಭರತ ಖಂಡದ ಅನೇಕ ಧರ್ಮಗಳಂತೆ ಜೈನಧರ್ಮವು ಅನೇಕ ಮಾರ್ಪಾಡುಗಳಿಗೆ ಒಳಗಾಗಿದ್ದರೂ ಜಿನಮೂರ್ತಿಶಿಲ್ಪದಲ್ಲಿ ಮಾತ್ರ ಯಾವುದೇ ರೀತಿಯ ವ್ಯತ್ಯಾಸವನ್ನು ಅಳವಡಿಸಿಕೊಳ್ಳಲಿಲ್ಲ. ಪ್ರಾರಂಭಿಕ ಹಂತದಲ್ಲಿದ್ದ ಮೂರ್ತಿಶಿಲ್ಪದ ರೀತಿಯಲ್ಲಿಯೇ ಕಂಡುಬರುತ್ತದೆ.[೧೧೩] ತೀರ್ಥಂಕರರ ಶಿಲ್ಪರಚನೆಯು ತೀರ ಸರಳವಾಗಿರುತ್ತವೆ. ಈ ಶಿಲ್ಪ ರಚನೆಯಲ್ಲಿ ಧ್ಯಾನಸ್ಥನಾಗಿರುವ ತೀರ್ಥಂಕರನ ಎರಡು ಭಂಗಿಗಳು ಜನಪ್ರಿಯವಾಗಿವೆ. ಮೊದಲನೆಯದು ಕಾಯೋತ್ಸರ್ಗ ಭಂಗಿ. ಎರಡನೆಯದು ಪದ್ಮಾಸನ ಭಂಗಿ. ಇದಕ್ಕೆ ಕಾರಣ ಜೈನಪರಂಪರೆಯಲ್ಲಿ ವರ್ತಮಾನ ಕಾಲದ ೨೪ ತೀರ್ಥಂಕರರಲ್ಲಿ ೨೧ ಜನರು ಕಾಯೋತ್ಸರ್ಗ ಭಂಗಿಯಲ್ಲಿ ನಿಂತು ನಿರ್ವಾಣ ಹೊಂದಿರುವರು. ಉಳಿದ ಮೂವರು ತಿರ್ಥಂಕರರಾದ ಆದಿನಾಥ, ನೇಮಿನಾಥ ಮತ್ತು ಮಹಾವೀರರು ಪದ್ಮಾಸನ ಭಂಗಿಯಲ್ಲಿ ಕುಳಿತು ನಿರ್ವಾಣ ಹೊಂದಿದ್ದಾರೆ.[೧೧೪] ಬೃಹತ್ ಸಂಹಿತೆಯಲ್ಲಿ ಜೈನಮೂರ್ತಿಶಿಲ್ಪದ ಲಕ್ಷಣವನ್ನು ವರ್ಣಿಸಲಾಗಿದೆ.[೧೧೫] ಜಿನಪ್ರತಿಮೆಗಳು ಶಾಂತವೂ ಪ್ರಸನ್ನವೂ ಮಧ್ಯಸ್ಥವೂ ನಾಸಾಗ್ರಸ್ಥಿತವೂ ಇದ್ದು ಶುಭಲಕ್ಷಣಗಳಿಂದ ಕೂಡಿರಬೇಕು. ಅಷ್ಟಪ್ರಾತಿಹಾರ್ಯಗಳಾದ ಅಶೋಕವೃಕ್ಷ, ಪುಷ್ಪವೃಷ್ಟಿ, ದಿವ್ಯಧ್ವನಿ, ಚಾಮರ, ಸಿಂಹಾಸನ, ಪ್ರಭಾಮಂಡಲ, ದುಂದುಭಿ ಮೂರು ಛತ್ರಗಳು ಹಾಗೂ ಯಕ್ಷ ಯಕ್ಷಿಯರ ಸಹಿತವಾಗಿರಬೇಕೆಂದು ಹೇಳಲಾಗಿದೆ.[೧೧೬]

ವೈದಿಕೇತರ ಧರ್ಮವಾದ ಜೈನಧರ್ಮದಲ್ಲಿ ಇಪ್ಪತ್ತನಾಲ್ಕು ತೀರ್ಥಂಕರರನ್ನು ಹೆಸರಿಸಲಾಗಿದೆ. ಈ ಶಿಲ್ಪಗಳನ್ನು ಪೀಠದ ಬಳಿಯ ಲಾಂಛನಗಳಿಂದ ಇಲ್ಲವೆ ಶಾಸನಾದಿ ದೇವತೆಯಿಂದ ಗುರುತಿಸಬಹುದು.[೧೧೭]

೨೪ ತೀರ್ಥಂಕರರ ಮತ್ತು ಅವರ ಯಕ್ಷ ಯಕ್ಷಿಯರ ಲಾಂಛನಗಳು ಈ ಕೆಳಗಿನಂತಿವೆ.[೧೧೮]

| ಕ್ರ.ಸಂ. | ತೀರ್ಥಂಕರರು | ಲಾಂಛನ | ಯಕ್ಷ | ಯಕ್ಷಿಯರು | ನಿರ್ವಾಣ ಸ್ಥಳ |
|---|---|---|---|---|---|
| ೧. | ವೃಷಭನಾಥ | ಎತ್ತು | ಗೋಮುಖ | ಚಕ್ರೇಶ್ವರಿ | ಕೈಲಾಸಪರ್ವತ |
| ೨. | ಅಜಿತನಾಥ | ಆನೆ | ಮಹಾಯಕ್ಷ | ರೋಹಿಣಿ | ಸಮ್ಮೇದ ಶಿಖರ |
| ೩. | ಶಂಭವನಾಥ | ಕುದುರೆ | ತ್ರಿಮುಖ | ಪ್ರಜ್ಞಪ್ತಿ | ಸಮ್ಮೇದ ಶಿಖರ |
| ೪. | ಅಭಿನಂದನ | ಕಪಿ | ಯಕ್ಷೇಶ್ವರ | ವಜ್ರಶೃಂಖಲಾ | ಸಮ್ಮೇದ ಶಿಖರ |
| ೫. | ಸುಮತಿನಾಥ | ಕೋಕ | ತುಂಬರು | ಪುರುಷದತ್ತೆ | ಸಮ್ಮೇದ ಶಿಖರ |
| ೬. | ಪದ್ಮಪ್ರಭ | ಕಮಲ | ಕುಸುಮಾವರಿ | ಮನೋವೇಗೆ | ಸಮ್ಮೇದ ಶಿಖರ |
| ೭. | ಸುಪಾರ್ಶ್ವನಾಥ | ಸ್ವಸ್ತಿಕ | ವರನಂದಿ | ಕಾಲಿ | ಸಮ್ಮೇದ ಶಿಖರ |
| ೮. | ಚಂದ್ರಪ್ರಭ | ಚಂದ್ರ | ವಿಜಯ | ಜ್ವಾಲಮಾಲಿನಿ | ಸಮ್ಮೇದ ಶಿಖರ |
| ೯. | ಪುಷ್ಪದಂತ | ಮಕರ | ಅಜಿತ | ಮಹಾಕಾಲಿ | ಸಮ್ಮೇದ ಶಿಖರ |
| ೧೦. | ಶೀತಲನಾಥ | ಕಲ್ಪವೃಕ್ಷ | ಬ್ರಹ್ಮ | ಮಾನವಿ | ಸಮ್ಮೇದ ಶಿಖರ |
| ೧೧. | ಶ್ರೇಯಾಂಸ | ಗಂಡಕ | ಈಶ್ವರ | ಗೌರಿ | ಸಮ್ಮೇದ ಶಿಖರ |
| ೧೨. | ವಾಸುಪೂಜ್ಯ | ಮಹಿಷ | ಕುಮಾರ | ಗಾಂಧಾರಿ | ಚಂಪಾಪುರಿ |
| ೧೩. | ವಿಮಲನಾಥ | ವರಾಹ | ಷಣ್ಮುಖ | ವೈರೋಟಿ | ಸಮ್ಮೇದ ಶಿಖರ |
| ೧೪. | ಅನಂತನಾಭ | ಭಲ್ಲೂಕ | ಪಾತಾಲ | ಅನಂತಮತಿ | ಸಮ್ಮೇದ ಶಿಖರ |
| ೧೫. | ಧರ್ಮನಾಥ | ವಜ್ರ | ಕಿನ್ನರ | ಮಾನಸಿ | ಸಮ್ಮೇದ ಶಿಖರ |
| ೧೬. | ಶಾಂತಿನಾಥ | ಹರಿಣ | ಗರುಡ | ಮಹಾಮಾನಸಿ | ಸಮ್ಮೇದ ಶಿಖರ |
| ೧೭. | ಕುಂಥುನಾಥ | ಮೇಷ | ಗಂಧರ್ವ | ಜಯೆ | ಸಮ್ಮೇದ ಶಿಖರ |
| ೧೮. | ಅರನಾಥ | ಮತ್ಸ್ಯ | ಮಹೇಂದ್ರ | ವಿಜಯೆ | ಸಮ್ಮೇದ ಶಿಖರ |
| ೧೯. | ಮಲ್ಲಿನಾಥ | ಕಲಶ | ಕುಬೇರ | ಅಪರಾಜಿತೆ | ಸಮ್ಮೇದ ಶಿಖರ |
| ೨೦. | ಮುನಿಸೂತ್ರವ | ಕೂರ್ಮ | ವರುಣ | ಬಹುರೂಪಿಣಿ | ಸಮ್ಮೇದ ಶಿಖರ |
| ೨೧. | ನಮಿನಾಥ | ಇಂದೀವರ | ವಿದ್ಯುತ್ಪ್ರಭ | ಚಾಮುಂಡಿ | ಸಮ್ಮೇದ ಶಿಖರ |
| ೨೨. | ನೇಮಿನಾಥ | ಶಂಕ | ಸರ್ವಾಹ್ಣ | ಕೂಷ್ಮಾಂಡಿನಿ | ಗಿರಿನಾರಪರ್ವತ |
| ೨೩. | ಪಾರ್ಶ್ವನಾಥ | ಸರ್ಪ | ಧರಣೇಂದ್ರ | ಪದ್ಮಾವತಿ | ಸಮ್ಮೇದ ಶಿಖರ |
| ೨೪. | ವರ್ಧಮಾನ | ಸಿಂಹ | ಮಾತಂಗ | ಸಿದ್ಧಾಯಿನಿ | ಪಾವಾಪುರಿ |

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಪಟ್ಟಂತೆ ಜಿನ ಶಿಲ್ಪಗಳು ಬಹು ವಿರಳವಾಗಿ ಕಂಡುಬರುತ್ತವೆ. ಕುಂಚೂರು ಮತ್ತು ರಟ್ಟಿಹಳ್ಳಿ ದೇವಾಲಯಗಳ ಪ್ರಾಂಗಣದಲ್ಲಿ ಭಗ್ನಗೊಂಡ ಜಿನ ಮೂರ್ತಿಗಳನ್ನು ಕಾಣಬಹುದಾಗಿದೆ. ಕುಂಚೂರಿನಲ್ಲಿ ಎರಡು ಜಿನಶಿಲ್ಪಗಳಿದ್ದು ಎರಡೂ ಕಾಯೋತ್ಸರ್ಗ ಭಂಗಿಯಲ್ಲಿವೆ. ಒಂದು ಸ್ತಂಭ ತೋರಣದ ಅಡಿಯಲ್ಲಿ ಏಳು ಹೆಡೆ ಸರ್ಪದೊಂದಿಗೆ ದಿಗಂಬರನಾದ ಪಾರ್ಶ್ವನಾಥ ಶಿಲ್ಪವಿದೆ. ಅವನ ಪಾದದ ಇಕ್ಕೆಲಗಳಲ್ಲಿ ಸ್ತಂಭದಡಿಯಲ್ಲಿ ಧರಣೇಂದ್ರ, ಪದ್ಮಾವತಿ ಯಕ್ಷ-ಯಕ್ಷಿಯರನ್ನು ಕಂಡರಿಸಲಾಗಿದೆ. ಇನ್ನೊಂದು ಶಿಲ್ಪವು ಭಗ್ನಗೊಂಡಿದೆ. ರಟ್ಟಿಹಳ್ಳಿ ಕಡಂಬೇಶ್ವರ ದೇವಾಲಯದ ಪ್ರಾಂಗಣದಲ್ಲಿ ಎರಡು ಜಿನಮೂರ್ತಿಗಳನ್ನು ಕಾಣುತ್ತೇವೆ. ಒಂದು ಕಾಯೋತ್ಸರ್ಗ ಭಂಗಿಯಲ್ಲಿದ್ದು ತಲೆಯ ಹಿಂದಿನ ಸರ್ಪವು ಭಗ್ನಗೊಂಡಿದೆ. ಇನ್ನೊಂದು ಶಿಲ್ಪವು ಪದ್ಮಾಸನ ಭಂಗಿಯಲ್ಲಿದೆ.

## ೪.೬. ಇತರ ಶಿಲ್ಪಗಳು

ಇತರ ಶಿಲ್ಪಗಳ ಅಡಿಯಲ್ಲಿ ಕೆಲವು ಭಿತ್ತಿ ಚಿತ್ರಗಳನ್ನು, ಅಧಿಷ್ಠಾನ, ಕಂಬಗಳ ಮೇಲೆ ಕಂಡುಕೊಳ್ಳುವ ಮಿಥುನ ಶಿಲ್ಪಗಳನ್ನು, ಕಕ್ಷಾಸನದ ಬೆನ್ನ ಮೇಲೆ ಕೊರೆಯಲಾದ ಶಿವಶರಣ-ಶರಣೆಯರ ಉಬ್ಬುಶಿಲ್ಪಗಳನ್ನು ಅಭ್ಯಸಿಸಲಾಗಿದೆ.

ಭಿತ್ತಿ ಮೇಲಿನ ಉಬ್ಬುಶಿಲ್ಪಗಳು : ಹರಳಹಳ್ಳಿ ಸೋಮೇಶ್ವರ ದೇವಾಲಯದ ಭಿತ್ತಿ ಭಾಗದಲ್ಲಿ ಸುಂದರವಾದ ಬಾಲಿಕೆಯರನ್ನು ಕಂಡರಿಸಲಾಗಿದೆ. ಭಿತ್ತಿಯ ಹಿಂಜರಿತ ಭಾಗದಲ್ಲಿ ಖಾಲಿ ಸ್ಥಳವನ್ನು ತುಂಬಲು ಈ ಶಿಲ್ಪಗಳು ಬಹು ಅನುಕೂಲವಾಗಿವೆ. ಭಿತ್ತಿಯ ಕೆಳಭಾಗವನ್ನು ಸ್ತಂಭ ಶಿಖರಗಳು ಅಲಂಕರಿಸಿದರೆ, ಮೇಲಿನ ಭಾಗವನ್ನು ಮುಕ್ಕಾಲು ಅಡಿ ಎತ್ತರದ ತೋರಣ ವಿನ್ಯಾಸದ ಅಡಿಯಲ್ಲಿ ಈ ಬಾಲಿಕೆಯರು ನೃತ್ಯ ಭಂಗಿಯಲ್ಲಿ, ತಾಳ, ತಂತಿವಾದ್ಯ, ಮೃದಂಗಗಳನ್ನು ನುಡಿಸುತ್ತಿರುವಂತೆ, ದರ್ಪಣವನ್ನು ಹಿಡಿದಿರುವಳು. ಕೋತಿಗೆ ಅಂಜಿರುವ ಯುವತಿ ಮುಖ್ಯವಾಗಿ ಮುಖವನ್ನು ಎತ್ತಿ ಶಾಸನವನ್ನು ಬರೆಯುತ್ತಿರುವ ಸುಂದರಿ ಇವರೆಲ್ಲ ಬೇಲೂರಿನ ಶಿಲಾಬಾಲಿಕೆಯನ್ನು ನೆನಪಿಸುತ್ತಾರೆ. ಇವರ ಸಾಲಿನಲ್ಲಿಯೇ ಮೊಣಕಾಲಿನವರೆಗೂ ಗೆಜ್ಜೆ ಕಟ್ಟಿಕೊಂಡು ಕುಣಿಯುತ್ತಿರುವ ಗಂಡಸು, ಶ್ರೀಕೃಷ್ಣ, ಗಣಪತಿ, ಉಬ್ಬುಶಿಲ್ಪಗಳನ್ನು ಕಾಣುತ್ತೇವೆ.

ಶಿವಶರಣ-ಶರಣೆಯರ ಉಬ್ಬುಶಿಲ್ಪಗಳು : ಅಬ್ಬಲೂರಿನ ಸೋಮಲಿಂಗೇಶ್ವರ ದೇವಾಲಯವು ಅಲ್ಲಿಯ ವಾಸ್ತು ವಿನ್ಯಾಸಕ್ಕಿಂತಲು ಅಲ್ಲಿಯ ಉಬ್ಬುಶಿಲ್ಪಗಳಿಂದ ಹೆಚ್ಚು ವಿಶೇಷತೆಯನ್ನು ಪಡೆದಿದೆ. ಅಬ್ಬಲೂರು ಶಾಸನವನ್ನು ಸಂಪಾದಿಸಿ ಪ್ರಕಟಿಸಿರುವ ಜಿ.ಎಫ್. ಫ್ಲೀಟ್ ಅವರು ಈ ಸಂದರ್ಭದಲ್ಲಿ ಹೇಳಿರುವ ಮಾತುಗಳು ಉಲ್ಲೇಖಾರ್ಹವಾಗಿವೆ.[೭೯] 'The temples of Brahmesvara and Somesvara are remarkable not so much for their architectural excellence as for the inscriptions describing the exploits of Ramayya in the former and the sculptural representations pertaining to them as also to other incidents of saiva devotees in the latter.'

ಕಕ್ಷಾಸನದ ಹೊರ ಭಾಗದಲ್ಲಿ ಬೆನ್ನಿನಲ್ಲಿ ಕೆತ್ತಲಾದ ಒಂದು ಶಿಲ್ಪವು ಮೊದಲ ಹಂತದಲ್ಲಿ ಏಕಾಂತ ರಾಮಯ್ಯನು ಶಿವನಿಗೆ ತಲೆಯನ್ನು ಅರ್ಪಿಸುತ್ತಿರುವಂತೆ, ಮಧ್ಯದಲ್ಲಿ ಜೈನರಿಗೂ, ಶೈವರಿಗೂ ಹೊಡೆದಾಟ

ನಡೆದಂತೆ, ಕೊನೆಯಲ್ಲಿ ಶೈವರು ಜಿನನ ತಲೆಯನ್ನು ಒಡೆಯುತ್ತಿರುವಂತೆ ಕೊರೆಯಲಾಗಿದೆ. ಇದರ ಮೇಲೆ ಶಾಸನವಿದ್ದು "ಶ್ರೀ ಬ್ರಹ್ಮೇಶ್ವರದೇವರಲ್ಲಿ ಏಕಾನ್ತದ ರಾಮಯ್ಯಂ ಬಸದಿಯ ಜಿನನೊಡ್ಡವಾಗಿ ತಲೆಯನರಿದು ಹಡೆದ ಟಾವು| ಸಂಕಗಾವುಣ್ಡಂ ಬಸದಿಯನೊಡೆಯಲೀಯದೆ ಆಳುಂ ಕುದುರೆಯನೊಡ್ಡಿರಲು ಏಕಾನ್ತದ ರಾಮಯ್ಯಂ ಕಾದಿ ಗೆಲ್ದು ಜಿನನೊಡೆದು ಲಿಂಗಪ್ರತಿಷ್ಠೆಯಂ ಮಾಡಿದ ಟಾ(ವು)" ಎಂಬ ಶಾಸನವಿದೆ.[೧೨೦]

ಇನ್ನೊಂದು ಶಿಲ್ಪದಲ್ಲಿ ಕುಂಬಾರ ಗುಂಡನನ್ನು ಕಂಡರಿಸಲಾಗಿದೆ. ರುದ್ರಾಕ್ಷಿಯಂತಹ ಸರವನ್ನು ಧರಿಸಿದ ಗುಂಡನ್ನು ಎಡತೊಡೆಯನ್ನು ಎತ್ತಿಕೊಂಡು ಕುಳಿತಂತೆ ಕಂಡರಿಸಲಾಗಿದೆ. ಅದರ ಕೆಳಭಾಗದಲ್ಲಿ "ಕುಂಬಾರ(ಅ) ಗುಂಡನ ಮುಂದೆ ಬಂದಾಡಿದ ನಂಮ ಶಿವನು" ಎಂಬ ಶಾಸನ ಪಾಠವಿದೆ.[೧೨೧]

ಮತ್ತೊಂದು ಶಿಲ್ಪದಲ್ಲಿ ಸಿರಿಯಾಳ ಸೆಟ್ಟಿಯನ್ನು ಚಂಗಳವ್ವೆಯನ್ನು ಕೊರೆಯಲಾಗಿದೆ. ಈ ಶಿಲ್ಪವು ಎರಡು ಭಾಗದಲ್ಲಿದ್ದು ಒಂದರಲ್ಲಿ ಸೆಟ್ಟಿಯು ಕೈಮುಗಿದು ನಿಂತಿರುವನು. ಅವನ ಹಿಂದೆ ಚಂಗಳವ್ವೆ ಬಗಲಲ್ಲಿ ಮಗುವನ್ನು ಎತ್ತಿಕೊಂಡು ನಿಂತಿರುವಳು. ಇನ್ನೊಂದು ಭಾಗದಲ್ಲಿ ಮಾರುವೇಶದಲ್ಲಿ ಶಿವನು ನಿಂತಿರುವನು. ಇದರ ಮೇಲೆ "ಸಿರಿಯಾಳಸೆಟ್ಟಿ ಚಂಗಳವ್ವೆ ದೇವರಿಗೆ ಮಗನನಿಕ್ಕುವ ಟಾವು" ಎಂಬ ಶಾಸನವಿದೆ.[೧೨೨]

ಕಕ್ಷಾಸನದ ಇನ್ನೊಂದೆಡೆ ಜೇಡರ ದಾಸಿಮಯ್ಯನ ಶಿಲ್ಪವಿದ್ದು, ದಾಸಿಮಯ್ಯನು ವಿನಯದಿಂದ ಕೈಮುಗಿದು ನಿಂತಿರುವನು. ಅವನ ಎದುರಿಗೆ ದೇವರು ಉದ್ದನೆಯ ವಸ್ತ್ರವನ್ನು ಹಿಡಿದು ನಿಂತಿರುವನು. ಇದರ ಮೇಲೆ "ಜೇಡರ ದಾಸಿಮಯ್ಯಂಗಳು ದೇವರಿಗೆ ವಸ್ತ್ರವ ಕುಡುವ ಟಾವು" ಎಂದು ಅಕ್ಷರಗಳನ್ನು ಕಂಡರಿಸಲಾಗಿದೆ.[೧೨೩] ನವರಂಗದ ದ್ವಾರದ ಇಕ್ಕೆಲಗಳಲ್ಲಿರುವ ದೊಡ್ಡ ಜಾಲಂದ್ರಗಳ ಕೆಳಭಾಗದಲ್ಲಿಯೂ ಏಕಾಂತ ರಾಮಯ್ಯನ ಪವಾಡದ ದೃಶ್ಯಗಳನ್ನು ಕೊರೆಯಲಾಗಿದೆ.

**ಮಿಥುನ ಶಿಲ್ಪಗಳು :** ದೇವಾಲಯವನ್ನು ಪೂಜನೀಯವಾದ ಸ್ಥಳ ಎಂದು ಭಾವಿಸಲಾಗಿದೆ. ಆದರೆ ಈ ದೇವಾಲಯಗಳ ಹೊರಗೆ ಮತ್ತು ಒಳಗೆ ಮಿಥುನ ಶಿಲ್ಪಗಳು ಏಕಿರಬೇಕು ಈ ಶಿಲ್ಪಗಳು ಅಶ್ಲೀಲವೆ? ಹಿಂದಿನವರು ಅನುಸರಿಸುತ್ತ ಬಂದಿರುವ ಈ ರೂಢಿಯ ಹಿನ್ನೆಲೆ ಏನು ಇದಕ್ಕೆ ಏನಾದರೂ ಅರ್ಥವಿದೆಯೇ ಮನುಷ್ಯರ ಎಲ್ಲ ಕ್ರಿಯೆಗಳನ್ನು ದೇವರಿಗೂ ಆರೋಪಿಸಬಹುದೆ ಎಂಬ ಹಲವಾರು ಪ್ರಶ್ನೆಗಳು ಹುಟ್ಟಿ ಕೊಳ್ಳುವುದು ಸಹಜ. ಈ ಸಂದರ್ಭದಲ್ಲಿ ದೇವಾಂಗನ ದೇಸಾಯಿ ಅವರ 'ಎರೊಟಿಕ್ ಸ್ಕಲ್ಪಚರ್ ಆಫ್ ಇಂಡಿಯಾ' ಎಂಬ ಗ್ರಂಥವು ಉಲ್ಲೇಖಾರ್ಹವಾಗಿದೆ.

ಮಿಥುನ ಶಿಲ್ಪಗಳನ್ನು ಮೌರ್ಯ, ಗಾಂಧಾರ, ಕುಶಾನ, ಗುಪ್ತರ ಕಾಲದಿಂದಲೂ ಕೆತ್ತುವ ವಾಡಿಕೆ ಇತ್ತೆಂದು, ಹತ್ತನೇ ಶತಮಾನದ ಈಚೆಗೆ ಇಂತಹ ಶಿಲ್ಪಗಳನ್ನು ಕೊರೆಯುವುದು ಜಾಸ್ತಿಯಾಗಿ ಕಟ್ಟಡಗಳಲ್ಲಿ ಸೇರಿಸುವುದು ಪದ್ಧತಿಯಾಯಿತೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.[೧೨೪] ಪ್ರಸಿದ್ಧ ದೇವಾಲಯಗಳಾದ ಖಜರಾವೊ, ಕೊನಾರ್ಕ್, ಹಾಗೂ ಭುವನೇಶ್ವರ ದೇವಾಲಯಗಳಲ್ಲಿಯೂ ಇಂಥ ಶಿಲ್ಪಗಳು ಕಂಡುಬರುತ್ತವೆ.[೧೨೫] ಸಮರಾಂಗಣ ಸೂತ್ರಧಾರ, ಬೃಹತ್‌ಸಂಹಿತಾ ಹಾಗೂ ಅಗ್ನಿಪುರಾಣಗಳಲ್ಲಿ ಮಿಥುನ ಶಿಲ್ಪಗಳ ಉಲ್ಲೇಖವಿದೆ. ಇವು ದೇವಾಲಯಗಳ ಅಧಿಷ್ಠಾನದಲ್ಲಿ ಹಾಗೂ ದ್ವಾರಶಾಖೆಗಳಲ್ಲಿ ಅಲಂಕರಣೆ ಹಾಗೂ ಸೌಂದರ್ಯಕ್ಕಾಗಿ

ಮಾತ್ರ ಮೀಸಲಾಗಿದೆ ಎಂದು ಮೇಲಿನ ಗ್ರಂಥಗಳು ಉಲ್ಲೇಖಿಸುತ್ತವೆ.[೨೯] ಇಂಥ ಶಿಲ್ಪಗಳನ್ನು ಅಳವಡಿಸುವಲ್ಲಿ ಈ ಕೆಳಗಿನಂತೆ ಕಾರಣಗಳಿರಬಹುದೆಂದು ಊಹಿಸಬಹುದು.

೧. ಆನಂದದ ಅಸಂಖ್ಯೆಯ ರೂಪಗಳಲ್ಲಿ ಸರ್ವವಿಧಿತವಾದದ್ದು, ಸರ್ವಪ್ರಿಯವಾದದ್ದು, ಇದೇ ಸೃಷ್ಟಿಯ ಮೂಲಶಕ್ತಿ. ಉಪನಿಷತ್‌ಗಳು ಅದರ ಮಹಿಮೆಯನ್ನು ಸ್ಮರಿಸುತ್ತವೆ.

೨. ಅದು ಒಂದು ಜಗತ್‌ಧರ್ಮ, ಪವಿತ್ರವಾದದ್ದು

೩. ಮನುಷ್ಯನ ದೃಷ್ಟಿಯಲ್ಲಿ ಒಂದು ವಿಲಕ್ಷಣವಾದ ಶಕ್ತಿ ಇರುತ್ತದೆ. ಕೆಲವು ದೃಷ್ಟಿಗಳು ಬಲುಕ್ರೂರ ಮತ್ತು ಹಾನಿಕಾರಕವಾದವುಗಳು. ಅಂತಹ ದೃಷ್ಟಿಗಳು ಮಿಥುನ ಶಿಲ್ಪಗಳ ಕಡೆ ತಿರುಗಿ ದೇವಾಲಯಕ್ಕೆ ಹಾನಿ ಬರದಂತೆ ಮಾಡುವ ಉದ್ದೇಶವಿರಬೇಕು.

೪. ದೇವಸ್ಥಾನಕ್ಕೆ ಹೋಗುವವರ ದೃಷ್ಟಿಯನ್ನು ಆ ಕಡೆ ಸೆಳೆದು ಮನಸ್ಸನ್ನು ಕಲಕುವಂತೆ ಮಾಡಿ ನಿಜವಾದ ಭಕ್ತಿ ಉಳ್ಳವನನ್ನು ಕಂಡುಹಿಡಿಯಲು ಇದು ಭಗವಂತನ ಆಜ್ಞಾನುಸಾರ ಒಂದು ಮಾರ್ಗವೆಂದು ಇರಬಹುದು.

೫. ಈ ವಿಷಯವನ್ನು ಪಾಮರರಿಗೆ ತಿಳಿಸಿಕೊಟ್ಟು ಇವರನ್ನು ಉದ್ಧಾರ ಮಾಡುವ ದೃಷ್ಟಿಯಿಂದಲೇ ಕೆತ್ತಲ್ಪಟ್ಟಿರುತ್ತವೆ ಎಂಬ ಅಭಿಪ್ರಾಯವಿದೆ.

ಪ್ರಸ್ತುತ ಅಧ್ಯಯನದಲ್ಲಿ ಮೇದೂರು, ಅಬ್ಬಲೂರಿನ ದೇವಾಲಯಗಳಲ್ಲಿ ಮಿಥುನಶಿಲ್ಪಗಳನ್ನು ಕಾಣುತ್ತೇವೆ(ಛಾಯಾಚಿತ್ರ-೧೦೨). ಮೇದೂರಿನ ಮಾಕಾಳೇಶ್ವರ ದೇವಾಲಯದಲ್ಲಿ ನವರಂಗದ ನಾಲ್ಕು ಕಂಬಗಳ ದಂಡಭಾಗದ ಪಟ್ಟಿಕೆಯಲ್ಲಿ ಕೊರೆಯಲಾಗಿದೆ. ಅಬ್ಬಲೂರಿನ ಬ್ರಹ್ಮೇಶ್ವರ ದೇವಾಲಯದ ಅಧಿಷ್ಠಾನ ಭಾಗದ 'ಗಳ' ಭಾಗದಲ್ಲಿ ಇಂಥ ಶಿಲ್ಪಗಳನ್ನು ಕಾಣುತ್ತೇವೆ.

ಈ ರೀತಿಯಾಗಿ ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳಲ್ಲಿ ಶಿಲ್ಪಗಳನ್ನು ಕಾಣುತ್ತೇವೆ. ಇವುಗಳಲ್ಲಿ ಬಹುಪಾಲು ಶಿಲ್ಪಗಳು ಕಲ್ಯಾಣ ಚಾಲುಕ್ಯ ಶೈಲಿಯನ್ನು ಒಳಗೊಂಡಿವೆ. ಅಬ್ಬಲೂರಿನ ವಿಷ್ಣುಶಿಲ್ಪ ಮತ್ತು ನರಸಿಂಹಪುರದ ನರಸಿಂಹ ಶಿಲ್ಪಗಳು ಕ್ರಮವಾಗಿ ಕದಂಬ ಮತ್ತು ವಿಜಯನಗರ ಶೈಲಿಯಲ್ಲಿ ಇರುವುದು ವಿಶೇಷ. ಜಿಲ್ಲೆಯಲ್ಲಿ ಲಭ್ಯವಾದ ಮೂವತ್ತೂ ತ್ರಿಕೂಟ ದೇವಾಲಯಗಳು ಶೈವಧರ್ಮವನ್ನು ಪ್ರತಿನಿಧಿಸುತ್ತವೆ. ಹೀಗಾಗಿ ಲಿಂಗಗಳು ಬಹುಸಂಖ್ಯೆಯಲ್ಲಿ ಕಂಡುಬರುತ್ತವೆ. ವಿಷ್ಣು, ಸೂರ್ಯ ಹಾಗೂ ಉಮಾಮಹೇಶ್ವರ ಶಿಲ್ಪಗಳು ಬೆರಳೆಣಿಕೆಯಷ್ಟು ಇವೆ. ಸ್ಕಂದ ಹಾಗೂ ರತಿಮನ್ಮಥ ಶಿಲ್ಪಗಳು ಬಹು ಅಪರೂಪ. ಸ್ತ್ರೀದೇವತೆಗಳಲ್ಲಿ ಮಹಿಷಮರ್ಧಿನಿ ಹಾಗೂ ಸರಸ್ವತಿಯ ಶಿಲ್ಪಗಳನ್ನು ಹೆಚ್ಚು ಕಾಣುತ್ತೇವೆ. ಗಣಪತಿ, ನಂದಿ, ಸಪ್ತಮಾತೃಕಾಫಲಕ ಹಾಗೂ ನಾಗಶಿಲ್ಪಗಳು ಸಾಮಾನ್ಯವಾಗಿ ಎಲ್ಲಾ ದೇವಾಲಯಗಳಲ್ಲೂ ಕಂಡುಬರುತ್ತವೆ. ಉಬ್ಬುಶಿಲ್ಪಗಳಲ್ಲಿ ಅಬ್ಬಲೂರಿನ ಸೋಮೇಶ್ವರ ದೇವಾಲಯದ ಕಕ್ಷಾಸನದ ಬೆನ್ನಿನಲ್ಲಿ ಮತ್ತು ಜಾಲಂಧ್ರಗಳ ಕೆಳಭಾಗದಲ್ಲಿ ಕೊರೆಯಲಾದ ಶರಣ, ಶರಣೆಯರ ಹಾಗೂ ಏಕಾಂತರಾಮಯ್ಯನ ಶಿರಸ್‌ಪವಾಡವನ್ನು ಹೇಳುವ ಉಬ್ಬುಶಿಲ್ಪಗಳು ಬಹು ಗಮನಾರ್ಹವಾಗಿವೆ.

**ಅಡಿಟಿಪ್ಪಣಿ**

೧. ಮಾಥೂರ, ಎನ್.ಎಲ್., ಸ್ಕಲ್ಪಚರ್ ಇನ್ ಇಂಡಿಯಾ ಇಟ್ಸ್ ಹಿಸ್ಟರಿ ಆ್ಯಂಡ್ ಆರ್ಟ್, ಪು.೧

೨. ಹಾವೆಲ್, ಇ.ಬಿ., ಇಂಡಿಯನ್ ಸ್ಕಲ್ಪಚರ್ ಅಂಡ್ ಪೇಂಟಿಂಗ್ ವಿತ್ ಆ್ಯನ್ ಎಕ್ಸ್‌ಪ್ಲನೇಷನ್ ಆಫ್ ದೇರ್ಸ್ ಮೋಟಿವ್ಸ್ ಆ್ಯಂಡ್ ಐಡಿಯಾಸ್, ಪು.೧೪೩, ೧೪೫

೩. ಜ್ಞಾನಾನಂದ, ಜಿ., ಶಿಲ್ಪಾದರ್ಶ, ಸಂ.೧, ಪು.೩

೪. ಹಾವೆಲ್, ಇ.ಬಿ., ಪೂರ್ವೋಕ್ತ, ಪು.೭

೫. ಬೆನ್ನಟ್ಟ್ ಟಿ.ಬಿ., ದ ರಿಲೇಶನ್ ಆಫ್ ಸ್ಕಲ್ಪಚರ್ ಟು ಆರ್ಕಿಟೆಕ್ಚರ್, ಪು.೧೧

೬. ಶಿವರಾಮಮೂರ್ತಿ, ಸಿ., ಇಂಡಿಯನ್ ಆರ್ಟ್, ಸಂ.೧, ಪು.೮

೭. ಜಾನ್ ಎಚ್. ಮಾರ್ಷಲ್, ಮೊಹೆಂಜೋದಾರೋ ಆ್ಯಂಡ್ ದಿ ಇಂಡಸ್ ಸಿವಿಲಿಝೇಶನ್, ಪು.೩೭

೮. ಸುಂದರ, ಅ., ಇಂಡಸ್-ಸರಸ್ವತಿ ಸಿವಿಲಿಝೇಶನ್: ಅರ್ಲಿ ಶೈವ ಕಲ್ಟ್, ಶ್ರೀ ಪುಷ್ಪಾಂಜಲಿ, (ಡಾ. ಸಿ.ಆರ್.ಶ್ರೀನಿವಾಸನ್ ಸಂಸ್ಮರಣ ಗ್ರಂಥ) (ಸಂ) ರಮೇಶ, ಕೆ.ವಿ. ಮತ್ತು ಇತರರು, ಪು.೧೩-೨೨

೯. ಮಾಥೂರ ಎನ್.ಎಲ್., ಪೂರ್ವೋಕ್ತ, ಪು.೯

೧೦. ತಿಪ್ಪೇರುದ್ರಸ್ವಾಮಿ, ಎಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು.೭೨೮

೧೧. ಜ್ಞಾನಾನಂದ, ಜಿ., ಪೂರ್ವೋಕ್ತ, ಪು.೬೯

೧೨. ಎಡಿತ್ ತೊಮೊರಿ, ಹಿಸ್ಟರಿ ಆಫ್ ಫೈನ್ ಆರ್ಟ್ಸ್ ಇನ್ ಇಂಡಿಯಾ ಆ್ಯಂಡ್ ದ ವೆಸ್ಟ್, ಪು.೧೭೨

೧೩. ಐತಿಹಾಸಿಕ ಪುರುಷನಾದ ಬುದ್ಧನು ಬೋಧಿಸಿದ ಧರ್ಮಕ್ಕೆ 'ಹೀನಯಾನ'ವೆಂಬ ಹೆಸರು ಬಂದಿತು. ಈ ಧರ್ಮದಲ್ಲಿ ವ್ಯಕ್ತಿಯ ಶಮ, ದಮ, ಕರುಣೆ ಮುಂತಾದ ಶೀಲಗಳನ್ನು ಒತ್ತಿ ಹೇಳಿದರೂ, ವ್ಯಕ್ತಿ ತನ್ನ ಸ್ವಂತ ಮೋಕ್ಷವನ್ನು ಪಡೆಯುವ ವಿಷಯದಲ್ಲಿ ಈ ಧರ್ಮದ ಆಕ್ಷೇಪಣೆಯೇನೂ ಇಲ್ಲ. ಇದರ ಪ್ರಕಾರ ಗೌತಮಬುದ್ಧನು ಈ ಜನ್ಮದಲ್ಲೇ ಮೋಕ್ಷವನ್ನು ಪಡೆದನು. 'ಹೀನಯಾನ' ಎಂದರೆ ಒಬ್ಬನೇ ಹೋಗುವ ಚಿಕ್ಕವಾಹನ. ಈ ಪಂಥದವರ ತತ್ವವನ್ನು ಒಪ್ಪದೆ ಕನಿಷ್ಕನ ಕಾಲದಲ್ಲಿ (ಕ್ರಿ.ಶ.೧-೨ ನೇ ಶತಮಾನ) 'ಮಾಹಾಯಾನ' ಎಂಬ ಹೊಸಪಂಥ ಹುಟ್ಟಿಕೊಂಡಿತು. ಈ ಗ್ರಂಥಗಳ ಪ್ರಕಾರ ಬೋಧಿಸತ್ವನು ಜಗತ್ತಿನ ಪ್ರತಿ ಜೀವಿಯೂ ದುಃಖದಿಂದ ಬಿಡುಗಡೆ ಹೊಂದುವ ತನಕ ಮೋಕ್ಷವೇ ಬೇಡವೆಂದು ನಿರ್ಧರಿಸುತ್ತಾನೆ. ಮಹಾಯಾನ ಎಂದರೆ ಹಲವರನ್ನು ಒಯ್ಯುವ ದೊಡ್ಡವಾಹನ. ಹೀಗೆ ಮಹಾಯಾನದಲ್ಲಿ ಐತಿಹಾಸಿಕ ಪುರುಷ ಗೌತಮಬುದ್ಧನನ್ನು ಅವತಾರಪುರುಷನೆಂದು ಪರಿಗಣಿಸಿ ಅವನಿಗೆ ದೇವತ್ವದ ಪಟ್ಟವನ್ನು ಕಟ್ಟಲಾಯಿತು.

೧೪. ಆನಂದ ಕುಮಾರಸ್ವಾಮಿ, ದಿ ಹಿಸ್ಟರಿ ಆಫ್ ಇಂಡಿಯಾ ಆ್ಯಂಡ್ ಇಂಡೋನೇಷಿಯಾ, ಪು. ೨೭, ಹಾಗೂ ಎಡಿತ್ ತೊಮೊರಿ, ಪೂರ್ವೋಕ್ತ, ಪು.೧೮೧-೧೮೨

೧೫. ನಾಗರಾಜರಾವ್, ಎಂ.ಎಸ್., ಸ್ಕಲ್ಪಚರಲ್ ಆರ್ಟ್ ಇನ್ ಸನ್ನತಿ, ಕುಸುಮಾಂಜಲಿ (ಡಾ. ಸಿ.ಶಿವರಾಮಮೂರ್ತಿ ಸಂಸ್ಮರಣ ಗ್ರಂಥ), ಪು.೯೫

೧೬. ಲಕ್ಷ್ಮಣ ತೆಲಗಾವಿ, ಮೌರ್ಯ ಮತ್ತು ಶಾತವಾಹನ ಯುಗ, ಪು.೧೭೦

೧೭. ಕ.ಚ., ಸಂ. ೧, ಪು.೩೨೧

೧೮. ಅದೇ, ಪು.೩೨೨

೧೯. ಸುಂದರ, ಅ., ಅರ್ಲಿ ಸ್ಕಲ್ಪಚರಲ್ ಫಾರ್ಮ್ ಆಫ್ ಗಣೇಶ ಇನ್ ನಾರ್ತ್ ಕರ್ನಾಟಕ, ಕುಸುಮಾಂಜಲಿ (ಡಾ.ಸಿ.ಶಿವರಾಮಮೂರ್ತಿ ಸಂಸ್ಮರಣ ಗ್ರಂಥ) (ಸಂ) ನಾಗರಾಜರಾವ್, ಎಂ.ಎಸ್., ಪು.೨೫೫-೬೫

೨೦. ಕುಲಕರ್ಣಿ, ಆರ್.ಎಚ್., ಎ ಪ್ರಿ ಚಾಲುಕ್ಯ ಟೆರ್‍ರಾಕೋಟ್ ನರಸಿಂಹ, ಗೌರವಮ್ (ಡಾ.ಬಿ.ಕೆ.ಗುರುರಾಜ ರಾವ್ ಸಂಸ್ಮರಣ ಗ್ರಂಥ), (ಸಂ) ರಮೇಶ, ಕೆ.ವಿ. ಮತ್ತು ಇತರರು, ಪು. ೪೨೬-೨೯, ಸುಂದರ, ಅ., ಪ್ರಾಚೀನ ಕರ್ನಾಟಕದಲ್ಲಿ ನರಸಿಂಹ ಶಿಲ್ಪದ ವಿಕಾಸ ವಿವೇಚನೆ, ಸಂಶೋಧನೆ,(ಡಾ. ಚಿದಾನಂದಮೂರ್ತಿ ಅಭಿನಂದನಾ ಗ್ರಂಥ) (ಸಂ) ಲಕ್ಷ್ಮಣ ತೆಲಗಾವಿ, ಪು.೨೮೪-೯೩

೨೧. ಸುಂದರ, ಅ. 'ಆ್ಯನ್ ಅರ್ಲಿ ಕದಂಬ ಮಹಿಷಮರ್ದಿನಿ ಫ್ರಂ ದೇವಿಹಾಳ್' ಇಂಡಿಯನ್ ಹಿಸ್ಟರಿ ಆ್ಯಂಡ್ ಎಫಿಗ್ರಾಫಿ (ಡಾ.ಜಿ.ಎಸ್.ಗಾಯ್ ಅಭಿನಂದನಾ ಗ್ರಂಥ). (ಸಂ) ರಮೇಶ್ ಕೆ.ವಿ.ಮತ್ತು ಇತರರು ಪು.೨೨೨-೨೨೪

೨೨. ಶ್ರೀಕಂಠಶಾಸ್ತ್ರಿ ಎಸ್., ಹೊಯ್ಸಳ ವಾಸ್ತುಶಿಲ್ಪ, ಪು.೮

೨೩. ರಾಮಚಂದ್ರರಾವ್ ಎಸ್.ಕೆ., ಮೂರ್ತಿಶಿಲ್ಪ ನೆಲೆ-ಹಿನ್ನೆಲೆ, ಪು.೪೯

೨೪. ಜ್ಞಾನಾನಂದ ಜಿ., ಪೂರ್ವೋಕ್ತ, ಪು.೧೭೦

೨೫. ಅದೇ.

೨೬. ಸರ್ವಮೂಲ ಗ್ರಂಥಗಳು, ಸಂ.೭, ಶ್ರೀಮದಾನಂದತೀರ್ಥಭಗವತ್ಪಾದ ವಿರಚಿತ, ಪ.ಪೂ.ಶ್ರೀವಿಶ್ವೇಶತೀರ್ಥ ಶ್ರೀಪಾದರ ಕನ್ನಡ ಸಾರ ಸಹಿತ, ಪು.೧೫೭

೨೭. ಜ್ಞಾನಾನಂದ ಜಿ., ಪೂರ್ವೋಕ್ತ, ಪು.೧೭೨

೨೮. ಜಾನ್ ಮಾರ್ಷಲ್, ಪೂರ್ವೋಕ್ತ, ಪ್ರೀಫೇಸ್ ಪು.vii

"Indeed the only explanation applicable to them all is that they were sacred objects of some sorts, the larger ones serving as oniconic agalamala for cult purpose, the smaller as amulets to be carried on the person just as miniature lingas are carried by shaivites to day"

೨೯. ಸುಂದರ ಅ., ಇಂಡಸ್ ಸರಸ್ವತಿ ಸಿವಿಲಿಝೇಶನ್ ಅರ್ಲಿ ಶೈವ ಕಲ್ಟ್, ಪೂರ್ವೋಕ್ತ, ಪು.೧೫

೩೦. ಎಸ್.ಆರ್.ರಾವ್ ಅವರು ಮುದ್ರಿಕೆಯ ಮೇಲಿನ ಯೋಗಿಯ ಬಗ್ಗೆ "The Mohenjodaro seal depciting a 'three faced god in yogic posture on a low stool or altar and surrounded by animals'... is not Pasupati or Rudra. He is Agni in three forms..." ಎಂದು ಹೇಳಿರುವರು. ನೋಡಿ: ಸುಂದರ ಅ., ಇಂಡಸ್ ಸರಸ್ವತಿ ಸಿವಿಲಿಝೇಶನ್ ಅರ್ಲಿ ಶೈವ ಕಲ್ಟ್, ಪೂರ್ವೋಕ್ತ, ಪು.೧೭

೩೧. ಅದೇ.

೩೨. ರಾಮಚಂದ್ರರಾವ್ ಎಸ್.ಕೆ., ಪೂರ್ವೋಕ್ತ, ಪು.೧೦೨

೩೩. ಭಂಡಾರಕರ್ ಆರ್.ಜಿ., ವೈಷ್ಣವಿಸಮ್, ಶೈವಿಸಮ್, ಆ್ಯಂಡ್ ಮೈನರ್ ರಿಲಿಜಸ್ ಸಿಸ್ಟಮ್ಸ್, ಪು.೧೪೭

೩೪. ಗೋಪಿನಾಥರಾವ್ ಟಿ.ಎ., ಎಲಿಮೆಂಟ್ಸ್ ಆಫ್ ಹಿಂದೂ ಐಕನೋಗ್ರಫಿ, ಸಂ.೧, ಪು.೪೫

೩೫. ಅದೇ, ಪು.೪೫-೬೭

೩೬. ರಾಮಚಂದ್ರರಾವ್ ಎಸ್.ಕೆ., ಪೂರ್ವೋಕ್ತ, ಪು.೯೬-೯೭ರಲ್ಲಿ ಗಣಪತಿಯ ರೂಪ ಅವಾಸ್ತವಿಕವಾಗಿ ತೋರಿದರೂ, ತಾತ್ವಿಕ ಹಿನ್ನೆಲೆಯಲ್ಲಿ ಗಣಪತಿಯು ಪಂಚಭೂತಗಳನ್ನೊಳಗೊಂಡ ವಿಶಿಷ್ಟ ಶಕ್ತಿಯೆಂದು ಕಲ್ಪನೆಯಿದೆ. ಗಣಪತಿಯು ವಕ್ರತುಂಡ ಎಲ್ಲ ವೇದಗಳ ನೆಲೆ, ಎಲ್ಲ ಸಾಧನೆಗಳ ಗುರಿಯಾದ ಪ್ರಣವದ ಪ್ರತೀಕ; ಅವನ ಮಹೋದರವು ಬ್ರಹ್ಮಾಂಡ ಗರ್ಭ, ಅದನ್ನು ಸುತ್ತುವರಿದು ಕಟ್ಟಿ ಹಿಡಿದಿರುವ ಉದರಬಂಧ ಕುಂಡಲಿನೀಶಕ್ತಿ, ಹಾಗೆಂದೇ ಅದು ಹಾವು. ಎಡೆಬಿಡದೆ ಸುಳಿದಾಡುವ ಇಲಿ ರಜಸ್ಸಿನ ಸಂಕೇತ; ರಾತ್ರಿಯಲ್ಲಿಯೇ ಅದರ ಅಲೆದಾಟ ವಾದುದರಿಂದ ತಮಸ್ಸನ್ನೂ ಸೂಚಿಸುತ್ತದೆ. ಈ ಎರಡೂ ಗುಣಗಳನ್ನು ಮೆಟ್ಟಿನಿಂತ ಗಣಪತಿ ಸತ್ವೋತ್ಕರ್ಷವನ್ನು ಸಂಕೇತಿಸುತ್ತಾನೆ. ಕೈಯಲ್ಲಿಯ ಮೋದಕ ಮಹಾಬುದ್ಧಿಯ ಸಂಕೇತ, ಅಂಕುಶ ಅಜ್ಞಾನವೆಂಬ ಮದದಾನೆಯನ್ನು ನಿಗ್ರಹಿಸುವ ಜ್ಞಾನಾಂಕುಶ ಎಂದು ರಾಮಚಂದ್ರರಾವ್ ಅವರು ವಿವರಿಸಿದ್ದಾರೆ.

೩೭. ವಾತುಲಶುದ್ಧಾಗಮ- ಶ್ಲೋಕ ೫೪, ಪು.೨೨

೩೮. ಕೃಷ್ಣಶಾಸ್ತ್ರಿ ಎಚ್., ಸೌತ್ ಇಂಡಿಯನ್ ಇಮೇಜಸ್ ಆಫ್ ಗಾಡ್ಸ್ ಆ್ಯಂಡ್ ಗಾಡೆಸಸ್, ಪು.೭೩

೩೯. ಆಚಾರ್ಯ ಪಿ.ಕೆ., ಪೂರ್ವೋಕ್ತ, ಪು.೧೪೦

೪೦. ಗೋಪಿನಾಥರಾವ್ ಟಿ.ಎ., ಪೂರ್ವೋಕ್ತ, ಸಂ.೨, ಪು.೭೫

೪೧. ಶ್ರೀಧರ ಬಿ.ಎಚ್., ಭಾರತೀಯ ಮೂರ್ತಿಶಿಲ್ಪ, ಪು.೬೬

೪೨. ಪಿ.ಕೆ., ಆಚಾರ್ಯ, ಪೂರ್ವೋಕ್ತ, ಪು.೧೪೨

೪೩. ಗೋಪಿನಾಥರಾವ್ ಟಿ.ಎ., ಪೂರ್ವೋಕ್ತ, ಪು.೭೫

೪೪. ಕೃಷ್ಣಶಾಸ್ತ್ರಿ ಎಚ್., ಪೂರ್ವೋಕ್ತ, ಪು.೧೫೧

೪೫. ಗೋಪಿನಾಥರಾವ್ ಟಿ.ಎ., ಪೂರ್ವೋಕ್ತ, ಸಂ.೧, ಪು.೧೭೪-೭೫

೪೬. ರಾಮಚಂದ್ರರಾವ್ ಎಸ್.ಕೆ., ಎನ್‌ಸಾಯ್‌ಕ್ಲೊಪೀಡಿಯಾ ಆಫ್ ಇಂಡಿಯನ್ ಐಕಾನೋಗ್ರಫಿ ಹಿಂದುಯಿಸಮ್-ಬುದ್ಧಿಸಮ್ ಜೈನಿಸಮ್, ಪು.೨೯೮

೪೭. ಕೃಷ್ಣಶಾಸ್ತ್ರಿ ಎಚ್., ಪೂರ್ವೋಕ್ತ, ಪು.೧೫೫

೪೮. ಬೃಂದಾವನ ಸಿ. ಭಟ್ಟಾಚಾರ್ಯ, ಇಂಡಿಯನ್ ಇಮೇಜಸ್ : ದ ಬ್ರಹ್ಮಾನಿಕ್ ಐಕೆನೋಗ್ರಫಿ, ಪು.೨೭

೪೯. ಗುಪ್ತೆ, ಆರ್.ಎಸ್., ಐಕಾನೋಗ್ರಫಿ ಆಫ್ ದ ಹಿಂದೂಸ್ ಬುದ್ಧಿಸ್ಟ್ಸ್ ಆ್ಯಂಡ್ ಜೈನ್ಸ್, ಪು.೪೬

೫೦. ಗೋಪಿನಾಥರಾವ್ ಟಿ.ಎ., ಪೂರ್ವೋಕ್ತ, ಸಂ.೨, ಪು.೪೧೫-೪೫೦

೫೧. ಗುಪ್ತ ಆರ್.ಎಸ್., ಪೂರ್ವೋಕ್ತ, ಪು.೪೯

೫೨. ಕೃಷ್ಣಶಾಸ್ತ್ರಿ ಎಚ್., ಪೂರ್ವೋಕ್ತ, ಪು.೧೭೭

೫೩. ಕೃಷ್ಣಶಾಸ್ತ್ರಿ ಎಚ್., ಪೂರ್ವೋಕ್ತ, ಪು.೭೬ ಈ ಗ್ರಂಥವು ಉಲ್ಲೇಖಿಸುವಂತೆ ಶಿಲ್ಪಶಾಸ್ತ್ರವು ಶಿವನ ಹದಿನಾರು ಪ್ರಸಿದ್ಧ ಪ್ರತಿರೂಪಗಳನ್ನು ಹೇಳುತ್ತದೆ. ಅವು ಸುಖಾಸನ, ವೈವಾಹಿಕ, ಉಮಾಸಹಿತ, ವೃಷಾರೂಢ, ತ್ರಿಪುರಾಂತಕ, ನಟರಾಜ, ಚಂದ್ರಶೇಖರ, ಅರ್ಧನಾರಿ, ಹರಿಹರ, ಚಂಡೇಶ್ವರ, ಕಾಮಾರಿ, ಕಾಲನಾಶ, ದಕ್ಷಿಣಾಮೂರ್ತಿ, ಭಿಕ್ಷಾಟನಾ, ಸದಾಶಿವ ಮತ್ತು ಲಿಂಗೋದ್ಭವ. ಕಾರಣಾಗಮವು ಇಪ್ಪತ್ತೈದು ರೂಪಗಳನ್ನು ಹೇಳಿದೆ.

೫೪. ಕಲಬುರ್ಗಿ ಎಂ.ಎಂ., ಮಾರ್ಗ-೪, ಪು.೨೯೬

ಉಮಾ ಸಹಿತ ಶಿವನ ವಿಗ್ರಹಗಳಿರುವ ದೇವಾಲಯಗಳು ಸೋಮ ಸಿದ್ಧಾಂತಗಳ ದೇವಾಲಯಗಳಾಗಿರಬಹುದು. ಕಾಪಾಲಿಕರೇ ಒಂದಿಷ್ಟು ಸೌಮ್ಯವಾಗುವಲ್ಲಿ ಈ ಪಂಥ ಆಕಾರಗೊಂಡಂತಿದೆ ಎಂದು ಕಲಬುರ್ಗಿ ಅವರು ಅಭಿಪ್ರಾಯಪಡುತ್ತಾರೆ.

೫೫. ಗೋಪಿನಾಥರಾವ್ ಟಿ.ಎ., ಪೂರ್ವೋಕ್ತ, ಸಂ.೨, ಪು.೨೭೬

೫೬. ಬೃಂದಾವನ ಸಿ. ಭಟ್ಟಾಚಾರ್ಯ, ಪೂರ್ವೋಕ್ತ, ಪು.೩೧

೫೭. ಕೃಷ್ಣಶಾಸ್ತ್ರಿ ಎಚ್., ಪೂರ್ವೋಕ್ತ, ಪು.೧೬೨

೫೮. ರಾಮಚಂದ್ರರಾವ್ ಎಸ್.ಕೆ., ಪೂರ್ವೋಕ್ತ, ಪು.೧೧೫

೫೯. ಮಾರ್ಕ್‌ಡೊನೆಲ್ ಎ.ಎ., ವೇದಿಕ್ ಮೈಥಾಲಜಿ, ಪು.೩೭

೬೦. ಭಂಡಾರಕರ್ ಆರ್.ಜಿ., ಪೂರ್ವೋಕ್ತ, ಪು.೪೭

೬೧. ಚಿದಾನಂದಮೂರ್ತಿ ಎಮ್., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೧೭೯

೬೨. ಭಂಡಾರಕರ್ ಆರ್.ಜಿ., ಪೂರ್ವೋಕ್ತ, ಪು.೪೭

೬೩. ಸರ್ಕಾರ ಡಿ.ಸಿ., ಸೆಲೆಕ್ಟ್ ಇನ್ಸ್‌ಕ್ರಿಪ್ಶನ್ಸ್, ಪು.೯೦-೯೧

೬೪. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೧೮೨

೬೫. ಹಿರೇಮಠ ಆರ್.ಸಿ. ಮತ್ತು ಕಲಬುರ್ಗಿ ಎಂ.ಎಂ., ಕನ್ನಡ ಶಾಸನ ಸಂಪದ, (ಸಂ) ಪು.೧

೬೬. ಇಂ.ಆ್ಯಂಟಿ, ಸಂ.III, ಪು.೩೦೫

೬೭. ಬೃಂದಾವನ ಸಿ., ಭಟ್ಟಾಚಾರ್ಯ, ಪೂರ್ವೋಕ್ತ, ಪು.೧೨

೬೮. ರಾಮಚಂದ್ರರಾವ್ ಎಸ್.ಕೆ., ಪೂರ್ವೋಕ್ತ, ಪು.೧೪೨

೬೯. ಅದೇ.

೭೦. ಗೋಪಿನಾಥರಾವ್ ಟಿ.ಎ., ಪೂರ್ವೋಕ್ತ, ಸಂ.೧, ಪು.೩೭೫

೭೧. ಅದೇ.

೭೨. ರಾಮಚಂದ್ರರಾವ್ ಎಸ್.ಕೆ., ಎನ್‌ಸೈಕ್ಲೋಪೀಡಿಯಾ ಆಫ್ ಇಂಡಿಯನ್ ಐಕೆನೊಗ್ರಫಿ, ಸಂ.೨, ಪು.೮೧೫

೭೩. ಗೋಪಿನಾಥರಾವ್ ಟಿ.ಎ., ಪೂರ್ವೋಕ್ತ, ಸಂ.೧, ಪು.೧೪೯

೭೪. ದುರ್ಗಪ್ರಸಾದ ಪಾಂಡೆ, ಐಕೆನೊಗ್ರಫಿಕಲ್ ಸ್ಟಡಿ ಆಫ್ ದಿಂಡಿಯನ್ ಸನ್‌ಗಾಡ್, ಪು.೨೮

೭೫. ಬೃಂದಾವನ ಸಿ., ಭಟ್ಟಾಚಾರ್ಯ, ಪೂರ್ವೋಕ್ತ, ಪು.೧೭

೭೬. ಕೃಷ್ಣಶಾಸ್ತ್ರಿ ಎಚ್., ಪೂರ್ವೋಕ್ತ, ಪು.೨೩೬

೭೭. ಅದೇ.

೭೮. ಸ್ವಾಮಿ ಹರ್ಷಾನಂದ ಹಿಂದೂ ಗಾಡ್ಸ್ ಆ್ಯಂಡ್ ಗಾಡೆಸಸ್, ಪು.೭೮

೭೯. ಗುಪ್ತೆ ಆರ್.ಎಸ್., ಪೂರ್ವೋಕ್ತ, ಪು.೫೪

೮೧. ತಿಪ್ಪೇರುದ್ರಸ್ವಾಮಿ ಅವರು ಸ್ತ್ರೀ ವಿಗ್ರಹಗಳು ಪ್ರಧಾನ ಶಿಲ್ಪಗಳಲ್ಲಾಗಲೀ ಅಥವಾ ಮುದ್ರೆಗಳ ಮೇಲಾಗಲೀ ಕಾಣಿಸುವುದಿಲ್ಲ. ಆದುದರಿಂದ ಮಾತೃ ಉಪಾಸನೆ ರಾಜ್ಯದ ಪ್ರಧಾನ ಧರ್ಮವಾಗಿದ್ದಂತೆ ತೋರುವುದಿಲ್ಲ. ವೈಯಕ್ತಿಕ

ವಾದ ಉಪಾಸನೆಯ ಮಿತಿಯಲ್ಲಿತ್ತೆಂದು ಹೇಳಬಹುದು ಎಂದು ಅಭಿಪ್ರಾಯಪಡುತ್ತಾರೆ. ನೋಡಿ : ತಿಪ್ಪೇರುದ್ರಸ್ವಾಮಿ ಎಚ್., ಪೂರ್ವೋಕ್ತ, ಪು.೨೦

೮೧. ರಾಮಚಂದ್ರರಾವ್ ಎಸ್.ಕೆ., ಪೂರ್ವೋಕ್ತ, ಪು.೧೬೨

೮೨. ಸ್ವಾಮಿ ಹರ್ಷಾನಂದ, ಪೂರ್ವೋಕ್ತ, ಪು.೭೮

೮೩. ಅದೇ.

೮೪. ಕೃಷ್ಣಶಾಸ್ತ್ರಿ ಎಚ್., ಪೂರ್ವೋಕ್ತ, ಪು.೧೮೪

೮೫. ಅದೇ.

೮೬. ಅದೇ.

೮೭. ರಾಮಚಂದ್ರರಾವ್ ಅವರು ಸರಸ್ವತಿಯ ಕುರಿತು ಋಗ್ವೇದದ ಸೂಕ್ತಗಳನ್ನು ಉಲ್ಲೇಖಿಸಿರುವರು. 'ಅಂಬಿತಮೊ ನದೀತಮೆ ದೇವಿತಮೇ ಸರಸ್ವತಿ' (ಋಗ್ವೇದ, ೧, ೪, ೪೧) ಸಾಯಣರು 'ದ್ವಿವಿಧಾ ಹಿ ಸರಸ್ವತೀ ವಿಗ್ರಹ ದೇವತಾ ನದೀರೂಪಾ ಚ' ಎಂದಿರುವರು. ನೋಡಿ : ರಾಮಚಂದ್ರರಾವ್ ಎಸ್.ಕೆ., ಪೂರ್ವೋಕ್ತ, ಪು.೧೬೫

೮೮. ಅದೇ.

೮೯. ಗೋಪಿನಾಥರಾವ್ ಟಿ.ಎ., ಪೂರ್ವೋಕ್ತ, ಸಂ.೧, ಪು.೩೭೭

೯೦. ಬೃಂದಾವನ ಸಿ., ಭಟ್ಟಾಚಾರ್ಯ, ಪೂರ್ವೋಕ್ತ, ಪು.೪೪

೯೧. ಸ್ವಾಮಿ ಹರ್ಷಾನಂದ, ಪೂರ್ವೋಕ್ತ, ಪು.೮೧

೯೨. 'ಲಕ್ಷ್ಮಿ' ಮತ್ತು 'ಶ್ರೀ' ಇವರು ಬೇರೆ ಬೇರೆ ಎಂದು ಹೇಳಲಾಗುತ್ತದೆ. 'ಶ್ರೀ'ಯನ್ನು ವೇದಪೂರ್ವ ದೇವತೆಯಾಗಿದ್ದು ಕೃಷಿಗೆ ಸಂಬಂಧಪಟ್ಟ ಧಾನ್ಯ ದೇವತೆ ಎಂದೂ ಹೇಳಲಾಗುತ್ತದೆ. ಮುಂದೆ ಬಂದ ವೈದಿಕ ದೇವತೆಯಾದ, ಸೌಂದರ್ಯದ ಸಂಕೇತವಾದ ಲಕ್ಷ್ಮಿಯೊಂದಿಗೆ ಸಮಾವೇಶಗೊಳಿಸಲಾಯಿತು.

೯೩. ಸ್ವಾಮಿ ಹರ್ಷಾನಂದ, ಪೂರ್ವೋಕ್ತ, ಪು.೮೨

೯೪. ರಾಮಚಂದ್ರರಾವ್ ಎಸ್.ಕೆ., ಪೂರ್ವೋಕ್ತ, ಪು.೧೮೩

೯೫. ರಾಮಚಂದ್ರರಾವ್ ಎಸ್.ಕೆ., ಎನ್‌ಸಾಯ್‌ಕ್ಲೋಪೀಡಿಯಾ ಆಫ್ ಇಂಡಿಯನ್ ಐಕನೋಗ್ರಫಿ, ಸಂ.೧, ಪು.೩೩೪

೯೬. ಗೋಪಿನಾಥರಾವ್ ಟಿ.ಎ., ಪೂರ್ವೋಕ್ತ, ಸಂ.೩, ಪು.೭೨

೯೭. ರಾಜೇಶ್ವರಿ ಪಿ.ಆರ್., ಶಕ್ತಿ ಐಕನೋಗ್ರಫಿ, ಪು.೫೩-೫೪

೯೮. ಮಿಶ್ರಾ ಓ.ಪಿ., ಐಕನೋಗ್ರಫಿ ಆಫ್ ದ ಸಪ್ತಮಾತೃಕಾಸ್, ಪು.೨

೯೯. ಅದೇ.

೧೦೦. ಮಿಶ್ರಾ, ಓ.ಪಿ. ಮದರ್ ಗಾಡೆಸಿಸ್ ಇನ್ ಸೆಂಟ್ರಲ್ ಇಂಡಿಯಾ, ಪು.೧೨೦

೧೦೧. ಅದೇ, ಪು. ೧೧೮

೧೦೨. ಮಿಶ್ರಾ ಓ.ಪಿ., ಪೂರ್ವೋಕ್ತ, ಪು.೭೪

೧೦೩. ಅದೇ, ಪು.೯೬

೧೦೪. ಅದೇ, ಪು.೮೮

೧೦೫. ಅದೇ, ಪು.೧೦೨

೧೦೬. ಅದೇ, ಪು.೩

೧೦೭. ರಾಮಚಂದ್ರರಾವ್ ಎಸ್.ಕೆ., ಪೂರ್ವೋಕ್ತ, ಪು.೧೭೩

೧೦೮. ಡ್ಯೂರಾಂಟ ವಿಲ್., ದ ಸ್ಟೋರಿ ಆಫ್ ಸಿವಿಲಿಝೇಶನ್, ಪು.೪೦೨

೧೦೯. ಮುಜುಮದಾರ್ ಆರ್. ಮತ್ತು ಪ್ರಸಾಲ್ಕರ ಎ.ಡಿ., 'ದ ಹಿಸ್ಟರಿ ಆ್ಯಂಡ್ ಕಲ್ಚರ್ ಆಫ್ ದಿ ಇಂಡಿಯನ್ ಪ್ಯೂಪಲ್', ಪು.೪೭೧, ರಾಧಾಕೃಷ್ಣನ್ ಎಸ್., 'ಇಂಡಿಯನ್ ಫಿಲಾಸಫಿ', ಪು.೫೨೪, ಅಲ್ಲಿ ದೊರೆತ ಎರಡು ನಾಗ ಮುದ್ರಿಕೆಗಳಲ್ಲಿ ಜೋಡು ಹೆಡೆಗಳಿರುವ ಒಂದನ್ನು ಕುರಿತು ರಾಧಾಕೃಷ್ಣನ್ ಅವರು ಅದು ಭಾರತದ ಅತೀ ಪ್ರಾಚೀನ ಜನಾಂಗದ ಸಂಕೇತವೆಂದೂ, ಅವರು ನಾಗನನ್ನು ಪೂಜಿಸುತ್ತಿದ್ದ ನಾಗರೆಂದೂ ಅಭಿಪ್ರಾಯಪಟ್ಟಿರುವರು.

೧೧೦. ಭೋಜರಾಜ ಬ. ಪಾಟೀಲ, ನಾಗರಖಂಡ-೭೦ ಒಂದು ಅಧ್ಯಯನ, ಪು.೨೨೬

೧೧೧. ಗಿಲ್ಬರ್ಟ್ ಸ್ಲೇಟರ್, ದ ದ್ರಾವಿಡಿಯನ್ ಎಲಿಮೆಂಟ್ ಇನ್ ಇಂಡಿಯನ್ ಕಲ್ಚರ್, ಪು.೮೨

೧೧೨. ಚಿತ್ತರಂಜನ್‌ದಾಸ್, ಬಿ., ಲೇ: 'ಹಾವು ಹಲವು ಹತ್ತು ನಂಬಿಕೆಗಳು', ತರಂಗ, ಮಾಸಪತ್ರಿಕೆ ಆಗಸ್ಟ್ ೫, ೧೯೮೪, ಪು. ೧೯

೧೧೩. ಭಟ್‌ಸೂರಿ ಕೆ.ಜಿ., ಗೇರುಸೊಪ್ಪೆಯ ಜೈನ ವಾಸ್ತು ಮತ್ತು ಮೂರ್ತಿಶಿಲ್ಪ, ಪು.೨೧೫

೧೧೪. ಭಟ್ಟಾಚಾರ್ಯ ಬಿ.ಎನ್., ಜೈನ ಐಕನೊಗ್ರಫಿ, ಸಂ.೨, ಪು.೧೦೨-೧೦೩

೧೧೫. ಕಲಘಟಗಿ ಟಿ.ಜಿ., ಜೈನಿಸಮ್ ಎ ಸ್ಟಡಿ, ಪು.೯೦

೧೧೬. ಶೆಟ್ಟಿ ಎಸ್.ಡಿ., ತುಳುನಾಡಿನ ಜೈನಧರ್ಮ, ಪು.೩೩೬

ಆಜಾನುಲಂಬಬಾಹುಃ ಶ್ರೀವತ್ಸಾಂಕಃ ಪ್ರಶಾಂತ ಮೂರ್ತಿಶ್ಚ |

ದಿಗ್ವಾಸ್ಥರುಣೋ ರೂಪವಾಂಶ್ಚಕಾರ್ಯಾರ್ಹಂತಾ ದೇವಃ |

೧೧೭. ಗುಪ್ತೆ ಆರ್.ಎಸ್., ಪೂರ್ವೋಕ್ತ, ಪು.೧೭೪

೧೧೮. ದಿಗಂಬರ ಪಂಥಕ್ಕೂ ಶ್ವೇತಾಂಬರ ಪಂಥಕ್ಕೂ ಯಕ್ಷಯಕ್ಷಿಯರ ವಿಷಯದಲ್ಲಿ ಕೆಲವು ವ್ಯತ್ಯಾಸಗಳಿವೆ. ಇಲ್ಲಿ ದಿಗಂಬರ ಪಂಥದ ಯಕ್ಷ ಯಕ್ಷಿಯರನ್ನು ಹೆಸರಿಸಲಾಗಿದೆ.

೧೧೯. ಎ.ಇಂ., ಸಂ.V, ಪು.೨೩೭

೧೨೦. ಅದೇ.

೧೨೧. ಎ.ಇಂ., ಸಂ.XXIX, ಪು.೧೪೨

೧೨೨. ಅದೇ.

೧೨೩. ಅದೇ.

೧೨೪. ದೇವಾಂಗ ದೇಸಾಯಿ, ಎರೋಟಿಕ್ ಸ್ಕಲ್ಪಚರ್ ಆಫ್ ಇಂಡಿಯಾ (ಎ ಸೋಸಿಯೋ ಕಲ್ಚರಲ್ ಸ್ಟಡಿ), ಪು.೧

೧೨೫. ಅದೇ.

೧೨೬. ರಾಮಚಂದ್ರರಾವ್ ಎಸ್.ಕೆ., ಎನ್‌ಸೈಕ್ಲೊಪೀಡಿಯಾ ಆಫ್ ಇಂಡಿಯನ್ ಐಕನೊಗ್ರಫಿ, ಸಂ.೨, ಪು.೧೨೩೭



ಛಾಯಾಚಿತ್ರ – ೬೫, ಕಲ್ಮೇಶ್ವರ ದೇವಾಲಯದ ನವರಂಗದಲ್ಲಿರುವ ಗಣಪತಿ ಶಿಲ್ಪ
ಉಪ್ಪುಣಸಿ (ತಾ.ಹಾನಗಲ್ಲ)



ಛಾಯಾಚಿತ್ರ – ೬೬, ಬ್ರಹ್ಮಲಿಂಗೇಶ್ವರ ದೇವಾಲಯದ ನವರಂಗದಲ್ಲಿರುವ ಗಣಪತಿ ಶಿಲ್ಪ
ಅಬ್ಬಲೂರು (ತಾ.ಹಿರೇಕೆರೂರು)



ಛಾಯಾಚಿತ್ರ – ೬೭, ಸೋಮೇಶ್ವರ ದೇವಾಲಯದ ದಕ್ಷಿಣ ದಿಕ್ಕಿನ ಗರ್ಭಗೃಹದ ಲಿಂಗ
ಹರಳಹಳ್ಳಿ (ತಾ.ಹಾವೇರಿ)



ಛಾಯಾಚಿತ್ರ – ೬೮, ಸೋಮೇಶ್ವರ ದೇವಾಲಯದ ಮುಖ್ಯ ಗರ್ಭಗೃಹದ ಲಿಂಗ
ಅಬ್ಬಲೂರು (ತಾ.ಹಿರೇಕೆರೂರು)



ಛಾಯಾಚಿತ್ರ – ೬೯, ಸಣ್ಣ ಬಸವೇಶ್ವರ ದೇವಾಲಯದ ಲಿಂಗ,
ಮೇದೂರು (ತಾ.ಹಿರೇಕೆರೂರು)



ಛಾಯಾಚಿತ್ರ – ೭೦, ಕಲ್ಮೇಶ್ವರ ದೇವಾಲಯದ ದಕ್ಷಿಣ ದಿಕ್ಕಿನ ಗರ್ಭಗೃಹದ ಲಿಂಗ
ಕಡೂರು (ತಾ.ಹಿರೇಕೆರೂರು)



ಛಾಯಾಚಿತ್ರ – ೭೧, ಕಲ್ಮೇಶ್ವರ ದೇವಾಲಯದ ಉತ್ತರ ದಿಕ್ಕಿನ ಗರ್ಭಗೃಹದ ಲಿಂಗ
ಕಡೂರು (ತಾ.ಹಿರೇಕೆರೂರು)



ಛಾಯಾಚಿತ್ರ – ೭೨, ಕಲ್ಮೇಶ್ವರ ದೇವಾಲಯದ ದಕ್ಷಿಣ ದಿಕ್ಕಿನ ಗರ್ಭಗೃಹದ ಲಿಂಗ
ಗುಡಗೂರು (ತಾ. ಹಿರೇಕೆರೂರು)



ಛಾಯಾಚಿತ್ರ – ೭೩, ಕಲ್ಮೇಶ್ವರ ದೇವಾಲಯದ ಮುಖ್ಯ ಗರ್ಭಗೃಹದ ಲಿಂಗ
ಹಿರೇಮಾಗನೂರು (ತಾ.ರಾಣೆಬೆನ್ನೂರು)



ಛಾಯಾಚಿತ್ರ – ೭೪, ಸಣ್ಣ ಬಸವೇಶ್ವರ ದೇವಾಲಯದ ನವರಂಗದಲ್ಲಿರುವ ಭೈರವ ಶಿಲ್ಪ
ಮೇದೂರು (ತಾ.ಹಿರೇಕೆರೂರು)



ಛಾಯಾಚಿತ್ರ – ೭೫, ಸೋಮೇಶ್ವರ ದೇವಾಲಯದ ನವರಂಗದಲ್ಲಿರುವ ವೀರಭದ್ರ ಶಿಲ್ಪ
ಅಬ್ಬಲೂರು (ತಾ.ಹಿರೇಕೆರೂರು)



ಛಾಯಾಚಿತ್ರ – ೭೬, ಬ್ರಹ್ಮಲಿಂಗೇಶ್ವರ ದೇವಾಲಯ ನವರಂಗದಲ್ಲಿರುವ ಸ್ಕಂದ ಶಿಲ್ಪ
ಅಬ್ಬಲೂರು (ತಾ.ಹಿರೇಕೆರೂರು)



ಛಾಯಾಚಿತ್ರ – ೭೭, ಸೋಮೇಶ್ವರ ದೇವಾಲಯದ ನವರಂಗದಲ್ಲಿರುವ ಉಮಾಮಹೇಶ್ವರ ಶಿಲ್ಪ
ಅಬ್ಬಲೂರು (ತಾ.ಹಿರೇಕೆರೂರು)



ಛಾಯಾಚಿತ್ರ – ೭೮, ಕಲ್ಮೇಶ್ವರ ದೇವಾಲಯದ ನವರಂಗದ ಕೋಷ್ಠದಲ್ಲಿರುವ
ಉಮಾಮಹೇಶ್ವರ ಶಿಲ್ಪ ಉಪ್ಪುಣಸಿ (ತಾ.ಹಾನಗಲ್ಲ)



ಛಾಯಾಚಿತ್ರ – ೭೯, ಕಲ್ಮೇಶ್ವರ ದೇವಾಲಯದ ನವರಂಗದಲ್ಲಿರುವ ಉಮಾಮಹೇಶ್ವರ ಶಿಲ್ಪ
ಕುಳೇನೂರು (ತಾ.ಹಾವೇರಿ)



ಛಾಯಾಚಿತ್ರ – ೮೦, ಕಲ್ಮೇಶ್ವರ ದೇವಾಲಯದ ನವರಂಗದಲ್ಲಿರುವ ರತಿಮನ್ಮಥ ಶಿಲ್ಪ
ಕುಳೇನೂರು (ತಾ.ಹಾವೇರಿ)



ಛಾಯಾಚಿತ್ರ – ೮೧, ಬ್ರಹ್ಮಲಿಂಗೇಶ್ವರ ದೇವಾಲಯದ ನಂದಿ ಶಿಲ್ಪ
ಅಬ್ಬಲೂರು (ತಾ.ಹಿರೇಕೆರೂರು)



ಛಾಯಾಚಿತ್ರ – ೮೨, ಕಲ್ಮೇಶ್ವರ ದೇವಾಲಯದ ನಂದಿ ಶಿಲ್ಪ
ಅಂತರವಳ್ಳಿ (ತಾ.ರಾಣೆಬೆನ್ನೂರು)



ಛಾಯಾಚಿತ್ರ – ೮೩, ಕಲ್ಮೇಶ್ವರ ದೇವಾಲಯದ ನಂದಿ ಶಿಲ್ಪ
ಹಿರೇಮಾಗನೂರು (ತಾ. ರಾಣೆಬೆನ್ನೂರು)



ಛಾಯಾಚಿತ್ರ – ೮೪, ಕಲ್ಮೇಶ್ವರ ದೇವಾಲಯದ ನಂದಿ ಶಿಲ್ಪ
ಹೊನ್ನತ್ತಿ (ತಾ. ರಾಣೆಬೆನ್ನೂರು)



ಛಾಯಾಚಿತ್ರ – ೮೫, ಬ್ರಹ್ಮಲಿಂಗೇಶ್ವರ ದೇವಾಲಯದ ಉತ್ತರ ದಿಕ್ಕಿನ ಗರ್ಭಗೃಹದ ವಿಷ್ಣು ಶಿಲ್ಪ
ಅಬ್ಬಲೂರು (ತಾ. ಹಿರೇಕೆರೂರು)



ಛಾಯಾಚಿತ್ರ – ೮೬, ಕಲ್ಮೇಶ್ವರ ದೇವಾಲಯದ ಉತ್ತರ ದಿಕ್ಕಿನ ಗರ್ಭಗೃಹದ ವಿಷ್ಣು ಶಿಲ್ಪ
ಮತ್ತೂರು (ತಾ.ಬ್ಯಾಡಗಿ)



ಛಾಯಾಚಿತ್ರ – ೮೭, ಸಿದ್ದೇಶ್ವರ ದೇವಾಲಯದ ನವರಂಗದಲ್ಲಿರುವ ವಿಷ್ಣು ಶಿಲ್ಪ
ನಾಗವಂದ (ತಾ.ಹಿರೇಕೆರೂರು)



ಛಾಯಾಚಿತ್ರ – ೮೮, ಬ್ರಹ್ಮಲಿಂಗೇಶ್ವರ ದೇವಾಲಯದ ಪೂರ್ವ ದಿಕ್ಕಿನ ಗರ್ಭಗೃಹದಲ್ಲಿರುವ
ಸೂರ್ಯಶಿಲ್ಪ, ಅಬ್ಬಲೂರು (ತಾ.ಹಿರೇಕೆರೂರು)



ಛಾಯಾಚಿತ್ರ – ೮೯, ಕಲ್ಮೇಶ್ವರ ದೇವಾಲಯದ ಪೂರ್ವದಿಕ್ಕಿನ ಗರ್ಭ ಗೃಹದಲ್ಲಿರುವ ಸೂರ್ಯ ಶಿಲ್ಪ, ಉಪ್ಪುಣಸಿ (ತಾ. ಹಾನಗಲ್ಲ)



ಛಾಯಾಚಿತ್ರ – ೯೦, ಸಣ್ಣ ಬಸವೇಶ್ವರ ದೇವಾಲಯದ ಪೂರ್ವ ದಿಕ್ಕಿನ ಗರ್ಭದಲ್ಲಿರುವ ಸೂರ್ಯ ಶಿಲ್ಪ, ಮೇದೂರು (ತಾ. ಹಿರೇಕೆರೂರು)



ಛಾಯಾಚಿತ್ರ – ೯೧, ಬ್ರಹ್ಮಲಿಂಗೇಶ್ವರ ದೇವಾಲಯದ ಆವರಣದಲ್ಲಿಯ ಸರಸ್ವತಿ ಮಂದಿರದ
ಸರಸ್ವತಿ ಶಿಲ್ಪ, ಅಬ್ಬಲೂರು (ತಾ. ಹಿರೇಕೆರೂರು)



ಛಾಯಾಚಿತ್ರ – ೯೨, ಬಸವೇಶ್ವರ ದೇವಾಲಯದ ನವರಂಗದ ಗೋಡೆಗೆ ಆನಿಸಿಟ್ಟ
ಸರಸ್ವತಿ ಶಿಲ್ಪ ಕಲಕೇರಿ (ತಾ.ಹಾನಗಲ್ಲ)



ಛಾಯಾಚಿತ್ರ – ೯೩, ಸಣ್ಣ ಬಸವೇಶ್ವರ ದೇವಾಲಯದ ದಕ್ಷಿಣ ದಿಕ್ಕಿನ ಸರಸ್ವತಿ ಮಂದಿರದ
ಸರಸ್ವತಿ ಶಿಲ್ಪ ಮೇದೂರು (ತಾ.ಹಿರೇಕೆರೂರು)



ಛಾಯಾಚಿತ್ರ – ೯೪, ಬ್ರಹ್ಮಲಿಂಗೇಶ್ವರ ದೇವಾಲಯದ ನವರಂಗದಲ್ಲಿಯ ಮಹಿಷಮರ್ದಿನಿ ಶಿಲ್ಪ
ಅಬ್ಬಲೂರು (ತಾ.ಹಿರೇಕೆರೂರು)



ಛಾಯಾಚಿತ್ರ - ೯೫. ಕಲ್ಮೇಶ್ವರ ದೇವಾಲಯದ ನವರಂಗದಲ್ಲಿರುವ ಮಹಿಷಮರ್ದಿನಿಯ ಶಿಲ್ಪ
ಉಪ್ಪುಣಸಿ (ತಾ.ಹಾನಗಲ್ಲ)



ಛಾಯಾಚಿತ್ರ - ೯೬, ಸಿದ್ದೇಶ್ವರ ದೇವಾಲಯದ ನವರಂಗದಲ್ಲಿಯ ಮಹಿಷಮರ್ದಿನಿ ಶಿಲ್ಪ
ನಾಗೊಂದ (ತಾ. ಹಿರೇಕೆರೂರು)



ಛಾಯಾಚಿತ್ರ - ೯೭, ಕಲ್ಮೇಶ್ವರ ದೇವಾಲಯದ ನವರಂಗದಲ್ಲಿಯ ಸಪ್ತಮಾತೃಕಾ ಫಲಕ
ಕುಳೇನೂರು (ತಾ.ಹಾವೇರಿ)



ಛಾಯಾಚಿತ್ರ - ೯೮, ಕಲ್ಮೇಶ್ವರ ದೇವಾಲಯದ ನವರಂಗದಲ್ಲಿಯ ಸಪ್ತಮಾತೃಕಾ ಫಲಕ
ಅಂತರವಳ್ಳಿ (ತಾ.ರಾಣೆಬೆನ್ನೂರು)



ಛಾಯಾಚಿತ್ರ – ೯೯, ಸಣ್ಣ ಬಸವೇಶ್ವರ ದೇವಾಲಯದ ನವರಂಗದಲ್ಲಿಯ ನಾಗಶಿಲ್ಪ
ಮೇದೂರು (ತಾ.ಹಿರೇಕೆರೂರು)



ಛಾಯಾಚಿತ್ರ – ೧೦೦, ಸಿದ್ದೇಶ್ವರ ದೇವಾಲಯದ ನವರಂಗದಲ್ಲಿಯ ನಾಗಶಿಲ್ಪ
ನಾಗವಂದ (ತಾ.ಹಿರೇಕೆರೂರು)



ಛಾಯಾಚಿತ್ರ – ೧೦೧, ಕಲ್ಮೇಶ್ವರ ದೇವಾಲಯದ ನವರಂಗದಲ್ಲಿಯ ನಾಗಶಿಲ್ಪ
ಅಂತರವಳ್ಳಿ, (ತಾ.ಹಿರೇಕೆರೂರು)



ಛಾಯಾಚಿತ್ರ – ೧೦೨, ಬ್ರಹ್ಮಲಿಂಗೇಶ್ವರ ದೇವಾಲಯದ ಆಧಿಷ್ಠಾನದಲ್ಲಿರುವ ಮಿಥುನ ಶಿಲ್ಪ
ಅಬ್ಬಲೂರು (ತಾ.ಹಿರೇಕೆರೂರು)

# ಅಧ್ಯಾಯ ೫

# ಸಮಾರೋಪ

ದೇವಾಲಯಗಳು ಮಾನವನ ಬದುಕಲ್ಲಿ ಮಹತ್ವದ ಪಾತ್ರವಹಿಸಿವೆ. ಮೂಲತಃ ದೇವಾಲಯ ಎಂಬುದು ದೇವರಿಗಾಗಿ ಕಟ್ಟಿದ ಒಂದು ಕಟ್ಟಡ. ಸಾಮೂಹಿಕ ಪೂಜೆ ಮತ್ತು ಪ್ರಾರ್ಥನೆಗಳನ್ನು ಸಲ್ಲಿಸಲು ಅನುಕೂಲವಿರುವ ಒಂದು ತಾಣ. ಎಲ್ಲಾ ಮತ ಧರ್ಮಗಳಲ್ಲೂ ದೇವಾಲಯಕ್ಕೆ ಒಂದು ವಿಶಿಷ್ಟ ಸ್ಥಾನವಿದೆ. ದೇವಾಲಯಗಳನ್ನು ಕಟ್ಟುವ ಪದ್ಧತಿ ಹಾಗೂ ಅವುಗಳ ಪ್ರಾಚೀನತೆಯನ್ನು ಒಳಹೊಕ್ಕು ನೋಡಿದರೆ ಇದರ ಕಾಲ ಕ್ರಿಸ್ತಪೂರ್ವಕ್ಕೆ ಹೋಗುತ್ತದೆ. ಪ್ರಾರಂಭದಲ್ಲಿ ಪೂಜಾಸ್ಥಳವಾಗಿ ಮಾತ್ರ ಉಗಮಗೊಂಡ ದೇವಾಲಯ ಗಳು ಕ್ರಮೇಣ ಸಮಾಜದ ಅವಿಭಾಜ್ಯ ಅಂಗವಾಗಿ ರೂಪಗೊಳ್ಳುತ್ತ ಬಂದವು. ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಬದುಕಿನ ಸಾರ್ಥಕತೆಗೆ ದೇವಾಲಯವನ್ನೇ ಆಶ್ರಯಿಸಿದನೆಂದರೆ ತಪ್ಪಾಗಲಾರದು. ಕರ್ನಾಟಕದ ಮಧ್ಯಯುಗೀನ ಕಾಲದಲ್ಲಂತೂ 'ದೇವಾಲಯ ಇಲ್ಲದೆ ಬದುಕೇ ಇಲ್ಲ' ಎನ್ನುವಷ್ಟರ ಮಟ್ಟಿಗೆ ಇವು ಮಹತ್ವವನ್ನು ಪಡೆದವು. ದೇವರ ಅಂಗಭೋಗ, ರಂಗಭೋಗಗಳ ಜೊತೆ ವಿದ್ಯಾಭ್ಯಾಸ, ಕಲೆ, ಧರ್ಮ ಇತ್ಯಾದಿ ಸಾಂಸ್ಕೃತಿಕ ಅಂಶಗಳ ಬೆಳವಣಿಗೆಯ ಮೂಲಸ್ಥಾನಗಳಾದವು. ಸಮಾಜದ ಬೇಕು ಬೇಡಗಳಿಗೆ ಸಮರ್ಥವಾಗಿ ಸ್ಪಂದಿಸುತ್ತ ಒಂದೊಂದು ದೇವಾಲಯವೂ ಸುವ್ಯವಸ್ಥಿತವಾದ, ನಿಯಮಬದ್ಧವಾದ ಒಂದು ಸಂಸ್ಥೆಯಾಗಿ ಕಾರ್ಯನಿರ್ವಹಿಸಿದವು. ಸಮಾಜದ ಎಲ್ಲಾ ವರ್ಗದ ಜನರನ್ನು ಒಂದೆಡೆ ಸೇರಿಸುವ ಕಾರ್ಯದಲ್ಲಿ ಹಾಗೂ ಶ್ರೀಮಂತ ವರ್ಗಗಳಿಂದ ದಾನರೂಪದಲ್ಲಿ ಹರಿದು ಬಂದ ಹಣ ಸಮಾಜದ ಏಳಿಗೆಗಾಗಿ ಸದ್ವಿನಿಯೋಗ ಗೊಳ್ಳುವಲ್ಲಿ ದೇವಾಲಯಗಳು ಮಹತ್ವದ ಪಾತ್ರವಹಿಸಿವೆ.

ದೇವಾಲಯಗಳು ಪ್ರಾರಂಭ ಕಾಲದಲ್ಲಿ ಒಂದು ಗರ್ಭಗೃಹ ಅದಕ್ಕೆ ಹೊಂದಿಕೊಂಡಂತೆ ಒಂದು ಮುಖಮಂಟಪ ಹೀಗೆ ಕನಿಷ್ಟ ಅವಶ್ಯಕತೆಯೊಡನೆ ರೂಪಗೊಂಡವು. ಸಮಾಜದಲ್ಲಿ ಅವುಗಳ ಪಾತ್ರ ಹಿರಿದಾಗುತ್ತ ಬಂದಂತೆ ದೇವಾಲಯಗಳ ವಾಸ್ತು ರಚನೆಗಳೂ ಹೆಚ್ಚಾದವು. ಹಂತಹಂತವಾಗಿ ಅವಶ್ಯಕತೆಗೆ ತಕ್ಕಂತೆ ಹೆಚ್ಚಿನ ವಾಸ್ತು ರಚನೆಗಳನ್ನು ಮೈಗೂಡಿಸಿಕೊಂಡು ಸಂಕೀರ್ಣವಾಗಿ, ಊರ್ಧ್ವಮುಖ ಮತ್ತು ತಿರ್ಯಙ್ಮುಖವಾಗಿ ಬೃಹತ್ ಗಾತ್ರದಲ್ಲಿ ಬೆಳೆದು ನಿಂತವು. ಈ ಪ್ರಗತಿ ಪಥದಲ್ಲಿ ಏಕಗರ್ಭಗೃಹ ದೇವಾಲಯಗಳು

ಒಂದೇ ದಿಕ್ಕಿನಲ್ಲಿ ಏಕಮುಖವಾಗಿ ಬೆಳೆಯುವುದರ ಜೊತೆಗೆ ಅಕ್ಕಪಕ್ಕದಲ್ಲೂ ವ್ಯಾಪಿಸಿ ಬೆಳೆದುದು ಗಮನಾರ್ಹ. ಎರಡು ಗರ್ಭಗೃಹ(ದ್ವಿಕೂಟ), ಮೂರು ಗರ್ಭಗೃಹ(ತ್ರಿಕೂಟ), ನಾಲ್ಕು ಗರ್ಭಗೃಹ (ಚತುಷ್ಕೂಟ) ಹಾಗೂ ಐದು ಗರ್ಭಗೃಹ(ಪಂಚಕೂಟ)ಗಳನ್ನು ಒಳಗೊಂಡು ನಿರ್ಮಾಣಗೊಂಡಿವೆ. ಇದು ಮುಂದುವರೆದ ವಾಸ್ತುರಚನೆ ಎನಿಸಿದರೂ ಬದಲಾದ ಧಾರ್ಮಿಕ, ಸಾಮಾಜಿಕ ಮನೋಭಾವಗಳಿಗೆ ತಕ್ಕಂತೆ ಇವು ವಿಕಾಸಗೊಂಡಿವೆ. ಧರ್ಮ ಸಹಿಷ್ಣುತೆಯ ಹಿನ್ನೆಲೆಯಲ್ಲಿ ವಿವಿಧ ದೇವರುಗಳನ್ನು ಪ್ರತ್ಯೇಕ ಗರ್ಭಗೃಹ ಗಳಲ್ಲಿ ಇಟ್ಟು ಪೂಜಿಸಲು ಇವು ಮೈತಳೆದವು ಎಂದು ಮೇಲ್ನೋಟದಲ್ಲಿ ಕಂಡುಬಂದರೂ, ಇವುಗಳ ನಿರ್ಮಾಣದ ಮೂಲ ಉದ್ದೇಶ ಬೇರೆಯೇ ಇದೆ. ಏಕಗರ್ಭಗೃಹಗಳನ್ನು ಬಿಟ್ಟರೆ ಮೂರು ಗರ್ಭಗೃಹಗಳನ್ನು ಒಳಗೊಂಡ ತ್ರಿಕೂಟ ದೇವಾಲಯಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತವೆ. ಸೂಕ್ಷ್ಮವಾಗಿ ಪರಿಶೀಲಿಸಿ ದಲ್ಲಿ ತ್ರಿಕೂಟ ದೇವಾಲಯಗಳ ನಿರ್ಮಾಣದ ಹಿನ್ನೆಲೆಯೂ ಕೂಡ ಬಹು ಮಹತ್ವ ಪೂರ್ಣವಾಗಿ, ತಮ್ಮದೇ ಆದ ವೈಶಿಷ್ಟ್ಯತೆಯನ್ನು ಬಿಂಬಿಸುತ್ತವೆ. ಈ ಕಾರಣದಿಂದ ಪ್ರಸ್ತುತ ಅಧ್ಯಯನವನ್ನು ತ್ರಿಕೂಟ ದೇವಾಲಯ ಗಳಿಗಾಗಿಯೇ ಮೀಸಲಿರಿಸಿ ಅವುಗಳ ಉಗಮ, ಬೆಳವಣಿಗೆ, ಧಾರ್ಮಿಕ ನಂಬಿಕೆ, ವಾಸ್ತು ರಚನೆ ಮುಂತಾದ ಅಂಶಗಳತ್ತ ಅಧ್ಯಯನ ಕೈಗೊಳ್ಳಲಾಗಿದೆ.

ಪ್ರಾಚೀನ ವಾಸ್ತುಶಿಲ್ಪ ಗ್ರಂಥಗಳನ್ನು ಆಧರಿಸಿ ನಿರ್ಮಾಣಗೊಂಡ ದೇವಾಲಯಗಳ ಮೇಲೆ ವಿದ್ವಾಂಸರು ಸಾಕಷ್ಟು ಅಧ್ಯಯನ ನಡೆಸಿದ್ದಾರೆ. ದೇವಾಲಯಗಳು ಬೆಳೆದು ಬಂದ ಹಾದಿಯನ್ನು ಸ್ಪಷ್ಟಪಡಿಸುವಲ್ಲಿ ಅವರ ಅಧ್ಯಯನಗಳು ಶ್ರಮಿಸಿವೆ. ಆದರೆ ದೇವಾಲಯ ವಾಸ್ತುಶಿಲ್ಪದಲ್ಲಿ ಪ್ರಧಾನವಾಗಿ ಗುರುತಿಸಬಹುದಾದ ತ್ರಿಕೂಟ ದೇವಾಲಯಗಳ ಮೇಲೆ ಪ್ರತ್ಯೇಕ ಅಧ್ಯಯನ ಇದುವರೆಗೂ ನಡೆದಿಲ್ಲ. ಒಂದು ಶಿಸ್ತುಬದ್ಧ ಅಧ್ಯಯನಕ್ಕೆ ಪ್ರಧಾನ ಆಕರವಾಗಿ ನಿಲ್ಲಬಲ್ಲ ತ್ರಿಕೂಟ ದೇವಾಲಯಗಳನ್ನು ಕುರಿತ ಸೂಕ್ಷ್ಮ ಅಧ್ಯಯನಕ್ಕೆ ಹಾವೇರಿ ಜಿಲ್ಲೆಯನ್ನು ಪ್ರಾಯೋಗಿಕವಾಗಿ ಆಯ್ದುಕೊಳ್ಳಲಾಗಿದೆ. ಪ್ರಸ್ತುತ ಅಧ್ಯಯನವನ್ನು ಐದು ಅಧ್ಯಾಯಗಳಲ್ಲಿ ವಿಂಗಡಿಸಲಾಗಿದೆ.

ಮೊದಲನೇ ಅಧ್ಯಾಯವು ಪ್ರಸ್ತಾವನೆಯಾಗಿದ್ದು ಈವರೆಗಿನ ಅಧ್ಯಯನ, ಪ್ರಸ್ತುತ ಅಧ್ಯಯನದ ಅವಶ್ಯಕತೆ, ಉದ್ದೇಶ, ವ್ಯಾಪ್ತಿ, ಸ್ವರೂಪ ಹಾಗೂ ಬಳಸಿಕೊಂಡ ಆಕರಗಳ ವಿವರಣೆಗಳನ್ನು ಒಳಗೊಂಡಿದೆ. ತ್ರಿಕೂಟ ದೇವಾಲಯಗಳ ತಲಸ್ಪರ್ಶಿ ಅಧ್ಯಯನದ ಜೊತೆಗೆ, ತುಂಗಭದ್ರಾ ನದಿಯಿಂದ ದಕ್ಷಿಣಕ್ಕೆ ಹೆಚ್ಚು ಪ್ರಚಲಿತ ದಲ್ಲಿದ್ದ ಶ್ರೀವೈಷ್ಣವಧರ್ಮ ಮತ್ತು ಜಿಲ್ಲೆಯ ಉತ್ತರಕ್ಕೆ ಪ್ರಭಾವ ಪೂರ್ಣವಾದ ಶೈವಧರ್ಮಕ್ಕೆ ಹಾವೇರಿ ಜಿಲ್ಲೆಯು ಸಂಗಮಸ್ಥಾನವಾಗಿತ್ತು. ಧರ್ಮ ಸಹಿಷ್ಣುತೆಯ ಹಿನ್ನೆಲೆಯಲ್ಲಿ ಇಲ್ಲಿಯ ತ್ರಿಕೂಟ ದೇವಾಲಯಗಳ ಪಾತ್ರವು ಬಹು ಮಹತ್ವಪೂರ್ಣ ಎಂಬಂಶವನ್ನು ಮನಗಂಡು ಆ ಹಿನ್ನೆಲೆಯಲ್ಲಿ ತಾತ್ವಿಕ ರೂಪರೇಷೆಗಳನ್ನು ಇಲ್ಲಿ ಚರ್ಚಿಸಲಾಗಿದೆ.

ಎರಡನೆಯ ಅಧ್ಯಾಯವು ಹಾವೇರಿ ಜಿಲ್ಲೆಯ ಭೌಗೋಳಿಕ, ಪರಿಸರ ಹಾಗೂ ರಾಜಕೀಯ ಹಿನ್ನೆಲೆಯನ್ನು ಒಳ ಗೊಂಡಿದೆ. ಯಾವುದೇ ಒಂದು ಕಲೆ ಮತ್ತು ಸಂಸ್ಕೃತಿಯು ಸರ್ವತೋಮುಖವಾಗಿ ಬೆಳೆಯಲು ಆ ಪ್ರದೇಶದ ಭೌಗೋಳಿಕ ಪರಿಸ್ಥಿತಿಯೂ ಕಾರಣವಾಗುತ್ತದೆ. ಫಲವತ್ತಾದ ಭೂಮಿ, ನದಿಗಳು, ಕೆರೆಗಳು

ಸಮೃದ್ಧವಾಗಿದ್ದಲ್ಲಿ ಆರ್ಥಿಕ ಪರಿಸ್ಥಿತಿಯೂ ಉತ್ತಮವಾಗಿರುತ್ತದೆ. ವರದಾ, ತುಂಗಭದ್ರಾ ಮತ್ತು ಕುಮದ್ವತಿ ನದಿಗಳ ಜೊತೆಗೆ ನೂರಾರು ಹೆಕ್ಟೇರು ಭೂಮಿಗಳಿಗೆ ನೀರನ್ನು ಒದಗಿಸಬಲ್ಲ ದೊಡ್ಡ ದೊಡ್ಡ ಕೆರೆಗಳನ್ನು ಹೊಂದಿದ ಇಂದಿನ ಹಾವೇರಿ ಜಿಲ್ಲೆಯು ಉತ್ತಮವಾದ ಭೌಗೋಳಿಕ ಪರಿಸರವನ್ನು ಹೊಂದಿದ್ದು ಇಲ್ಲಿಯ ದೇವಾಲಯಗಳ ಮೇಲೂ ಪ್ರಭಾವವನ್ನು ಬೀರಿದೆ. 'ಸುಂದರ ಪ್ರಕೃತಿಯ ತಾಣವೇ ದೇವತೆಗಳು ವಾಸಿಸುವ ಸ್ಥಾನ. ಅದು ದೇವಾಲಯಕ್ಕೆ ಯೋಗ್ಯ ಸ್ಥಳ' ಎಂದು ಶಾಸ್ತ್ರಗ್ರಂಥಗಳು ಸೂಚಿಸುವಂತೆ ಈ ಜಿಲ್ಲೆ ಉತ್ತಮವಾದ ಭೌಗೋಳಿಕ ಪರಿಸರವನ್ನು ಹೊಂದಿದೆ.

ಕಲೆ, ಧರ್ಮ, ಸಂಸ್ಕೃತಿಗಳು ಬೆಳೆದು ಉಳಿಯಲು ಉತ್ತಮವಾದ ಬೆಂಬಲ, ಪ್ರೋತ್ಸಾಹ ಹಾಗೂ ರಕ್ಷಣೆಗಳು ಅತ್ಯಗತ್ಯ. ಸುಭದ್ರವಾದ ರಾಜಕೀಯ ಹಿನ್ನೆಲೆಯಿಂದ ಮಾತ್ರ ಇದು ಸಾಧ್ಯ ಎಂಬುದೂ ಸರ್ವವಿಧಿತ. ಹಾವೇರಿ ಜಿಲ್ಲೆಯನ್ನು ಶಾತವಾಹನ, ಬನವಾಸಿ ಕದಂಬ, ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಕಳಚೂರಿ, ಸೇವುಣ, ಹೊಯ್ಸಳ ಹಾಗೂ ವಿಜಯನಗರ ಅರಸರು ಕ್ರಮವಾಗಿ ಆಳಿದರು. ಇವರ ಆಡಳಿತ ಈ ಪ್ರದೇಶದಲ್ಲಿ ಭದ್ರವಾಗಿರಲು ಇಲ್ಲಿಯ ಮಾಂಡಳಿಕರ ಪಾತ್ರವೂ ಬಹುದೊಡ್ಡದು. ಇಲ್ಲಿ ನೇರವಾಗಿ ಆಳ್ವಿಕೆ ನಡೆಸಿ ಸ್ಥಳೀಯ ಧರ್ಮ, ಕಲೆ ಮತ್ತು ಸಂಸ್ಕೃತಿಗಳು ವಿಕಸಿಸುವಲ್ಲಿ ಹಾಗೂ ಪ್ರಭುದ್ಧತೆಯನ್ನು ಮೂಡಿಸುವ ನಿಟ್ಟಿನಲ್ಲಿ ಇವರು ಕೊಟ್ಟ ಕೊಡುಗೆ ಮತ್ತು ಬೆಂಬಲಗಳು ಸ್ತುತ್ಯಾರ್ಹ. ಚಲ್ಲಕೇತನರು, ಹಾನಗಲ್ಲ ಕದಂಬರು, ಗುತ್ತಲದ ಗುತ್ತರು ಹಾಗೂ ನೂರುಂಬಾಡದ ಕದಂಬರು ತಮ್ಮ ಆಳರಸರಿಗೆ ವಿಧೇಯರಾಗಿಯೇ ಆಳಿ ಎಲ್ಲಾ ಧರ್ಮಗಳನ್ನು ಊರ್ಜಿತಗೊಳಿಸಿದರು. ಇದು ತ್ರಿಕೂಟ ದೇವಾಲಯಕ್ಕೂ ಅನ್ವಯಿಸುತ್ತದೆ. ಪ್ರಮುಖ ಆಳರಸರು ಈ ಪ್ರದೇಶದಲ್ಲಿ ಯಾವುದೇ ತ್ರಿಕೂಟ ದೇವಾಲಯವನ್ನು ನಿರ್ಮಿಸಲಿಲ್ಲ ಎಂಬುದು ವಾಸ್ತವಾಂಶ. ಮಾಂಡಳಿಕರಾದ ಗುತ್ತರು, ನೂರುಂಬಾಡದ ಕದಂಬರು ನದಿತೀರಗಳಲ್ಲಿ ಸದೃಢ, ವಿಶಾಲ ಹಾಗೂ ಕಲಾಪೂರ್ಣವಾದ ತ್ರಿಕೂಟ ದೇವಾಲಯಗಳನ್ನು ಕಟ್ಟಿದರು. ಇವರನ್ನು ಬೆಂಬಲಿಸಿ ಇವರ ಅಧಿಕಾರಿಗಳಾದ ದಂಡನಾಯಕರು, ಗಾವುಂಡರೂ ಸಹ ತ್ರಿಕೂಟ ದೇವಾಲಯಗಳನ್ನು ರಚಿಸಿದರು. ಇದರೊಂದಿಗೆ ಅಲ್ಲಿರುವ ದೇವರ ಅಂಗಭೋಗ, ರಂಗಭೋಗ, ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆ ಹಾಗೂ ದೇವಾಲಯದ ವಿವಿಧ ಚಟುವಟಿಕೆಗಳು ಸಾಂಗವಾಗಿ ನಡೆದುಕೊಂಡು ಬರಲು ಸಾಕಷ್ಟು ದಾನದತ್ತಿಗಳನ್ನು ಬಿಟ್ಟರು ಎಂಬ ಮುಖ್ಯಾಂಶಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಮೂರನೆಯ ಅಧ್ಯಾಯವು ಪ್ರಸ್ತುತ ಅಧ್ಯಯನದ ಕೇಂದ್ರಬಿಂದು ಆಗಿದೆ. ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳ ಕುರಿತು ಮೂಲ ಆಕರಗಳಾದ ದೇವಾಲಯ ವಾಸ್ತು ಮತ್ತು ದೇವಾಲಯಕ್ಕೆ ಸಂಬಂಧಪಟ್ಟ ಶಾಸನಗಳಿಂದ ಸಂಗ್ರಹಿಸಿದ ಮಾಹಿತಿಗಳನ್ನು ವಿಶ್ಲೇಷಿಸುವ ಪ್ರಯತ್ನವನ್ನು ಇದು ಒಳಗೊಂಡಿದೆ. ಒಂದರ್ಥ ದಲ್ಲಿ ಇಲ್ಲಿಯ ತ್ರಿಕೂಟ ದೇವಾಲಯಗಳು ಜಿಲ್ಲೆಯ ವ್ಯಾಪ್ತಿಯನ್ನು ಮೀರಿ ನಿಂತಿವೆ. ಪಕ್ಕದ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನ ಬಳ್ಳಿಗಾವೆಯಲ್ಲಿ ತ್ರಿಕೂಟ ದೇವಾಲಯಗಳ ಮೂಲಬೇರನ್ನು ಕಾಣಬಹುದು. ಬಳ್ಳಿಗಾವೆಯು ಕ್ರಿ.ಶ.೧೧-೧೨ನೇ ಶತಮಾನದಲ್ಲಿ ಸುಪ್ರಸಿದ್ಧ ವಿದ್ಯಾಕೇಂದ್ರವಾಗಿತ್ತು ಹಾಗೂ ಕಾಳಾಮುಖ ಶೈವಯತಿಗಳ ಕೇಂದ್ರ ಸ್ಥಳವಾಗಿತ್ತು ಎಂಬುದು ಈಗಾಗಲೇ ತಿಳಿದ ಸಂಗತಿ. ಬಳ್ಳಿಗಾವೆಯ ಪ್ರಸಿದ್ಧ

ದೇವಾಲಯಗಳಾದ ಕೇದಾರೇಶ್ವರ, ನಖರೇಶ್ವರ ಹಾಗೂ ತ್ರಿಪುರಾಂತಕೇಶ್ವರ ದೇವಾಲಯಗಳೂ ತ್ರಿಕೂಟ ದೇವಾಲಯಗಳೇ ಆಗಿರುವುದು ಗಮನಾರ್ಹ. ಇಲ್ಲಿಯ ದೇವಾಲಯಗಳ ವಾಸ್ತುವಿನ್ಯಾಸವನ್ನು ಹೋಲುವಂತೆ ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳೂ ರೂಪಗೊಂಡಿರುವುದು ವಿಶೇಷ.

ಪ್ರಸ್ತುತ ಹಾವೇರಿ ಜಿಲ್ಲೆಯಲ್ಲಿ ಒಟ್ಟು ಮೂವತ್ತೊಂದು ತ್ರಿಕೂಟ ದೇವಾಲಯಗಳಿವೆ. ಅವುಗಳಲ್ಲಿ ಮೂವತ್ತು ದೇವಾಲಯಗಳು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣಗೊಂಡು, ಕಾಳಾಮುಖ ಶೈವಯತಿಗಳ ನಿರ್ವಹಣೆಯಲ್ಲಿ ಶೈವಧರ್ಮವನ್ನು ಪ್ರತಿನಿಧಿಸುತ್ತವೆ. ನರಸಿಂಹಪುರದ ನರಸಿಂಹ ದೇವಾಲಯವು ಮಾತ್ರ ವಿಜಯನಗರ ಕಾಲದ ನಿರ್ಮಿತಿ. ಇದು ವೈಷ್ಣವಧರ್ಮವನ್ನು ಎತ್ತಿ ತೋರುತ್ತದೆ. ಇದನ್ನು ಪ್ರತ್ಯೇಕವಾಗಿ ಅಧ್ಯಯನ ಮಾಡಲಾಗಿದೆ. ಜಿಲ್ಲೆಯಲ್ಲಿ ಗುರುತಿಸಲಾದ ಮೂವತ್ತು ಶೈವ ತ್ರಿಕೂಟ ದೇವಾಲಯಗಳು ಬೇರೆ ಬೇರೆ ಉದ್ದೇಶಗಳಿಗಾಗಿ ಮೈತಳೆದಿವೆ. ಅದರಂತೆ ಅವುಗಳ ವಾಸ್ತುವಿನ್ಯಾಸ ಹಾಗೂ ಒಳಗೊಂಡ ವಾಸ್ತು ಅಂಗಗಳಲ್ಲಿಯೂ ವೈವಿಧ್ಯತೆ ಇರುವುದು ಮುಖ್ಯ ಅಂಶ. ಈ ಹಿನ್ನೆಲೆಯಲ್ಲಿ ಮೂವತ್ತು ದೇವಾಲಯಗಳನ್ನು ಮೂರು ಭಾಗಗಳಲ್ಲಿ ವಿಂಗಡಿಸಿ ಅಭ್ಯಸಿಸಲಾಗಿದೆ.

೧. ವ್ಯಕ್ತಿನಾಮ/ಪರೋಕ್ಷವಿನಯ ತ್ರಿಕೂಟ ದೇವಾಲಯಗಳು

೨. ತ್ರೈಪುರುಷ ತ್ರಿಕೂಟ ದೇವಾಲಯಗಳು

೩. ನ್ಯಾಯದರ್ಶನ/ತ್ರಿಮೂರ್ತಿ ತ್ರಿಕೂಟ ದೇವಾಲಯಗಳು

ಈ ರೀತಿ ವರ್ಗೀಕರಿಸಿದ ತ್ರಿಕೂಟ ದೇವಾಲಯಗಳು ನಿರ್ದಿಷ್ಟವಾದ ಹಿನ್ನೆಲೆಯೊಂದಿಗೆ ತಮ್ಮದೇ ಆದ ವಾಸ್ತುವಿನ್ಯಾಸವನ್ನು ಒಳಗೊಂಡು ಒಟ್ಟಾರೆ ತ್ರಿಕೂಟ ದೇವಾಲಯಗಳಿಗೆ ಹೆಚ್ಚಿನ ವೈಶಿಷ್ಟ್ಯತೆಯನ್ನು ತಂದು ಕೊಟ್ಟಿವೆ.

**೧. ವ್ಯಕ್ತಿನಾಮ/ಪರೋಕ್ಷವಿನಯ ತ್ರಿಕೂಟ ದೇವಾಲಯಗಳು :** ವ್ಯಕ್ತಿನಾಮ/ಪರೋಕ್ಷ ವಿನಯ ತ್ರಿಕೂಟ ದೇವಾಲಯಗಳ ಗುಂಪಿಗೆ ಸೇರಿದ ದೇವಾಲಯಗಳ ವಾಸ್ತು ವಿನ್ಯಾಸವನ್ನು ಗಮನಿಸಿದರೆ, ಇವು ಉಳಿದೆರಡು ಗುಂಪಿನ ದೇವಾಲಯಗಳಿಗಿಂತ ಹೆಚ್ಚು ವಿಶಾಲವಾಗಿ, ಸದೃಢವಾಗಿ ಹಾಗೂ ಹೆಚ್ಚು ಅಲಂಕಾರಯುಕ್ತವಾಗಿವೆ. ದೇವಾಲಯದ ಹೊರರಚನೆಯಲ್ಲಿ ಎತ್ತರವಾದ ಅಧಿಷ್ಠಾನ, ಅಲಂಕೃತ ಭಿತ್ತಿ ಮತ್ತು ತಲಗಳಿಂದ ಯುಕ್ತವಾದ ಮೇಲ್ಕಟ್ಟಡವಿದೆ. ದೇವಾಲಯ ಒಳರಚನೆಯಲ್ಲಿ ಮೂರು ಗರ್ಭಗೃಹಗಳು ಪಶ್ಚಿಮ, ಉತ್ತರ ಹಾಗೂ ದಕ್ಷಿಣ ದಿಕ್ಕುಗಳಲ್ಲಿವೆ. ಮೂರೂ ಗರ್ಭಗೃಹಗಳು ಅರ್ಧಮಂಟಪವನ್ನು ಹೊಂದಿವೆ. ಮೂರೂ ದಿಕ್ಕಿನ ವಾಸ್ತುರಚನೆಗಳನ್ನು ಒಂದೆಡೆ ಸೇರಿಸುವ ನವರಂಗವಿದೆ. ಇದಕ್ಕೆ ಪೂರ್ವದಿಕ್ಕಿನಲ್ಲಿ ಪ್ರವೇಶ ದ್ವಾರವಿದ್ದು, ಅದರ ಪೂರ್ವ ಭಾಗದಲ್ಲಿ ಮಹಾಮಂಟಪ ಅಥವಾ ಮುಖಚತುಷ್ಕಿಯಂತಹ ಹೆಚ್ಚಿನ ವಾಸ್ತು ರಚನೆ ಇದೆ. ಮೂರೂ ಗರ್ಭಗೃಹಗಳು ಲಿಂಗಗಳಿಗೇ ಮೀಸಲಾಗಿವೆ ಎಂಬ ಗಮನಾರ್ಹ ಅಂಶಗಳು ಈ ಗುಂಪಿಗೆ ಸೇರಿದ ತ್ರಿಕೂಟ ದೇವಾಲಯಗಳ ವಾಸ್ತುವೈಶಿಷ್ಟ್ಯ. ಜಿಲ್ಲೆಯಲ್ಲಿ ಈ ಗುಂಪಿಗೆ ಒಳಪಟ್ಟ ಆರು ದೇವಾಲಯಗಳನ್ನು ಗುರುತಿಸಲಾಗಿದೆ.



ತಳನಕ್ಷೆ ೧ - ವ್ಯಕ್ತಿನಾಮ/ಪರೋಕ್ಷವಿನಯ ದೇವಾಲಯಗಳು

೧. ಹರಳಹಳ್ಳಿಯ (ತಾ.ಹಾವೇರಿ) ಸೋಮನಾಥ ದೇವಾಲಯ

೨. ಹೊನ್ನತ್ತಿಯ (ತಾ.ರಾಣೆಬೆನ್ನೂರು) ರಾಮಲಿಂಗೇಶ್ವರ ದೇವಾಲಯ

೩. ದಶರಥಕೊಪ್ಪದ (ತಾ.ಹಾನಗಲ್ಲ) ಸೋಮನಾಥ ದೇವಾಲಯ

೪. ಅಬ್ಬಲೂರು (ತಾ.ಹಿರೇಕೆರೂರು) ಸೋಮನಾಥ ದೇವಾಲಯ

೫. ರಟ್ಟಿಹಳ್ಳಿ (ತಾ.ಹಿರೇಕೆರೂರು) ಕಡಂಬೇಶ್ವರ ದೇವಾಲಯ

೬. ಕಾರಡಗಿ (ತಾ.ಸವಣೂರು) ಡೊಳ್ಳೇಶ್ವರ ದೇವಾಲಯ

ಈ ದೇವಾಲಯಗಳ ಶಾಸನಗಳನ್ನು ಅವಲೋಕಿಸಿದರೆ, ದೇವಾಲಯಗಳು ವ್ಯಕ್ತಿಯ ಹೆಸರಿನ ಲಿಂಗಸ್ಥಾಪನೆಗಾಗಿ ನಿರ್ಮಾಣಗೊಂಡುವೆಂಬುದು ಸ್ಪಷ್ಟ. ವ್ಯಕ್ತಿಯ ಹೆಸರಿನಲ್ಲಿ ಲಿಂಗವನ್ನು ಸ್ಥಾಪಿಸಿದರೆ ವ್ಯಕ್ತಿಯೂ ದೇವರಾಗುತ್ತಾನೆ ಎಂಬ ಸದ್ಭಾವನೆಯ ಹಿನ್ನೆಲೆಯಲ್ಲಿ ಇವು ರೂಪಗೊಂಡಿವೆ. ವ್ಯಕ್ತಿನಾಮ ಲಿಂಗಗಳು ಇಲ್ಲಿ ಪರೋಕ್ಷವಿನಯವನ್ನೂ ಬಿಂಬಿಸುತ್ತವೆ. ಅಂದರೆ ದೇವಾಲಯ ನಿರ್ಮಿಸಿದ ವ್ಯಕ್ತಿಯೇ ಬೇರೆ ಮತ್ತು ಲಿಂಗನಾಮ ವ್ಯಕ್ತಿಯೇ ಬೇರೆ. ದೇವಾಲಯ ನಿರ್ಮಾತೃ ತನ್ನ ತಂದೆ ತಾಯಿಯ, ಪೂರ್ವಜರ ಅಥವಾ ಗುರುಗಳ ಹೆಸರಲ್ಲಿ ಅವರ ಪರೋಕ್ಷ ವಿನಯಕ್ಕಾಗಿ ಲಿಂಗ ಪ್ರತಿಷ್ಠಾಪನೆಯನ್ನು ಮಾಡಿರುವನು. ಪೂರ್ವಾಭಿಮುಖವಾದ ಮುಖ್ಯಗರ್ಭಗೃಹದಲ್ಲಿ ಮುಖ್ಯ ದೇವರು (ಪ್ರತಿರೂಪ ಲಿಂಗಗಳು) ಇದ್ದರೆ ದಕ್ಷಿಣ ಹಾಗೂ ಉತ್ತರ ಗರ್ಭಗೃಹಗಳಲ್ಲಿ ವ್ಯಕ್ತಿನಾಮ ಲಿಂಗಗಳನ್ನು ಕಾಣಬಹುದು. ಸಾಮಾನ್ಯವಾಗಿ ಈ ದೇವಾಲಯಗಳನ್ನು ನಿರ್ಮಿಸಿದವರು ಶ್ರೀಮಂತ ವರ್ಗಕ್ಕೆ ಸೇರಿದವರು. ಮಂಡಳೇಶ್ವರರು ಹಾಗೂ ರಾಜಕೀಯ ಕ್ಷೇತ್ರದಲ್ಲಿ ಉನ್ನತ ಹುದ್ದೆಯಲ್ಲಿ ಇದ್ದವರು. ಆರ್ಥಿಕವಾಗಿ ಸಬಲರಾದ ಇವರು ಹೆಚ್ಚು ಹಣ ವಿನಿಯೋಗಿಸಿ ತಜ್ಞ ಶಿಲ್ಪಿ ಹಾಗೂ ಉತ್ತಮ ಮಟ್ಟದ ಕಚ್ಚಾವಸ್ತುಗಳನ್ನು ಬಳಸಿ ವಿಶಾಲವಾದ ಮತ್ತು ಸದೃಢವಾದ ದೇವಾಲಯಗಳನ್ನು ನಿರ್ಮಿಸಿರುವರು. ಇದೆಲ್ಲದರ ಜೊತೆಗೆ ಇವರ ಧರ್ಮಗುರುಗಳಾದ ಕಾಳಾಮುಖ ಶೈವಯತಿಗಳ ಆಜ್ಞೆ, ಪ್ರೋತ್ಸಾಹ ಹಾಗೂ ಬೆಂಬಲಗಳೂ ಇದಕ್ಕೆ ಬಹುಮುಖ್ಯ ಕಾರಣ.

ಕ್ರಿ.ಶ.೧೧೮೧ರ ಹರಳಹಳ್ಳಿ ಶಾಸನವು ಇಲ್ಲಿಯ ಮಾಂಡಳಿಕನಾದ ಗುತ್ತ ಜೋಯಿದೇವರಸನು ಕಲ್ಯಾಣಶಕ್ತಿ ಯತಿಗಳ ಆಜ್ಞೆಯ ಮೇರೆಗೆ ವಿಕ್ರಮಪುರವನ್ನು ಮತ್ತು ಸ್ವಯಂಭೂ ಸೋಮನಾಥನ ಸನ್ನಿಧಿಯಲ್ಲಿ ತನ್ನ ಪೂರ್ವಜರಾದ ಗುತ್ತ ಹಾಗೂ ವಿಕ್ರಮಾದಿತ್ಯನ ಹೆಸರಲ್ಲಿ ಲಿಂಗಸ್ಥಾಪನೆ ಮಾಡಲು ತ್ರಿಕೂಟ ದೇವಾಲಯವನ್ನು ನಿರ್ಮಿಸಿದನೆಂದು ವಿವರಿಸಿದೆ. ಹೊನ್ನತ್ತಿಯ ಕ್ರಿ.ಶ.೧೧೮೭ ಹಾಗೂ ಕ್ರಿ.ಶ.೧೧೨೪ರ ಶಾಸನಗಳು ಮಾಂಡಳಿಕ ಗುತ್ತರ ದಂಡನಾಯಕರಾದ ದೇಕಣ್ಣ ಮತ್ತು ನಾಕಣ್ಣರು ಹೊನ್ನತ್ತಿಯಲ್ಲಿ ಚಾಮೇಶ್ವರ ದೇವಾಲಯವನ್ನು ನಿರ್ಮಿಸಿದರೆಂದೂ, ಸರ್ವಪ್ರಧಾನನಾದ ತಿಪ್ಪರಸನು ಆ ಚಾಮೇಶ್ವರ ದೇವರ ಸನ್ನಿಧಿಯಲ್ಲಿ ರಾಜೇಶ್ವರ ಲಿಂಗವನ್ನು ಪ್ರತಿಷ್ಠಾಪಿಸಿದನೆಂದು ದಾಖಲಿಸಿವೆ.

ಕ್ರಿ.ಶ.೧೨೦೦ರ ಅಬ್ಬಲೂರಿನ ಶಾಸನವು ಏಕಾಂತರಾಮಯ್ಯನ ಪವಾಡವನ್ನು ಉಲ್ಲೇಖಿಸುತ್ತದೆ. ಏಕಾಂತ ರಾಮಯ್ಯನು ನಿರ್ಮಿಸಿದ ಸೋಮೇಶ್ವರ ತ್ರಿಕೂಟ ದೇವಾಲಯವು ಶೈವ ಮತ್ತು ಜೈನ ಧರ್ಮಗಳ ಸಂಘರ್ಷದ ಭೌತಿಕ ರೂಪವಾಗಿದೆ. ರಾಮಯ್ಯನು ಶಿರಸ್ ಪವಾಡದಲ್ಲಿ ಜಯಗಳಿಸಿದ ನಂತರ ಜೈನ ಧರ್ಮೀಯರೊಂದಿಗೆ ಹೋರಾಡಿ ಜಿನಮೂರ್ತಿಯನ್ನು ಒಡೆದು, ಜಿನಾಲಯವನ್ನು ನೆಲಸಮ ಮಾಡಿ ಅಲ್ಲಿ ಶಿವಾಗಮೋಕ್ತವಾಗಿ ಸೋಮನಾಥ ತ್ರಿಕೂಟ ದೇವಾಲಯವನ್ನು ನಿರ್ಮಿಸುತ್ತಾನೆ. ಸೋಮನಾಥನ ಸನ್ನಿಧಿಯಲ್ಲಿ ತನ್ನ ಗುರು ಅಗ್ನಿಹೊನ್ನಯ್ಯ ಮತ್ತು ತನ್ನ ಹೆಸರಿನಲ್ಲಿ ಲಿಂಗಗಳನ್ನು ಪ್ರತಿಷ್ಠಾಪಿಸುತ್ತಾನೆ.

ಕ್ರಿ.ಶ.೧೨೩೪ರ ರಟ್ಟಿಹಳ್ಳಿ ಶಾಸನದ ಪ್ರಕಾರ ನೂರುಂಬಾಡದ ಮಂತ್ರಿ ಹೊನ್ನಬೊಮ್ಮಸೆಟ್ಟಿಯು ಕಾಳಾಮುಖ ಗುರು ಮೂರುಜಾವಿದೇವ ಯತಿಯ ಉಪದೇಶದ ಮೇರೆಗೆ ರಟ್ಟಿಹಳ್ಳಿಯ ಕಡಂಬೇಶ್ವರನ ಸನ್ನಿಧಿಯಲ್ಲಿ ತನ್ನ ತಂದೆ ಮಲ್ಲಿಸೆಟ್ಟಿ ಹಾಗೂ ತಾಯಿ ರಾಜಲೆಯ ಹೆಸರಿನಲ್ಲಿ ಮಲ್ಲೇಶ್ವರ ಹಾಗೂ ರಾಜೇಶ್ವರ ಲಿಂಗಗಳನ್ನು ಇರಿಸಿ, ಈ ಮೊದಲು ಏಕಕೂಟವಾಗಿದ್ದ ದೇವಾಲಯವನ್ನು ತ್ರಿಕೂಟವಾಗಿ ಮಾರ್ಪಡಿಸಿದನು. ದಶರಥಕೊಪ್ಪದ ಗುರುಭಕ್ತರಗುಡಿ ಹಾಗೂ ಕಾರಡಗಿ ಡೊಳ್ಳೇಶ್ವರ ದೇವಾಲಯದ ಶಾಸನಗಳು ಲಭ್ಯವಿಲ್ಲ. ಸ್ಥಳೀಯರ ಹೇಳಿಕೆಯಂತೆ ಮತ್ತು ದೇವಾಲಯಗಳ ಹೆಸರೇ ಸೂಚಿಸುವಂತೆ ಈ ದೇವಾಲಯಗಳೂ ಸಹ ವ್ಯಕ್ತಿನಾಮ ದೇವಾಲಯಗಳು. ಇವುಗಳ ವಾಸ್ತುವಿನ್ಯಾಸವು ಮೇಲಿನ ದೇವಾಲಯಗಳಂತೆ ಇದೆ.

ಇಲ್ಲಿ ಗಮನಾರ್ಹ ಅಂಶವೆಂದರೆ ದೇವಾಲಯಗಳನ್ನು ನಿರ್ಮಿಸಿದವರೇ ಇಲ್ಲಿ ನಡೆಯುವ ದೇವರ ಅಂಗಭೋಗ, ರಂಗಭೋಗ, ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆಂದು ಹಳ್ಳಿಗಳನ್ನು ಕಾಳಾಮುಖ ಯತಿಗಳ ಕಾಲುತೊಳೆದು ದಾನವಾಗಿ ಕೊಟ್ಟಿರುವರು. ಮುಂದೆಯೂ ಸಹ ಆ ವ್ಯಕ್ತಿಯ ವಂಶಸ್ಥರೇ ದಾನದತ್ತಿಗಳನ್ನು ಮುಂದುವರೆಸಿ ಸಂಕ್ರಮಣ, ಸೂರ್ಯ-ಚಂದ್ರ-ಗ್ರಹಣಗಳ ದಿನದಲ್ಲಿ ಹಾಗೂ ತಮ್ಮ ಪಟ್ಟಬಂದೋತ್ಸವ ಸಂದರ್ಭಗಳಲ್ಲಿ ತಮ್ಮ ಪೂರ್ವಜರ ಹೆಸರಲ್ಲಿರುವ ಈ ದೇವಾಲಯಗಳಿಗೆ ದಾನಕೊಟ್ಟಿರುವುದು ವಿಶೇಷ. ಒಂದರ್ಥದಲ್ಲಿ ಇಂಥ ದೇವಾಲಯಗಳು ಆಯಾ ಮನೆತನಕ್ಕೆ ಸಂಬಂಧಪಟ್ಟ ದೇವಾಲಯಗಳಂತೆ ತೋರುತ್ತವೆ. ಸಮಾಜದ ವಿವಿಧ ಸಂಘ-ಸಂಸ್ಥೆಗಳಾಗಲಿ, ಶ್ರೀಸಾಮಾನ್ಯರಾಗಲಿ ಈ ದೇವಾಲಯಗಳಿಗೆ ದಾನ ಕೊಟ್ಟಿಲ್ಲ. ಶ್ರೀಮಂತರ ಆಶ್ರಯದಲ್ಲಿದ್ದ ಇವು ಸಾರ್ವಜನಿಕರ ದಾನದತ್ತಿಗಳನ್ನು ಎದುರು ನೋಡಲಿಲ್ಲ ಎಂದರೂ ಸರಿ.

೨. ತ್ರೈಪುರುಷ ತ್ರಿಕೂಟ ದೇವಾಲಯಗಳು : ತ್ರೈಪುರುಷ ತ್ರಿಕೂಟ ದೇವಾಲಯಗಳ ಗುಂಪಿಗೆ ಸೇರಿದ ದೇವಾಲಯಗಳ ವಾಸ್ತುಶೈಲಿಯನ್ನು ಗಮನಿಸಿದರೆ, ಇವು ಉಳಿದೆರಡು ಗುಂಪಿನ ದೇವಾಲಯಗಳಿಂದ ಭಿನ್ನವಾಗಿದೆ. ದೇವಾಲಯದ ಹೊರರಚನೆಯಲ್ಲಿ ಅಬ್ಬಲೂರಿನ ಬ್ರಹ್ಮಲಿಂಗೇಶ್ವರ ದೇವಾಲಯವನ್ನು ಹೊರತುಪಡಿಸಿ ಉಳಿದೆಲ್ಲ ದೇವಾಲಯಗಳು ನೆಲಮಟ್ಟಕ್ಕೆ ಅಧಿಷ್ಠಾನ, ಅಲಂಕಾರರಹಿತ ಭಿತ್ತಿ ಹಾಗೂ ಕಟ್ಟಡದ ಮೇಲ್ಭಾಗಕ್ಕೆ ಕದಂಬ ನಾಗರ ಶೈಲಿ ಶಿಖರವನ್ನು ರೂಪಿಸಲಾಗಿದೆ. ದೇವಾಲಯ ಒಳರಚನೆಯಲ್ಲಿ ಮೂರು ಗರ್ಭಗೃಹಗಳು ಪೂರ್ವ, ಪಶ್ಚಿಮ ಹಾಗೂ ಉತ್ತರ ದಿಕ್ಕುಗಳಲ್ಲಿವೆ. ಮೂರೂ ಗರ್ಭಗೃಹಗಳಿಗೆ ಅರ್ಧಮಂಟಪಗಳಿವೆ. ಪೂರ್ವದಿಕ್ಕಿನ ಗರ್ಭಗೃಹದ ಮುಂಭಾಗದಲ್ಲಿ ಲಿಂಗಕ್ಕೆ ಮುಖಮಾಡಿ ಕುಳಿತ ನಂದಿ ಶಿಲ್ಪವಿದೆ. ಮಧ್ಯದ ನವರಂಗದ ದಕ್ಷಿಣ ದಿಕ್ಕಿಗೆ ಪ್ರವೇಶದ್ವಾರ ಇರುವುದು ಈ ದೇವಾಲಯಗಳ ಬಹು ಮುಖ್ಯ ಅಂಶ. ಮೂರು ಗರ್ಭಗೃಹಗಳು ಲಿಂಗ, ವಿಷ್ಣು ಹಾಗೂ ಸೂರ್ಯರಿಗಾಗಿ ಮೀಸಲಾಗಿವೆ. ತ್ರೈಪುರುಷ ದೇವಾಲಯಗಳ ಆವರಣದಲ್ಲಿ ಸರಸ್ವತಿ ದೇವಾಲಯವಿದೆ. ಇವು ಈ ಗುಂಪಿಗೆ ಸೇರಿದ ತ್ರಿಕೂಟ ದೇವಾಲಯಗಳ ವಾಸ್ತುವೈಶಿಷ್ಟ್ಯ. ಈ ದೇವಾಲಯಗಳ ಮೇಲೆ ಬಳ್ಳಿಗಾವೆಯ ಪ್ರಸಿದ್ಧ ದೇವಾಲಯವಾದ ತ್ರಿಪುರಾಂತಕೇಶ್ವರ ದೇವಾಲಯದ ಪ್ರಭಾವವನ್ನು ಕಾಣಬಹುದು. ಜಿಲ್ಲೆಯಲ್ಲಿ ಎಂಟು ತ್ರೈಪುರುಷ ದೇವಾಲಯ ಗಳನ್ನು ಗುರುತಿಸಲಾಗಿದೆ.



ತಳನಕ್ಷೆ ೨ - ತ್ರೈಪುರುಷ ದೇವಾಲಯಗಳು

೧. ಉಪ್ಪುಣಸಿ (ತಾ.ಹಾನಗಲ್ಲ) ಕಲ್ಮೇಶ್ವರ ದೇವಾಲಯ

೨. ಕುಳೇನೂರು (ತಾ.ಹಾವೇರಿ) ಕಲ್ಮೇಶ್ವರ ದೇವಾಲಯ

೩. ಮೇದೂರು (ತಾ.ಹಿರೇಕೆರೂರು) ಮಾಕಾಳೇಶ್ವರ ದೇವಾಲಯ

೪. ಕಲಕೇರಿ (ತಾ.ಹಾನಗಲ್ಲ) ಸೋಮೇಶ್ವರ ದೇವಾಲಯ

೫. ಅಬ್ಬಲೂರು (ತಾ.ಹಿರೇಕೆರೂರು) ಬ್ರಹ್ಮಲಿಂಗೇಶ್ವರ ದೇವಾಲಯ

೬. ನಾಗವಂದ (ತಾ.ಹಿರೇಕೆರೂರು) ಸಿದ್ಧೇಶ್ವರ ದೇವಾಲಯ

೭. ಪುರದಗೇರಿ (ತಾ.ಹಿರೇಕೆರೂರು) ಸೋಮೇಶ್ವರ ದೇವಾಲಯ

೮. ಕರಗುದರಿ (ತಾ.ಹಾನಗಲ್ಲ) ಶಂಕರ ದೇವಾಲಯ

ಈ ದೇವಾಲಯಗಳ ಶಾಸನಗಳನ್ನು ಅವಲೋಕಿಸಿದರೆ ದೇವಾಲಯಗಳು ಶಿವ, ವಿಷ್ಣು ಹಾಗೂ ಸೂರ್ಯರಿಗಾಗಿ ನಿರ್ಮಾಣಗೊಂಡವು ಎಂಬುದು ಸ್ಪಷ್ಟ. ಋಗ್ವೇದದ ದಶಮಮಂಡಲದ ಹತ್ತನೆಯ ಸೂಕ್ತವು ಪುರುಷನನ್ನು ಕುರಿತು:

**'ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷ: ಸಹಸ್ರಪಾತ್**

**ಸ ಭೂಮಿಂ ವಿಶ್ವತೊ ವೃತ್ವಾತ್ಯತಿಷ್ಠದ್ದಶಾಂಗುಲಂ'**

ಎಂದು ವರ್ಣಿಸಿದೆ. ಇಲ್ಲಿ ಪುರುಷನನ್ನು ಸಂಕುಚಿತ ದೃಷ್ಟಿಯಿಂದ ನೋಡದೆ ವಿಶಾಲ ಅರ್ಥದಲ್ಲಿ ಕಂಡಿದೆ. ಮುಂದಿನ ಮಂತ್ರಗಳಲ್ಲಿ ಪುರುಷನಿಂದಲೇ ಸಕಲ ಜಗತ್ತು ಹುಟ್ಟಿದೆ ಅವನಿಂದಲೇ ಸೃಷ್ಟಿ, ಸ್ಥಿತಿ ಹಾಗೂ ಲಯ ಕಾರ್ಯಗಳು ಜರುಗುತ್ತವೆ ಎಲ್ಲದಕ್ಕೂ ಅವನೇ ಕಾರಣ ಎಂದು ವಿವರಣೆ ಇದೆ. ನಂತರದ ದಿನಗಳಲ್ಲಿ ಅಂದರೆ ಆಗಮ ಪುರಾಣಗಳ ಕಾಲದಲ್ಲಿ ಶೈವಾಗಮ ಮತ್ತು ಶೈವ ಪುರಾಣಗಳು ಶಿವನನ್ನು 'ಪುರುಷ'ನಾಗಿ ಕಂಡರೆ, ವೈಷ್ಣವಾಗಮ ಮತ್ತು ವೈಷ್ಣವ ಪುರಾಣಗಳು ವಿಷ್ಣುವನ್ನು 'ಪುರುಷ'ನಾಗಿ ವರ್ಣಿಸಿವೆ. ಬ್ರಹ್ಮ ಮತ್ತು ಪದ್ಮ ಪುರಾಣಗಳು ಬ್ರಹ್ಮನನ್ನು ಸ್ತುತಿಸುತ್ತವೆ. ಹೀಗೆ ಬೇರೆ ಬೇರೆ ಪಂಥಗಳಲ್ಲಿ 'ಪುರುಷ' ಸ್ಥಾನ ದಲ್ಲಿರುವ ಮೂರೂ ದೇವರನ್ನು ಒಂದೆಡೆಯಲ್ಲಿ ಪೂಜಿಸುವುದೇ ತ್ರೈಪುರುಷ ದೇವಾಲಯಗಳ ಉದ್ದೇಶ. ಇಲ್ಲಿ ಮೂವರಿಗೂ ಸಮಾನ ಸ್ಥಾನಮಾನಗಳನ್ನು ಕೊಟ್ಟಿದೆ.

ಎಲ್ಲಾ ಧರ್ಮಗಳಿಗೂ ಆಶ್ರಯವಿದ್ದ ಈ ಪ್ರದೇಶದಲ್ಲಿ ಧರ್ಮ ಸಮನ್ವಯತೆ ಹಾಗೂ ಸಂಘರ್ಷಗಳು ಕಂಡುಬಂದಿವೆ. ವರದಾ ಮತ್ತು ತುಂಗಭದ್ರಾ ನದಿಗಳ ಮಧ್ಯದ ಭೂಪ್ರದೇಶವಾದ ಹಾವೇರಿ ಜಿಲ್ಲೆಯು ಈ ಕಾಲದಲ್ಲಿ ಜೈನಧರ್ಮದ ಪ್ರಭಾವಕ್ಕೆ ಒಳಗಾಗಿತ್ತು. ಜೊತೆಗೆ ತುಂಗಭದ್ರಾ ನದಿಯ ದಕ್ಷಿಣಕ್ಕಿರುವ ಶ್ರೀವೃಷ್ಣವ ಧರ್ಮ ಮತ್ತು ಉತ್ತರ ಭಾಗದ ಶೈವಧರ್ಮಗಳ ಸಂಗಮ ಸ್ಥಾನವಾಗಿತ್ತು. ಈ ಪರಿಸ್ಥಿತಿಯಲ್ಲಿ ಧಾರ್ಮಿಕ ಸ್ವಾಸ್ಥ್ಯ ಕಾಪಾಡಿಕೊಳ್ಳುವ ಅನಿವಾರ್ಯತೆ ಇತ್ತು. ಇದನ್ನು ಪೂರೈಸಲು ತ್ರೈಪುರುಷ ದೇವಾಲಯಗಳು ಮೈತಳೆದವು ಎನ್ನುವಲ್ಲಿ ಎರಡನೇ ಮಾತಿಲ್ಲ. ಇದರಿಂದ ಸಮಾಜದ ವಿವಿಧ ಪಂಥೀಯ ಜನ ಒಂದೆಡೆ ಸೇರಲು ಅನುಕೂಲ ವಾಯಿತು. ಬಹು ಜನರ ಮನ್ನಣೆ ಪಡೆದ ತ್ರೈಪುರುಷ ದೇವಾಲಗಳು ಸಮಾಜಕ್ಕೆ ಅತ್ಯಗತ್ಯವಾದ ವಿದ್ಯಾದಾನ ಕಾರ್ಯವನ್ನು ಕೈಗೊಂಡಿದ್ದರಿಂದ ಜನರಿಗೆ ಇನ್ನಷ್ಟು ಹತ್ತಿರವಾದದ್ದು ಸಹಜ. ಇಲ್ಲಿಯ ದೇವರ ಅಂಗಭೋಗ, ರಂಗಭೋಗ, ವಿವಿಧ ಹಬ್ಬ-ಹರಿದಿನಗಳಿಗೆ ಹಾಗೂ ಕ್ರಮಬದ್ಧವಾಗಿ ನಡೆಯುವ ವಿದ್ಯಾದಾನಕ್ಕೆಂದು ಸಮಾಜದ ವಿವಿಧ ಸ್ತರಗಳಿಗೆ ಸೇರಿದ ಜನರಿಂದ ದಾನ-ಧತ್ತಿಗಳು ಹರಿದು ಬಂದವು. ಪ್ರಮುಖ ರಾಜಮನೆತನ ಗಳಿಂದ ಮೊದಲ್ಗೊಂಡು ಶ್ರೀಸಾಮಾನ್ಯರವರೆಗೂ ದಾನ ನೀಡಿದ ಬಗ್ಗೆ ಅಧಿಕೃತವಾಗಿ ಶಾಸನಗಳೇ ದಾಖಲಿಸಿವೆ.

ತ್ರೈಪುರುಷ ದೇವಾಲಯಗಳನ್ನು ಜನ ಮೆಚ್ಚಿಕೊಂಡಂತೆ ಇವುಗಳನ್ನು ನಿರ್ಮಿಸಿದ ವ್ಯಕ್ತಿಗಳನ್ನೂ ಬಹುವಾಗಿ ಗೌರವಿಸಿ, ಪೂಜ್ಯಭಾವದಿಂದ ಕಂಡಿದ್ದಾರೆ. ಕ್ರಿ.ಶ.೧೧೦೧ರ ಅಬ್ಬಲೂರು ಶಾಸನವು ಅಬ್ಬಲೂರು ಬ್ರಹ್ಮಲಿಂಗೇಶ್ವರ ತ್ರೈಪುರುಷ ದೇವಾಲಯವನ್ನು ನಿರ್ಮಿಸಿದ ಬ್ರಹ್ಮಗಾವುಂಡನನ್ನು ಶಾಸನವು 'ಇವನು ಔದಾರ್ಯದಲ್ಲಿ ದಿಲೀಪ, ಸತ್ಯವಾಕ್ಯ ಪರಿಪಾಲನೆಯಲ್ಲಿ ಚಂಪಾಪತಿ, ಪರೋಪಕಾರದಲ್ಲಿ ಕಲ್ಪವೃಕ್ಷ ನಾಗಿದ್ದರಿಂದ ಅವನಿಂದ ಈ ವೈಶಿಷ್ಟ್ಯಪೂರ್ಣ ದೇವಾಲಯವನ್ನು ಕಟ್ಟಲಾಯಿತೆಂದೂ, ಜನರು ಇದನ್ನು ಕೈಲಾಸ, ಮೇರು, ಅಚ್ಯುತನ ವಾಸಸ್ಥಾನ ಎಂದು ಕರೆಯುತ್ತಿದ್ದರು ಎಂದು ವಿವರಿಸಿದೆ. ಇದೇ ರೀತಿ ಕರಗುದರಿ ಯಲ್ಲಿ ತ್ರೈಪುರುಷ ದೇವಾಲಯವನ್ನು ನಿರ್ಮಿಸಿದ ಮಲ್ಲಿಯಕ್ಕಳೂ ಸಹ ಹೊಗಳಿಕೆಗೆ ಪಾತ್ರಳಾಗಿದ್ದಾಳೆ. ಕ್ರಿ.ಶ.೧೧೦೮ರ ಕರಗುದರಿ ಶಾಸನದಲ್ಲಿ ಇವಳನ್ನು ಸದ್ಗುಣಿ, ಧರ್ಮವನ್ನು ಎತ್ತಿ ಹಿಡಿಯುವವಳೆಂದೂ, ಇವಳ ಶ್ಲಾಘನೀಯ ಕಾರ್ಯವನ್ನು ಕಂಡು ಅವಳು ಪ್ರತಿಷ್ಠಾಪಿಸಿದ ಮೂರ್ತಿಗಳು ಉಮಾಪತಿ, ಹರಿ, ಭಾಸ್ಕರ ಎಂದೊಡೆ ಮಹಾಮಂಡಳೇಶ್ವರ ಕದಂಬ ತೈಲನು ಮಲ್ಲಿಯಕ್ಕಳಂತಹ ಸತಿಗೆ ಸಮಾನರಾರು? ಎಂದು ಉದ್ಗಾರ ತೆಗೆದನು ಎಂದು ದಾಖಲಿಸಿದೆ. ಅದರಂತೆ ಕ್ರಿ.ಶ.೧೦೭೧ ಕಲಕೇರಿ ಶಾಸನ ಸ್ವಯಂಭೂ ಸೋಮೇಶ್ವರ ತ್ರೈಪುರುಷ ದೇವಾಲಯಕ್ಕೆ ದೊಡ್ಡ ಪ್ರಮಾಣದಲ್ಲಿ ದಾನಕೊಟ್ಟ ಮಾಳಲದೇವಿ ಯನ್ನು 'ಹರಭಕ್ತೆ ಆಗಿದ್ದರೂ ಕೂಡ ಸಕಲ ಧರ್ಮಗಳಿಗೆ ಆಶ್ರಯಕೊಟ್ಟು ಬೆಳೆಸುವವಳು' ಎಂದು ಸ್ತುತಿಸಿದೆ. ಒಟ್ಟಾರೆ ಈ ತ್ರೈಪುರುಷ ದೇವಾಲಯಗಳು ದಾನ-ದತ್ತಿಗಳನ್ನು ಪಡೆದು ತನ್ನ ವಿವಿಧ ಚಟುವಟಿಕೆಗಳ ಜೊತೆಗೆ ವಿದ್ಯಾದಾನಕ್ಕೆ ಹೆಚ್ಚಿನ ಪ್ರಾಮುಖ್ಯತೆ ಕೊಟ್ಟು ಮಧ್ಯಯುಗೀನ ಕಾಲದ ಶಿಕ್ಷಣ ಸಂಸ್ಥೆಗಳಾಗಿ ಮೆರೆದಿದ್ದಂತೂ ಸುಸ್ಪಷ್ಟ.

೩. ನ್ಯಾಯದರ್ಶನ ತ್ರಿಕೂಟ ದೇವಾಲಯಗಳು : ನ್ಯಾಯದರ್ಶನ ತ್ರಿಕೂಟ ದೇವಾಲಯಗಳ ವಾಸ್ತು ಶೈಲಿಯು ಉಳಿದೆರಡು ಗುಂಪಿನ ದೇವಾಲಯಗಳ ವಾಸ್ತುಶೈಲಿಯಿಂದ ಭಿನ್ನವಾಗಿದ್ದು ಸಾಧಾರಣ ರೀತಿಯಲ್ಲಿ




ತಳನಕ್ಷೆ ೩ - ನ್ಯಾಯದರ್ಶನ ದೇವಾಲಯಗಳು

ರಚನೆಗೊಂಡಿವೆ. ದೇವಾಲಯಗಳ ಹೊರಮೈ ಮಣ್ಣಿನಿಂದ ಆವೃತವಾಗಿದೆ. ಇತ್ತೀಚೆಗೆ ಸ್ಥಳೀಯರು ಕೆಲವು ದೇವಾಲಯಗಳ ಮಣ್ಣನ್ನು ತೆಗೆದಿರುವರು. ದೇವಾಲಯದ ಒಳರಚನೆಯಲ್ಲಿ ಮೂರು ಗರ್ಭಗೃಹಗಳು ಪಶ್ಚಿಮ, ಉತ್ತರ ಹಾಗೂ ದಕ್ಷಿಣ ದಿಕ್ಕುಗಳಲ್ಲಿವೆ. ಮುಖ್ಯ ಗರ್ಭಗೃಹವಾದ ಪಶ್ಚಿಮ ಗರ್ಭಗೃಹಕ್ಕೆ ಮಾತ್ರ ಅರ್ಧಮಂಟಪ ರಚನೆ ಇದೆ. ಉಳಿದೆರಡು ಗರ್ಭಗೃಹಗಳು ನೇರವಾಗಿ ಮಧ್ಯದ ನವರಂಗಕ್ಕೆ ಜೋಡಣೆಗೊಂಡಿವೆ. ನವರಂಗವು ಪೂರ್ವದಿಕ್ಕಿನಲ್ಲಿ ಪ್ರವೇಶದ್ವಾರವನ್ನು ಹೊಂದಿದೆ. ಎರಡು ಗರ್ಭಗೃಹಗಳಲ್ಲಿ ಲಿಂಗಗಳನ್ನು, ಒಂದರಲ್ಲಿ ವಿಷ್ಣು ಶಿಲ್ಪವನ್ನು ಕಾಣುತ್ತೇವೆ. ಇದು ನ್ಯಾಯದರ್ಶನ ದೇವಾಲಯಗಳ ವಾಸ್ತುಶಿಲ್ಪ ವೈಶಿಷ್ಟ್ಯ. ಈ ದೇವಾಲಯಗಳ ಮೇಲೆ ಬಳ್ಳಿಗಾವೆಯ ಪ್ರಸಿದ್ಧ ದೇವಾಲಯವಾದ ಕೇದಾರೇಶ್ವರ ತ್ರಿಕೂಟ ದೇವಾಲಯದ ಪ್ರಭಾವವನ್ನು ಕಾಣಬಹುದು. ಇಲ್ಲಿಯ ವಾಸ್ತುಶಿಲ್ಪವನ್ನೇ ಹಾವೇರಿ ಜಿಲ್ಲೆಯ ನ್ಯಾಯದರ್ಶನ ದೇವಾಲಯಗಳು ಹೋಲುತ್ತವೆ.

ಜಿಲ್ಲೆಯಲ್ಲಿ ಒಟ್ಟು ೧೬ ನ್ಯಾಯದರ್ಶನ ದೇವಾಲಯಗಳನ್ನು ಗುರುತಿಸಿದೆ.

೧. ಅಂತರವಳ್ಳಿ (ತಾ.ರಾಣೆಬೆನ್ನೂರು) ಕಲ್ಮೇಶ್ವರ ದೇವಾಲಯ

೨. ಅಕ್ಕಿ ಆಲೂರು (ತಾ.ಹಾನಗಲ್ಲ) ಕಲ್ಮೇಶ್ವರ

೩. ಆಲದಗೇರಿ (ತಾ.ಹಿರೇಕೆರೂರು) ಕಲ್ಮೇಶ್ವರ

೪. ಕಡೂರು (ತಾ.ಹಿರೇಕೆರೂರು) ಕಲ್ಮೇಶ್ವರ

೫. ಕಿರಗೇರಿ (ತಾ.ಹಿರೇಕೆರೂರು) ಕಲ್ಮೇಶ್ವರ

೬. ಕುಂಚೂರು (ತಾ.ಹಿರೇಕೆರೂರು) ಕಲ್ಮೇಶ್ವರ

೭. ಕುಡುಪಲಿ (ತಾ.ಹಿರೇಕೆರೂರು) ಕಲ್ಮೇಶ್ವರ

೮. ಗುಂಡೂರು (ತಾ.ಸವಣೂರು) ಮೂರು ದೇವರ ಗುಡಿ

೯. ಗುಡಗೂರು (ತಾ.ರಾಣೆಬೆನ್ನೂರು) ಕಲ್ಮೇಶ್ವರ

೧೦. ಗುಡ್ಡದ ಆನವೇರಿ (ತಾ.ಣೆಬೆನ್ನೂರು) ಕಲ್ಮೇಶ್ವರ

೧೧. ಮತ್ತಿಹಳ್ಳಿ (ತಾ.ಹಿರೇಕೆರೂರು) ಸೋಮೇಶ್ವರ

೧೨. ಮತ್ತೂರು (ತಾ.ಬ್ಯಾಡಗಿ) ಕಲ್ಮೇಶ್ವರ

೧೩. ಸಿಡೇನೂರು (ತಾ.ಬ್ಯಾಡಗಿ) ಕಲ್ಮೇಶ್ವರ

೧೪. ಹಿರೇಕೊಣತಿ (ತಾ.ಹಿರೇಕೆರೂರು) ಕಲ್ಮೇಶ್ವರ

೧೫. ಹಿರೇಮಾಗನೂರು (ತಾ.ಹಿರೇಕೆರೂರು) ಕಲ್ಮೇಶ್ವರ

೧೬. ಹೊನ್ನತ್ತಿ (ತಾ.ರಾಣೆಬೆನ್ನೂರು) ಕಲ್ಮೇಶ್ವರ

ಹದಿನಾರು ದೇವಾಲಯಗಳ ನಿರ್ಮಾಣದ ಹಿನ್ನೆಲೆಯತ್ತ ನೋಡಿದರೆ ಇವು ಬಳ್ಳಿಗಾವೆಯ ಕೇದಾರೇಶ್ವರ ದೇವಾಲಯವನ್ನು ಹೋಲುತ್ತವೆ. ಕೇದಾರೇಶ್ವರದ ಕಾಳಾಮುಖ ಮುನಿಗಳ ಮೇಲ್ವಿಚಾರಣೆಯಲ್ಲಿ ಇವು ಇದ್ದವು ಎಂಬುದೂ ಗಮನೀಯ. 'ಪರಮನೈಯಾಯಿಕ', 'ನೈಯಾಯಿಕ ಸಂರಕ್ಷಣೈಕದಕ್ಷ', 'ನೈಯಾಯಿಕಾ ಗ್ರೇಸರ' ಎಂದು ಮುಂತಾಗಿ ಶಾಸನಗಳಲ್ಲಿ ಉಲ್ಲೇಖಿಸಿಕೊಂಡ ಕಾಳಾಮುಖ ಶೈವ ಪಂಥದ ಮುನಿಗಳು ಷಡ್ದರ್ಶನಗಳಲ್ಲಿ ಒಂದಾದ ನ್ಯಾಯದರ್ಶನವನ್ನು ನಂಬಿ ನಡೆದರು ಎಂಬುದು ದಿಟ. ನ್ಯಾಯದರ್ಶನ ಪ್ರತಿಪಾದಿಸುವ ಈಶ್ವರನ ಅನಿತ್ಯರೂಪಗಳಾದ ಸೃಷ್ಟಿ, ಸ್ಥಿತಿ ಹಾಗೂ ಲಯಗಳನ್ನು ಒಪ್ಪಿ ಪೂಜಿಸಿದ್ದು ವಾಸ್ತವ. ಮೂರು ಅನಿತ್ಯ ರೂಪಗಳನ್ನು ಪ್ರತ್ಯೇಕವಾಗಿ ಪೂಜಿಸಲು ತ್ರಿಕೂಟ ದೇವಾಲಯಗಳನ್ನು ಬಳಸಿಕೊಂಡಿರುವುದು ನಿಜಕ್ಕೂ ಶ್ಲಾಘನೀಯ. ಸೃಷ್ಟಿಕರ್ತನಾದ ಬ್ರಹ್ಮನನ್ನು ಹಾಗೂ ಲಯಕರ್ತನಾದ ಮಹೇಶ್ವರನನ್ನು ಲಿಂಗರೂಪದಲ್ಲಿ ಸ್ಥಿತಿಕರ್ತನಾದ ವಿಷ್ಣುವನ್ನು ಶಿಲ್ಪರೂಪದಲ್ಲಿ ಕಂಡದ್ದೂ ವಿಶೇಷ. ಈಶ್ವರನ ಅನಿತ್ಯ ರೂಪಗಳನ್ನು ಮೂರು ಕೋಣೆಗಳಲ್ಲಿ ಪ್ರತ್ಯೇಕವಾಗಿಟ್ಟು ಪೂಜಿಸಿದರು ಎಂಬ ಹಿನ್ನೆಲೆಯಲ್ಲಿಯೇ ಕೇದಾರೇಶ್ವರ ಮುನಿ ಪರಂಪರೆಯವರನ್ನು 'ಮೂವರ ಕೋಣೆಯ ಸಂತತಿಯವರು' ಎಂದು ಶಾಸನಗಳು ದಾಖಲಿಸಿವೆ. 'ಮೂವರ ಕೋಣೆಯ ಸಂತತಿ'ಯ ಹಿನ್ನೆಲೆ ಕುರಿತು ಸಾಕಷ್ಟು ಚರ್ಚೆಗಳು ವಿದ್ವಾಂಸರಲ್ಲಿ ನಡೆದಿವೆ. ಆದರೆ ಸ್ಪಷ್ಟತೆ ಇಲ್ಲ. ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಂಡ ಹೊಸ ವಿಚಾರ ಹೆಚ್ಚು ಸ್ಪಷ್ಟ ಹಾಗೂ ನಿಖರತೆಯನ್ನು ಕೊಡಬಹುದು. ಹೀಗೆ ಬಳ್ಳಿಗಾವೆಯ ಕೇದಾರೇಶ್ವರ ಮುನಿಪರಂಪರೆಯವರು ತಮ್ಮ ನ್ಯಾಯದರ್ಶನದ ದಾರ್ಶನಿಕ ನೋಟವನ್ನು ಭೌತಿಕವಾಗಿ ಬಿಂಬಿಸಲು ಮತ್ತು ಎಲ್ಲೆಡೆ ಹರಡಲು ನ್ಯಾಯದರ್ಶನ ದೇವಾಲಯಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ನಿರ್ಮಿಸಿದ್ದು ಬಹು ಗಮನಾರ್ಹ.

ನ್ಯಾಯದರ್ಶನ ದೇವಾಲಯಗಳ ಶಾಸನಗಳು ಹೆಚ್ಚಿನ ಸಂಖ್ಯೆಯಲ್ಲಿ ದೊರೆತಿಲ್ಲ. ಹೀಗಾಗಿ ದೇವಾಲಯ ಕುರಿತು ದಾನದತ್ತಿಗಳ ಹಾಗೂ ನಿರ್ಮಾಣದ ಬಗ್ಗೆ ಮಾಹಿತಿ ದೊರೆಯುವುದು ದುರ್ಲಭ. ಆದರೂ ಈ ದೇವಾಲಯಗಳು ಆಯಾ ಗ್ರಾಮಗಳ ಕೇಂದ್ರಬಿಂದುವಾಗಿದ್ದವು. ದೇವರ ನಿತ್ಯಪೂಜೆ ಹಾಗೂ ಹಬ್ಬ ಹರಿದಿನ ಗಳಲ್ಲಿ ವಿಶೇಷ ಪೂಜಾದಿಗಳು ಇಲ್ಲಿ ಜರುಗುತ್ತಿದ್ದವು ಎನ್ನುವಲ್ಲಿ ಯಾವ ಸಂಶಯವೂ ಇಲ್ಲ.

ಈ ರೀತಿಯಾಗಿ ಮೂರು ಭಾಗಗಳಲ್ಲಿ ವರ್ಗೀಕರಿಸಿದ ಎಲ್ಲಾ ದೇವಾಲಯಗಳು ಕಲ್ಯಾಣ ಚಾಲುಕ್ಯರ ಕಾಲಾವಧಿಯಲ್ಲಿ ರಚನೆಗೊಂಡು ಶೈವಧರ್ಮವನ್ನು ಪ್ರತಿನಿಧಿಸುತ್ತವೆ. ಆದರೆ ಈ ಕಾಲಘಟ್ಟದಲ್ಲಿ ವೈಷ್ಣವ ಧರ್ಮವನ್ನು ಎತ್ತಿ ತೋರಿಸುವ ತ್ರಿಕೂಟ ದೇವಾಲಯಗಳು ಒಂದೂ ಕಾಣದಿರುವುದು ಗಮನಾರ್ಹ. ಇದು ಶೈವಧರ್ಮ ಆಳವಾಗಿ ಪ್ರಭಾವ ಬೀರಿತ್ತೆಂಬುದನ್ನು ಸೂಚಿಸುತ್ತದೆ. ಎರಡು ನೂರು ವರ್ಷಗಳ ನಂತರ ಅಂದರೆ ಕ್ರಿ.ಶ.೧೫ನೇ ಶತಮಾನದಲ್ಲಿ ವಿಜಯನಗರ ಶೈಲಿಯ ತ್ರಿಕೂಟ ದೇವಾಲಯ ಹಾವೇರಿ ತಾಲೂಕು ನರಸಿಂಹಪುರದಲ್ಲಿ ಇದ್ದುದು ಗಮನಾರ್ಹ. ಇದು ವೈಷ್ಣವ ಧರ್ಮವನ್ನು ಪ್ರತಿನಿಧಿಸುವುದು ಮತ್ತೂ ವಿಶೇಷ. ಈ ಕಾಲಾವಧಿಯಲ್ಲಿ ಶೈವಧರ್ಮದ ತ್ರಿಕೂಟ ದೇವಾಲಯಗಳು ಕಂಡುಬಂದಿಲ್ಲ. ಜಿಲ್ಲೆಯಲ್ಲಿ ವಿಜಯನಗರ ಸ್ಮಾರಕಗಳು ಬಹು ಅಪರೂಪ ಈ ಹಿನ್ನೆಲೆಯಲ್ಲಿಯೂ ನರಸಿಂಹಪುರದ ನರಸಿಂಹ ದೇವಾಲಯಕ್ಕೆ ತನ್ನದೇ ಆದ ಮಹತ್ವವಿದೆ. ಎರಡು ಶತಮಾನಗಳ ನಂತರ ರಚನೆಗೊಂಡ ಈ ದೇವಾಲಯವು ವಾಸ್ತು ಶೈಲಿಯಲ್ಲಿ

ನ್ಯಾಯದರ್ಶನ ದೇವಾಲಯಗಳನ್ನು ಹೋಲುತ್ತದೆ. ಪೂರ್ವಾಭಿಮುಖವಾದ ಮುಖ್ಯ ಗರ್ಭಗೃಹಕ್ಕೆ ಮಾತ್ರ ಅರ್ಧಮಂಟಪವಿದೆ. ಉಳಿದೆರಡು ಗರ್ಭಗೃಹಗಳು ನೇರವಾಗಿ ನವರಂಗಕ್ಕೆ ಜೋಡಣೆಗೊಂಡಿವೆ. ದೇವಾಲಯ ಶಿಥಿಲಾವಸ್ಥೆಯಲ್ಲಿದೆ. ಅಲ್ಲಿರುವ ಭಗ್ನ ಶಿಲ್ಪಗಳಿಂದ ಹಾಗೂ ಶಾಸನಾಧಾರದಿಂದ ಮುಖ್ಯ ಗರ್ಭಗೃಹದಲ್ಲಿ ನರಸಿಂಹದೇವರು ಇರುವುದು ಸ್ಪಷ್ಟ. ನವರಂಗದಲ್ಲಿರುವ ಆಂಜನೇಯ ಶಿಲ್ಪದಿಂದ ಇದು ಅಕ್ಕಪಕ್ಕದ ಗರ್ಭಗೃಹಕ್ಕೆ ಸೇರಿದ್ದೆಂದು ಊಹಿಸಬಹುದು. ವೈಷ್ಣವ ತ್ರಿಕೂಟ ದೇವಾಲಯ ವಿಷ್ಣುವಿನ ಪ್ರಮುಖ ಅವತಾರ ದೇವರ ಜೊತೆ ಹೆಚ್ಚು ಪ್ರಚಲಿತದಲ್ಲಿದ್ದ ರಾಮದೂತ ಆಂಜನೇಯನ ಆರಾಧನೆಗೆ ಮೀಸಲಿತ್ತು.

ನಾಲ್ಕನೆಯ ಅಧ್ಯಾಯದಲ್ಲಿ ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳ ಮೂರ್ತಿಶಿಲ್ಪವನ್ನು ಕುರಿತು ಚರ್ಚಿಸ ಲಾಗಿದೆ. ಇಲ್ಲಿಯ ಶಿಲ್ಪಗಳಲ್ಲಿ ಅಬ್ಬಲೂರಿನ ಕದಂಬರ ಕಾಲದ ವಿಷ್ಣುಶಿಲ್ಪ ಹಾಗೂ ವಿಜಯನಗರ ಶೈಲಿಯ ನರಸಿಂಹ ಶಿಲ್ಪಗಳನ್ನು ಹೊರತುಪಡಿಸಿ ಉಳಿದೆಲ್ಲ ಶಿಲ್ಪಗಳು ಕಲ್ಯಾಣ ಚಾಲುಕ್ಯ ಶೈಲಿಯಲ್ಲಿವೆ. ಪ್ರಸ್ತುತ ಅಧ್ಯಾಯದಲ್ಲಿ ಮೂರ್ತಿಶಿಲ್ಪಗಳನ್ನೂ ಸಹ ಮೂರನೇ ಅಧ್ಯಾಯದಲ್ಲಿ ವಿಂಗಡಿಸಿದ ತ್ರಿಕೂಟ ದೇವಾಲಯಗಳನ್ನು ಆಧರಿಸಿ ವಿಶ್ಲೇಷಿಸಲಾಗಿದೆ. ಮೂವತ್ತು ದೇವಾಲಯಗಳು ಶೈವಧರ್ಮದ ಪ್ರತಿನಿಧಿ ಗಳಾದ್ದರಿಂದ ಲಿಂಗಗಳಿಗೇ ಪ್ರಾಧಾನ್ಯತೆ ಇದ್ದು ಅವು ಬಹುಸಂಖ್ಯೆಯಲ್ಲಿ ಕಾಣುವುದು ಸ್ವಭಾವಿಕ. ಆದರೆ ದೇವಾಲಯಗಳ ವಿಂಗಡಣೆಗೆ ಅನುಗುಣವಾಗಿ ಲಿಂಗಗಳಲ್ಲಿಯೂ ವೈವಿಧ್ಯತೆ ಕಾಣುವುದು ವಿಶೇಷ.

**೧. ವ್ಯಕ್ತಿನಾಮ/ಪರೋಕ್ಷವಿನಯ ದೇವಾಲಯಗಳ ಲಿಂಗಗಳು**

ಇಲ್ಲಿಯ ಲಿಂಗಗಳು ನಾಲ್ಕರಿಂದ ಐದು ಅಡಿ ಎತ್ತರವಾಗಿ, ಬ್ರಹ್ಮಭಾಗ, ವಿಷ್ಣುಭಾಗ ಹಾಗೂ ರುದ್ರಭಾಗ ಗಳನ್ನು ಒಳಗೊಂಡು, ಚೌಕಾಕಾರದ ಅಲಂಕೃತ ಪೀಠದಿಂದ ರಚನೆಯಾಗಿವೆ. ಇನ್ನು ಕೆಲವು ಮೂರರಿಂದ ನಾಲ್ಕು ಅಡಿ ಎತ್ತರವಾಗಿ ವೃತ್ತಾಕಾರವಾದ, ಸಾದಾ ಮಾದರಿಯ ಪೀಠದೊಂದಿಗೆ ಇವೆ. ಇವು ಗಾತ್ರ ಹಾಗೂ ಅಲಂಕಾರ ದೃಷ್ಟಿಯಿಂದ ಗಮನೀಯ. ಇಲ್ಲಿಯ ಪ್ರತಿರೂಪ ಲಿಂಗಗಳು ಸ್ವಯಂಭೂ ರೂಪದಲ್ಲಿಯೂ ಇವೆ.

**೨. ತ್ರೈಪುರುಷ ದೇವಾಲಯಗಳ ಲಿಂಗಗಳು**

ಇಲ್ಲಿ ಕಂಡುಬರುವ ಲಿಂಗಗಳು ಎರಡು ಅಡಿ ಎತ್ತರವಾಗಿ, ಬ್ರಹ್ಮಭಾಗ, ವಿಷ್ಣುಭಾಗ ಹಾಗೂ ರುದ್ರಭಾಗ ಗಳನ್ನು ಮತ್ತು ಚೌಕಾಕಾರದ ಪೀಠವನ್ನು ಹೊಂದಿವೆ. ಪೀಠವು ಮಧ್ಯಮದರ್ಜೆಯ ಅಲಂಕರಣೆಯಲ್ಲಿದೆ. ಒಂದು ಲಿಂಗ ಮಾತ್ರ ಸ್ವಯಂಭೂ ರೂಪದಲ್ಲಿದೆ.

**೩. ನ್ಯಾಯದರ್ಶನ/ತ್ರಿಮೂರ್ತಿ ದೇವಾಲಯ ಲಿಂಗಗಳು**

ಇಲ್ಲಿಯ ಲಿಂಗಗಳು ಗಾತ್ರದಲ್ಲಿ ಚಿಕ್ಕವು. ಒಂದರಮೇಲೊಂದು ಕಲ್ಲುಫಲಕಗಳನ್ನು ಇಟ್ಟ ಪೀಠ ರಚನೆಯಿದ್ದು, ರುದ್ರಭಾಗ ಮಾತ್ರ ಇರುತ್ತದೆ. ಈಶ್ವರನ ಅನಿತ್ಯ ರೂಪಗಳನ್ನು ಬಿಂಬಿಸುವ ಉದ್ದೇಶದಲ್ಲಿ ಈ ದೇವಾಲಯಗಳನ್ನು ನಿರ್ಮಿಸಿರುವುದರಿಂದ ಇಲ್ಲಿಯ ಎರಡೂ ಲಿಂಗಗಳ ರುದ್ರಭಾಗದಲ್ಲಿ ಭಿನ್ನತೆ ಇರುವುದು ಗಮನೀಯ. ಸೃಷ್ಟಿಕರ್ತನಾದ ಬ್ರಹ್ಮಲಿಂಗವು ಬಲಬದಿಯಲ್ಲಿ ಜಲಹರಿ ಇರುವ, ವೃತ್ತಾಕಾರದ

ಪೀಠದಲ್ಲಿ ಸಣ್ಣಗಾತ್ರದ (೦.೪ x ೦.೬ ಅಡಿ) ರುದ್ರಭಾಗವನ್ನು ಹೊಂದಿದೆ. ಸ್ಥಿತಿಕರ್ತನಾದ ವಿಷ್ಣುವನ್ನು ಸಾಮಾನ್ಯವಾಗಿ ಶಿಲ್ಪರೂಪದಲ್ಲಿ ಕಾಣಲಾಗಿದೆ. ಅವನನ್ನು ಲಿಂಗರೂಪದಲ್ಲಿ ಪ್ರತಿನಿಧಿಸುವಾಗ ಆ ಲಿಂಗವು ವೃತ್ತಾಕಾರದ ಪೀಠದ ಮೇಲೆ ಎತ್ತರವಾದ (೦.೮ x ೨ ಅಡಿ) ರುದ್ರಭಾಗವನ್ನು ಒಳಗೊಂಡಿರುವಂತೆ ರೂಪಿಸಲಾಗಿದೆ. ಲಯಕರ್ತನಾದ ಮಹೇಶ್ವರ ಲಿಂಗವನ್ನು ಪ್ರಧಾನವಾಗಿ ಮುಖ್ಯ ಗರ್ಭಗೃಹದಲ್ಲಿ ಚೌಕಾಕಾರದ ಪೀಠದ ಮೇಲೆ ದೊಡ್ಡ ಗಾತ್ರದ (೦.೮ x ೧.೯ ಅಡಿ) ರುದ್ರಭಾಗದೊಂದಿಗೆ ಕಾಣುತ್ತೇವೆ.

ಲಿಂಗಗಳಂತೆ ದೇವಾಲಯ ವಿಂಗಡಣೆಯನ್ನು ಬೆಂಬಲಿಸುವಲ್ಲಿ ವಿಷ್ಣು ಹಾಗೂ ಸೂರ್ಯ ಶಿಲ್ಪಗಳ ಪಾತ್ರವೂ ಇದೆ. ವ್ಯಕ್ತಿನಾಮ ದೇವಾಲಯಗಳಲ್ಲಿ ಈ ಎರಡೂ ಶಿಲ್ಪಗಳನ್ನು ಕಾಣುವುದಿಲ್ಲ. ತ್ರೈಪುರುಷ ದೇವಾಲಯಗಳ ವಿಷ್ಣು ಹಾಗೂ ಸೂರ್ಯ ಶಿಲ್ಪಗಳು ಗಮನಾರ್ಹವಾಗಿವೆ. ಎರಡು ಅಡಿ ಎತ್ತರದ ಪೀಠದ ಮೇಲೆ, ೪-೫ ಅಡಿ ಎತ್ತರದ ಗಾತ್ರದಲ್ಲಿ, ಪ್ರಮಾಣಬದ್ಧವಾದ ಮೈಮಾಟ, ಸೂಕ್ಷ್ಮ ಕೆತ್ತನೆ ಹಾಗೂ ಜೀವಕಳೆಯಿಂದ ಆಕರ್ಷಕವಾಗಿವೆ. ಕೆಲವು ಶಿಲ್ಪಗಳು ಗಾತ್ರದಲ್ಲಿ ಚಿಕ್ಕವೂ ಇವೆ. ನ್ಯಾಯದರ್ಶನ ದೇವಾಲಯ ಗಳಲ್ಲಿ ಸೂರ್ಯಶಿಲ್ಪಗಳಿಲ್ಲ. ವಿಷ್ಣು ಶಿಲ್ಪಗಳು ಇದ್ದ ಕುರುಹುಗಳಿವೆ. ಸಾಕಷ್ಟು ವಿಷ್ಣು ಶಿಲ್ಪಗಳು ಕಣ್ಮರೆ ಯಾಗಿ ಕೆಲವು ಕಡೆ ಗರುಡಪೀಠ ಮಾತ್ರ ಉಳಿದುಕೊಂಡಿವೆ.

ಎಲ್ಲಾ ತ್ರಿಕೂಟ ದೇವಾಲಯಗಳ ನವರಂಗದಲ್ಲಿ ಗಣಪತಿ, ಮಹಿಷಮರ್ದಿನಿ, ಸಪ್ತಮಾತೃಕಾ ಫಲಕ ಹಾಗೂ ನಾಗಶಿಲ್ಪಗಳು ಇರುವುದು ಸಾಮಾನ್ಯ. ಅಪರೂಪವಾಗಿ ಉಮಾಮಹೇಶ್ವರ, ರತಿಮನ್ಮಥ ಮತ್ತು ಸ್ಕಂದ ಶಿಲ್ಪಗಳಿವೆ. ತ್ರೈಪುರುಷ ದೇವಾಲಯಗಳ ಸರಸ್ವತಿ ಮಂದಿರದಲ್ಲಿ ಹಂಸಪೀಠದ ಮೇಲೆ ಪದ್ಮಾಸನದಲ್ಲಿ ಕುಳಿತ ಸರಸ್ವತಿ ಶಿಲ್ಪಗಳೂ ವರ್ಣನಾರ್ಹ. ಲಿಂಗಕ್ಕೆ ಅಭಿಮುಖವಾಗಿ ನಂದಿ ಶಿಲ್ಪಗಳಿವೆ. ವ್ಯಕ್ತಿನಾಮ ಮತ್ತು ತ್ರೈಪುರುಷ ದೇವಾಲಯಗಳಲ್ಲಿ ದೊಡ್ಡ ಗಾತ್ರದ ಹೆಚ್ಚು ಅಲಂಕೃತ ನಂದಿ ಇದ್ದರೆ, ನ್ಯಾಯದರ್ಶನ ದೇವಾಲಯಗಳಲ್ಲಿ ಸಣ್ಣ ಪ್ರಮಾಣದಲ್ಲಿವೆ.

ಐದನೆಯ ಅಧ್ಯಾಯ ಸಮಾರೋಪವಾಗಿದೆ. ಇಲ್ಲಿ ಜಿಲ್ಲೆಯ ತ್ರಿಕೂಟ ದೇವಾಲಯಗಳ ಒಟ್ಟಾರೆ ಅಧ್ಯಯನದ ಫಲಿತಾಂಶಗಳನ್ನು ಕ್ರೂಢೀಕರಿಸಿ ನೀಡಲಾಗಿದೆ. ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳತ್ತ ಸಮೀಕ್ಷಿಸಿದರೆ,

೧. ಇಲ್ಲಿಯ ತ್ರಿಕೂಟ ದೇವಾಲಯಗಳು ವಿವಿಧ ವಾಸ್ತು ವಿನ್ಯಾಸ ಮತ್ತು ಅಳತೆಗಳೊಂದಿಗೆ ಭಿನ್ನ ಭಿನ್ನ ಉದ್ದೇಶಗಳ ಹಿನ್ನೆಲೆಯಲ್ಲಿ ರೂಪಗೊಂಡಿವೆ. ಅವು ಕ್ರಮವಾಗಿ ವ್ಯಕ್ತಿನಾಮ/ಪರೋಕ್ಷವಿನಯ, ತ್ರೈಪುರುಷ ಮತ್ತು ನ್ಯಾಯದರ್ಶನ/ತ್ರಿಮೂರ್ತಿ ದೇವಾಲಯಗಳು.

೨. ವ್ಯಕ್ತಿನಾಮ/ಪರೋಕ್ಷವಿನಯ ದೇವಾಲಯಗಳು ಪಶ್ಚಿಮ, ಉತ್ತರ ಹಾಗೂ ದಕ್ಷಿಣ ದಿಕ್ಕುಗಳಲ್ಲಿ ಗರ್ಭಗೃಹಗಳನ್ನು ಹೊಂದಿವೆ. ಮೂರೂ ಗರ್ಭಗೃಹಗಳು ಹಾಗು ಮೂರೂ ಅರ್ಧಮಂಟಪಗಳು ಸಮಾನ ಅಳತೆಯಲ್ಲಿ ಇರುವುದು ಗಮನೀಯ. ಮಧ್ಯದ ನವರಂಗಕ್ಕೆ ಪೂರ್ವದಿಕ್ಕಿನಲ್ಲಿ ಮಹಾಮಂಟಪ/ಮುಖ ಚತುಷ್ಕಿಯಂತಹ ಹೆಚ್ಚಿನ ವಾಸ್ತು ರಚನೆಗಳು ಇರುವುದು ಈ ದೇವಾಲಯಗಳ ವಾಸ್ತು ವಿಶೇಷ.

೩. ಇಲ್ಲಿಯ ಮೂರೂ ಗರ್ಭಗೃಹಗಳಲ್ಲಿ ಲಿಂಗಗಳಿದ್ದು, ಮಧ್ಯದ ಗರ್ಭಗೃಹದಲ್ಲಿ ಪ್ರತಿರೂಪ ಲಿಂಗವನ್ನು ಹಾಗೂ ಅಕ್ಕಪಕ್ಕದ ಗರ್ಭಗೃಹಗಳಲ್ಲಿ ವಿಶಿಷ್ಟ ಉದ್ದೇಶಕ್ಕಾಗಿ ಸ್ಥಾಪನೆಗೊಂಡ ಲಿಂಗಗಳನ್ನು ಕಾಣುತ್ತೇವೆ.

೪. ಈ ದೇವಾಲಯಗಳನ್ನು ಆಳರಸರು ಕಟ್ಟಿರದೆ ಸಮಾಜದ ಒಂದು ವರ್ಗಕ್ಕೆ ಸೇರಿದವರಿಂದ ನಿರ್ಮಾಣಗೊಂಡಿರುವುದು ವಿಶೇಷ.

೫. ಈ ದೇವಾಲಯಗಳು ಗಾತ್ರದಲ್ಲಿ ವಿಶಾಲವಾಗಿ, ಸದೃಢವಾಗಿ ಹಾಗೂ ಕಲಾತ್ಮಕವಾಗಿ ರೂಪಗೊಂಡಿವೆ.

೬. ಇವುಗಳಿಗೆ ಸಂಬಂಧಿಸಿದ ದಾನ ಶಾಸನಗಳನ್ನು ಗಮನಿಸಿದರೆ ದೇವಾಲಯಗಳನ್ನು ನಿರ್ಮಿಸಿದವರೇ ದಾನ ನೀಡಿರುವರು ಹಾಗೂ ಆ ವರ್ಗದ ಜನರೇ ದಾನಗಳನ್ನು ಮುಂದುವರೆಸಿಕೊಂಡು ಹೋಗಿರುವರು.

೭. ತ್ರೈಪುರುಷ ದೇವಾಲಯಗಳು ಪೂರ್ವ, ಪಶ್ಚಿಮ, ಹಾಗೂ ಉತ್ತರ ದಿಕ್ಕಿನಲ್ಲಿ ಅರ್ಧಮಂಟಪಗಳನ್ನು ಹೊಂದಿವೆ. ಇಲ್ಲಿಯ ಗರ್ಭಗೃಹಗಳು ಅಳತೆಯಲ್ಲಿ ಅಸಮಾನವಾಗಿವೆ. ಗರ್ಭಗೃಹಗಳನ್ನು, ನವರಂಗದ ದಕ್ಷಿಣಕ್ಕೆ ಪ್ರವೇಶವನ್ನು ಹೊಂದಿರುವುದು ವಿಶೇಷ. ಈ ದೇವಾಲಯಗಳ ಆವರಣದಲ್ಲಿ ಸರಸ್ವತಿ ಮಂದಿರ ಇರುವುದು ಗಮನಾರ್ಹ.

೮. ಇಲ್ಲಿಯ ಒಂದು ಗರ್ಭಗೃಹದಲ್ಲಿ ಲಿಂಗವಿದ್ದರೆ, ಇನ್ನೆರಡು ಗರ್ಭಗೃಹಗಳಲ್ಲಿ ಶಿಲ್ಪಗಳಿರುತ್ತವೆ. ಈ ದೇವಾಲಯಗಳು ವಿವಿಧ ಪಂಥಗಳ ಸಂಗಮಸ್ಥಾನವಾಗಿ ಕಂಡುಬಂದಿವೆ.

೯. ಈ ದೇವಾಲಯಗಳು ವಿದ್ಯಾ ಕೇಂದ್ರಗಳಾಗಿ ಸಮಾಜದ ಎಲ್ಲಾ ವರ್ಗಗಳ ಜನರಿಂದಲೂ ದಾನ ದತ್ತಿಗಳನ್ನು ಪಡೆದಿದ್ದವು.

೧೦. ನ್ಯಾಯದರ್ಶನ/ತ್ರಿಮೂರ್ತಿ ತ್ರಿಕೂಟ ದೇವಾಲಯಗಳು ಪಶ್ಚಿಮ, ಉತ್ತರ ಹಾಗೂ ದಕ್ಷಿಣ ದಿಕ್ಕುಗಳಲ್ಲಿ ಗರ್ಭಗೃಹಗಳನ್ನು ಹೊಂದಿವೆ. ಮಧ್ಯದ ಮುಖ್ಯ ಗರ್ಭಗೃಹವು ಮಾತ್ರ ಅರ್ಧಮಂಟಪವನ್ನು ಒಳಗೊಂಡಿದ್ದು, ಉಳಿದೆರಡಕ್ಕೆ ಅರ್ಧಮಂಟಪ ಇಲ್ಲದಿರುವುದು ಈ ದೇವಾಲಯಗಳ ವಾಸ್ತು ವಿಶೇಷ.

೧೧. ಇವು ಗಾತ್ರದಲ್ಲಿ ಚಿಕ್ಕದಾಗಿ ಹಾಗೂ ಅಲಂಕರಣೆಯಲ್ಲೂ ಸಾಧಾರಣವಾಗಿವೆ. ದೇವಾಲಯಗಳ ಹೊರಮೈ ಮಣ್ಣಿನಿಂದ ಆವೃತವಾಗಿವೆ.

೧೨. ಈ ದೇವಾಲಯಗಳು ಒಂದು ಧರ್ಮದ ವಿಶಿಷ್ಟವಾದ ತಾತ್ವಿಕ ಹಿನ್ನೆಲೆಯಲ್ಲಿ ರೂಪಗೊಂಡಿವೆ. ಈ ಎಲ್ಲಾ ದೇವಾಲಯಗಳನ್ನು ಕಲ್ಮೇಶ್ವರ ಎಂದು ಕರೆದಿರುವುದು ಇಲ್ಲಿ ಗಮನಿಸಬೇಕಾದ ಅಂಶ. ಈ ದೇವಾಲಯಕ್ಕೆ ಸಂಬಂಧಪಟ್ಟ ಶಾಸನಗಳು ಬಹು ವಿರಳ.

೧೩. ಇಲ್ಲಿಯ ಎರಡು ಗರ್ಭಗೃಹಗಳಲ್ಲಿ ಲಿಂಗಗಳನ್ನು ಮತ್ತು ಒಂದರಲ್ಲಿ ಶಿಲ್ಪವನ್ನು ಕಾಣುತ್ತೇವೆ. ಕೆಲವು ದೇವಾಲಯಗಳ ಮೂರೂ ಗರ್ಭಗೃಹಗಳಲ್ಲಿ ಲಿಂಗಗಳೇ ಇವೆ. ಲಿಂಗಗಳ ರುದ್ರಭಾಗದಲ್ಲಿ ಭಿನ್ನತೆ ಇರುವುದು ವಿಶೇಷ.

೧೪. ಕಲ್ಯಾಣ ಚಾಲುಕ್ಯ ಆಡಳಿತಾವಧಿಗೆ ಸೇರಿದ ಮೇಲಿನ ಮೂವತ್ತೂ ದೇವಾಲಯಗಳು ಶೈವಧರ್ಮವನ್ನು ಪ್ರತಿನಿಧಿಸುತ್ತವೆ. ಇವರ ಕಾಲದ ವೈಷ್ಣವ ಅಥವಾ ಜೈನಧರ್ಮದ ತ್ರಿಕೂಟಗಳು ಕಂಡುಬರುವುದಿಲ್ಲ. ಎರಡು ಶತಮಾನಗಳ ನಂತರ ವಿಜಯನಗರ ಶೈಲಿಯಲ್ಲಿ ವೈಷ್ಣವ ತ್ರಿಕೂಟವೊಂದು ರೂಪಗೊಂಡಿದ್ದು ಗಮನಾರ್ಹ.

೧೫. ಕ್ರಿ.ಶ.೧೦-೧೧ನೇ ಶತಮಾನದ ಎಲ್ಲಾ ತ್ರಿಕೂಟ ದೇವಾಲಯಗಳು ಬಳ್ಳಿಗಾವೆಯ ಕಾಳಾಮುಖ ಶೈವಯತಿಗಳ ದಕ್ಷ ನಿರ್ವಹಣೆಯಲ್ಲಿ ಬೆಳೆದು ಬಂದವು. ಕಾಳಾಮುಖ ಯತಿಗಳು ಧರ್ಮ ಗುರುಗಳಲ್ಲದೆ ರಾಜಗುರುಗಳೂ ಆಗಿದ್ದರು ಎಂಬುದಕ್ಕೆ ಶಾಸನಗಳೇ ಸಾಕ್ಷಿ. ತಮ್ಮ ತಮ್ಮ ಸಂಬಂಧಿಗಳನ್ನು ದೈವೀಕರಿಸುವ ಹಿನ್ನೆಲೆಯಲ್ಲಿ ಇಲ್ಲಿಯ ಮಾಂಡಳಿಕರನ್ನು ಹಾಗೂ ಶ್ರೀಮಂತ ವರ್ಗವನ್ನು ಪ್ರೇರೇಪಿಸಿ, ಆ ಕಾರಣಕ್ಕಾಗಿ ತ್ರಿಕೂಟ ದೇವಾಲಯಗಳನ್ನು ನಿರ್ಮಿಸಿ ಅವರ ಮನಸ್ಸು ಗೆಲ್ಲುವಲ್ಲಿ ಕಾಳಾಮುಖರು ಯಶಸ್ಸು ಕಂಡರು. ಇದೇ ರೀತಿ ಧರ್ಮಸಮನ್ವಯತೆಯ ಹಿನ್ನೆಲೆಯಲ್ಲಿ ತ್ರೈಪುರುಷ ದೇವಾಲಯಗಳನ್ನು ನಿರ್ಮಿಸಿ ವಿದ್ಯಾದಾನ ಕೈಗೊಂಡು, ವಿವಿಧ ಸ್ತರ ಹಾಗೂ ಪಂಥಗಳ ಜನರ ಮೆಚ್ಚುಗೆ ಪಡೆದರು. ಇದರಂತೆ ತಮ್ಮ ಶೈವಧರ್ಮ, ತಾವು ಒಪ್ಪಿ ನಡೆದ ನ್ಯಾಯದರ್ಶನದ ದಾರ್ಶನಿಕ ನೋಟವನ್ನು ಭೌತಿಕವಾಗಿ ಬಿಂಬಿಸುವ ಹಿನ್ನೆಲೆಯಲ್ಲಿ ಹಲವಾರು ಪ್ರದೇಶಗಳಲ್ಲಿ ನ್ಯಾಯದರ್ಶನ ದೇವಾಲಯಗಳನ್ನು ನಿರ್ಮಿಸಿ ವಿಶಾಲವಾಗಿ ತಮ್ಮ ಪ್ರಭಾವವನ್ನು ಬೀರಿದರು. ಹೀಗೆ ಉನ್ನತ ವರ್ಗದ ಜನರಿಂದ ಸಾಮಾನ್ಯರವರೆಗೂ ಒಂದು ಭಾವನಾತ್ಮಕ ಸಂಬಂಧವನ್ನು ಬೆಸೆಯುವಲ್ಲಿ ಕಾಳಾಮುಖ ಯತಿಗಳು ತ್ರಿಕೂಟ ದೇವಾಲಯಗಳನ್ನು ರೂಪಿಸಿರುವುದು ನಿಜಕ್ಕೂ ವಿಶೇಷ

ಇತಿಹಾಸದ ಅಧ್ಯಯನ ಅದರಲ್ಲೂ ದೇವಾಲಯಗಳ ಅಧ್ಯಯನವು ಒಂದು ನಿರಂತರ ಕ್ರಿಯೆ. ಇದಕ್ಕೆ ಕೊನೆ ಎಂಬುದಿಲ್ಲ. ಬಗೆದಷ್ಟು ಹೊಸ ಹೊಸ ವಿಷಯಗಳು ಇಲ್ಲಿ ಅನಾವರಣಗೊಳ್ಳುತ್ತವೆ. ಅದಕ್ಕೆಂದೇ ಸಂಶೋಧಕರಿಗೆ ದೇವಾಲಯ ಅಧ್ಯಯನ ಸರ್ವಕಾಲವೂ ನಿತ್ಯನೂತನ. ಹೊಸ ಆಕರಗಳೊಂದಿಗೆ, ವಿನೂತನ ದೃಷ್ಟಿಕೋನದಿಂದ, ವಿವಿಧ ಆಯಾಮಗಳನ್ನು ಮೈಗೂಡಿಸಿಕೊಂಡು ಸಂಶೋಧನೆಗಳು ನಡೆದಲ್ಲಿ, ಹೊಸ ಸಂಗತಿಗಳು ಬೆಳಕು ಕಾಣುತ್ತವೆ. ಆಗ ಈವರೆಗೆ ಕಂಡುಕೊಂಡ ವಿಷಯಗಳಿಗೆ ಇನ್ನಷ್ಟು ಪುಷ್ಟಿಯು ದೊರೆಯಬಹುದು ಅಥವಾ ಪುನರ್‌ಪರಿಶೀಲನೆಗೆ ಒಳಗಾಗಲೂಬಹುದು. ಇದೇ ಇತಿಹಾಸ ಅಧ್ಯಯನದ ವೈಶಿಷ್ಟ್ಯ. ತ್ರಿಕೂಟ ದೇವಾಲಯಗಳನ್ನೇ ಕುರಿತು ನಡೆಸಿದ ಪ್ರಥಮ ಸಂಶೋಧನಾ ಪ್ರಯತ್ನ ಇದಾಗಿದೆ. ಈ ಪ್ರಬಂಧದಿಂದ ಬಹಿರಂಗಗೊಂಡ ಹೊಸ ವಿಷಯಗಳು ಸಧ್ಯಕ್ಕೆ ಪ್ರಸ್ತುತ.

# ಅನುಬಂಧಗಳು

## ಗ್ರಂಥಋಣ

### ಶಾಸನ ಸಂಪುಟಗಳು ಮತ್ತು ಪುಸ್ತಕಗಳು


ಎಪಿಗ್ರಾಫಿಯ ಕರ್ನಾಟಿಕಾ : ಹಳೆಯ ಸಂಪುಟಗಳು

ಸೌತ್ ಇಂಡಿಯನ್ ಇನ್‌ಸ್ಕ್ರಿಪ್‌ಷನ್ಸ್ : ಸಂಪುಟಗಳು

ಕರ್ನಾಟಕ ಇನ್‌ಸ್ಕ್ರಿಪ್‌ಷನ್ಸ್ : ಸಂಪುಟಗಳು

ಎಪಿಗ್ರಾಫಿಯ ಇಂಡಿಕಾ : ಸಂಪುಟಗಳು

ಇಂಡಿಯನ್ ಆ್ಯನ್ಟಿಕ್ವೆರಿ : ಸಂಪುಟಗಳು

ಮೈಸೂರ್ ಆರ್ಕ್ಯಾಲಾಜಿಕಲ್ ರಿಪೋರ್ಟ್ಸ್

ಇನ್‌ಸ್ಕ್ರಿಪ್‌ಷನ್ಸ್ ಫ್ರಾಮ್ ನಾಂದೆಡ್ ಡಿಸ್ಟ್ರಿಕ್ಟ್ : ಶ್ರೀನಿವಾಸ ರಿತ್ತಿ ಮತ್ತು ಜಿ. ಶೆಲ್ಕೆ, ೧೯೬೮

ಕಾರ್ಪಸ್ ಆಫ್ ಕದಂಬ ಇನ್‌ಸ್ಕ್ರಿಪ್‌ಷನ್ಸ್ : ಗೋಪಾಲ ಬಾ.ರಾ., ಶಿರಸಿ, ೧೯೮೫

ಶಾಸನ ಸಾಹಿತ್ಯ ಸಂಚಯ : ಎ.ಎಂ. ಅಣ್ಣಿಗೇರಿ, ಮೇವುಂಡಿ ಮಲ್ಲಾರಿ, ಧಾರವಾಡ, ೧೯೬೧

ಕನ್ನಡ ಶಾಸನ ಸಂಗ್ರಹ : ಎ.ಎಂ. ಅಣ್ಣಿಗೇರಿ, ಆರ್. ಶೇಷಶಾಸ್ತ್ರಿ, ಬೆಂಗಳೂರು, ೧೯೭೫

ಧಾರವಾಡ ಜಿಲ್ಲೆ ಶಾಸನ ಸೂಚಿ : ಕಲಬುರ್ಗಿ ಎಂ.ಎಂ.(ಸಂ), ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೫

ಕಾರವಾರ ಜಿಲ್ಲೆಯ ಶಾಸನಗಳು : ಗುರವ ಆರ್.ಎನ್.(ಸಂ), ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೫

ಕನ್ನಡ ಶಾಸನ ಸಂಪದ : ಹಿರೇಮಠ ಆರ್.ಸಿ., ಕಲಬುರ್ಗಿ ಎಂ.ಎಂ.(ಸಂ), ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೩

## ಕನ್ನಡ ಗ್ರಂಥಗಳು


ಅಣ್ಣಿಗೇರಿ ಎ.ಎಂ., ಶೇಷಶಾಸ್ತ್ರಿ, (ಸಂ) ಶಾಸನ ಸಂಗ್ರಹ, ಕನ್ನಡ ಸಾಹಿತ್ಯ ಪರಿಷತ್ತು, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು, ೧೯೯೩

ಅಣ್ಣಿಗೇರಿ ಎ.ಎಂ., ಬಾದಾಮಿಯ ಶಿಲ್ಪಕಲೆ, ಭವಾನಿ ಪ್ರಕಾಶನ, ಧಾರವಾಡ, ೧೯೭೭

ಅಪರ್ಣ ಕೂ.ಸ., ದೇವಾಲಯ ವಾಸ್ತುಶಿಲ್ಪ ಪರಿಚಯ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

ಎದುರ್ಕಳೆ ಶಂಕರನಾರಾಯಣ ಭಟ್, ಹಿಂದೂ ಧರ್ಮದ ಪರಿಚಯ, ರಾಮಕೃಷ್ಣ ಪ್ರಕಾಶನ, ಭಾಗಮಂಡಲ, ೧೯೮೨

ಕಪಟರಾಳ ಕೃಷ್ಣರಾಯರು, ಕರ್ನಾಟಕ ಲಾಕುಳ ಶೈವರ ಇತಿಹಾಸ, ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ, ೧೯೫೫

ಕಲಬುರ್ಗಿ ಎಂ.ಎಂ., ಶಾಸನಗಳಲ್ಲಿ ಶಿವ ಶರಣರು, ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಮಠ, ಗದಗ, ೧೯೭೮

ಕಲಬುರ್ಗಿ ಎಂ.ಎಂ. ಮಾರ್ಗ ೪, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೪

ಕರವೀರಪ್ರಭು ಕ್ಯಾಲಕೊಂಡ, ಚಾಲುಕ್ಯ ವಾಸ್ತುಶಿಲ್ಪ ವೈಭವ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೧೯೯೭

ಕುಮಾರಸ್ವಾಮಿ ಕೆ.ಎಸ್., ಪ್ರಾಚೀನ ಕರ್ನಾಟಕದಲ್ಲಿ ಶಿಲ್ಪಾಚಾರಿಯರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೬

ಕುಲಕರ್ಣಿ ಸತೀಶ್, ಹಾವೇರಿ ತಾಲುಕಾ ದರ್ಶನ, ಐ.ಬಿ.ಎಚ್.ಪ್ರಕಾಶನ, ಬೆಂಗಳೂರು, ೧೯೮೭

ಕೃಷ್ಣರಾವ್ ಎಂ.ವಿ. ಮತ್ತು ಕೇಶವಭಟ್ಟ ಎಂ., ಕರ್ನಾಟಕ ಇತಿಹಾಸ ದರ್ಶನ, ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ, ಬೆಂಗಳೂರು, ೧೯೭೦

ಗೋಪಾಲ ಬಾ.ರಾ., ಕರ್ನಾಟಕದ ಕಲೆಗಳು -ವಾಸ್ತು, ಸಂಪುಟ ೪, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೧೯೯೩

ಗೋಪಾಲ ಬಾ.ರಾ., ಕರ್ನಾಟಕದ ವಾಸ್ತುಶಿಲ್ಪ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೦

ಗೋಪಾಲ ಬಾ.ರಾ., ವಿಜಯನಗರ ವಾಸ್ತುಶಿಲ್ಪ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು, ೧೯೮೩

ಗೋಪಾಲರಾವ್ ಎಚ್.ಎಸ್., ಕಲ್ಯಾಣ ಚಾಲುಕ್ಯ ದೇವಾಲಯಗಳು ಒಂದು ಸಾಂಸ್ಕೃತಿಕ ಅಧ್ಯಯನ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೧೯೯೩

ಗೋವಿಂದಮೂರ್ತಿ ದೇಸಾಯಿ, ಸವಣೂರು ನವಾಬರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ೬, ೧೯೬೬

ಚೆನ್ನಕ್ಕ ಎಲಿಗಾರ, ಬಂಕಾಪುರ ಶೋಧನ, ಚೆನ್ನಗಂಗಾ ಪ್ರಕಾಶನ, ಧಾರವಾಡ, ೧೯೯೦

ಚೆನ್ನಕ್ಕ ಪಾವಟೆ, ರಾಷ್ಟ್ರಕೂಟ ಸಾಮಂತ ಚಲ್ಲಕೇತನರು, ಚನ್ನಗಂಗಾ ಪ್ರಕಾಶನ, ಧಾರವಾಡ, ೧೯೯೯

ಚೆನ್ನಕ್ಕ ಪಾವಟೆ, ಹಾನಗಲ್ಲ ಕದಂಬರು, ಚೆನ್ನಗಂಗಾ ಪ್ರಕಾಶನ, ಧಾರವಾಡ, ೧೯೮೮

ಜವರೇಗೌಡ ದೇ., ಸ್ಥಳನಾಮ ವ್ಯಾಸಂಗ, ಸಹ್ಯಾದ್ರಿ ಪ್ರಕಾಶನ, ಮೈಸೂರು, ೧೯೯೦

ತಿಪ್ಪೇರುದ್ರಸ್ವಾಮಿ ಎಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು, ೧೯೯೨ (ನಾಲ್ಕನೆ ಮುದ್ರಣ)

ದೇವರಕೊಂಡಾರೆಡ್ಡಿ, ತಲಕಾಡಿನ ಗಂಗರ ದೇವಾಲಯಗಳು ಒಂದು ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು, ೧೯೯೨

ದೇಸಾಯಿ ಪಿ.ಬಿ. ಮತ್ತು ಇತರರು, ಕರ್ನಾಟಕ ಇತಿಹಾಸ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೧೯೮೧

ಭೋಜರಾಜ ಪಾಟೀಲ, ನಾಗರಖಂಡ - ೭೦ ಒಂದು ಅಧ್ಯಯನ, ಮಲೆನಾಡು ವೀರಶೈವ ಅಧ್ಯಯನ ಸಂಸ್ಥೆ, ಆನಂದಪುರ, ೧೯೯೫

ನಂಜುಂಡಸ್ವಾಮಿ, ಎ.ಎಸ್., ಕದಂಬ ಮತ್ತು ಗಂಗರ ಇತಿಹಾಸ, ಸಮಾಜ ಪುಸ್ತಕಾಲಯ, ಶಿವಾಜಿ ಬೀದಿ, ಧಾರವಾಡ, ೧೯೮೮

ನಂದಿಮಠ, ಎಸ್.ಸಿ., ಕರ್ನಾಟಕ ಧರ್ಮಗಳು, ವಿಶ್ವ ಕನ್ನಡ ಸಮ್ಮೇಳನ, ಸಾಹಿತ್ಯ ಮಾಲೆ -೨೦, ಕರ್ನಾಟಕ ಸರಕಾರ, ೧೯೮೩

ನರಸಿಂಹಮೂರ್ತಿ ಎ.ವಿ., ಇತಿಹಾಸ ಮತ್ತು ಸಂಸ್ಕೃತಿ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೮

ನರಸಿಂಹಮೂರ್ತಿ ಎ.ವಿ., ಚಾಲುಕ್ಯ ವಾಸ್ತುಶಿಲ್ಪ ಪರಿಚಯ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೪

ನಾಗಭೂಷಣ ಸಿ., ಕನ್ನಡ ಸಾಹಿತ್ಯ ಸಂಸ್ಕೃತಿ ಶೋಧನೆ, ಅಮೃತವರ್ಷಿಣಿ ಪ್ರಕಾಶನ, ನಂದಿಹಳ್ಳಿ, ಸಂಡೂರು, ೧೯೯೯

ನಾಗಯ್ಯ ಜಿ.ಎಂ., ಕಲಕೇರಿ ಶ್ರೀ ಬಸವೇಶ್ವರ ದೇವಸ್ಥಾನ ಜೀರ್ಣೋದ್ಧಾರ ಟ್ರಸ್ಟ್ ಕಮಿಟಿ, ಕಲಕೇರಿ, ೧೯೯೫

ನಾಗಯ್ಯ, ಜಿ.ಎಂ., ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ, ವೀರಶೈವ ಅಧ್ಯಯನ ಅಕಾಡೆಮಿ, ಶ್ರೀ ನಾಗನೂರು ರುದ್ರಾಕ್ಷಿಮಠ, ಬೆಳಗಾವಿ, ೧೯೯೨

ನಾಯಕ, ಹಾ.ಮಾ., (ಸಂ) ಕನ್ನಡ ಸಾಹಿತ್ಯ ಚರಿತ್ರೆ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೭

ನಾರಾಯಣ, ಪಿ.ವಿ., ಬಳ್ಳಿಗಾವೆ, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, ೧೯೭೧

ನೇಗಿನಹಾಳ, ಎಂ.ಬಿ., ಪ್ರಾಚೀನ ಕನ್ನಡ ಶಾಸನಗಳ ಭಾಷಿಕ ಅಧ್ಯಯನ, ಪ್ರಕಾಶನ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೨

ಪ್ರಭಾಕರ ಎಂ.ಎನ್., ದೇವಾಲಯ ವಾಸ್ತುಚಂದ್ರಿಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

ಮನೋಜ ದಾಸ್ (ಮೂಲ) ಸೀತಾರಾಮಯ್ಯ (ಅನು) ಭಾರತದ ದೇವಾಲಯಗಳು ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, ೧೯೭೮

ಮುತ್ತಾಚಾರ್ಯ, ಟಿ.ವಿ., ಭಾರತೀಯ ಶಿಲ್ಪಶಾಸ್ತ್ರಸಾರ, ಶಿಲ್ಪಕಲಾ ಪರಿಷತ್ತು, ಬೆಂಗಳೂರು, ೧೯೮೭

ರಂಗಸ್ವಾಮಿ, ಸು., ಕರ್ನಾಟಕದ ದೇವಾಲಯಗಳು, ಬಿನ್ನಿ ಲೇಔಟ್, ವಿಜಯನಗರ, ಬೆಂಗಳೂರು ೪೦, ೧೯೯೪

ರಘುನಾಥ ಭಟ್ಟ, ಹೆಚ್.ಆರ್., ಕರ್ನಾಟಕ ಶಾಸನ ಕಲೆ, ಭಾರತೀಯ ಪ್ರಕಾಶನ, ಮೈಸೂರು, ೧೯೭೭

ರಮೇಶ, ಚಿ.ಗೊ., ಕರ್ನಾಟಕ ವಾಸ್ತುಶಿಲ್ಪ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೪

ರಹಮತ್ ತರೀಕೆರೆ, ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ ೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

ರಾಜಶೇಖರ ಎಸ್., ಕರ್ನಾಟಕ ವಾಸ್ತುಶಿಲ್ಪ ಮತ್ತ ಚಿತ್ರಕಲೆ, ಸುಜಾತ ಪಬ್ಲಿಕೇಷನ್, ಧಾರವಾಡ, ೧೯೮೮

ರಾಜಾರಾಮ ಹೆಗಡೆ, ಲೌಕಿಕ ಅಲೌಕಿಕ, ಆನಂದಕಂದ ಗ್ರಂಥಮಾಲೆ, ಮಲ್ಲಾಡಿಹಳ್ಳಿ, ೨೦೦೧

ರಾಮಚಂದ್ರರಾವ್ ಎಸ್.ಕೆ., ಮೂರ್ತಿಶಿಲ್ಪ ನೆಲೆ ಹಿನ್ನೆಲೆ, ಬೆಂಗಳೂರು, ೧೯೭೫

ರಾಮಚಂದ್ರರಾವ್ ಎಸ್.ಕೆ., ಭಾರತದ ದೇವಾಲಯಗಳು, ನೆಲೆ ಹಿನ್ನೆಲೆ, ಬೆಂಗಳೂರು, ೧೯೮೦

ಲಕ್ಷ್ಮಣ ತೆಲಗಾವಿ, ಮೌರ್ಯ ಮತ್ತು ಶಾತವಾಹನಯುಗ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

ವೆಂಕೋಬರಾವ್ ಬಿ., 'ಮೈಸೂರು ದೇಶದ ವಾಸ್ತುಶಿಲ್ಪ', ಕರ್ನಾಟಕ ಸಂಘ, ಸೆಂಟ್ರಲ್ ಕಾಲೇಜ್, ಬೆಂಗಳೂರು, ೧೯೨೮

ವಸುಂಧರಾ ಫಿಲಿಯೋಜಾ, ಕರ್ನಾಟಕದಲ್ಲಿ ಲಾಕುಳಶೈವ ಜಕ್ಕಣಾಚಾರ್ಯರು, ಕನ್ನಡ ಸಂಶೋಧನಾ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೩

ಶಿವರಾಮ ಕಾರಂತ, ಚಾಲುಕ್ಯ ವಾಸ್ತು ಮತ್ತು ಶಿಲ್ಪ, ಲಲಿತಕಲಾ ಅಕಾಡೆಮಿ, ಬೆಂಗಳೂರು, ೧೯೬೯

ಶ್ರೀಕಂಠ ಶಾಸ್ತ್ರಿ, ಸಂಶೋಧನ ಲೇಖನಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೪

ಶ್ರೀಕಂಠ ಶಾಸ್ತ್ರಿ ಎಸ್., ಹೊಯ್ಸಳ ವಾಸ್ತುಶಿಲ್ಪ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೬೪

ಶೇಕ್ ಆಲಿ ಬಿ., (ಸಂ), ಕರ್ನಾಟಕ ಚರಿತ್ರೆ ಮಾಲೆ (೧ ಮತ್ತು ೨ನೆಯ ಸಂಪುಟಗಳು) ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೧೯೯೭

ಸಕಲೇಶ ಮ., ಹೊಯ್ಸಳೋದಯ ಸಂಶೋಧನ, ಹಿಮಶೈಲ ಪ್ರಕಾಶನ, ಶಿವಮೊಗ್ಗ, ೨೦೦೨

ಸಿ. ಮಹದೇವ, ಸಿ.ಎಸ್. ವಾಸುದೇವನ್, ರಮೇಶನಾಯ್ಕ, ಕರ್ನಾಟಕ ದೇವಾಲಯ ಕೋಶ : ಹಾವೇರಿ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

ಜ್ಞಾನಾನಂದ ಜಿ., ವಾಸ್ತು ಪುರುಷ ನೆಲೆ ಹಿನ್ನೆಲೆ, ಸಂಸ್ಕೃತಿ ಸಾಹಿತ್ಯ ಪ್ರಸಾರ ಸಮಿತಿ, ಕೆ.ಜಿ.ಎಫ್., ೧೯೯೨

ಜ್ಞಾನಾನಂದ ಜಿ., ಶಿಲ್ಪಾದರ್ಶ, ಸಂ.೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

ಜ್ಞಾನಾನಂದ ಜಿ., ಶಿಲ್ಪಾದರ್ಶ, ಸಂ.೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

## ಆಂಗ್ಲ ಭಾಷೆಯ ಗ್ರಂಥಗಳು

ಅಗರ್‌ವಾಲಾ ಪಿ.ಕೆ., ಸ್ಟಡೀಸ್ ಇನ್ ಇಂಡಿಯನ್ ಐಕನೊಗ್ರಫಿ, ಪಬ್ಲಿಕೇಶನ್ ಸ್ಕೀಮ್, ಜೈಪೂರ, ಇಂಡಿಯಾ, ೧೯೯೫

ಅಣ್ಣಿಗೇರಿ ಎ.ಎಂ., ಪಟ್ಟದಕಲ್ ಟೆಂಪಲ್ಸ್, ಕನ್ನಡ ರಿಸರ್ಚ್ ಇನ್‌ಸ್ಟಿಟ್ಯುಟ್, ಧಾರವಾಡ, ೧೯೬೧

ಅಮರನಾಥ ಖನ್ನಾ, ಆರ್ಕ್ಯಾಲಜಿ ಆಫ್ ಇಂಡಿಯಾ, ಕ್ಯಾರಿಯನ್ ಬುಕ್ಸ್, C-೨೬, ಕಾನೌಟ್ ಪ್ಲೇಸ್, ನ್ಯೂಡೆಲ್ಲಿ, ೧೯೮೧

ಅಲೆಝಾಂಡರ್ ರೀಯಾ, ಪಲ್ಲವ ಆರ್ಕಿಟೆಕ್ಚರ್, ಏಷಿಯನ್ ಎಜುಕೇಶನಲ್ ಸರ್ವೀಸ್, ನ್ಯೂಡೆಲ್ಲಿ, (ಮರುಮುದ್ರಣ), ೧೯೯೪

ಅಲೆಝಾಂಡರ್ ರೀಯಾ, ಚಾಲುಕ್ಯ ಆರ್ಕಿಟೆಕ್ಚರ್, ಸುಪ್ರಿಟೆಂಡೆನ್ಟ್ ಗವರ್ನಮೆಂಟ್ ಪ್ರೆಸ್, ಮದ್ರಾಸ, ೧೮೯೬

ಆಚಾರ್ಯ ಪಿ.ಕೆ., ಇಂಡಿಯನ್ ಆರ್ಕಿಟೆಕ್ಚರ್ ಎಕಾರ್ಡಿಂಗ್ ಟು ಮಾನಸಾರ ಶಿಲ್ಪಶಾಸ್ತ್ರ, ಒರಿಯಂಟಲ್ ಬುಕ್ ರಿಪ್ರಿಂಟ್ ಕಾರ್ಪೊರೇಶನ್, ನ್ಯೂಡೆಲ್ಲಿ, ೧೯೩೫

ಆಚಾರ್ಯ ಪಿ.ಕೆ., ಡಿಕ್‌ಶ್ನರಿ ಆಫ್ ಹಿಂದೂ ಆರ್ಕಿಟೆಕ್ಚರ್, ಆಕ್ಸ್‌ಫೋರ್ಡ್ ಯೂನಿವರ್ಸಿಟಿ ಪ್ರೆಸ್, ಮದ್ರಾಸ್, ೧೯೨೭

ಆಚಾರ್ಯ ಪಿ.ಕೆ., ಹಿಂದೂ ಆರ್ಕಿಟೆಕ್ಚರ್ ಇನ್ ಇಂಡಿಯಾ ಅಂಡ್ ಅಬ್ರಾಡ್, ಜೆ.ಕೆ. ಪಬ್ಲಿಕೇಶನ್ ಹೌಸ್, ಭೂಪಾಲ, ೧೯೭೯

ಆನಂದ ಕುಮಾರಸ್ವಾಮಿ, ಎಸ್ಸೆ ಆನ್ ಅರ್ಲಿ ಇಂಡಿಯನ್ ಆರ್ಕಿಟೆಕ್ಚರ್, ಆಕ್ಸ್‌ಫೋರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂಡೆಲ್ಲಿ, ೧೯೯೨

ಆದಮ್ ಹಾರ್ಡಿ, ಇಂಡಿಯನ್ ಟೆಂಪಲ್ ಆರ್ಕಿಟೆಕ್ಚರ್ (ದ ಕರ್ನಾಟಕ ದ್ರಾವಿಡ ಟ್ರೆಡಿಶನ್), ಅಭಿನವ ಪಬ್ಲಿಕೇಶನ್ಸ್, ನ್ಯೂಡೆಲ್ಲಿ, ೧೯೯೫

ಆನಂದ ಕುಮಾರಸ್ವಾಮಿ, ಡಾನ್ಸ್ ಆಫ್ ಶಿವಾ, ನ್ಯೂಡೆಲ್ಲಿ ಪ್ರೆಸ್, ನ್ಯೂಯಾರ್ಕ್, ೧೯೬೩

ಆನಂದ ಕುಮಾರಸ್ವಾಮಿ, ವಿಶ್ವಕರ್ಮ, ಮುನ್‌ಸಿರಾಮ್ ಮನೊಹರ್‌ಲಾಲ್, ನ್ಯೂಡೆಲ್ಲಿ, ೧೯೭೮

ಆಲ್ಟೇಕರ್ ಎ.ಎಸ್., ಎಜ್ಯುಕೇಶನ್ ಇನ್ ಏನ್ಸಿಯಂಟ್ ಇಂಡಿಯಾ, ವಾರಣಾಸಿ, ೧೯೫೭

ಆಲ್ಟೇಕರ್ ಎ.ಎಸ್., ರಾಷ್ಟ್ರಕೂಟಾಸ್ ಅಂಡ್ ದೇರ್ ಟೈಮ್ಸ್, ಪೂನ, ಒರಿಯಂಟಲ್ ಬುಕ್ ಏಜನ್ಸಿ, ೧೯೬೭

ಆಲ್ಟೇಕರ್ ಎ.ಎಸ್., ಸ್ಟೇಟ್ ಆ್ಯಂಡ್ ಗವರ್ನಮೆಂಟ್ ಇನ್ ಏನ್ಸಿಯಂಟ್ ಇಂಡಿಯಾ, ಮೋತಿಲಾಲ್ ಬನಾರಸಿದಾಸ್, ನ್ಯೂಡೆಲ್ಲಿ, ೧೯೭೨

ಇಸ್ಮಾಯಿಲ್ ಕೆ., ಕರ್ನಾಟಕ ಟೆಂಪಲ್ಸ್ : ದೇರ್ ರೋಲ್ ಇನ್ ಸೋಷಿಯೊ ಎಕನಾಮಿಕ್ ಲೈಫ್, ಸಂದೀಪ್ ಪ್ರಕಾಶನ, ಅಶೋಕ ವಿಹಾರ, ದೆಹಲಿ ೫೨, ೧೯೮೪

ಋಗ್ವೇದ (ವಿಥ್ ಸಾಯಣಾಸ್ ಕಾಮೆಂಟರಿ) ಕ್ರಿಟಿಕಲಿ ಎಡಿಟೆಡ್ ಬಾಯ್ ವೈದಿಕ ಸಂಶೋಧನ ಮಂಡಲ, ಪುಣೆ, ೧೯೩೩

ಎಡಿತ್ ತೋಮೊರಿ ಎ ಹಿಸ್ಟರಿ ಆಫ್ ಫೈನ್ ಆರ್ಟ್ ಇನ್ ಇಂಡಿಯಾ ಆ್ಯಂಡ್ ದ ವೆಸ್ಟ್, ಒರಿಯಂಡಲ್ ಲಾಂಗಮನ್ ಲಿಮಿಟೆಡ್, ಮದ್ರಾಸ್, ೧೯೮೨

ಕೃಷ್ಣಮೂರ್ತಿ ಕೆ., ಅರ್ಲಿ ಇಂಡಿಯನ್ ಸೆಕ್ಯೂಲರ್ ಆರ್ಕಿಟೆಕ್ಚರ್, ಸಂದೀಪ್ ಪ್ರಕಾಶನ, ಡೆಲ್ಲಿ ೧೯೮೭

ಕೃಷ್ಣಮೂರ್ತಿ ಸಿ., ಶೈವ ಆರ್ಟ್ ಅಂಡ್ ಆರ್ಕಿಟೆಕ್ಚರ್ ಇನ್ ಸೌಥ್ ಇಂಡಿಯಾ, ಸಂದೀಪ್ ಪ್ರಕಾಶನ, ನ್ಯೂಡೆಲ್ಲಿ, ೧೯೮೫

ಕೃಷ್ಣಶಾಸ್ತ್ರಿ ಎಚ್., ಸೌಥ್ ಇಂಡಿಯನ್ ಇಮೇಜಸ್ ಆಫ್ ಗಾಡ್ಸ್ ಆ್ಯಂಡ್ ಗಾಡೆಸಿಸ್, ಏಷಿಯನ್ ಎಜುಕೇಶನ್ ಸರ್ವಿಸಸ್, ನ್ಯೂಡೆಲ್ಲಿ, (ಮರುಮುದ್ರಣ) ೧೯೮೬

ಗೆರಾರ್ಡ್ ಫೊಕಿಮಾ, ಚಾಲುಕ್ಯ ಆರ್ಕಿಟೆಕ್ಚರ್, ವಾಲ್ಯೂಮ್ I-II-III, ಮುನ್ಸಿರಾಮ್ ಮನೋಹರಲಾಲ ಪಬ್ಲಿಶರ್, ನ್ಯೂಡೆಲ್ಲಿ, ೨೦೦೩

ಗ್ರಾವ್ಲಿ ಮತ್ತು ರಾಮಚಂದ್ರನ್, ದಿ ತ್ರಿ ಮೇನ್ ಸ್ಟೈಲ್ಸ್ ಆಫ್ ಟೆಂಪಲ್ ಆರ್ಕಿಟೆಕ್ಚರ್ ರೆಕಾಗ್ನೈಸ್ಡ್ ಬೈ ಶಿಲ್ಪಶಾಸ್ತ್ರಾಸ್, ಮದ್ರಾಸ್, ೧೯೩೪

ಗಿಲ್ಬರ್ಟ್ ಸ್ಲಾಟರ್, ದ ದ್ರಾವಿಡನ್ ಎಲಿಮೆಂಟ್ ಇನ್ ಇಂಡಿಯನ್ ಕಲ್ಚರ್, ನ್ಯೂಡೆಲ್ಲಿ, ೧೯೮೭

ಗುಪ್ತೆ ಆರ್. ಎಸ್., ಐಕಾನೊಗ್ರಫಿ ಆಫ್ ದ ಹಿಂದೂ, ಬುದ್ಧಿಷ್ಟ ಅಂಡ್ ಜೈನ್, ಡಿ. ಬಿ. ತರಪೂರವಾಲಾ, ಬಾಂಬೆ, ೧೯೭೨

ಗುಪ್ತೆ ಆರ್. ಆಸ್., ದ ಆರ್ಟ್ ಆಂಡ್ ಆರ್ಕಿಟೆಕ್ಚರ್ ಆಫ್ ಐಹೊಳೆ, ಡಿ. ಬಿ. ತರಪೊರೆವಾಲಾ, ಬಾಂಬೆ, ೧೯೬೭

ಗುರುರಾಜಾಚಾರ್ ಎಸ್., (ಸಂ) ಆಸ್ಪೆಕ್ಟ್ಸ್ ಆಫ್ ಎಕನಾಮಿಕ್ ಆಂಡ್ ಸೋಷಿಯಲ್ ಲೈಫ್ ಇನ್ ಕರ್ನಾಟಕ, ಪ್ರಾಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೪

ಗೋಪಾಲ್ ಬಿ. ಆರ್., ದಿ ಚಾಲುಕ್ಯಾಸ್ ಆಫ್ ಕಲ್ಯಾಣ ಆಂಡ್ ದಿ ಕಲಚೂರಿಸ್, ಧಾರವಾಡ, ೧೯೮೧

ಗೋಪಾಲ ಬಿ. ಆರ್., ಮೈನರ್ ಡೈನಾಸ್ಟೀಸ್ ಆಫ್ ಸೌತ್ ಇಂಡಿಯ, ಕರ್ನಾಟಕ ಸಂಪುಟ ೧, ನ್ಯೂ ಎರಾ ಪ್ರಕಾಶನ, ಮದ್ರಾಸ್ ೨೮, ೧೯೮೨

ಗೋಪಿನಾಥರಾವ್, ಟಿ.ಎ., ಎಲಿಮೆಂಟ್ಸ್ ಆಫ್ ಹಿಂದೂ ಐಕಾನೊಗ್ರಫಿ, ಸಂಪುಟಗಳು I, II & III, ನ್ಯೂಡೆಲ್ಲಿ, ೧೯೮೫

ಜಗದೀಶ ಅಯ್ಯರ್, ಸೌಥ್ ಇಂಡಿಯನ್ ಶ್ರೈನ್, ಏಶಿಯನ್ಎಜ್ಯುಕೇಶನಲ್ ಸರ್ವ್ವಿಸಸ್, ನ್ಯೂಡೆಲ್ಲಿ, (ಮರುಮುದ್ರಣ) ೧೯೯೩

ಜಾರ್ಜ್ ಎಂ. ಮೊರೆಸ್, ದಿ ಕದಂಬ ಕುಲ ಎ ಹಿಸ್ಟರಿ ಆಫ್ ಎನ್ಸಿಯಂಟ್ ಆ್ಯಂಡ್ ಮಿಡೀವಲ್ ಕರ್ನಾಟಕ, ಏಷಿಯನ್ ಎಜುಕೇಶನಲ್ ಸರ್ವೀಸ್, ನ್ಯೂಡೆಲ್ಲಿ, ೧೯೩೧ ( ಪ್ರಥಮ ಮುದ್ರಣ)

ಜೇಮ್ಸ್ ಫರ್ಗುಸನ್ ಆ್ಯಂಡ್ ಜೇಮ್ಸ್ ಬರ್ಗೇಸ್ಸ್, ದ ಕೇವ್ಹ ಟೆಂಪಲ್ಸ್ ಆಫ್ ಇಂಡಿಯಾ, ಮುನ್ಸಿರಾಮ ಮನೋಹರಲಾಲ ಪಬ್ಲಿಶರ್, ನ್ಯೂಡೆಲ್ಲಿ, ೧೮೮೦

ಜೇಮ್ಸ್ ಫರ್ಗುಸನ್, ಹಿಸ್ಟರಿ ಆಫ್ ಇಂಡಿಯನ್ ಆ್ಯಂಡ್ ಈಸ್ಟರ್ನ್ ಆರ್ಕಿಟೆಕ್ಚರ್, ಸಂಪುಟ ೧, ನವದೆಹಲಿ, ೧೯೭೨

ಜಾನ್ ಮಾರ್ಷಲ್, ಮೊಹೆಂಜೂದಾರೊ ಆ್ಯಂಡ್ ದ ಇಂಡಸ್ ಸಿವಿಲಿಝೇಶನ್, ವಾಲ್ಯೂಮ್ಸ್ I, II & III, ಲಂಡನ್, ೧೯೩೧, ರಿಪ್ರಿಂಟ್, ಇಂಡೊಲಾಜಿಕಲ್ ಬುಕ್ ಹೌಸ್, ೧೯೭೩

ಧಾಕೆ ಎಂ. ಎ., ದಿ ಇಂಡಿಯನ್ ಟೆಂಪಲ್ ಫಾರ್ಮ್ಸ್ ಇನ್ ಕರ್ನಾಟಕ ಇನ್ ಸ್ಕ್ರಿಪ್‌ಷನ್ಸ್ ಆ್ಯಂಡ್ ಆರ್ಕಿಟೆಕ್ಚರ್, ಅಭಿನವ ಪ್ರಕಾಶನ, ಇ-೩೭, ಹಾಜ್ ಕಾಸ್, ನವದೆಹಲಿ, ೧೯೭೭

ಧಾಕೆ ಎಮ್. ಎ., ದ ಇಂಡಿಯನ್ ಟೆಂಪಲ ಫಾರಮ್ಸ್, ಅಭಿನವ ಪ್ರಕಾಶನ, ನವದೆಹಲಿ, ೧೯೭೭

ತ್ರಿದೇವಿ ಆರ್. ಡಿ., ಐಕಾನೂಗ್ರಫಿ ಆಫ್ ಪಾರ್ವತಿ, ಆಗಮ ಕಲಾ ಪ್ರಕಾಶನ, ಡೆಲ್ಲಿ, ೧೯೮೭

ತಿವಾರಿ ಎಸ್. ಪಿ., ಹಿಂದೂ ಐಕಾನೊಗ್ರಫಿ, ಆಗಮ ಕಲಾ ಪ್ರಕಾಶನ, ನ್ಯೂಡೆಲ್ಲಿ, ೧೯೯೭

ದಿನಕರ ದೇಸಾಯಿ, ದಿ ಮಹಾಮಂಡಲೇಶ್ವರಾಸ್ ಅಂಡರ್ ಚಾಲುಕ್ಯಾಸ್ ಆಫ್ ಕಲ್ಯಾಣ, ಇಂಡಿಯನ್ ಹಿಸ್ಟೋರಿಕಲ ರಿಸರ್ಚ್ ಇನ್‌ಸ್ಟಿಟ್ಯೂಟ್, ಪೂಣೆ, ೧೯೫೧

ದಿವಾಕರ್ ಆರ್. ಆರ್., ಕರ್ನಾಟಕ ಥ್ರೂ ದ ಏಜೆಸ್ಸ್, ಗವ್ಹರ್ನಮೆಂಟ್ ಆಫ್ ಮೈಸೂರು, ಬೆಂಗಳೂರು ೧೯೬೮

ದೀಕ್ಷಿತ್ ಜಿ.ಎಸ್., ಲೋಕಲ್ ಸೆಲ್ಫ್ ಗವರ್ನಮೆಂಟ್ ಇನ್ ಮಿಡೀವಲ್ ಕರ್ನಾಟಕ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೪

ದೇವರಾಜ್ ಡಿ.ವಿ., ಚನ್ನಪ್ಪ, ಎಸ್. ಪಾಟೀಲ್, (ಸಂ) ಆರ್ಟ್ ಆ್ಯಂಡ್ ಆರ್ಕಿಟೆಕ್ಚರ್ ಇನ್ ಕರ್ನಾಟಕ, ಡೈರೆಕ್ಟರೇಟ್ ಆಫ್ ಆರ್ಕ್ಯಾಲಜಿ ಆ್ಯಂಡ್ ಮ್ಯೂಸಿಯಮ್ಸ್, ಮೈಸೂರು, ೧೯೯೬

ದೇವಾಂಗಣ ದೇಸಾಯಿ, ಎರಾಟಿಕ್ ಸ್ಕಲ್ಪಚರ್ ಆಫ್ ಇಂಡಿಯಾ ಎ ಸೋಸಿಯೊ ಕಲ್ಚರಲ್ ಸ್ಟಡಿ, ಟಾಟಾ ಮ್ಯಾಕ್ ಗ್ರಾವ್-ಹಿಲ್ ಪಬ್ಲಿಶಿಂಗ್ ಕಂ., ನ್ಯೂಡೆಲ್ಲಿ, ೧೯೭೪

ದೇಸಾಯಿ ಪಿ. ಬಿ., ಜೈನಿಸಮ್ ಇನ್. ಸೌಥ್ ಇಂಡಿಯಾ ಆ್ಯಂಡ್ ಸಮ್ ಜೈನ ಎಪಿಗ್ರಾಫ್ಸ್, ಗುಲಾಬಚಂದ, ಹೀರಾಚಂದ ದೋಶಿ, ಜೈನ ಸಂಸ್ಕೃತಿ ಸಂರಕ್ಷಕ ಸಂಘ, ಸೊಲ್ಲಾಪುರ, ೧೯೫೭

ನರಸಿಂಹಮೂರ್ತಿ ಎ.ವಿ., (ಸಂ) ಆರ್ಕಿಯಾಲಜಿ ಆಫ್ ಕರ್ನಾಟಕ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೮

ನೀಲಕಂಠ ಶಾಸ್ತ್ರಿ ಕೆ.ಎ., ಎ ಹಿಸ್ಟರಿ ಆಫ್ ಸೌಥ್ ಇಂಡಿಯಾ, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ಮದ್ರಾಸ್, ೧೯೮೭

ಪರ್ಸಿಬ್ರೌನ್, ಇಂಡಿಯನ್ ಆರ್ಕಿಟೆಕ್ಚರ್, (ಬುದ್ಧಿಸ್ಟ್ ಆ್ಯಂಡ್ ಹಿಂದೂ) ಡಿ.ಬಿ. ತರಪೊರೆವಾಲಾ, ಬೊಂಬೆ, ೧೯೭೧

ಪಾಟೀಲ್ ಸಿ.ಎಸ್., ಟೆಂಪಲ್ಸ್ ಆಫ್ ರಾಯಚೂರ ಆ್ಯಂಡ್ ಬಳ್ಳಾರಿ ಡಿಸ್ಟ್ರಿಕ್ಟ್, ಡೈರೆಕ್ಟರ್ ಆಫ್ ಆರ್ಕಿಯಾಲಜಿ ಆ್ಯಂಡ್ ಮ್ಯೂಝಿಯಮ್, ಮೈಸೂರು, ೧೯೯೪

ಫರ್ಗ್ಯುಸನ್ ಜೆ., ಆರ್ಕಿಟೆಕ್ಚರ್ ಆಫ್ ಧಾರವಾಡ್ ಆ್ಯಂಡ್ ಮೈಸೂರ್, ಲಂಡನ್, ೧೮೬೬

ಬರ್ಟನ್ ಸ್ಟೈನ್, ಸೌಥ್ ಇಂಡಿಯನ್ ಟೆಂಪಲ್ಸ್ ಆ್ಯಂಡ್ ಅನಾಲಿಕಲ್ ಸ್ಟಡಿ, ನ್ಯೂಡೆಲ್ಲಿ, ೧೯೭೭

ಬ್ಯಾನರ್ಜಿ ಜೆ. ಎನ್., ಡವಲಪ್‌ಮೆಂಟ್ ಆಫ್ ಹಿಂದೂ ಐಕಾನೋಗ್ರಫಿ, ಮುನ್ಸಿರಾಮ್ ಮನೋಹರಲಾಲ್, ನ್ಯೂಡೆಲ್ಲಿ, ೧೯೭೮

ಬ್ಯಾನರ್ಜಿ ಜೆ. ಎನ್., ರಿಲಿಜನ ಇನ್ ಆರ್ಟ್ ಆ್ಯಂಡ್ ಆರ್ಕಿಯಾಲಜಿ, ಯೂನಿವರ್ಸಿಟಿ ಆಫ್ ಲಖನೌ, ೧೯೬೮

ಭಂಡಾರಕರ್ ಆರ್. ಜಿ., ವೈಷ್ಣವಿಸಮ್, ಶೈವಿಸಮ್ ಆ್ಯಂಡ್ ಮೈನರ್ ರಿಲಿಜಿಯಸ್ ಸಿಸ್ಟಮ್ಸ್, ಇಂಡೋಲಾಜಿಕಲ್ ಬುಕ್ ಹೌಸ್, ವಾರಣಾಸಿ, ೧೯೬೫

ಭಟ್ಟಾಚಾರ್ಯ ಬಿ. ಸಿ., ಇಂಡಿಯನ್ ಇಮೇಜಸ್, ಕಾಸ್ಮೊ ಪಬ್ಲಿಕೇಶನ್, ನ್ಯೂಡೆಲ್ಲಿ, ೧೯೭೮

ಮಹಾಲಿಂಗಂ ಟಿ.ವಿ., ದ ಸೌಥ್ ಇಂಡಿಯನ ಟೆಂಪಲ್ ಕಾಂಪ್ಲೆಕ್ಸ್, ಕೆ.ಆರ್.ಐ., ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೦

ಮ್ಯಾಕ್ ಡೊನ್ನೆಲ್ಲ್, ಅರ್ಥೂರ್ ಆನ್‌ಥೊನಿ, ವೇದಿಕ್ ಮಿಥಾಲಾಜಿ, ಪ್ರಿಂಟ್ ನ್ಯೂಯಾರ್ಕ್, ಗಾರ್ಲ್ವನ್ ಪ್ರೆಸ್, ೧೯೭೪

ಮಾಥೂರ ಎಸ್. ಎಲ್., ಸ್ಕಲ್ಪ್ಚರ್ ಇನ್ ಇಂಡಿಯಾ ಇಟ್ಸ್ ಹಿಸ್ಟರಿ ಆ್ಯಂಡ್ ಆರ್ಟ್, ನ್ಯೂಡಲ್ಲಿ, ೧೯೭೨

ಮಾಥುರಾಮ್ ಭೂತಾಲಿಂಗಂ, ಟೆಂಪಲ್ಸ್ ಆಫ್ ಇಂಡಿಯಾ ಮಿಥ್ಸ್ ಆ್ಯಂಡ್ ಲೆಜೆಂಡ್ಸ್, ಪಬ್ಲಿಕೇಶನ್ ಡಿವಿಜನ್ ಮಿನಿಸ್ಟರಿ ಆಫ್ ಇನ್‌ಫರ್‌ಮೇಶನ್ ಆ್ಯಂಡ್ ಬ್ರಾಡ್‌ಕಾಸ್ಟಿಂಗ್, ಗವರ್ನಮೆಂಟ್ ಆಫ್ ಇಂಡಿಯಾ, ನ್ಯೂಡೆಲ್ಲಿ, ೧೯೯೦

ಮಿಶ್ರಾ ಒ. ಪಿ., ಐಕಾನೋಗ್ರಫಿ ಆಫ್ ದ ಸಪ್ತಮಾತೃಕಾಸ್, ಆಗಮ ಕಲಾ ಪ್ರಕಾಶನ, ಡೆಲ್ಲಿ, ೧೯೮೯

ಮೈಕೇಲ್ ಡಬ್ಲ್ಯು ಮೆಯಿಸ್ಟರ್, ಡಾಕೆ, ಎಂ. ಎ., ಎನ್. ಸೈಕ್ಲೊಪೀಡಿಯಾ ಆಫ್ ಇಂಡಿಯನ್ ಟೆಂಪಲ್ ಆರ್ಕಿಟೆಕ್ಚರ್ ಸೌಥ ಇಂಡಿಯ : ಲೋವರ ದ್ರಾವಿಡ ದೇಶ, ಅಮೇರಿಕನ್ ಇನ್‌ಸ್ಟಿಟ್ಯೂಟ್ ಆಫ್ ಇಂಡಿಯನ್ ಸ್ಟಡೀಸ, ನ್ಯೂಡೆಲ್ಲಿ, ೧೯೮೩

ಮೈಕೇಲ್ ಡಬ್ಲ್ಯು ಮೆಯಿಸ್ಟರ್, ಡಾಕಿ ಎಂ. ಎ., ಎನ್.ಸೈಕ್ಲೊಪೀಡಿಯಾ ಆಫ್ ಇಂಡಿಯನ್ ಟೆಂಪಲ್ ಆರ್ಕಿಟೆಕ್ಚರ್ ಸೌಥ್ ಇಂಡಿಯ : ಅಪ್ಪರ್ ದ್ರಾವಿಡ ದೇಶ, ಅಮೇರಿಕನ್ ಇನ್‌ಸ್ಟಿಟ್ಯೂಟ್ ಆಫ್ ಇಂಡಿಯನ್ ಸ್ಟಡೀಸ್, ನ್ಯೂಡಿಲ್ಲಿ, ೧೯೮೬

ರಾಜಶೇಖರ್ ಎಸ್., ಅರ್ಲಿ ಚಾಲುಕ್ಯನ್ ಆರ್ಕಿಟೆಕ್ಚರ್ (ಐಹೊಳೆ) ಅಭಿನವ ಪ್ರಕಾಶನ, ದೆಹಲಿ, ೧೯೮೫

ರಾಜಶೇಖರ್ ಎಸ್., ರಾಷ್ಟ್ರಕೂಟ ಆರ್ಟ್ ಇನ್ ಕರ್ನಾಟಕ, ಸುಜಾತ ಪಬ್ಲಿಕೇಶನ್, ಧಾರವಾಡ, ೧೯೯೦

ರಾಜೇಶ್ವರಿ, ಶಕ್ತಿ ಐಕಾನೋಗ್ರಫಿ, ಇಂಟಲೆಕ್ಚುಯಲ್ ಪಬ್ಲಿಷಿಂಗ್ ಹೌಸ್, ನ್ಯೂಡೆಲ್ಲಿ, ೧೯೮೯

ರಾಬರ್ಟ್‌ಸಿವೆಲ್ಲ್, ಎ ಫಾರ್‌ಗೊಟನ್ ಎಂಪಾಯರ್, ಏಶಿಯನ್ ಎಜ್ಯುಕೇಶನಲ್ ಸರ್ವೀಸಸ್, ನ್ಯೂಡೆಲ್ಲಿ, (ಮರುಮುದ್ರಣ) ೧೯೯೧

ರಾಮಚಂದ್ರರಾವ್ ಎಸ್.ಕೆ., ದಿ ಐಕಾನ್ಸ್ ಆ್ಯಂಡ್ ಇಮೇಜಸ್ ಇನ್ ಇಂಡಿಯನ್ ಟೆಂಪಲ್ಸ್, ಐ.ಬಿ. ಹೆಚ್. ಪ್ರಕಾಶನ, ಬೆಂಗಳೂರು, ೧೯೮೧

ರಾವ್ ಎಸ್. ಆರ್., ಲೋಥಲ್ ಆ್ಯಂಡ್ ದ ಇಂಡಸ್ ಸಿವಿಲಿಝೇಶನ್, ಏಷಿಯ ಪಬ್ಲಿಷಿಂಗ್ ಹೌಸ್, ಬಾಂಬೆ, ೧೯೭೨.

ರೈಸ್ ಬಿ. ಎಲ್., ಮೈಸೂರ್ ಆ್ಯಂಡ್ ಕೂರ್ಗ್ ಫ್ರಂ ದಿ ಇನ್‌ಸ್ಕ್ರಿಪ್ಷನ್ಸ್, ಎಸ್.ಡಿ.ಎ., ನವದೆಹಲಿ ೧೬, ೧೯೮೬

ಲೀಲ ಶಾಂತಕುಮಾರಿ ಎಸ್., ಹಿಸ್ಟರಿ ಆಫ್ ದಿ ಅಗ್ರಹಾರಾಸ್ (ಕರ್ನಾಟಕ, ಕ್ರಿ.ಶ. ೯೦೦ ರಿಂದ ೧೩೦೦) ನ್ಯೂಎರಾ ಪ್ರಕಾಶನ, ಮದ್ರಾಸ್ ೨೮, ೧೯೮೬

ಲೋರೆಂರಝನ್ ಡಿ.ಎನ್., ದ ಕಾಪಾಲಿಕಾಸ್ ಆ್ಯಂಡ ಕಾಲಾಮುಕಾಸ್, ಮೋತಿಲಾಲ್ ಬನಾರಸಿದಾಸ್ ಪಬ್ಲಿಕೇಶನ್, ಡೆಲ್ಲಿ, ೧೯೭೨

ವಾಸುದೇವನ್ ಸಿ.ಎಸ್.(ಸಂ), ಕನ್ನಡ ಇನ್ಸ್‌ಸ್ಕ್ರಿಪ್ಷನ್ಸ್ ಆಫ್ ಆಂದ್ರಪ್ರದೇಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

ವೆಂಕಟರಮಣಯ್ಯ ಎನ್., ಆ್ಯನ್ ಎಸ್ಸೇ ಆನ್ ದ ಒರಿಜಿನ್ ಆಫ್ ದ ಸೌಥ್ ಇಂಡಿಯನ್ ಟೆಂಪಲ್ಸ್, ಏಶಿಯನ್ ಎಜ್ಯುಕೇಶನಲ್ ಸರ್ವೀಸಸ್, ನ್ಯೂಡೆಲ್ಲಿ, ೧೯೮೫

ಶರ್ಮಾ ಆಯ್.ಕೆ., ದ ಡೆವಲಫ಼ಂಮೆಂಟ್ ಆಫ್ ಅರ್ಲಿ ಶೈವ ಆರ್ಟ್ ಆ್ಯಂಡ್ ಆರ್ಕಿಟೆಕ್ಚರ್, ಸಂದೀಪ ಪ್ರಕಾಶನ, ನ್ಯೂಡೆಲ್ಲಿ, ೧೯೮೨

ಶಿವರಾಮಮೂರ್ತಿ ಸಿ., ದ ಆರ್ಟ್ ಆಫ್ ಇಂಡಿಯಾ, ಹ್ಯಾರಿ ಎನ್. ಅಭ್ರಮ್ಸ್, ನ್ಯೂಯಾರ್ಕ್, ೧೯೭೭

ಶ್ರೀನಿವಾಸ ಕೆ. ಆರ್., ಟೆಂಪಲ್ಸ್ ಆಫ್ ಸೌಥ್ ಇಂಡಿಯ, ನ್ಯಾಷನಲ್ ಬುಕ್‌ಟ್ರಸ್ಟ್, ಗ್ರೀನ್ ಪಾರ್ಕ್ ನವದೆಹಲಿ, ೧೯೯೩

ಶ್ರೀನಿವಾಸನ್ ಪಿ. ಆರ್. ದಿ. ಇಂಡಿಯನ್ ಟೆಂಪಲ್ ಆರ್ಟ್ ಆ್ಯಂಡ್ ಆರ್ಕಿಟೆಕ್ಚರ್, ಪ್ರಸಾರಾಂಗ,ಮೈಸೂರ ವಿಶ್ವವಿದ್ಯಾನಿಲಯ, ೧೯೮೨

ಶ್ರೀನಿವಾಸ್ ರಿತ್ತಿ, ದ ಸೆವುಣಾಸ್, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೩

ಶುಕ್ಲಾ ಡಿ. ಎನ್., ವಾಸ್ತುಶಾಸ್ತ್ರ (ಹಿಂದೂ ಸೈನ್ಸ್ ಆಫ್ ಆರ್ಕಿಟೆಕ್ಚರ್), ಮುನ್ಷಿರಾಮ್ ಮನೋಹರಲಾಲ್ ಪಬ್ಲಿಷರ್, ನ್ಯೂಡೆಲ್ಲಿ, ೧೯೬೦

ಶುಕ್ಲಾ ಡಿ. ಎನ್., ವಾಸ್ತು ಶಾಸ್ತ್ರ ಹಿಂದೂ ಕ್ಯಾನನ್ ಆಫ್ ಐಕಾನೊಗ್ರಫಿ ಆ್ಯಂಡ್ ಪೇಂಟಿಂಗ್, ಮುನ್ಷಿರಾಮ್ ಮನೋಹರಲಾಲ್ ಪಬ್ಲಿಷರ್ಸ್, ನ್ಯೂಡೆಲ್ಲಿ, ೧೯೯೩

ಶೆಟ್ಟರ್ ಎಸ್., ದಿ ಹೊಯ್ಸಳ ಟೆಂಪಲ್ಸ್ ಇನ್‌ಸ್ಟಿಟ್ಯೂಟ್ ಆಫ್ ಇಂಡಿಯನ್ ಆರ್ಟ್ ಹಿಸ್ಟರಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೨

ಸರ್ಕಾರ ಎಚ್., ಸ್ಟಡೀಸ್ ಇನ್ ಅರ್ಲಿ ಬುದ್ಧಿಸ್ಟ್ ಆರ್ಕಿಟೆಕ್ಚರ್ ಆಫ್ ಇಂಡಿಯಾ, ಮುನ್ಷಿರಾಮ್ ಮನೋಹರಲಾಲ್ ಪಬ್ಲಿಷರ್ಸ್, ನ್ಯೂಡೆಲ್ಲಿ, ೧೯೯೩

ಸರ್ಕಾರ್ ದಿನೇಶ್ ಚಂದ್ರ, ದ ಸಕ್ಸೆಸರ್ ಆಫ್ ದ ಶಾತವಾಹನಾಸ್ ಇನ್ ಲೋವರ್ ಡೆಕ್ಕನ್, ಯೂನಿವರ್ಸಿಟಿ ಆಫ್ ಕಲ್ಕತ್ತಾ, ೧೯೩೯

ಸಾಯಿರಾಮ್ ಟಿ.ವಿ., ಇಂಡಿಯನ್ ಟೆಂಪಲ್ ಫಾರ್ಮ್ ಆ್ಯಂಡ್ ಫೌಂಡೇಶನ್, ಆಗಮ ಕಲಾ ಪ್ರಕಾಶನ, ಡೆಲ್ಲಿ, ೧೯೮೨

ಸ್ಮಿತ್ ವಿ., ದ ಅರ್ಲಿ ಹಿಸ್ಟರಿ ಆಫ್ ಇಂಡಿಯಾ, ಆಕ್ಸ್‌ಫೋರ್ಡ್ ಕ್ಲ್ಯಾರೆನ್‌ಡನ್ ಪ್ರೆಸ್ಸ್, ೧೯೦೪, ರಿಪ್ರಿಂಟ್ ೧೯೫೭

ಸುರೇಶ್ ಕೆ.ಎಂ., ಟೆಂಪಲ್ಸ್ ಆಫ್ ಕರ್ನಾಟಕ, ಭಾರತೀಯ ಕಲಾ ಪ್ರಕಾಶನ, ನ್ಯೂಡೆಲ್ಲಿ, ೨೦೦೩

ಸೂಸನ್ ಎಲ್., ಹಂಟಿಂಗ್‌ಟನ್, ಆರ್ಟ್ ಆಫ್ ಏನ್ಶಂಟ್ ಇಂಡಿಯಾ, ವೆದರ್‌ಹಿಲ್ಸ್, ನ್ಯೂಯಾರ್ಕ್, ಟೋಕಿಯೋ, ೧೯೮೫

ಸ್ಟೆಲ್ಲಾ ಕ್ರಾಂರಿಚ್, ದಿ ಹಿಂದೂ ಟೆಂಪಲ್, ಮೋತಿಲಾಲ್ ಬನಾರಸಿದಾಸ್ ಪಬ್ಲಿಷರ್ಸ್, ಡೆಲ್ಲಿ, ೧೯೭೬

ಸೌಂದರ ರಾಜನ್, ಕೆ.ವಿ., ಅರ್ಲಿ ಟೆಂಪಲ್ ಆರ್ಕಿಟೆಕ್ಚರ್ ಇನ್ ಕರ್ನಾಟಕ ಆ್ಯಂಡ್ ಇಟ್ಸ್ ರ‍್ಯಾಮಿಫಿಕೇಶನ್, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೯

ಸೌಂದರ ರಾಜನ್ ಕೆ.ವಿ., ಇಂಡಿಯನ್ ಟೆಂಪಲ್ ಸ್ಟೈಲ್ಸ್, ಮುನ್ಷಿರಾಮ್ ಮನೋಹರಲಾಲ್, ನವದೆಹಲಿ, ೧೯೭೨

ಸೌಂದರ ರಾಜನ್ ಕೆ.ವಿ., ಗ್ಲಿಂಪ್‌ಸಸ್ ಆಫ್ ಇಂಡಿಯನ್ ಕಲ್ಚರ್, ಆರ್ಕಿಟೆಕ್ಚರ್, ಆರ್ಟ್ ಅಂಡ್ ರಿಲೀಜಿಯಸ್, ಸಂದೀಪ್ ಪ್ರಕಾಶನ, ನ್ಯೂಡೆಲ್ಲಿ, ೧೯೮೧

ಹರ್ಷಾನಂದ, ಹಿಂದೂ ಗಾಡ್ಸ್ ಅಂಡ್ ಗಾಡೆಸಿಸ್, ರಾಮಕೃಷ್ಣಾಶ್ರಮ, ಮೈಸೂರ್, ೧೯೮೨

ಹ್ಯಾವೆಲ್ ಇ.ಬಿ., ಇಂಡಿಯನ್ ಸ್ಕಲ್‌ಪ್‌ಚರ್ ಅಂಡ್ ಪೈಂಟಿಂಗ್ ವಿತ್ ಆ್ಯನ್ ಎಕ್ಸ್‌ಪ್ಲನೇಷನ್ ಆಫ್ ದೇರ್ಸ್ ಮೋಟಿವ್ಸ್ ಆ್ಯಂಡ್ ಐಡಿಯಾಸ್, ಕಾಸ್‌ಮೊ ಪ್ರಕಾಶನ, ನವದೆಹಲಿ, ೧೯೮೦ (ತೃತೀಯ ಪ್ರಕಾಶನ)

ಹೆನ್ರಿ ಕಝಿನ್ಸ್, ದ ಚಾಲುಕ್ಯ ಆರ್ಕಿಟೆಕ್ಚರ್ ಆಫ್ ದ ಕನರೆಸಾ ಡಿಸ್ಟ್ರಿಕ್ಟ್ ಸೆಂಟ್ರಲ್ ಪಬ್ಲಿಕೇಶನ್ ಬ್ರಾಂಚ್, ಗವ್ಹರ್ನಮೆಟ್ ಆಫ್ ಇಂಡಿಯಾ, ಕಲ್ಕತ್ತಾ, ೧೯೨೬

## ಅಭಿನಂದನಾ ಗ್ರಂಥಗಳು, ಗ್ಯಾಸೆಟಿಯರ್‌ಗಳು, ನಿಘಂಟುಗಳು

ಇಂಡಿಯನ್ ಹಿಸ್ಟರಿ ಆ್ಯಂಡ್ ಎಫಿಗ್ರಾಫಿ : ಡಾ.ಜಿ.ಎಸ್ ಗಾಯಿ ಫೆಲಿಸಿಟೇಶನ್ ವಾಲ್ಯೂಮ್, (ಪ್ರ.ಸಂ.) ಕೆ.ವಿ.ರಮೇಶ್ (ಸಂ) ಎಸ್.ಪಿ.ತಿವಾರಿ, ಜಯರಾಮ ಶರ್ಮಾ, ನ್ಯೂಡೆಲ್ಲಿ, ೧೯೯೦

ಕುಸುಮಾಂಜಲಿ : ಡಾ.ಸಿ.ಶಿವರಾಮಮೂರ್ತಿ ಫೆಲಿಸಿಟೇಶನ್ ವಾಲ್ಯೂಮ್ (ಸಂ) ಎಂ.ಎಸ್. ನಾಗರಾಜರಾವ್, ಡೆಲ್ಲಿ, ೧೯೮೫

ಗೌರವಮ್ : ಡಾ. ಬಿ.ಕೆ.ಗುರುರಾಜರಾವ್ ಫೆಲಿಸಿಟೇಶನ್ ವಾಲ್ಯೂಮ್ (ಪ್ರ.ಸಂ.) ರಮೇಶ ಕೆ.ವಿ. (ಸಂ), ಎಂ.ಡಿ.ಸಂಪತ್, ವಿ.ಶಿವಾನಂದ, ಎಲ್.ಎನ್.ಸ್ವಾಮಿ, ಡೆಲ್ಲಿ, ೧೯೯೬

ನ್ಯೂ ಟ್ರೆಂಡ್ಸ್ ಇನ್ ಇಂಡಿಯನ್ ಆರ್ಟ್ ಅಂಡ್ ಆರ್ಕಿಯಾಲಜಿ, ಎಸ್.ಆರ್.ರಾವ್ ಸೆಂವಂಟಿಯಥ್ ಬರ್ಥ್ ಡೆ ಫೆಲಿಸಿಟೇಶನ್ ವಾಲ್ಯೂಮ್ I ಅಂಡ್ II, ಬಿ.ಯು.ನಾಯಕ ಮತ್ತು ಎನ್.ಸಿ.ಘೋಷ್ (ಸಂ) ನ್ಯೂಡೆಲ್ಲಿ, ೧೯೯೨

**ಶ್ರೀ ಪುಷ್ಪಾಂಜಲಿ** : ಡಾ.ಸಿ.ಆರ್. ಶ್ರೀನಿವಾಸನ್ ಸಂಸ್ಮರಣ ಗ್ರಂಥ (ಪ್ರ.ಸಂ.) ರಮೇಶ್ ಕೆ.ವಿ. (ಸಂ) ಎಂ.ಎಸ್.ಸುಬ್ರಮಣ್ಯ ಅಯ್ಯರ್, ಎಂ.ಜೆ.ಶರ್ಮ, ಎಸ್.ಸ್ವಾಮಿನಾಥನ್, ಸಿ.ಎಸ್.ವಾಸುದೇವನ್, ನ್ಯೂಡೆಲ್ಲಿ, ೨೦೦೪

**ಸಂಶೋಧನೆ** : ಡಾ.ಚಿದಾನಂದಮೂರ್ತಿ ಅಭಿನಂದನಾ ಗ್ರಂಥ (ಸಂ) ಲಕ್ಷ್ಮಣ ತೆಲಗಾವಿ ಹಾಗೂ ಸಿ.ಯು.ಮಂಜುನಾಥ, ಬೆಂಗಳೂರು, ೧೯೯೧

**ಮೈಸೂರು ಗ್ಯಾಸೆಟಿಯರ್** : ಸಿ.ಹಯವದನರಾವ್, ಬೆಂಗಳೂರು, ೧೯೨೭-೩೦

**ಕರ್ನಾಟಕ ರಾಜ್ಯ ಗ್ಯಾಸೆಟಿಯರ್** : ಧಾರವಾಡ ಜಿಲ್ಲೆ (ಸಂ) ಸೂರ್ಯನಾಥ ಯು. ಕಾಮತ್, ೧೯೮೨

**ಸಂಕ್ಷಿಪ್ತ ಕನ್ನಡ ಇಂಗ್ಲಿಷ್ ನಿಘಂಟು** : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೪

**ಕನ್ನಡ ನಿಘಂಟು** : (ಕ.ಸಾ.ಪ) ಸಂ.೧-೫ ಬೆಂಗಳೂರು ೧೯೭೦-೮೮

**ಇಂಡಿಯನ್ ಎಪಿಗ್ರಾಫಿಕಲ್ ಗ್ಲೊಸರಿ** : ಡಿ.ಸಿ. ಸರ್ಕಾರ್, ಡೆಲ್ಲಿ, ೧೯೬೬

**ಕಿಟೆಲ್ಸ್ ಕನ್ನಡ ಇಂಗ್ಲಿಷ್ ಡಿಕ್ಷ್ನರಿ ವಾಲ್ಯೂಮ್ I-IV ಮದ್ರಾಸ್, ೧೯೬೮**

## ಅಪ್ರಕಟಿತ ಸಂಶೋಧನಾ ನಿಬಂಧಗಳು (ಪಿಎಚ್.ಡಿ ಮತ್ತು ಎಮ್.ಫಿಲ್)

ಅರಿಷಿಣಗುಪ್ಪೆ ಬಸವರಾಜ್ ತಿಳವಳ್ಳಿ ಪ್ರದೇಶದ ದೇವಾಲಯಗಳು ಒಂದು ಅಧ್ಯಯನ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೦

ಕರಿಬಸಯ್ಯ ಆರ್. ಹಿರೇಕೆರೂರು ಪ್ರದೇಶದ ಮೂರ್ತಿಶಿಲ್ಪ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೮

ತಿಪ್ಪೇಸ್ವಾಮಿ ಎಚ್. ದಾವಣಗೆರೆ ಜಿಲ್ಲೆಯ ದೇವಾಲಯಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

ಪಾಟೀಲ ಮಂಜುನಾಥ ಎಚ್., ರಾಣೆಬೆನ್ನೂರು ತಾಲೂಕು ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೮

ಭಟ್‌ಸೂರಿ, ಕೆ.ಜಿ., ಆರ್ಟ್ ಆ್ಯಂಡ್ ಆರ್ಕಿಟೆಕ್ಚರ್ ಆಫ್ ನಾರ್ತ್ ಕೆನರಾ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೮

ರಮೇಶ್ ನಾಯಕ, ಹಾವೇರಿ ಒಂದು ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೭

ಮಹೇಶ ಕೆ., ವಿಜಯನಗರ ಕಾಲದ ವೈಷ್ಣವ ದೇವಾಲಯಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

ವಿನೋದಾ ಪಾಟೀಲ, ಪಾನುಂಗಲ್ಲಯ್ಯೂರು : ಒಂದು ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೬

ಸಾಲಿಮಠ ಸುರೇಶ, ಹಿರೇಕೆರೂರು ಮತ್ತು ಅದರ ಸುತ್ತಮುತ್ತಲಿನ ಶಾಸನಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೬

ಸೊಟ್ಟಮ್ಮನವರ ವಿ.ಜಿ., ರಾಣೆಬೆನ್ನೂರು ಪ್ರದೇಶದ ದೇವಾಲಯಗಳು ಒಂದು ಅಧ್ಯಯನ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೮

## ಪಾರಿಭಾಷಿಕ ಪದಗಳು

ಅಂಕಣ : ನಾಲ್ಕು ಸ್ತಂಭಗಳಿಂದಾದ ಛಾದ್ಯದ (ಛತ್ತು/ಸೂರು) ಚೌಕಟ್ಟು

ಅಂಜಲಿ ಮುದ್ರೆ : ಕೈ ಜೋಡಿಸಿ ಮುಗಿಯುವುದು

ಅಂತರ್ಭಿತ್ತಿ : ಸಾಂಧಾರ ದೇವಾಲಯಗಳಲ್ಲಿ ಗರ್ಭಗೃಹದ ಸುತ್ತ ಇರುವ ಒಳಭಿತ್ತಿ

ಅಂತರಾಳ : ಗರ್ಭಗೃಹ ಹಾಗೂ ಅರ್ಧಮಂಟಪವನ್ನು ಸೇರಿಸುವ ಭಾಗ

ಅಧಿಷ್ಠಾನ : ಷಡ್ವರ್ಗ ಕ್ರಮದಲ್ಲಿ ಮೊದಲನೆ ಭಾಗ. ದೇವಾಲಯದ ತಳಪಾಯ

ಅಭಯ ಹಸ್ತ : ನಿರ್ಭಯವನ್ನು ದಯಪಾಲಿಸುವ ಹಸ್ತ

ಅಭಿಷೇಕ ಜಲ : ದೇವತಾಮೂರ್ತಿಗೆ ಎರೆಯುವ ನೀರು

ಅರೆಗಂಬ : ಭಿತ್ತಿ ಮೇಲಿನ ಅರ್ಧಕಂಬಗಳ ಅಲಂಕರಣೆ

ಅಕ್ಷರಮಾಲಾ : ಮಣಿಸರ

ಈಟಿ : ಚೂಪಾದ ಮೊನೆಯುಳ್ಳ ವಸ್ತು

ಉತ್ತರೀಯ : ಮೇಲುಹೊದಿಕೆ

ಉದರಬಂಧ : ಹೊಟ್ಟೆಯ ಭಾಗದಲ್ಲಿ ಧರಿಸುವ ಆಭರಣ

ಉಪಪೀಠ : ದೇವಾಲಯಕಕವ ಹೆಚ್ಚಿನ ರಕ್ಷಣೆ, ಔನ್ನತ್ಯ ಶೋಭೆ ತರಲು ಅಧಿಷ್ಠಾನದ ಕೆಳಗೆ ಇರುವ ಭಾಗ

ಊರ್ಧ್ವಮುಖ ಕ್ರಮ : ದೇವಾಲಯ ಹೊರರಚನೆಯಲ್ಲಿ ಕೆಳಗಿನಿಂದ ಮೇಲಕ್ಕೆ ಒಂದಾದ ಮೇಲೊಂದು ಭಾಗವನ್ನು ನಿಶ್ಚಿತ ರೀತಿಯಲ್ಲಿ ರಚಿಸುವುದು.

ಉಪಾನ : ಅಧಿಷ್ಠಾನದ ಮೊದಲ ಅಂಗ

ಏಕಕೂಟ : ಒಂದು ಗರ್ಭಗೃಹವಿರುವ ದೇಗುಲ

ಕಟಾಂಜನ : ಕಟಕಟೆ, ಮರ ಅಥವಾ ಕಬ್ಬಿಣದ ಸರಳುಗಳಿಂದ ಮಾಡಿದ ಕಟ್ಟೆ

ಕಟ್ಯಾವಲಂಬಿತ : ಸೊಂಟದ ಮೇಲಿಟ್ಟ ಕೈ

ಕಕ್ಷಾಸನ : ನವರಂಗ ಅಥವಾ ಮುಖಮಂಟಪದ ಒಳಗೋಡೆಯ ಸುತ್ತಲೂ ಇರುವ ಕಲ್ಲಿನ ಕಟ್ಟೆ

ಕಪೋತ : ಪಾರಿವಾಳದ ತಲೆಯ ಆಕಾರದಲ್ಲಿ ಹೊರಚಾಚಿರುವ ಅಂಗ. ಇದು ಅಧಿಷ್ಠಾನ ಮತ್ತು ಪ್ರಸ್ತರದಲ್ಲಿ ಇರುತ್ತದೆ.

ಕಲಶ : ಶಿಖರದ ಮೇಲೆ ಇರುವ ಕುಂಭ

ಕಿರೀಟ ಮುಕುಟ : ರತ್ನ ಖಚಿತವಾದ ಶಿರೋಭೂಷಣ

ಕೀರ್ತಿಮುಖ : ಅಲಂಕಾರದ ಒಂದು ವಿಧ. ವೈಭವ, ಭವ್ಯತೆಯನ್ನು ಸೂಚಿಸುವ ಅಲಂಕಾರ

ಕುಂಜರಾಕ್ಷ : ಆನೆಯ ಕಣ್ಣನ್ನು ಹೋಲುವ ಕಿಟಕಿ

ಕುಂಡಲ : ಕಿವಿಯ ಆಭರಣ

ಕುಂಭ : ಕಲಶ

ಕುಂಭಲತಾ : ಕುಂಭದಿಂದ ಹೊರಚಲ್ಲುತ್ತಿರುವಂತೆ ಎಲೆ-ಬಳ್ಳಿಗಳನ್ನು ಬಿಡಿಸಿರುವ ಅಲಂಕರಣ

ಕುಮುದ : ಅಧಿಷ್ಠಾನದಲ್ಲಿ ಕಂಡುಬರುವ ಅಂಗ

ಕೋಷ್ಠ : ಮೂರ್ತಿಗಳನ್ನು ಇಡಲು ಮಾಡಿರುವ ಚಿಕ್ಕ ಗೂಡು

ಖಟ್ವಾಂಗ : ಮೊಣಕೈ ಮೂಳೆಯಿಂದ ತಯಾರಿಸಿದ ಗದೆ. ಮೇಲ್ಭಾಗದಲ್ಲಿ ಮನುಷ್ಯನ ತಲೆಬುರುಡೆ ಇರುತ್ತದೆ.

ಗವಾಕ್ಷ : ಗೋವಿನ ಕಣ್ಣನ್ನು ಹೋಲುವ ಕಿಟಕಿ

ಗರ್ಭಗೃಹ : ಮೂಲ ದೇವತಾಮೂರ್ತಿ ಇರುವ ದೇವಾಲಯದ ಮುಖ್ಯ ಭಾಗ

ಗೃಹಪಿಂಡಿ : ಗರ್ಭಗೃಹದ ಸುತ್ತ ಇರುವ ಭಿತ್ತಿ. ಇದು ಮೇಲ್ಕಟ್ಟಡದ ಭಿತ್ತಿಗೂ ಅನ್ವಯಿಸುತ್ತದೆ.

ಗ್ರೀವ : ಪ್ರಸ್ತರ ಹಾಗೂ ಶಿಖರ ಭಾಗಗಳ ಮಧ್ಯ ಕುತ್ತಿಗೆಯಂತೆ ಒಳಸರಿದ ಭಾಗ

ಗೋಪುರ : ಮಹಾದ್ವಾರದ ಮೇಲಿನ ಕಟ್ಟಡ

ಚಕ್ರಕುಂಡಲ : ದುಂಡಾಕಾರದ ಕಿವಿಯೋಲೆ

ಜಗತಿ ಅಧಿಷ್ಠಾನದ ಮುಖ್ಯಭಾಗ. ಸಾಮಾನ್ಯವಾಗಿ ಉಪಾನದ ನಂತರ ಇರುತ್ತದೆ.

ಜಗಲಿ : ವೇದಿಕೆ, ಕಟ್ಟೆ

ಜಟಾ ಮುಕುಟ ಕೂದಲನ್ನು ಕಿರೀಟದಂತೆ ಅಲಂಕರಿಸುವುದು

ಜಲ ಪ್ರಣಾಳಿ : ಗರ್ಭಗೃಹದಲ್ಲಿ ಅಭಿಷೇಕ ಮಾಡಿದ ನೀರು ಹೊರ ಹೋಗಲು ಮಾಡಿದ ರಂಧ್ರಯುಕ್ತ ಮಾರ್ಗ

ತಳ (ಲ) : ವಾಸ್ತು ಅಂಗ-ಪ್ರತ್ಯಂಗಗಳಿಂದ ಕೂಡಿದ ಹಂತಗಳು

ತ್ರಿಕೂಟಾಚಲ : ಮೂರು ಗರ್ಭಗೃಹಗಳನ್ನು ಒಳಗೊಂಡಿರುವ ದೇವಾಲಯ

ತ್ರಿಪಟ್ಟಿ ಕುಮುದ : ಮೂರು ವೇದಿಕೆಗಳನ್ನು ಹೊಂದಿದ್ದು, ಒಂದು ಭಾಗ ಮೇಲಕ್ಕೂ, ಒಂದು ಭಾಗ ಕೆಳಕ್ಕೂ ಬಾಗಿರುತ್ತದೆ. ಅಧಿಷ್ಠಾನದ ಒಂದು ಅಂಗ.

ದರ್ಪಣ : ಕನ್ನಡಿ

ದ್ವಾರಪಾಲಕರು : ಬಾಗಿಲನ್ನು ಕಾಯುವ ಸೇವಕರು

ದ್ವಾರಬಂಧ : ಬಾಗಿಲ ಚೌಕಟ್ಟು, ಬಾಗಿಲಿನ ನಿಲುವು

ದ್ರಾವಿಡ ಶೈಲಿ : ಗ್ರೀವದಿಂದ ಮೇಲೆ ಎಂಟು ಕೋನಗಳ ರಚನೆ

ದ್ವಿಕೂಟ : ಎರಡು ಗರ್ಭಗೃಹಗಳನ್ನು ಒಳಗೊಂಡ ದೇವಾಲಯ

ದ್ವಿತಳ (ಲ) : ಎರಡು ಅಂತಸ್ತು

ದೀಪಸ್ತಂಭ : ವಿಶೇಷ ಸಂದರ್ಭಗಳಲ್ಲಿ ದೀಪ ಹಚ್ಚಲು ನಿಲ್ಲಿಸಿದ ಕಲ್ಲಿನ ಕಂಬ

ಧನಸ್ಸು : ಬಿಲ್ಲು

ನಂದಿ ಮಂಟಪ : ನಂದಿಗಾಗಿ ಕಟ್ಟಿರುವ ಮಂಟಪ

ನಾಗಬಂಧ : ನಾಗಗಳು ಒಂದನ್ನೊಂದು ಸುತ್ತಿಕೊಂಡಂತೆ ಇದ್ದು, ಮಧ್ಯಭಾಗದಲ್ಲಿ ಟೊಳ್ಳಾಗಿರುವ ಕಿಟಕಿ

ನಾಗರ ಶೈಲಿ : ಕರ್ಣದಿಂದ ಸ್ತೂಪಿಯವರೆಗೆ ಚತುರಶ್ರ ಅಥವಾ ಆಯತಾಶ್ರಾಕಾರ ಇರುವ ದೇವಾಲಯದ ಮೇಲ್ಕಟ್ಟಡ

ನಿರಾಂಧಾರ : ಅರ್ಪಿತ ದೇವಾಲಯ. ಗರ್ಭಗೃಹದ ಸುತ್ತ ಮುಚ್ಚಿದ ಪ್ರದಕ್ಷಿಣಾಪಥ ಇಲ್ಲದಿರುವ ದೇವಾಲಯ

ಪಂಜರ : ದ್ವ್ಯಯಶ್ರಾಕಾರದ ಈ ರಚನೆಯ ಹಿಂಭಾಗವು ಗಜಪೃಷ್ಠಾಕಾರವಾಗಿ ಇರುತ್ತದೆ.

ಪಟ್ಟಿಕಾ : ಅಧಿಷ್ಠಾನದ ಕೊನೆಯ ಅಂಗ, ವಾಜನದಂತೆ ಹೊರ ಚಾಚಿರುವ ಅಗಲವಾದಪಟ್ಟಿ.

ಪದ್ಮ : ಕಮಲದಳ ಆಕಾರದಲ್ಲಿ ಇರುವ ಅಧಿಷ್ಠಾನದ ಒಂದು ಅಂಗ

ಪದ್ಮಪೀಠ : ಪದ್ಮಾಲಂಕರಣೆ ಉಳ್ಳ ಆಸನ

ಪದ್ಮಾಸನ : ಎರಡು ಕಾಲನ್ನು ಒಳಭಾಗಕ್ಕೆ ಮಡಚಿ ಕುಳಿತಿರುವ ಭಂಗಿ

ಪರಶು : ಯುದ್ಧ ಕೊಡಲಿ

ಪರಿವಾರ ದೇವತೆ : ಮುಖ್ಯ ದೇವರಿಗೆ ಸಂಬಂಧಪಟ್ಟ ಉಪದೇವತೆಗಳು

ಪುಷ್ಪ ಬೋದಿಗೆ : ಪದ್ಮಾಲಂಕಾರವುಳ್ಳ ಬೋದಿಗೆ

ಪ್ರದಕ್ಷಿಣಾ ಪಥ : ಭಕ್ತಾದಿಗಳು ಗರ್ಭಗೃಹವನ್ನು ಸುತ್ತಿ ಬರಲು ಇರುವ ದಾರಿ

ಪ್ರಭಾವಳಿ : ಮೂರ್ತಿಗಳ ಹಿಂಭಾಗದಲ್ಲಿ ಮಾಡಿರುವ ಸುತ್ತಲಿನ ಅಲಂಕಾರಿಕ ಪಟ್ಟಿ

ಪ್ರಾಕಾರ ಗೋಡೆ : ದೇವಾಲಯದ ಸುತ್ತ ಕಟ್ಟಲಾದ ರಕ್ಷಣಾತ್ಮಕ ಗೋಡೆ

ಬಲಿಪೀಠ : ದೇವರಿಗೆ ನೈವೇದ್ಯವಾದ ಪದಾರ್ಥಗಳನ್ನು ಪರಿವಾರ ದೇವತೆಗಳಿಗೆ ಇಡಲು ಬಳಸುವ ಪೀಠ

ಬೋದಿಗೆ : ಗ್ರೀವದ ಮೇಲೆ ಮುಂಚಾಚಿದ ಭಾಗ

ಭುಜಬಂಧ : ಭುಜಕ್ಕೆ ಧರಿಸುವ ಆಭರಣ

ಭುವನೇಶ್ವರಿ : ಅಲಂಕೃತ ಕೆತ್ತನೆಯಿಂದ ಕೂಡಿದ ದೇಗುಲದ ಮೇಲ್ಛಾವಣಿಯ ಒಳಮೈ ಭಾಗ

ಮಕರತೋರಣ : ಮೊಸಳೆ ಬಾಯಿಂದ ತೋರಣಗಳು ಹೊರಬಂದ ಹಾಗೆ ಮಾಡಿರುವ ಅಲಂಕಾರ

ಮಹಾದ್ವಾರ : ಪ್ರಾಕಾರಕ್ಕೆ ಹೊಂದಿಕೊಂಡಂತೆ ಅದರ ಮಧ್ಯ ಭಾಗದಲ್ಲಿರುವ ಪ್ರವೇಶದ್ವಾರ

ಮಹಾ ಮಂಟಪ : ನವರಂಗಕ್ಕಿರುವ ಇನ್ನೊಂದು ಹೆಸರು

| | | |
|---|---|---|
| ಮುಖಮಂಟಪ | : | ದೇವಾಲಯದ ಮುಂಭಾಗದಲ್ಲಿರುವ ಮಂಟಪ |
| ಮುಖ್ಯ ವಿಮಾನ | : | ಐದರಿಂದ ಹನ್ನೆರಡು ತಲಗಳನ್ನು ಹೊಂದಿದ ಮೇಲ್ಕಟ್ಟಡವಿರುವ ದೇವಾಲಯ |
| ಯಜ್ಞೋಪವೀತ | : | ಜನಿವಾರ |
| ಯಾಳಿ | : | ಸಿಂಹ ಮುಖ, ಆನೆಯ ಕೋರೆ ಹಾಗೂ ಸೊಂಡಿಲುಗಳಿರುವ ಕಾಲ್ಪನಿಕ ಪ್ರಾಣಿ |
| ಯೋಗ ಮುದ್ರೆ | : | ಹೆಬ್ಬೆರಳು ಹಾಗೂ ತೋರು ಬೆರಳನ್ನು ಜೋಡಿಸಿ ಸೂಚಿಸುವ ಚಿನ್ಹೆ |
| ರುಂಡಮಾಲೆ | | ತಲೆಬುರುಡೆಗಳಿಂದ ಮಾಡಿದ ಹಾರ |
| ರೂವಾರಿ | : | ಶಿಲ್ಪಿ |
| ಲಲಾಟಬಿಂಬ | : | ದ್ವಾರಬಂಧದ ಮೇಲ್ಭಾಗದಲ್ಲಿ ಪಟ್ಟಿಕೆಯಂತೆ ಅಡ್ಡಲಾಗಿರುವ ಭಾಗದ ಮಧ್ಯದಲ್ಲಿ ಇರುವ ಚೌಕಾಕಾರದ ಫಲಕದೊಳಗಿನ ಉಬ್ಬುಶಿಲ್ಪ |
| ಲಲಿತಾಸನ | : | ಒಂದು ಕಾಲನ್ನು ಇಳಿಬಿಟ್ಟು ಮತ್ತೊಂದು ಕಾಲನ್ನು ಮಡಚಿ ಕುಳಿತಿರುವ ಭಂಗಿ |
| ವರದ ಹಸ್ತ | : | ವರವನ್ನು ದಯಪಾಲಿಸುವ ಹಸ್ತ |
| ವಲ್ಲಿಬಂಧ | : | ಬಳ್ಳಿಗಳು ಒಂದಕ್ಕೊಂದು ವೃತ್ತಾಕಾರವಾಗಿ ಹೆಣೆದುಕೊಂಡಿರುವಂತಿರುವ ಅಲಂಕರಣ |
| ವಾತಾಯನ | : | ಗಾಳಿ, ಬೆಳಕಿಗಾಗಿ ಗೋಡೆಯಲ್ಲಿ ಮಾಡಿರುವ ಕಿಟಕಿ |
| ವಿಮಾನ | : | ದೇವಾಲಯದ ಪರ್ಯಾಯ ಪದ. ದಕ್ಷಿಣ ಭಾರತದ ದೇವಾಲಯಗಳಿಗೆ ಹೆಚ್ಚು ಅನ್ವಯಿಸುತ್ತದೆ. |
| ವೇದಿ | : | ಭಿತ್ತಿಯಲ್ಲಿ ಬರುವ ಮೊದಲ ಅಂಗ |
| ವೇಸರ ಶೈಲಿ | : | ಕಂಠ ಹಾಗೂ ಶಿಖರ ಭಾಗವು ವೃತ್ತಾಕಾರವಾಗಿ ಇರುತ್ತದೆ. |
| ಸಾಂಧಾರ ದೇವಾಲಯ | : | ಅಂತರ್ಭಿತ್ತಿ ಹಾಗೂ ಬಾಹ್ಯಭಿತ್ತಿಗಳನ್ನು ಹೊಂದಿದ್ದು, ಗರ್ಭಗೃಹದ ಸುತ್ತ ಪ್ರದಕ್ಷಿಣಾಪಥವಿರುವ ದೇವಾಲಯ |
| ಸಭಾ ಮಂಟಪ | : | ನವರಂಗದ ಪರ್ಯಾಯ ಪದ |
| ಸಮ ಭಂಗಿ | : | ಎರಡೂ ಕಾಲುಗಳನ್ನು ಜೋಡಿಸಿ ನೇರ ನಿಂತ ಭಂಗಿ |
| ಸುಕನಾಶಿ | : | ದೇವಾಲಯ ಮೇಲ್ಕಟ್ಟಡದ ಮುಂಭಾಗದಲ್ಲಿ ಗಿಣಿಯ ಕೊಕ್ಕಿನಂತೆ ಮುಂಚಾಚಿದ ರಚನೆ. ಅಂತರಾಳ ಭಾಗಕ್ಕೆ ಸಹ ಇದೇ ಹೆಸರಿನಿಂದ ಸೂಚಿಸಲಾಗುತ್ತದೆ. |
| ಸ್ತೂಪಿ | : | ಶಿಖರದ ಮೇಲಿರುವ ಕುಂಭ ಇದು ದೇವಾಲಯದ ಉತ್ತುಂಗ ಭಾಗ |
| ಸೋಪಾನ | : | ಮೆಟ್ಟಿಲು |
| ಸರ್ವತೋಭದ್ರ | : | ನಾಲ್ಕು ದಿಕ್ಕುಗಳಲ್ಲಿ ಪ್ರವೇಶ ದ್ವಾರವಿರುವ ದೇವಾಲಯ |
| ಹರ್ಮ್ಯ | | ದೇವಾಲಯದ ಪರ್ಯಾಯ ಪದ |

